ಶ್ರೀ.

ಶ್ರೀಮದಾರ್ಹತ್ಪರಮೇಶ್ವರಾಯನಮಃ.

# ಪೀಠಿಕೆ.



ಶ್ರೀಮದಸ್ಮನ್ಮತಾವಲಂಬಿಗಳಾದ ಸರ್ವರಿಗೂ
ಶ್ರುತಪಡಿಸುವದೇನಂದರೆ,—

ಶ್ರೀಮದ್ವಾದೀಭಸಿಂಹಸೂರಿ ಮಹಾಕವಿಯಿಂದ ವಿರಚಿತವಾದ ಜೀವಂಧರ ಚರಿತಾ ರೂಪವಾಗಿರುವ ಕ್ಷತ್ರಚೂಡಾಮಣಿ ಎಂಬೀಮಹದ್ಗ್ರಂಥವು ಸಂಸ್ಕೃತ ಭಾಷೆಯಲ್ಲಿರುವುದನ್ನು ಕೆಲವರಾದ ಮತಾಭಿಮಾನಿಗಳಿಂದ ಪ್ರೇರಿತನಾಗಿ ಗೀರ್ವಾಣಭಾಷಾ ಪರಿಚಯವಿಲ್ಲದವರಿಗೂ, ಬಾಲಕರಿಗೂ ಸಹಾ ಸುಲಭವಾಗಿ ತಿಳಿಯುವಂತೆ ಮೂಲ ಟೀಕು ತಾತ್ಪರ್ಯ ಮತ್ತು ವಿಶೇಷ ವಿಷಯಗಳೊಂದಿಗೆ ಬಹಳ ದ್ರವ್ಯ ವ್ಯಯದಿಂದಲೂ, ಪಂಡಿತಸಹಾಯದಿಂದಲೂ, ಒಳ್ಳೇಕಾಗದದಿಂದಲೂ ಮುದ್ರಿಸಿ ಪ್ರಚುರಮಾಡಲ್ಪಟ್ಟದೇನಾದುದರಿಂದ ತಾವು ತಮ್ಮ ಮಿತ್ರಮಂಡಲಿಗೆ ಪ್ರೋತ್ಸಾಹಿಸಿ ಪುಸ್ತಕಗಳನ್ನು ತರೆಸಿ ನೋಡಿ,ಆನಂದಿಸುವಿರಿ ಎಂದು ನಂಬಿರೋಣ

ಇದರೊಳು ದೋಷಗಳಿದ್ದಲ್ಲಿ ಪಂಡಿತರಾದವರು ನೋಡಿ ನನಗೆ ತಿಳಿಸಿದರೆ ಮನೇ ಛಾಪೆಯೊಳು ಶುದ್ಧಪಡಿಸುತ್ತೇನೆ.

ತಮ್ಮಗಳ ವಿಧೇಯ,

ಯ. ದೆ. ಕ, ಶಾಂತರಾಜೈಯ್ಯ,
ಪಾತ್ರೆ ಅಂಗಡಿ, ಚಿಕ್ಕಪೇಟೆ,
ಬೆಂಗಳೂರು.



ಶ್ರೀ.

ಓಂ ನಮಃ ಸಿದ್ಧೇಭ್ಯಃ.

ಶ್ರೀಮದ್ವಾದೀಭಸಿಂಹಸೂರಿವಿರಚಿತ

# ಕ್ಷತ್ರಚೂಡಾಮಣಿಃ

ಶ್ಲೋಕ ॥ ಶ್ರೀಪತಿರ್ಭಗವಾನ್ಪುಷ್ಯಾ-
ದ್ಭಕ್ತಾನಾಂ ವಸ್ಸಮೀಹಿತಂ ।
ಯದ್ಭಕ್ತಿಶ್ಶುಲ್ಕತಾಮೇತಿ
ಮುಕ್ತಿಕನ್ಯಾಕರಗ್ರಹೇ ॥ ೧ ॥

ಟೀ॥ ಯದ್ಭಕ್ತಿಃ– ಯತ್-ಯಾವಭಗವದ್ವಿಷಯಕವಾದ, ಭಕ್ತಿಃ-ನಿರತಿಶಯಪ್ರೀತಿರೂಪವಾದ ಭಕ್ತಿಯು, ಮುಕ್ತಿಕನ್ಯಾಕರಗ್ರಹೇ–ಮುಕ್ತಿ-ಆರ್ಹಂತ್ಯ ಲಕ್ಷ್ಮೀರೂಪವಾದ ಮೋಕ್ಷವೆಂಬ, ಕನ್ಯಾ-ಕನ್ನಿಕೆಯ, ಕರಗ್ರಹೇ- ಪಾಣಿಗ್ರಹಣೋತ್ಸವದಲ್ಲಿ, ಶುಲ್ಕತಾಂ- ( ತೆರವರೀತಿಯನ್ನು) ವಿವಾಹಾರ್ಥವಾಗಿ ಕೊಡತಕ್ಕ ಆಭರಣವಾಗಿರೋಣವನ್ನು, ಏತಿ-ಐದುತಲಿಧೆಯೋ, ಶ್ರೀಪತಿಃ–ಶ್ರೀ-ಅಂತರಂಗ ಬಹಿರಂಗಲಕ್ಷ್ಮಿಗಳಿಗೆ, ಪತಿಃ-ಸ್ವಾಮಿಯಾದ, ಭಗವಾನ್-ಮಹಾಮಹಿಮೆಯುಳ್ಳ ವರ್ಧಮಾನತೀರ್ಥಂಕರರು, ಭಕ್ತಾನಾಂ-ಭಕ್ತರಾದ, ವಃ-ನಿಮ್ಮಗಳ ಸಮೀಹಿತಂ-ಇಷ್ಟಾರ್ಥವನ್ನು, ಪುಷ್ಯಾತ್ - ಪೋಷಿಸಲಿ.

## ಅವತಾರಿಕಾ.

ಶ್ಲೋಕ ॥ (ಕವಿತ್ವಸ್ಯಪರಾಸೀಮಾವಾಗ್ಮಿತ್ವಸ್ಯಪರಂಪದಂ । ಗಮಕತ್ವಸ್ಯ ಪರ್ಯಂತೋವಾದಿಸಿಂಹೋರ್ಚ್ಯತೇನಕೈಃ ॥) ಎಂಬ ಪ್ರಕಾರದಿಂದ ಕವಿತೆಗೆ ಎಲ್ಲೆಯಾದ ಭೂಮಿಯೆನಿಸಿ ಸರ್ವೋತ್ಕೃಷ್ಟ ಕವಿಯಾಗಿಯೂ, ಪ್ರಶಸ್ತವಾದ ವಾಕ್ಯಗಳಿಗೆ ಉತ್ಕೃಷ್ಟನಿವಾಸಸ್ಥಾನ

ರೆನಿಸಿದವರಾಗಿಯೂ, ನ್ಯಾಯಸಿದ್ಧಾಂತಪ್ರಯೋಗಪೂರ್ವಕವಾಗಿ ವಾದಿಸುವವಾದಿಗಳಿಗೆ ಎಲ್ಲೆಯೆನಿಸಿದವರಾಗಿಯೂ ಮತ್ತು (ಶ್ಲೋ॥ ದುರ್ವಾದಿವಾದಿಕಾ ಧ್ಯಾನಾಂಕೇಸರೀನಯಕೇಸರಃ) ಎಂಬ ಪ್ರಕಾರ ಪ್ರಬಲವಾದಿಗಳಾದ ನಾಸ್ತಿಕ ಬೌದ್ಧವಾದಿಗಳೆಂಬ ಮತ್ತಗಜಘಟೆಗೆ ಸ್ಯಾದ್ವಾದನ್ಯಾಯಗಳೆಂಬ ಕುತ್ತಿಗೆಯ ಜಾಲ್ಯಕೊಡಲುಳ್ಳ ಭಯಂಕರಸಿಂಹವೆನಿಸಿರುವದರಿಂದ ವಾದೀಭಸಿಂಹ ಮುನಿಪುಂಗವರೆಂದನ್ವರ್ಥನಾಮಧೇಯವುಳ್ಳ ಕವಿಕುಲ ತಿಲಕರು; ಗ್ರಂಥಪ್ರತಿಪಾದ್ಯ ಮಹಾಪುರುಷನಾಗಿ ಕ್ಷತ್ರಿಯ ಕುಲಚೂಡಾಮಣಿ ಯೆನಿಸಿದ ಶೌರ್ಯೌದಾರ್ಯಗಾಂಭೀರ್ಯಸ್ಥೈರ್ಯಧೈರ್ಯಚಾತುರ್ಯ ಸಕಲಕಲಾಪಾಂಡಿತ್ಯ ಹೇಯೋಪಾದೇಯವಿಜ್ಞಾನ ಸರ್ವಭೂತಸೌಹಾರ್ದಧರ್ಮೈಕಪಕ್ಷಪಾತಪ್ರಭೃತಿಗಳಾದ ಉತ್ತಮ ಕ್ಷತ್ರಿಯೋಚಿತಗುಣಗಳಿಂ ಸಕಲಜನಚಿತ್ತವಲ್ಲಭನಾಗಿಯು, ಸೌಂದರ್ಯಸೌಕುಮಾರ್ಯಲಾವಣ್ಯಾದಿ ಗುಣಗಳಿಂದಾಕಾಲಕ್ಕೆ ಮನ್ಮಥನೆನಿಸಿ, ವಿದ್ಯಾಧರಪುತ್ರಿಯಾದ ಗಂಧರ್ವದತ್ತಾಪ್ರಭೃತಿಗಳಾದ ಅಷ್ಟ ಪಟ್ಟಮಹಿಷೀಸ್ವಯಂವರ ಪತಿಯಾಗಿಯು, ದುರ್ವೃತ್ತಶತ್ರುನಿಗ್ರಹಪೂರ್ವಕವಾಗಿ ಸ್ವಪಿತೃರಾಜ್ಯಲಕ್ಷ್ಮೀಕನಾಗಿ ಅತ್ಯಲ್ಪಕಾಲ ಪ್ರಜಾಪರಿಪಾಲನಂಗೈದು ಕಾಲಲಬ್ಧಿಯಿಂ ಪಡೆದ ದೃಢವೈರಾಗ್ಯದಿಂದ ಜೀರ್ಣತೃಣದಂತೆ ರಾಜ್ಯಲಕ್ಷ್ಮಿಯು ತೊರೆದು, ಮತ್ತು ಅನಾಗ್ಯ ಚಿರಕಾಲದಿಂದ ನಷ್ಟವಾದ ಜೈನಧರ್ಮೋದ್ಧಾರಕಾರ್ಥವಾಗಿ ಕೃತಾವತಾರರಾದ ೨೪ನೇ ತೀರ್ಥಂಕರರಾದ ವರ್ಧಮಾನಸ್ವಾಮಿಯ ಸಮವಸರಣವಂ ಪ್ರವೇಶಿಸಿ ಸಮವಸರಣ ಮಧ್ಯಗತ ದಿವ್ಯಸಿಂಹಾಸನವಿರಾಜಮಾನರಾದ ಮತ್ತು ದಿವ್ಯಧ್ವನಿಯೆಂಬಗರ್ಜನದಿಂದೊಡಗೂಡಿ ಧರ್ಮಾಮೃತಪೂರಿತ ಜೀಮೂತದಂತೆ ಭವ್ಯಸಸ್ಯಪರಿಪೋಷಕರಾದ ಶ್ರೀವರ್ಧಮಾನತೀರ್ಥಂಕರರ ಧರ್ಮೋಪದೇಶವೆಂಬ ವರ್ಷದಿಂ ಹರ್ಷಿತಚಿತ್ತನಾಗಿ ಮೋಕ್ಷಲಕ್ಷ್ಮೀಸ್ವಯಂವರಸನ್ನದ್ಧನಾಗಿ ಚರಮಾಂಗಧರನಾಗಿಯೂ, ಸಮ್ಯಗ್ದರ್ಶನ ಜ್ಞಾನಚಾರಿತ್ರ ರೂಪರತ್ನತ್ರಯಲಾಭದಿಂ ಅಹಿಂಸಾದಿ ಪರಮಧರ್ಮಾನುಷ್ಠಾನಶೀಲನಾಗಿಯೂ, ತಪಃಪ್ರಭೃತಿಗುಣಗಣನಿಧಿಯಾಗಿಯೂ ಮುಕ್ತನಾದ, ಕುರುಕುಲಪ್ರದೀಪಕನಾದ, ಮಹಾಪುಣ್ಯಪುರುಷನಾದ ಜೀವಂಧರಸ್ವಾಮಿಯು ಪುರಾಣಪ್ರಸಿದ್ಧನಾಗಿಯೂ

ಸಕಲಜನವಿವೇಕಹೇತುವಾಗಿಯುಂ ಧರ್ಮದ ಚರಿತ್ರಮಂ ಕಾವ್ಯರೂಪದಿಂ ರಚಿಸಲುದ್ಯೋಗಿಸಿ ಕವಿಯು ವೀತರಾಗರಾದುದರಿಂದ ಲೋಕಹಿತಾರ್ಥವಾದ ಈ ಗ್ರಂಥಪ್ರಯೋಜನವು ಲೋಕಕ್ಕೇ ಉಚಿತವಾದುದರಿಂದಲೂ, ಲೋಕಪ್ರಯೋಜನವೇ ಸ್ವಪ್ರಯೋಜನವಾದುದರಿಂದಲೂ ಗ್ರಂಥನಿರ್ವಿಘ್ನಪರಿಸಮಾಪ್ತ್ಯರ್ಥವಾಗಿ ಆಶೀರೂಪವಾದ ಮಂಗಳವಂ ರಚಿಸುತ್ತಾರೆ ಏನೆಂದರೆ.—

ತಾತ್ಪರ್ಯ ॥ ಯಾವ ಭಗವಂತನಲ್ಲಿ ಮಾಡಲ್ಪಡುವ ಭಕ್ತಿಯು ಮೋಕ್ಷವೆಂಬ ಕನ್ನಿಕೆಯ ವಿವಾಹಾರ್ಥವಾದ ಭೂಷಣ(ಹಾರ)ವೆನಿಸುವದೋ ಅಂಥಾ ಅಂತರಂಗ ಬಹಿರಂಗ ಲಕ್ಷ್ಮೀಪತಿಯಾದ ವರ್ಧಮಾನತೀರ್ಥಂಕರರು ಭಕ್ತರಾದ ನಿಮ್ಮ ಇಷ್ಟಾರ್ಥವಂ ಪೂರ್ತಿಮಾಡಲಿ.

ವೀತರಾಗರಾದ ಜಿನೇಂದ್ರರಿಗೆ ಉಭಯಲಕ್ಷ್ಮೀಪತಿತ್ವವು ಹೇಗೆ ಸಂಭವಿಸುವುದು? ಎಂಬ ಶಂಕಾನಿರಾಸಕವಾದ ಅರ್ಹಂತಮತಪ್ರಕ್ರಿಯೆಯು ಯುಕ್ತ್ಯಂಚಿತ್ಪ್ರತ್ಯುಪಯೋಗಿಯಾಗಿ ಇಲ್ಲಿ ನಿರೂಪಿಸಲ್ಪಡುತ್ತದೆ.

ನರಸುರತಿರ್ಯಙ್ನಾರಕಿದೇಹಗಳಲ್ಲಿ ಜೀವಾತ್ಮನು ತನ್ನ ಸ್ವೋಪಾತ್ತ ಪೂರ್ವಕರ್ಮಾನುಗುಣವಾಗಿ ತಿರುಗುತ್ತಿರೋಣವೇ ಸಂಸಾರವೆಂಬ ಬಂಧವು. ಇದಕ್ಕೆ ಮೂಲಕಾರಣವಾದ ಜ್ಞಾನಾವರಣ ದರ್ಶನಾವರಣ ವೇದನೀಯ ಮೋಹನೀಯ ಆಯುರ್ನಾಮ ಗೋತ್ರಾಂತರಾಯಗಳೆನಿಸುವ ಘಾತ್ಯಘಾತಿಗಳೆಂಬ ಅಷ್ಟಕರ್ಮಕ್ಷಯ ಪ್ರಾದುರ್ಭಾವವಾದ ಅನಂತಜ್ಞಾನಾನಂತದರ್ಶನಾನಂತ ಸುಖಾನಂತವೀರ್ಯಾದ್ಯಷ್ಟಗುಣಪ್ರಾಪ್ತಿಯೇ ಮೋಕ್ಷವೆನಿಸುವುದು.

ಈ ಮೋಕ್ಷವಾದರೋ ಸಂವರನಿರ್ಜರಾತತ್ತ್ವಗಳಿಂದಲೇ ಉಂಟಾಗುವುದು.

ಸಂವರವೆಂದರೆ:-ಪುಣ್ಯಾಸ್ರವ ಪಾಪಾಸ್ರವಗಳಂ ತಡೆಯೋಣವು; ತಪಸ್ಸಿನಿಂದ ಕರ್ಮಗಳ ಕ್ಷಯವೆಂಬ ನಿರ್ಜರಾತತ್ತ್ವ ಪ್ರಾಪ್ತವಾಗುವದು. ಆ ಸಂವರತತ್ತ್ವವಾದರೋ "ಸಗುಪ್ತಿಸಮಿತಿಧರ್ಮಾನುಪ್ರೇಕ್ಷಾಪರೀಷಹಜಯಚಾರಿತ್ರೈಃ" ಎಂಬ ಸೂತ್ರಾನುಸಾರವಾಗಿ ಮನೋಗುಪ್ತಿ, ವಾಗ್ಗು-

ಪ್ತಿ, ಕಾಯಗುಪ್ತಿಗಳೆಂಬ ಗುಪ್ತಿತ್ರಯವೂ, “ಈರ್ಯಾಭಾಷೈಷಣಾದಾನನಿಕ್ಷೇಪೋತ್ಸರ್ಗಾಸ್ಸಮಿತಯಃ” ಎಂಬ ಸೂತ್ರೋಕ್ತವಾದ ಪಂಚಸಮಿತಿಗಳೂ, ಉತ್ತಮಕ್ಷಮಾಮಾರ್ದವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಾಣಿಧರ್ಮಾಃ” ಎಂಬ ತತ್ವಾರ್ಥಸೂತ್ರೋದಿತವಾದ ದಶಧರ್ಮಗಳೂ, “ಅನಿತ್ಯಾಶರಣೇತ್ಯಾದಿ” ಸೂತ್ರೋಕ್ತದ್ವಾದಶಾನುಪ್ರೇಕ್ಷೆಗಳೂ, “ಕ್ಷುತ್ಪಿಪಾಸಾಶೀತೋಷ್ಣದಂಶಮಶಕನಾಗ್ನ್ಯಾರತಿಸ್ತ್ರೀಚರ್ಯಾನಿಷದ್ಯಾಶಯ್ಯಾಕ್ರೋಶವಧಯಾಚನಾಲಾಭರೋಗತೃಣಸ್ಪರ್ಶಮಲಸತ್ಕಾರಪುರಸ್ಕಾರಪ್ರಜ್ಞಾಜ್ಞಾನಾದರ್ಶನಾನಿ” ಎಂಬ ಸೂತ್ರೋಕ್ತ ಪರೀಷಹಗಳಂಜಯಿಸೋಣವೂ, “ಸಾಮಾಯಿಕಛೇದೋಪಸ್ಥಾಪನಾಪರಿಹಾರವಿಶುದ್ಧಿಸೂಕ್ಷ್ಮಸಾಂಪರಾಯ ಯಥಾಖ್ಯಾತಮಿತಿ ಚಾರಿತ್ರಂ” ಎಂಬ ಚಾರಿತ್ರವೂ ಆದ ಇವುಗಳಿಂದ ಸಮ್ಯಗ್ಯೋಗನಿಗ್ರಹವೆಂಬ ಸಂವರತತ್ವ ವುಂಟಾಗುವದು.

ಅನಶನಾವಮೋದರ್ಯವೃತ್ತಿ ಪರಿಸಂಖ್ಯಾನರಸ ಪರಿತ್ಯಾಗ ವಿವಿಕ್ತ ಶಯ್ಯಾಸನಕಾಯಕ್ಲೇಶರೂಪವಾದ ಬಾಹ್ಯತಪವೂ, ಅಂತರಧ್ಯಾನರೂಪತಪವೂ, ಆದ ಇವುಗಳಿಂದ ನಿರ್ಜರಾತತ್ವಉಂಟಾಗುವದು.

ಪೂರ್ವೋಕ್ತವಾದ ಗುಪ್ತಿತ್ರಯ ವೇ[illegible]ಲಾದ ಉಪಕರಣಗಳಿಂದ ಕ್ರೋಧಲೋಭಮಾನಮಾಯಾರೂಪವಾದ ಕಷಾಯಚತುಷ್ಟಯಗಳು [illegible]ವಾಗಿ ನಿವರ್ತಿಸಿದು[illegible]ದರಿಂದುಂಟಾಗುವ ಶುಕ್ಲಲೇಶ್ಯಾಪರಿಣಾಮ ನಿಶ್ಶೇಷ[illegible]ವ [illegible]ದಿಂದ ಸಿದ್ಧಿಸಿ[illegible]ರ್ಮ್ಯಧ್ಯಾನ ಶುಕ್ಲಧ್ಯಾನಗಳಿಂ, ಪ್ರಸಿದ್ಧಸೂರ್ಯನಿಂದಲೂ ನಿವರ್ತಿಸಲಶಕ್ಯವಾದ ಘಾತಿಕರ್ಮಗಳೆಂಬ ಮಹಾಂಧಕಾರನಿವಾರಕವಾಗಿಯೂ, ಭವ್ಯಾತ್ಮಹೃದಯಕಮಲವನ್ನರಳಿಸತಕ್ಕ ಕೇವಲ ಜ್ಞಾನವೆಂಬ ವಿಲಕ್ಷಣ ಸೂರ್ಯೋದಯವಾಗುವುದು.

ಕೇವಲ ಜ್ಞಾನವೆಂದರೆ.—ಕ್ರಮಕರಣವ್ಯವಧಾನರಾಹಿತ್ಯದಿಂದೇಕಕಾಲದಲ್ಲಿ ಲೋಕಾಲೋಕ ಸಾಕ್ಷಾತ್ಕಾರರೂಪವಾದ ದಿವ್ಯಜ್ಞಾನವು. ಈ ಪ್ರಕಾರವಾದ ತಪ್ರೋಜ್ಞಾನಾದ್ಯಾತ್ಮ ಗುಣಸಂಪತ್ತಿಯೇ ಅಂತರಂಗ

ಲಕ್ಷ್ಮಿಯೆಂಬುವುದು.

ಬಹಿರಂಗ ಲಕ್ಷ್ಮಿಯೆಂದರೆ.—" ಸೌಧರ್ಮೈಶಾನಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರಲಾಂತವಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಆರಣ ಅಚ್ಯುತ ನವಗ್ರೈವೇಯಕ ವಿಜಯ ವೈಜಯಂತ ಜಯಂತಾಪರಾಜಿತ ಸರ್ವಾರ್ಥಸಿದ್ಧಿಪರ್ಯಂತ ಕಲ್ಪೇಂದ್ರರಿಂದಲೂ, ಭವನಾಮರವ್ಯಂತರಾಮರಜ್ಯೋತಿಷ್ಕಾಮರರೆಂಬ ನಾಲ್ಕು ವಿಧವಾದ ದೇವರ್ಕಳಿಂದಲೂ ಪೂಜಿಸಿ ಸೇವೇರಿಸಲ್ಪಡುವ ಗರ್ಭಾವತರಣ ಜನ್ಮಾಭಿಷೇಕಪರಿನಿಷ್ಕ್ರಮಣ ಕೇವಲಜ್ಞಾನ ನಿರ್ವಾಣಕಲ್ಯಾಣಗಳೆಂಬ ಪಂಚಕಲ್ಯಾಣಗಳಿಂದಲೂ, (ಶ್ಲೋ॥ ಅಶೋಕವೃಕ್ಷಸ್ಸುರಪುಷ್ಪವೃಷ್ಟಿರ್ದಿವ್ಯಧ್ವನಿಶ್ಚಾಮರಮಾಸನಂಚ। ಭಾಮಂಡಲಂದುಂದುಭಿರಾತಪತ್ರಂ ಸತ್ಪ್ರಾತಿಹಾರ್ಯಾಣಿ ಜಿನೇಶ್ವರಾಣಾಂ॥) ಎಂಬ ಪ್ರಮಾಣಾನುಸಾರವಾಗಿ ಪಾದಚ್ಛಾಯಾಶ್ರಿತರಾದ ಭವ್ಯಾತ್ಮರಸಂಸಾರತಾಪನಿವರ್ತಕರಾದ ಜಿನೇಂದ್ರರಂತೆಯೇ ತಾನೂ ಆಶ್ರಿತಸಂತಾಪ ನಿವರ್ತಕವಾಗಿ ಜಿನೇಂದ್ರ ಸಭಾದ್ವಾರದೇಶಾಲಂಕಾರ ಭೂತವಾದ ಅಶೋಕವೃಕ್ಷದಿಂದಲೂ, ದೇವತೆಗಳಿಂ ವರ್ಷಿಸಲ್ಪಡುವ ಪುಷ್ಪವೃಷ್ಟಿಯಿಂದಲೂ, ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ ಮೋಕ್ಷಗಳೆಂಬ ಸಪ್ತತತ್ವಪ್ರಕಾಶಕವಾಗಿ ಸರ್ವಭಾಷಾಮಯವಾದ ದಿವ್ಯಧ್ವನಿಯಿಂದಲೂ, ಚಾಮರದಿಂದಲೂ, ದಿವ್ಯಸಿಂಹಾಸನದಿಂದಲೂ, ಸ್ವದೇಹಪ್ರಭಾವಿತಾನವೆಂಬ ಭಾಮಂಡಲದಿಂದಲೂ, ದೇವದುಂದುಭಿಧ್ವನಿಯಿಂದಲೂ, ಲೋಕಾಲೋಕಾವಲೋಕನ ಸ್ವರೂಪವಾದ ಕೇವಲಜ್ಞಾನ ಮಹಿಮೆಯಿಂ ತ್ರಿಲೋಕಸ್ವಾಮಿಯೆಂಬೀ ಬಿರುದಂ ಪ್ರಕಾಶಪಡಿಸುವ ಮುಕ್ಕೊಡೆಯಿಂದಲೂ ಒಪ್ಪುತಲಿರುವೀ ಅಷ್ಟಮಹಾಪ್ರಾತಿಹಾರ್ಯಗಳಿಂದೊಡಗೂಡಿದ ದೇವನಿರ್ಮಿತ ಸಮವಸರಣವೂ ಸಹ ಬಹಿರಂಗಲಕ್ಷ್ಮಿ(ಸಂಪತ್ತು)ಯೆನ್ನಲ್ಪಡುವುದು.

ಈ ಅಂತರಂಗ ಬಹಿರಂಗೋಭಯವಿಧ ಲಕ್ಷ್ಮಿಯರಿಗೆ (ಜಿನೇಂದ್ರರು) ವರ್ಧಮಾನ ತೀರ್ಥಂಕರರು ಪತಿಯಾದರೂ ವೀತರಾಗರೆಂಬುವುದು ಹೇಗೆಂದರೆ.—ಲೋಕದಲ್ಲಿ ಸ್ವಾಭಿಲಾಷ ಪೂರ್ವಕವಾಗಿ ಪಡೆಯಲ್ಪಡು

ವ ರಾಗಪ್ರಾಪ್ತಕರ್ತವ್ಯವೇ ತ್ಯಾಜ್ಯವೇ ಹೊರತು ಪುಣ್ಯಸಂಪಾದನಾರ್ಥವಾಗಿ ಭಕ್ತಿಪ್ರೇರಿತ ಕರ್ತೃಕೃತ ಪೂಜಾವಿಧಾನವು ಜಿನೇಂದ್ರರ ರಾಗಪ್ರಾಪ್ತವಲ್ಲವಾದುದರಿಂದ ಅರ್ಹದ್ಭಕ್ತಿಕ್ರಿಯೆಯು ದೋಷಗಂಧಕ್ಕೂ ಅನಾಸ್ಪದವೆಂದು ಆರ್ಹತ ಶಾಸ್ತ್ರಹೃದಯವು. ಮತ್ತು ಈ ಕಾವ್ಯವು ಕ್ಷತ್ರಿಯಚೂಡಾಮಣಿಪ್ರಾಯನಾದ ಜೀವಂಧರ ಮಹಾರಾಜನನ್ನಧಿಕರಿಸಿ ಪ್ರವೃತ್ತವಾದುದರಿಂದ (ಅಧಿಕೃತ್ಯಕೃತೇಗ್ರಂಥೇ) ಎಂಬ ಸೂತ್ರಾನುಸಾರವಾಗಿ ಕ್ಷತ್ರಚೂಡಾಮಣಿಯೆಂಬ ಸಂಜ್ಞೆಯಂ ಪಡೆದುದು. ಮತ್ತು ಈ ಮಂಗಳ ಶ್ಲೋಕದಲ್ಲಿ ಗ್ರಂಥಕರ್ತೃವಾದ ವಾದೀಭಸಿಂಹಮುನಿಯು ವೀತರಾಗರಾದುದರಿಂದ ಲೋಕಹಿತವೇ ಸ್ವಪ್ರಯೋಜನವೆಂದುಭಾವಿಸಿ ಪರಶ್ರೇಯಃಪ್ರಾರ್ಥನಾರೂಪವಾದ ಆಶೀರ್ವಾದಕ್ಕೆ ಇತರರೇ ವಿಷಯರಾದುದರಿಂದಲೂ ವರ್ಧಮಾನಸ್ವಾಮಿಯು ನಿಮಗೆ ಮಂಗಳವನ್ನುಂಟುಮಾಡಲೆಂದು ಪ್ರಾರ್ಥಿಸುತ್ತಾರೆ.ಗ್ರಂಥವಿಸ್ತರಭಯದಿಂ ವಿರಾಮವಂ ಹೊಂದುವೆವು.

ಶ್ಲೋಕ॥ ಸಂಕ್ಷೇಪೇಣ ಪ್ರವಕ್ಷ್ಯಾಮಿ
ಚರಿತಂ ಜೀವಕೋದ್ಭವಮ್।
ಪೀಯೂಷಂ ನ ಹಿ ನಿಶ್ಶೇಷಂ
ಪಿಬನ್ನೇವ ಸುಖಾಯತೇ ॥೨॥

ಟೀ॥ ಅಹಂ-ನಾನು, ಜೀವಕೋದ್ಭವಂ- ಜೀವಕ-ಜೀವಂಧರಸ್ವಾಮಿಯಲ್ಲಿ, ಉದ್ಭವಂ-ಉಂಟಾದ, ಚರಿತಂ-ಸಚ್ಚರಿತ್ರವನ್ನು, ಸಂಕ್ಷೇಪೇಣ- ಸಂಗ್ರಹದಿಂದ-ಪ್ರವಕ್ಷ್ಯಾಮಿ-ಹೇಳುತ್ತೇನೆ, ಪೀಯೂಷಂ-ಅಮೃತವನ್ನು, ನಿಶ್ಶೇಷಂ-[illegible]-ಸ್ವಲ್ಪವೂ ಉಳಿಸದಂತೆ, ಪಿಬನ್ನೇವ-ಪಾನಮಾಡುವ ಜನವೇ, ನಸುಖಾಯತೇ, ಸಂತೋಷಿಸುವದಿಲ್ಲವಲ್ಲಾ.

ತಾತ್ಪರ್ಯ॥ ಜೀವಂಧರಚರಿತ್ರವನ್ನು ಸಂಕ್ಷೇಪಿಸಿ ಹೇಳುತ್ತೇನೆ. ಅಮೃತವಾದುದು ಸ್ವಲ್ಪವಾಗಿ ಪಾನಮಾಡಲ್ಪಟ್ಟರೂ ಸುಖವನ್ನುಂಟುಮಾಡುತ್ತದೆಯಲ್ಲವೆ? ಅಮೃತದಂತೆ ಪುಣ್ಯಚರಿತೆಯು ಸ್ವಭಾವದಿಂದಲೇ ಸುಖಕರವು॥೨॥

ಶ್ಲೋಕ॥ ಶ್ರೇಣಿಕಪ್ರಶ್ನಮುದ್ದಿಶ್ಯ
ಸುಧರ್ಮೋ ಗಣನಾಯಕಃ।
ಯಥೋವಾಚ ಮಯಾಪ್ಯತ್ರ
ದುಚ್ಯತೇ ಮೋಕ್ಷಲಿಪ್ಸಯಾ ।೩॥

ಟೀ ॥ ಸುಧರ್ಮಃ- ಸುಧರ್ಮರೆಂಬ, ಗಣನಾಯಕಃ- ಗಣಧರಪರಮೇಷ್ಠಿಯು, ಶ್ರೇಣಿಕಪ್ರಶ್ನಂ- ಶ್ರೇಣಿಕಮಹಾಮಂಡಲೇಶ್ವರನ ಪ್ರಶ್ನವನ್ನು, ಉದ್ದಿಶ್ಯ- ಉದ್ದೇಶಿಸಿ, ಯಥಾ- ಯಾವ ಪ್ರಕಾರ, ಉವಾಚ- ಹೇಳಿದರೋ, ತಥಾ- ಹಾಗೆ, ಮಯಾಪಿ- ನನ್ನಿಂದಕೂಡ, ಮೋಕ್ಷಲಿಪ್ಸಯಾ- ಮೋಕ್ಷೇಚ್ಛೆಯಿಂದ, ಅತ್ರ- ಈ ಜೀವಂಧರ ಚರಿತ್ರೆಯು, ಉಚ್ಯತೇ- ಹೇಳಲ್ಪಡುತ್ತದೆ.

ತಾತ್ಪರ್ಯ ॥ ಸುಧರ್ಮರೆಂಬ ಗಣಧರಪರಮೇಷ್ಠಿಯಿಂದ ಶ್ರೇಣಿಕಮಹಾರಾಜನ ಪ್ರಶ್ನವನ್ನಂಗೀಕರಿಸಿ ಯಾವ ಪ್ರಕಾರ ಈ ಜೀವಂಧರ ಚರಿತ್ರವುಹೇಳಲ್ಪಟ್ಟಿತೋ, ಅದೇಪ್ರಕಾರ ನನ್ನಿಂದಲೂ ಹೇಳಲ್ಪಡುತ್ತದೆ.
ಮತ್ತು ಈ ಗ್ರಂಥವು ಖ್ಯಾತಿ ಲಾಭಪೂಜೆಯನ್ನುದ್ದೇಶಿಸದೆಯೇ ಮೋಕ್ಷೇಚ್ಛೆಯಿಂದಾದುದು॥೩॥

ಶ್ಲೋಕ ॥ ಇಹಾಸ್ತಿ ಭಾರತೇಖಣ್ಡೇ
ಜಮ್ಬೂದ್ವೀಪಸ್ಯ ಮಣ್ಡನೇ ।
ಮಣ್ಡಲಂ ಹೇಮಕೋಶಾಭಂ
ಹೇಮಾಂಗದಸಮಾಹ್ವಯಮ್ ॥ ೪ ॥

ಟೀ ॥ ಇಹ- ಈ ಲೋಕದಲ್ಲಿ, ಜಂಬೂದ್ವೀಪಸ್ಯ- ಜಂಬೂದ್ವೀಪಕ್ಕೆ, ಮಂಡನೆ ಅಲಂಕಾರಭೂತವಾದ, ಭಾರತೇ- ಭರತರಾಜಸಂಬಂಧವಾದ, ಖಂಡೇ- ಆರ್ಯಖಂಡದಲ್ಲಿ, ಹೇಮಕೋಶಾಭಂ- ಸುವರ್ಣಭಾಂಡಾಗಾರಕ್ಕೆ ಸಮಾನವಾದ, ಹೇಮಾಂಗದಸಮಾಹ್ವಯಂ- ಹೇಮಾಂಗದವೆಂಬ ನಾಮಧೇಯವುಳ್ಳ, ಮಂಡಲಂ- ದೇಶವು, ಅಸ್ತಿ- ಇರುತ್ತಲಿದೆ.

ತಾತ್ಪರ್ಯ ॥ ಈ ಭೂಲೋಕದಲ್ಲಿ ಜಂಬೂದ್ವೀಪಕ್ಕೆ ಅಲಂಕಾರಪ್ರಾಯವಾದ ಆದೀಶ್ವರಸ್ವಾಮಿಪುತ್ರನಾದ ಷಟ್ಖಂಡಾಧಿಪತಿ ಭರತಚಕ್ರವರ್ತಿ

ಯಿಂದ ಪರಿಪಾಲಿತವಾದ ಭಾರತಖಂಡದಲ್ಲಿ ಸುವರ್ಣಭರಿತವಾದುದರಂತೆ ಹೇಮಾಂಗದವೆಂದು ಪ್ರಸಿದ್ಧವಾದ ದೇಶವು ಇರುತಿರುವುದು ॥ ೪ ॥

ಶ್ಲೋಕ॥ ತತ್ರ ರಾಜಪುರೀನಾಮ
ರಾಜಧಾನೀ ವಿರಾಜತೇ।
ರಾಜರಾಜಪುರೀಸ್ರಷ್ಟೌ
ಸ್ರಷ್ಟುರ್ಮಾತೃಕಾಯತೇ ॥ ೫ ॥

ಟೀ ॥ ತತ್ರ-ಆ ಹೇಮಾಂಗದ ದೇಶದಲ್ಲಿ, ರಾಜಪುರೀನಾಮ-ರಾಜಪುರಿ ಎಂದು ಪ್ರಸಿದ್ಧವಾದ, ರಾಜಧಾನೀ-ರಾಜನಿರುವ ಪ್ರಧಾನಪಟ್ಟಣವು, ವಿರಾಜತೆ-ಪ್ರಕಾಶಿಸುತಲಿದೆ, ಯಾ-ಯಾವ ರಾಜಪುರೀಪಟ್ಟಣವು, ರಾಜರಾಜಪುರೀಸ್ರಷ್ಟೌ-ಅಲಕಾಪುರೀ ನಿರ್ಮಾಣದಲ್ಲಿ, ಸ್ರಷ್ಟುಃ-ಬ್ರಹ್ಮನಿಗೆ, ಮಾತೃಕಾಯತೆ-ಮೇಲುಪಂಕ್ತಿಯೋಪಾದಿಯಲ್ಲಿ ಆಚರಿಸುತ್ತೆ.

ತಾತ್ಪರ್ಯ ॥ ಆ ಹೇಮಾಂಗದ ದೇಶದಲ್ಲಿ ರಾಜಪುರಿಯೆಂದು ಪ್ರಸಿದ್ಧವಾದ ರಾಜಧಾನಿಯು ಇರುವುದು. ಬ್ರಹ್ಮನು ಯಾವ ಈ ಪಟ್ಟಣವನ್ನುನೋಡಿ ಕುಬೇರ ಪಟ್ಟಣವನ್ನು ನಿರ್ಮಿಸಿದನೆಂದು ಹೇಳಬಹುದಾಗಿದೆ. ಅಂದರೆ.—ಅಧಿಕ ಸಂಪತ್ತಿನಿಂದಲೂ ಅತಿಚಲುವಿಕೆಯಿಂದಲೂ ಪ್ರಕಾಶಿಸುವುದೆಂದು ತಾತ್ಪರ್ಯವು॥ ೫ ॥

ಶ್ಲೋಕ ॥ ತಸ್ಯಾಂ ಸತ್ಯಂಧರೋನಾಮ
ರಾಜಾಭೂತ್ಸತ್ಯವಾಙ್ಮಯಃ ।
ವೃದ್ಧಸೇವೀ ವಿಶೇಷಜ್ಞೋ
ನಿತ್ಯೋದ್ಯೋಗೀ ನಿರಾಗ್ರಹಃ॥೬॥

ಟೀ॥ ತಸ್ಯಾಂ-ಆ ರಾಜಪುರೀ ಪಟ್ಟಣದಲ್ಲಿ, ಸತ್ಯವಾಙ್ಮಯಃ -ಯಥಾರ್ಥವಾಕ್ಯಸ್ವರೂಪವಾಗುಳ್ಳ, ವೃದ್ಧಸೇವೀ-ಜ್ಞಾನವೃದ್ಧ ವಯೋವೃದ್ಧ ಶೀಲವೃದ್ಧರನ್ನು ಸೇವಿಸುವ, ವಿಶೇಷಜ್ಞಃ-ಜ್ಞಾನಾಧಿಕನಾದ, ನಿತ್ಯೋದ್ಯೋಗೀ-ಯಾವಾಗಲೂ ಪ್ರಯತ್ನಶಾಲಿಯಾದ, ನಿರಾಗ್ರಹಃ - ದುರಭಿನಿವೇಶರಹಿತನಾದ, ಸತ್ಯಂಧರೋನಾಮ-ಸತ್ಯಂಧರನೆಂದು ಪ್ರಸಿದ್ಧನಾದ, ರಾಜಾ-ದೊರೆಯು, ಅಭೂತ್-ಇದ್ದನು.

ತಾತ್ಪರ್ಯ॥ ಆ ಪಟ್ಟಣದಲ್ಲಿ ಸತ್ಯವಚನಶೀಲನಾಗಿಯೂ, ಜ್ಞಾನಿಗಳನ್ನು ಪೂಜಿಸುವವನಾಗಿಯೂ, ವಿಶೇಷ ತಿಳುವಳಿಕೆಯುಳ್ಳವನಾಗಿಯೂ, ಸರ್ವದಾ ರಾಜ್ಯರಕ್ಷಣ ಪ್ರಯತ್ನಶೀಲನಾಗಿಯೂ, ಅಹಂಕಾರರಹಿತನಾಗಿಯೂ, ಸತ್ಯಂಧರನೆಂದು ಪ್ರಸಿದ್ಧನಾದ ದೊರೆಯು ಪ್ರಕಾಶಿಸುತಿದ್ದನು॥೬॥

ಶ್ಲೋಕ॥ ಮಹಿತಾಮಹಿಷೀ ತಸ್ಯ
ವಿಶ್ರುತಾ ವಿಜಯಾಖ್ಯಯಾ ।
ವಿಜಯಾದ್ವಿಶ್ವನಾರೀಣಾಂ
ಪಾತಿವ್ರತ್ಯಾದಿಭಿರ್ಗುಣೈಃ ॥ ೭ ॥

ಟೀ॥ ತಸ್ಯ-ಆ ಸತ್ಯಂಧರ ಮಹಾರಾಜನಿಗೆ, ಪಾತಿವ್ರತ್ಯಾದಿಭಿಃ-ಪತಿವ್ರತಾ ಧರ್ಮವೇ ಮೊದಲಾದ, ಗುಣೈಃ-ಗುಣಗಳಿಂದ, ವಿಶ್ವನಾರೀಣಾಂ—ವಿಶ್ವ-ಸಮಸ್ತರಾದ, ನಾರೀಣಾಂ-ಸ್ತ್ರೀಯರ, ವಿಜಯಾತ್-ಜಯಿಸಿರೋಣವರ ದೆಸೆಯಿಂದ ( ಅಂದರೆ ಉತ್ತಮಳೆನಿಸಿರೋಣವರ ದೆಸೆಯಿಂದ ), ವಿಜಯಾಖ್ಯಯಾ-ವಿಜಯಾ ಎಂಬ ನಾಮಧೇಯದಿಂದ, ವಿಶ್ರುತಾ-ಪ್ರಸಿದ್ಧಳಾದ, ಮಹಿಷೀ-ಪಟ್ಟಮಹಿಷಿಯು, ಅಭೂತ್-ಇದ್ದಳು.

ತಾತ್ಪರ್ಯ॥ಆ ಸತ್ಯಂಧರ ಮಹಾರಾಜನಿಗೆ ಪತಿವ್ರತಾ ಧರ್ಮವೇ ಮೊದಲಾದ ಗುಣಗಳಿಂದ ಸಕಲ ಸ್ತ್ರೀಯರಲ್ಲಿಯೂ ಉತ್ಕೃಷ್ಟಳೆನಿಸಿದುದರಿಂದಲೇ ವಿಜಯಾ ಎಂಬುವ ಅನ್ವರ್ಥನಾಮಧೇಯವುಳ್ಳ ಪೂಜ್ಯಳಾದ ಪಟ್ಟಮಹಿಷಿಯು ಇದ್ದಳು ॥ ೭ ॥

ಶ್ಲೋಕ॥ ಸತ್ಯಸ್ವಂತಃಪುರಸ್ತ್ರೀಣಾಂ
ಸಮಾಜೇ ರಾಜವಲ್ಲಭಾ ।
ಸೈವಾಸೀನ್ನಾಪರಾ ಕಾಚಿತ್
ಸೌಭಾಗ್ಯಂ ಹಿ ಸುದುರ್ಲಭಮ್॥೮॥

ಟೀ॥ ಅಂತಃಪುರಸ್ತ್ರೀಣಾಂ- ಅಂತಃಪುರಸ್ತ್ರೀಯರ, ಸಮಾಜೇ-ಸಮೂಹವು, ಸತ್ಯಪಿ-ಇದ್ದಾಗ್ಯೂ ಕೂಡ, ಸೈವ-ಆ ವಿಜಯಾದೇವಿಯೇ, ರಾಜವಲ್ಲಭಾ- ಸತ್ಯಂಧರಮಹಾರಾಜನಿಗೆ ಅತಿಪ್ರಿಯಪತ್ನಿಯಾಗಿ, ಆಸೀತ್-ಇದ್ದಳು., ಅಪರಾ-ಇತರ

ಳಾದ, ಕಾಚಿತ್-ಯಾವ ಸ್ತ್ರೀಯು, ನ-ಆಗಲಿಲ್ಲ., ಸೌಭಾಗ್ಯಂ-ಒಳ್ಳೇ ಅದೃಷ್ಟವು, ಸುದುರ್ಲಭಂ ಹಿ-ಎಲ್ಲರಿಂದಲೂ ಪಡೆಯಲಶಕ್ಯವಲ್ಲವೆ?.

ತಾತ್ಪರ್ಯ॥ ಅನೇಕ ಅಂತಃಪುರಸ್ತ್ರೀಯರಿದ್ದಾಗ್ಯೂ ಆ ವಿಜಯಾಮಹಾದೇವಿಯೋ ಸತ್ಯಂಧರ ಮಹಾರಾಜನಿಗೆ ಅತ್ಯಂತ ಪ್ರೀತಿಪಾತ್ರಳಾದಳು; ಮತ್ಯಾವಳೂ ಇಷ್ಟುಪ್ರಿಯಳಾಗಲಿಲ್ಲವು. ಮಹಾಭಾಗ್ಯವು ಎಲ್ಲರಿಗೂ ಸುಲಭವಲ್ಲವಷ್ಟೇ? ॥ ೮ ॥

ಶ್ಲೋಕ॥ ನಿಷ್ಕಂಟಕಾಧಿರಾಜ್ಯೋಯಂ
ರಾಜಾ ರಾಜ್ಞೀಮನಾರತಮ್ ।
ರಮಯನ್ನಾನ್ಯದಜ್ಞಾಸೀ-
ತ್ಪ್ರಾಜ್ಞಾಗ್ರಹರೋಪಿಸಃ ॥೯॥

ಟೀ॥ ನಿಷ್ಕಂಟಕಾಧಿರಾಜ್ಯಃ-ಶತ್ರುರಹಿತಸಾಮ್ರಾಜ್ಯಪದವನುಳ್ಳ, ಅಯಂ ರಾಜಾ-ಈ ಸತ್ಯಂಧರಮಹಾರಾಜನು, ಪ್ರಾಜ್ಞಾಗ್ರಹರೋಪಿಸಃ-ಪ್ರಾಜ್ಞರಲ್ಲಿ ಅಗ್ರಗಣ್ಯನಾಗಿದ್ದಾಗ್ಯೂ, ರಾಜ್ಞೀಂ-ಪಟ್ಟಮಹಿಷಿಯಾದ ವಿಜಯಾದೇವಿಯನ್ನು, ರಮಯನ್ಸನ್- ಸಂತೋಷಪಡಿಸುವವನಾಗಿ, ಅನ್ಯತ್-ಇತರ ರಾಜಕಾರ್ಯಾದಿಗಳನ್ನು, ನಾಜ್ಞಾಸೀತ್-ತಿಳಿಯಲಿಲ್ಲವು.

ತಾತ್ಪರ್ಯ॥ ಶತ್ರುರಹಿತ ಸಾಮ್ರಾಜ್ಯಸಂಪದವನುಳ್ಳ ಈ ಸತ್ಯಂಧರಮಹಾರಾಜನು ಸ್ವಯಂ ಮಹಾಪ್ರಾಜ್ಞನಾದಾಗ್ಯೂ ವಿಜಯಾಮಹಾದೇವಿಯಲ್ಲಿ ರಾಗಪರವಶನಾಗಿ ರಾಜ್ಯಕೃತ್ಯಗಳೇ ಮೊದಲಾದ ಇತರ ಕಾರ್ಯಗಳನ್ನುಪೇಕ್ಷಿಸಿ ಪತ್ನೀಸಂತೋಷಮಾತ್ರವೇ ಪ್ರಯೋಜನವುಳ್ಳವನಾದನು ॥ ೯ ॥

ಶ್ಲೋಕ॥ ವಿಷಯಾಸಕ್ತಚಿತ್ತಾನಾಂ
ಗುಣಃ ಕೋವಾ ನ ನಶ್ಯತಿ।
ನ ವೈದುಷ್ಯಂ ನ ಮಾನುಷ್ಯಂ
ನಾಭಿಜಾತ್ಯಂ ನ ಸತ್ಯವಾಕ್ ॥೧೦॥

ಟೀ॥ ವಿಷಯಾಸಕ್ತಚಿತ್ತಾನಾಂ-ಸ್ತ್ರೀಭೋಗದಲ್ಲಿ ಆಸಕ್ತವಾದ ಮನ

ಸ್ಸುಳ್ಳವರಿಗೆ, ಕೋಽಪಿ ಗುಣಃ- ಯಾವ ಸದ್ಗುಣವು, ನ ನಶ್ಯತಿ-ನಾಶವನ್ನು ಹೊಂದುವದಿಲ್ಲವು, ವೈದುಷ್ಯಂ-ಪಾಂಡಿತ್ಯವು, ನ-ಇರುವದಿಲ್ಲವು, ಮಾನುಷ್ಯಂ-ಸನ್ಮನುಷ್ಯನಾಗಿರೋಣವು, ನ-ಇರುವುದಿಲ್ಲವು, ಆಭಿಜಾತ್ಯಂ- ಸತ್ಕುಲಪ್ರಸೂತನಾಗಿರೋಣವು, ನ-ಇರುವದಿಲ್ಲವು, ಸತ್ಯವಾಕ್-ಯಥಾರ್ಥವಾದಮಾತು, ನ-ಇರುವುದಿಲ್ಲವು.

ತಾತ್ಪರ್ಯ|| ಕೇವಲಕಾಮಾಸಕ್ತರಾದವರಿಗೆ ಪಾಂಡಿತ್ಯವೂ, ಒಳ್ಳೇ ಮನುಷ್ಯನೆನಿಸಿರೋಣವು, ಸತ್ಕುಲಪ್ರಸೂತನೆನಿಸಿರೋಣವು, ಸತ್ಯವಾದಿಯೆನಿಸಿರೋಣವು ಮೊದಲಾಗಿರುವ ಯಾವ ಗುಣವೂ ನಿಲ್ಲಲಾರದು; ಕೇವಲ ದೋಷಪ್ರಿಯನಾಗುತ್ತಾನೆ? ॥ ೧೦ ॥

ಶ್ಲೋಕ|| ಪರಾರಾಧನಜಾದ್ದೈನ್ಯಾ-
ತ್ಪೈಶೂನ್ಯಾತ್ಪರಿವಾದತಃ ।
ಪರಾಭವಾತ್ಕಿಮನ್ಯೇಭ್ಯೋ
ನಬಿಭೇತಿ ಹಿ ಕಾಮುಕಃ ॥ ೧೧ ॥

ಟೀ|| ಕಾಮುಕಃ-ಕಾಮಾಸಕ್ತನಾದಪುರುಷನು, ಪರಾರಾಧನಜಾತ್-ಇತರಸೇವಾವೃತ್ತಿಯಿಂದುಂಟಾದ, ದೈನ್ಯಾತ್-ದೀನಭಾವದದೆಸೆಯಿಂದಲೂ, ಪೈಶೂನ್ಯಾತ್-ದೌರ್ಜನ್ಯದದೆಸೆಯಿಂದಲೂ, ಪರಿವಾದತಃ-ಲೋಕಾಪವಾದದದೆಸೆಯಿಂದಲೂ, ಪರಾಭವಾತ್-ಅಪಮಾನದದೆಸೆಯಿಂದಲೂ, ನಬಿಭೇತಿಹಿ- ಭಯಪಡುವದಿಲ್ಲವಷ್ಟೆ?, ಅನ್ಯೇಭ್ಯಃ-ಉಳಿದವುಗಳದೆಸೆಯಿಂದ, ಕಿಂ-ಏನು ಹೇಳತಕ್ಕದ್ದು?.

ತಾತ್ಪರ್ಯ || ಕಾಮ ಪರತಂತ್ರರಾದ ಜನವು ಇತರ ನೀಚಜನದ ಪರಿಚಾರಕಕೃತ್ಯದಿಂದುಂಟಾಗುವ ದೀನಭಾವದದೆಸೆಯಿಂದಲೂ, ದೌರ್ಜನ್ಯದದೆಸೆಯಿಂದಲೂ, ಲೋಕಾಪವಾದದದೆಸೆಯಿಂದಲೂ, ಅಪಮಾನದದೆಸೆಯಿಂದಲೂಕೂಡ ಅಂಜುವದಿಲ್ಲವು, ಹೀಗಿರುವಲ್ಲಿ ಇನ್ನು ಯಾವದೋಷದಿಂದ ಹೆದರುವನು ? ॥ ೧೧॥

ಶ್ಲೋಕ|| ಶೌಚಂ ತ್ಯಾಗಂ ವಿವೇಕಂ ಚ
ವೈಭವಂ ಮಾನಿತಾಮಪಿ ।
ಕಾಮಾರ್ತಾಃ ಖಲು ಮುಂಚಂತಿ
ಕಿಮನ್ಯೈಃ ಸ್ವಂ ಚ ಜೀವಿತಮ್ ॥ ೧೨ ॥

ಟೀ॥ ಕಾಮಾತುರಾಃ-ಸ್ತ್ರೀವ್ಯಾಮೋಹದಿಂದ ಪೀಡಿತರಾದವರು, ಹಾರ್ದಂ- ಮನಸ್ಸಿನ ಒಳ್ಳೇ ಪರಿಣಾಮವನ್ನು, ತ್ಯಾಗಂ-ಸತ್ಪಾತ್ರದಲ್ಲಿ ದ್ರವ್ಯವ್ಯಯವನ್ನು, ವಿವೇಕಂಚ-ಹೇಯೋಪಾದೇಯ ವಿಜ್ಞಾನವನ್ನು, ವೈಭವಂ-ಮಹತ್ವವನ್ನು, ಮಾನಿತಾಮಪಿ- ಮಾನವನ್ನೂ, ಸ್ವಂ- ಸ್ವೀಯವಾದ, ಜೀವಿತಂಚ -ಪ್ರಾಣವನ್ನೂ ಕೂಡ, ಮುಂಚನ್ತಿ-ಬಿಡುತ್ತಾರೆ, ಅನ್ಯೈಃ-ಉಳಿದವುಗಳಿಂದ, ಕಿಂ-ಏನು ಪ್ರಯೋಜನವು?

ತಾತ್ಪರ್ಯ ॥ ಸ್ತ್ರೀಲೋಲರು ಒಳ್ಳೇ ಮನಃಪರಿಣಾಮವನ್ನು, ಔದಾರ್ಯಗುಣವನ್ನು, ವಿವೇಕವನ್ನು, ಮಾನವನ್ನು, ತಮ್ಮ ಪ್ರಾಣವನ್ನು ಕೂಡ ತ್ಯಜಿಸುತ್ತಾರೆ. ಇತರವಾದ ದೋಷವರ್ಣನದಿಂದೇನು ಪ್ರಯೋಜನವು ? ॥ ೧೨ ॥

ಶ್ಲೋಕ॥ ಪುನಶ್ಚೈಚ್ಛದಯಂ ದಾತುಂ
ಕಾಷ್ಠಾಂಗಾರಾಯ ಕಾಶ್ಯಪೀಮ್ ।
ಅವಿಚಾರಿತರಮ್ಯಂ ಹಿ
ರಾಗಾನ್ಧಾನಾಂ ವಿಚೇಷ್ಟಿತಮ್ ॥೧೩ ॥

ಟೀ ॥ ಅಯಂ-ಈಸತ್ಯಂಧರಮಹಾರಾಜನು, ಕಾಷ್ಠಾಂಗಾರಾಯ-ಕಾಷ್ಠಾಂಗಾರನಿಗೋಸ್ಕರ, ಕಾಶ್ಯಪೀಂ- ಭೂಮಿಯನ್ನು, ದಾತುಂ-ಕೊಡಲೋಸುಗ, ಪುನಃ-ಮತ್ತು, ಐಚ್ಛತ್-ಇಚ್ಛಿಸಿದನು, ರಾಗಾಂಧಾನಾಂ-ಸ್ತ್ರೀಮೋಹದಿಂದ ಮುಂದುಗಾಣದೆಯಿರತಕ್ಕವರ, ವಿಚೇಷ್ಟಿತಂ- ವ್ಯಾಪಾರವು, ಅವಿಚಾರಿತರಮ್ಯಂ ಹಿ-ಪರ್ಯಾಲೋಚಿಸಿದಲ್ಲಿ ಮನೋಹರವಲ್ಲವು.

ತಾತ್ಪರ್ಯ ॥ ಕಾಮುಕನಾದ ಈ ಸತ್ಯಂಧರ ಮಹಾರಾಜನು ರಾಜ್ಯವನ್ನು ಭೋಗಪ್ರತಿಬಂಧಕವನ್ನಾಗಿ ತಿಳಿದು ಕಾಷ್ಠಾಂಗಾರನಿಗೋಸುಗ ಕೊಡಲಿಚ್ಛೈಸಿದನು. ಕಾಮುಕರ ವ್ಯಾಪಾರವು ಪರ್ಯಾಲೋಚಿಸಿದರೆ ಮನೋಹರವಲ್ಲವು. (ಕಾಮುಕರು ಉತ್ತರ ಫಲವನ್ನೆಣಿಸರು.) ॥ ೧೩॥

ಶ್ಲೋಕ॥ ತಾವತಾ ತಂ ಸಮಭ್ಯೇತ್ಯ
ಮನ್ತ್ರಿಮುಖ್ಯಾ ಅಬೂಬುಧನ್ ।
ದೇವ ದೇವೈರಪಿ ಜ್ಞಾತಂ
ವಿಜ್ಞಾಪ್ಯಂ ಶ್ರೂಯತಾಮಿದಮ್ ॥೧೪॥

ಟೀ॥ತಾವತಾ-ಅಷ್ಟರಲ್ಲಿ, ತಂ-ಆ ಸತ್ಯಂಧರ ಮಹಾರಾಜನನ್ನು,ಸಮಭ್ಯೇತ್ಯ-ಹೊಂದಿ, ಮಂತ್ರಿಮುಖ್ಯಾಃ-ಮಂತ್ರಿಶ್ರೇಷ್ಠರು, ಹೇದೇವ-ಎಲೈ ಸ್ವಾಮಿಯೇ!, ದೇವೈರಪಿ-ಪ್ರಭುವಾದ ತಮ್ಮಿಂದಲೂಕೂಡ, ಜ್ಞಾತಂ-ತಿಳಿಯಲ್ಪಟ್ಟ, ವಿಜ್ಞಾಪ್ಯಂ-ವಿಜ್ಞಾಪಿಸುವದಕ್ಕೆ ಯೋಗ್ಯವಾದ, ಇದಂ-ಈ ವಕ್ಷ್ಯಮಾಣವಚನವು,ಶ್ರೂಯತಾಂ-ಕೇಳಲ್ಪಡಲಿ., (ಇತಿ-ಹೀಗೆಂತೆಂದು,) ಅಬೂಬುಧನ್-ತಿಳಿಸಿದರು.

ತಾತ್ಪರ್ಯ॥ ಅಷ್ಟರಲ್ಲಿ ಮಂತ್ರಿಶ್ರೇಷ್ಠರು ರಾಜನಸಮೀಪವನ್ನೈದಿ ಸ್ವಾಮಿಯಾದ ತಮ್ಮಿಂದ ತಿಳಿಯಲ್ಪಟ್ಟ ವಿಷಯವನ್ನೇ ಸ್ಮರಣಾರ್ಥವಾಗಿ ವಿಜ್ಞಾಪಿಸುತ್ತೇವೆಂದು ವಿನಯಪ್ರಕಾಶದಿಂ ಮುಂದೆ ಹೇಳುವ ಪ್ರಕಾರ ವಿಜ್ಞಾಪಿಸುತ್ತಾರೆ॥೧೪॥

ಶ್ಲೋಕ॥ ಹೃದಯಂ ಚ ನ ವಿಶ್ವಾಸ್ಯಂ
ರಾಜಭಿಃ ಕಿಂ ಪರೋನರಃ।
ಕಿನ್ತು ವಿಶ್ವಸ್ತವದ್ದೃಶ್ಯೋ
ನಟಾಯಂತೇ ಹಿ ಭೂಭುಜಃ ॥ ೧೫ ॥

ಟೀ॥ ರಾಜಭಿಃ-ದೊರೆಗಳಿಂದ,ಹೃದಯಂಚ-ತಮ್ಮ ಮನಸ್ಸೇ, ನವಿಶ್ವಾಸ್ಯಂ-ನಂಬತಕ್ಕದ್ದಲ್ಲವು., ಪರಃ-ಬೇರೆಯಾದ, ನರಃ-ಮನುಷ್ಯನು, ಕಿಂ- ಹೇಳತಕ್ಕದ್ದೇನು?, ಕಿಂತು-ಮತ್ತೇನೆಂದರೆ, ವಿಶ್ವಸ್ತವತ್-ನಂಬಲ್ಪಟ್ಟವನಂತೆ, ದೃಶ್ಯಃ-ನೋಡಲೋಸುಗಯೋಗ್ಯನು, ಭೂಭುಜಃ-ದೊರೆಗಳು, ನಟಾಯನ್ತೇ ಹಿ-ಆಟಗಾರರೋಪಾದಿಯಲ್ಲಿ ಆಚರಿಸುತ್ತಾರಲ್ಲವೆ?.

ತಾತ್ಪರ್ಯ ॥ ದೊರೆಗಳು ಅತ್ಯಂತರಂಗವಾದ ತಮ್ಮಮನಸ್ಸನ್ನೇ ನಂಬಕೂಡದು; ಹೀಗಿರುವಲ್ಲಿ ಬಹಿರಂಗವಾದ ಇತರ ಮನುಷ್ಯನನ್ನು ಹೇಗೆ ನಂಬಬಹುದು? ಆದರೆ, ರಾಜಕೀಯವ್ಯಾಪಾರವು ಇತರರನ್ನು ನಂಬಿಯೇ ನಡೆಸತಕ್ಕುದಾದುದರಿಂದ ಎಲ್ಲರಲ್ಲಿಯೂ ವಿಶ್ವಾಸವನ್ನು ಆಟಗಾರನಂತೆ ಅಭಿನಯಿಸಬೇಕು. ಯಾರನ್ನೂಹೃದಯಪೂರ್ವ ನಂಬಕೂಡದು. ಸರ್ವತ್ರ ಜಾಗರೂಕರಾಗಿಯೇ ಇರಬೇಕು ॥೧೫॥

ಶ್ಲೋಕ॥ ಪರಸ್ಪರಾವಿರೋಧೇನ
ತ್ರಿವರ್ಗೋ ಯದಿ ಸೇವ್ಯತೇ।

ಅನರ್ಗಳಮದಸ್ಸೌಖ್ಯ-
ಮಪವರ್ಗೋಹ್ಯನುಕ್ರಮಾತ್ ॥ ೧೬ ॥

ಟೀ ॥ ಪರಸ್ಪರಾವಿರೋಧೇನ- ಒಂದಕ್ಕೊಂದಕ್ಕೆ ವಿರೋಧವಿಲ್ಲದೆ, ತ್ರಿವರ್ಗಃ-ಧರ್ಮಾರ್ಥಕಾಮಗಳು. ಸೇವ್ಯತೇಯದಿ-ಸೇವಿಸಲ್ಪಟ್ಟದ್ದೇಆದರೆ, ಅನರ್ಗಳಂ-ನಿರ್ವಿಘ್ನವಾದ, ಅದಸ್ಸೌಖ್ಯಂ-ಐಹಿಕಸುಖವು, ಅನುಕ್ರಮಾತ್-ಕ್ರಮವಾಗಿ, ಅಪವರ್ಗೋಹಿ-ಮೋಕ್ಷವೂ ಉಂಟಾಗುತ್ತದೆಯಲ್ಲವೆ?

ತಾತ್ಪರ್ಯ ॥ ಧರ್ಮಾರ್ಥಕಾಮಗಳನ್ನು ಪರಸ್ಪರ ವಿರೋಧವಿಲ್ಲದೆ ಯಥೋಚಿತವಾಗಿ ಸೇವಿಸುವನಿಗೆ ನಿರ್ವಿಘ್ನವಾಗಿ ಐಹಿಕಸುಖವೂ, ಕ್ರಮವಾಗಿ ಮೋಕ್ಷವೂ ದೊರೆಯುವದು. ಕೇವಲ ಅರ್ಥಕಾಮ ಪ್ರಾವಣ್ಯವು ತ್ಯಾಜ್ಯವು. ಮಿತಕಾಮನಾಗಿರಬೇಕೆಂದು ಭಾವವು ॥೧೬॥

ಶ್ಲೋಕ॥ ತತಸ್ತ್ಯಾಜ್ಯೌ ನ ಧರ್ಮಾರ್ಥೌ
ರಾಜಭಿಃ ಸುಖಕಾಮ್ಯಯಾ ।
ಅದಃ ಕಾಮ್ಯೇಪಿ ದೇವಶ್ಚೇ-
ದಮೂಲಸ್ಯ ಕುತಸ್ಸುಖಮ್ ॥೧೭॥

ಟೀ ॥ ತತಃ-ಆದಕಾರಣದೆಸೆಯಿಂದ, ರಾಜಭಿಃ-ದೊರೆಗಳಿಂದ, ಸುಖಕಾಮ್ಯಯಾ-ಸುಖಾಪೇಕ್ಷೆಯಿಂದ, ಧರ್ಮಾರ್ಥೌ-ಧರ್ಮವೇನು ಅರ್ಥವೇನು ಇವುಗಳು, ನತ್ಯಾಜ್ಯೌ-ಬಿಡತಕ್ಕವಲ್ಲವು., ದೇವಃ-ಸ್ವಾಮಿಯಾದ ತಾವು, ಅದಃಕಾಮ್ಯೇಪಿಚೇತ್-ಈ ಸುಖವನ್ನು ಅಪೇಕ್ಷಿಸಿದ್ದೇಆದರೆ, ಅಮೂಲಸ್ಯ-ಸುಖಮೂಲಕಾರಣವಾದ ಧರ್ಮಾರ್ಥರಹಿತನಿಗೆ, ಸುಖಂ-ಸೌಖ್ಯವು, ಕುತಃ-ಯಾವಕಾರಣದಿಂದುಂಟಾದೀತು?

ತಾತ್ಪರ್ಯ॥ ಅದುದರಿಂದ ಸುಖಾಪೇಕ್ಷೆಯಾದ ರಾಜರು ಧರ್ಮಾರ್ಥಗಳನ್ನು ಬಿಡಕೂಡದು. ಧರ್ಮಾರ್ಥಗಳಿಂದಲೇ ಸುಖವು ಸಾಧ್ಯವಾಗುವುದು. ಮೂಲರಹಿತವಾದಲ್ಲಿ ಫಲವು ಹೇಗೆ ಸಿದ್ಧಿಯಾಗುವುದು ? ॥೧೭॥

ಶ್ಲೋಕ॥ ನಾಶಿನಂ ಭಾವಿನಂ ಪ್ರಾಪ್ಯಂ
ಪ್ರಾಪ್ತೇ ಚ ಫಲಸಂತತಿಮ್ ।

ವಿಚಾರ್ಯೈವ ವಿಧಾತವ್ಯ-
ಮನುತಾಪೋಽನ್ಯಥಾ ಭವೇತ್ ॥೧೮॥

ಟೀ॥ ನಾಶಿನಂ-ನಾಶವೇಸ್ವಭಾವವಾಗಿ ಉಳ್ಳದ್ದನ್ನು, ಭಾವಿನಂ-ಮುಂದೆ ಉಂಟಾಗತಕ್ಕದ್ದನ್ನು, ಪ್ರಾಪ್ಯಂ - ಪಡೆಯಲೋಸುಗ ಯೋಗ್ಯವಾದುದನ್ನು, ಪ್ರಾಪ್ತೌ-ಪಡೆಯಲ್ಪಟ್ಟುದರಲ್ಲಿ, ಫಲಸಂತತಿಂ-ಫಲಪರಂಪರೆಯನ್ನು, ವಿಚಾರ್ಯೈವ-ಪರ್ಯಾಲೋಚಿಸಿಯೇ, ವಿಧಾತವ್ಯಂ-ಮಾಡತಕ್ಕದ್ದು., ಅನ್ಯಥಾ- ಹಾಗಲ್ಲದಿದ್ದರೆ, ಅನುತಾಪಃ-ಪಶ್ಚಾತ್ತಾಪವು, ಭವೇತ್- ಉಂಟಾಗುವುದು.

ತಾತ್ಪರ್ಯ॥ಯಾವುದುನಿತ್ಯವಾದದ್ದೋ, ಯಾವುದುಅನಿತ್ಯವಾದದ್ದೋ ಯಾವುದನ್ನು ಪಡೆಯಬೇಕೋ, ಯಾವುದನ್ನು ಪಡೆದರೆ ಒಳ್ಳೇಫಲಪರಂಪರೆಯುಂಟಾಗುವುದೋ, ಈ ವಿಷಯವನ್ನು ಚನ್ನಾಗಿ ಪರ್ಯಾಲೋಚಿಸಿ ಮಾಡಬೇಕು. ನಿರ್ವಿಚಾರವಾಗಿ ಮಾಡಿದ ಕೆಲಸಕ್ಕೆ ಫಲದೆಸೆಯಲ್ಲಿ ಪಶ್ಚಾತ್ತಾಪವೇ ಫಲವಾಗುವುದು. ಆದುದರಿಂದಪ್ರಕೃತಕಾರ್ಯವು ಆಲೋಚನೀಯವೆಂದುಭಾವವು. ಮತ್ತು ಈ ದೇಹದೇಹಾನುಬಂಧಿಯಾದ ಕಾಮಸುಖ ಮೊದಲಾದವು ನಶ್ವರವೆಂತಲೂ, ಮುಂದೆ ಅನರ್ಥಕಾರಣವೆಂತಲೂ, ಸಕಲಪುರುಷಾರ್ಥಗಳಿಗೂ ಮೂಲಕಾರಣವಾದ ಧರ್ಮವೇ ಪಡೆಯುವದಕ್ಕೆ ಯೋಗ್ಯವಾದುದೆಂತಲೂ, ಪಡೆಯಲ್ಪಟ್ಟ ಧರ್ಮಕ್ಕೆ ಅರ್ಥ ಕಾಮ ಮೋಕ್ಷಗಳು ಫಲಪರಂಪರೆಯೆಂತಲೂ ಪರ್ಯಾಲೋಚಿಸಿ ರಾಜನಿಗೆ ಪ್ರಜಾಪರಿಪಾಲನವೇ ಪರಮಧರ್ಮವಾದುದರಿಂದ ಅಂಥಾ ರಾಜ್ಯಶ್ರೀಯನ್ನು ಧರ್ಮವನ್ನು ನಶ್ವರವಾದ ಕಾಮಪುರುಷಾರ್ಥಾನುಭವಕ್ಕೋಸುಗ ಪರಹಸ್ತಗತವನ್ನಾಗಿಮಾಡುವುದು ಅನುಚಿತವೆಂದು ಮುಖ್ಯಾಭಿಪ್ರಾಯವು ॥೧೮॥

ಶ್ಲೋಕ ॥ ಇತಿ ಪ್ರಬೋಧಿತೋಽಪ್ಯೇಷ
ಧುರಿ ರಾಜ್ಞಾಂ ನ್ಯವೇಶಯತ್ ।
ಕಾಷ್ಠಾಂಗಾರಮಸೌ ಮೋಹಾತ್
ಬುದ್ಧಿಃ ಕರ್ಮಾನುಸಾರಿಣೀ ॥೧೯॥

ಟೀ॥ ಏಷಃ- ಈ ಸತ್ಯಂಧರಮಹಾರಾಜನು, ಇತಿ-ಈ ಪ್ರೋಕ್ತಪ್ರಕಾರ

ವಾಗಿ, ಪ್ರಬೋಧಿತೋಪಿ-ವಿಶೇಷವಾಗಿ ಮಂತ್ರಿಗಳಿಂದ ಬೋಧಿಸಲ್ಪಟ್ಟವನಾ ದಾಗ್ಯೂ, ಕಾಷ್ಠಾಂಗಾರಂ-ಕಾಷ್ಠಾಂಗಾರನನ್ನು, ಮೋಹಾತ್- ಅಜ್ಞಾನದೆಸೆ ಯಿಂದ, ರಾಜ್ಯಾಂಗ-ದೊರೆಗಳ, ಧುರಿ-ಭಾರದಲ್ಲಿ (ಅಂದರೆ) ಪ್ರಜಾರಕ್ಷಣಕಾರ್ಯದಲ್ಲಿ, ನ್ಯವೇಶಯತ್-ಸ್ಥಾಪಿಸಿದನು., ಬುದ್ಧಿಃ-ಬುದ್ಧಿಯು, ಕರ್ಮಾನುಸಾರಿಣೀ-ಅದೃಷ್ಟಾ ನುಗುಣವಾಗಿ ಉಂಟಾಗುವುದು, ಅಹೋ-ಆಶ್ಚರ್ಯವು !!

ತಾತ್ಪರ್ಯ ॥ ಈ ಸತ್ಯಂಧರಮಹಾರಾಜನು ಸ್ವಾಮಿಭಕ್ತಿ ಪರವಶ ರಾದ ಮಂತ್ರಿಗಳಿಂದ ಎಷ್ಟು ಬೋಧಿಸಲ್ಪಟ್ಟವನಾದಾಗ್ಯೂ ಕಾಷ್ಠಾಂ ಗಾರನನ್ನು ಅಜ್ಞಾನದ ದೆಸೆಯಿಂದ ರಾಜಕಾರ್ಯದಲ್ಲಿ ನಿಯಮಿಸಿದನು. "ಶ್ಲೋ॥ ಜನ್ಮಾಂತರಸಹಸ್ರೇಷು ಯಾಬುದ್ಧಿರ್ಭಾವಿತಾ ನೃಭಿಃ । ತಾ ಮೇವಭಜತೇಜಂತುರುಪದೇಶೋನಿರರ್ಥಕಃ ॥" ಎಂಬ ಪ್ರಮಾಣಾನು ಸಾರವಾಗಿ ಪ್ರಾಣಿಗಳ ಬುದ್ಧಿಯು ಕರ್ಮಾನುಗುಣವಾಗಿ ಪ್ರವರ್ತಿಸು ವುದಲ್ಲವೆ ?॥ ೧೯ ॥

ಶ್ಲೋಕ॥ ವಿಷಯಾನ್ಧ್ಯವಿಚಾರೇಣ
ಸಂಸಕ್ತಸ್ಯ ನೃಪಸ್ಯ ತು ।
ಪ್ರಕೃಷ್ಯಮಾಣರಾಗೇಣ
ಕಾಲೋ ವಿಲಯಮಿಯಿವಾನ್ ॥೨೦॥

ಟೀ ॥ ವಿಷಯಾಂಧ್ಯವಿಚಾರೇಣ-ಸ್ತ್ರೀವ್ಯಾಮೋಹಪ್ರಯುಕ್ತವಾದ ಚಿಂ ತೆಯೊಡನೆ, ಸಂಸಕ್ತಸ್ಯ (ವಿರಕ್ತಾನಾಮಿತಿ ಪಾ.)- ಅತ್ಯಂತಾಸಕ್ತನಾದ, ನೃಪ ಸ್ಯತು - ಸತ್ಯಂಧರಮಹಾರಾಜನಿಗಾದರೋ, ಪ್ರಕೃಷ್ಯಮಾಣರಾಗೇಣ- ಹೆಚ್ಚಿಸ ಲ್ಪಟ್ಟ ಸ್ತ್ರೀ ಮೋಹದಿಂದ, ಕಾಲಃ-ಕಾಲವು, ವಿಲಯಂ-ನಾಶವನ್ನು, ಈಯಿ ವಾನ್-ಐದಿದುದು.

ತಾತ್ಪರ್ಯ । ಕೇವಲ ಭೋಗಾಸಕ್ತನಾದ ರಾಜನಿಗಾದರೋ "ಶ್ಲೋ॥ನಜಾತುಕಾಮಃ ಕಾಮಾನಾಮುಪಭೋಗೇನಶಾಮ್ಯತಿ॥" ಎಂಬ ಪ್ರಮಾಣದಿಂದ ಕಾಲವು ಕಳೆದುದು ॥೨೦॥

ಶ್ಲೋಕ॥ ಸಾ ತು ನಿದ್ರಾವತೀ ಸ್ವಪ್ನ-
ಮದ್ರಾಕ್ಷೀತ್ ಕ್ಷಣದಾಕ್ಷಯೆ ।

ಅಸ್ವಪ್ನಪೂರ್ವಂ ಜೀವಾನಾಂ
ನ ಹಿ ಜಾತು ಶುಭಾಶುಭಮ್ ॥೨೧॥

(೨೦ನೆಯ ಶ್ಲೊ॥ ತಾ॥ ವಿರಕ್ತಾನಾಂ-ರಾಗರಹಿತರಾದವರಿಗೆ, ವಿಷಯ-ಸ್ತ್ರೀ ಧನಾದಿ ವಿಷಯಮೂಲಕವಾದ, ಆಂಧ್ಯ-ಮೂಢತ್ವವ, ವಿಚಾರೇಣ-ಪರಿತ್ಯಾಗಾರ್ಥವಾಗಿ ವಿಚಾರಮಾಡೋಣವರಿಂದಲೂ, ನೃಪಸ್ಯತು - ಸತ್ಯಂಧರಮಹಾರಾಜನಿಗಾದರೋ, ಪ್ರಕೃಷ್ಯಮಾಣರಾಗೇಣ-ಹೆಚ್ಚಿಸಲ್ಪಟ್ಟಸ್ತ್ರೀಮೋಹದಿಂದಲೂ, ಕಾಲಃ-ಕಾಲವು, ವಿಲಯಂ-ನಾಶವನ್ನು, ಆಯಿವಾಕ್-ಐದಿತು.

ವೈರಾಗ್ಯಶಾಲಿಗಳಾದವರಿಗೆ ಪತ್ನಿಪುತ್ರ ಗೃಹಕ್ಷೇತ್ರರಾಜ್ಯಾದಿ ಭೋಗೋಪಭೋಗವಿಷಯಕವಾದ ಮಮತಾರೂಪವಾಗಿರುವ ಅಜ್ಞಾನಪರಿತ್ಯಾಗಾರ್ಥವಾಗಿ ವಿಚಾರಮಾಡುವುದರಿಂದ ಕಾಲವು ಸಾರ್ಥಕವಾಗಿಕಳೆಯುತಲಿರುವುದು., ರಾಜನಿಗಾದರೋ ಭೋಗಾಸಕ್ತಿಯಿಂದಭಿವೃದ್ಧಿಹೊಂದಿದ ರಾಗದಿಂದ ಕಾಲವು ವ್ಯರ್ಥವಾಗಿ ಕಳೆಯುತಲಿರುವುದು.)

ಟೀ॥ ನಿದ್ರಾವತೀ-ನಿದ್ರೆಯಿಂದೊಡಗೂಡಿದ, ಸಾ ತು- ಆ ವಿಜಯಾಮಹಾದೇವಿಯಾದರೋ, ಕ್ಷಣದಾಕ್ಷಯೆ- ಬೆಳಗಿನಜಾಮದಲ್ಲಿ, ಸ್ವಪ್ನಂ-ಸ್ವಪ್ನವನ್ನು, ಅದ್ರಾಕ್ಷೀತ್-ಕಂಡಳು., ಜೀವಾನಾಂ-ಪ್ರಾಣಿಗಳಿಗೆ, ಶುಭಾಶುಭಂ-ಇಷ್ಟಾನಿಷ್ಟಫಲಗಳು,ಅಸ್ವಪ್ನಪೂರ್ವಂ-ಮೊದಲುಸ್ವಪ್ನವನ್ನುಕಾಣದೆ, ಜಾತುಚಿತ್-ಒಂದುಕಾಲದಲ್ಲೂ, ನಹಿ-ಉಂಟಾಗುವದಿಲ್ಲವಷ್ಟೆ?.

ತಾತ್ಪರ್ಯ॥ ಒಂದುದಿನ ನಿದ್ರೆಗೈಯುತ್ತಿದ್ದ ಪಟ್ಟಮಹಿಷಿಯು ಪ್ರಭಾತಕಾಲದಲ್ಲಿ ಸ್ವಪ್ನವನ್ನುಕಂಡಳು. ಪ್ರಾಣಿಗಳಿಗೆ ಶುಭವಾಗಲೀ, ಅಶುಭವಾಗಲೀ ಉಂಟಾಗುವದಕ್ಕೆ ಮೊದಲು ಆ ಫಲಸೂಚಕವಾದ ಸ್ವಪ್ನವು ಉಂಟಾಗುವುದಲ್ಲವೆ ? ॥ ೨೧ ॥

ಶ್ಲೋಕ॥ ವೈಭಾತಿಕವಿಧೇರನ್ತೇ-
ವಿಭೋರನ್ತಿಕವಿಶಾಯುಷೀ ।
ಅರ್ಧಾಸನನಿವಿಷ್ಟೇಯ-
ಮಭಾಷಿಷ್ಟ ಚ ಭೂಭುಜಮ್ ॥೨೨॥

ಟೀ॥ ವೈಭಾತಿಕವಿಧೇಃ-ಪ್ರಾತಃಕಾಲದಲ್ಲಿಮಾಡತಕ್ಕ ಸ್ನಾನಾದಿಕೃತ್ಯದ, ಅನ್ತೇ-ಅವಸಾನದಲ್ಲಿ, ವಿಭೋಃ-ಪ್ರಭುವಾದ ಸತ್ಯಂಧರಮಹಾರಾಜನ, ಅನ್ತಿಕಂ-

ಸಮೀಪವನ್ನು, ಈಯುಷೀ-ಐದಿದವಳಾಗಿ, ಅರ್ಧಾಸನೇವಿಷ್ಟಾ- ಅಸನಾರ್ಧದಲ್ಲಿ ಕುಳಿತಿರುವ, ಇಯಂ-ಈ ವಿಜಯಾದೇವಿಯು, ಭೂಭುಜಂ-ದೊರೆಯನ್ನು ಕುರಿತು, ಅಭಾಷಿಷ್ಟ ಚ-ಹೇಳಿದಳು.

ತಾತ್ಪರ್ಯ ॥ ಈ ವಿಜಯಾದೇವಿಯು ಪ್ರಾತಃಕಾಲ ಕೃತ್ಯವೆಲ್ಲವನ್ನೂ ನೆರವೇರಿಸಿ ರಾಜನಸಮೀಪವನ್ನೈದಿ ಅರ್ಧಾಸನದಲ್ಲಿಕುಳಿತು ಸ್ವಪ್ನವೃತ್ತಾಂತವನ್ನು ತಿಳಿಸಿದಳು. ॥ ೨೨ ॥

ಶ್ಲೋಕ॥ ಶ್ರುತ್ವಾ ಸ್ವಪ್ನತ್ರಯಂ ರಾಜಾ
ಜ್ಞಾತ್ವಾ ಚ ಫಲಮಕ್ರಮಾತ್ ।
ಪ್ರತಿವಕ್ತುಮುಪಾದತ್ತ
ಕಿಂಚಿನ್ನ್ಯಂಚನ್ಮನಾಭವನ್ ॥೨೩॥

ಟೀ॥ ರಾಜಾ-ಸತ್ಯಂಧರಮಹಾರಾಜನು, ಸ್ವಪ್ನತ್ರಯಂ-ಸ್ವಪ್ನಗಳಮೂರನ್ನು, ಶ್ರುತ್ವಾ-ಕೇಳಿ, ಫಲಂ-ಫಲವನ್ನು, ಜ್ಞಾತ್ವಾ ಚ-ತಿಳಿದೂಕೂಡ, ಕಿಂಚಿತ್-ಸ್ವಲ್ಪ, ನ್ಯಂಚನ್ಮನಾಭವನ್-ದೀನಮನಸ್ಸುಳ್ಳವನಾಗಿ, ಅಕ್ರಮಾತ್-ಕ್ರಮತಪ್ಪಿ, ಪ್ರತಿವಕ್ತುಂ-ಹೇಳಲೋಸುಗ, ಉಪಾದತ್ತ-ಆರಂಭಿಸಿದನು.

ತಾತ್ಪರ್ಯ॥ ರಾಜನು ಮೂರುಪ್ರಕಾರವಾದ ಸ್ವಪ್ನವನ್ನೂ ಕೇಳಿ ಫಲವನ್ನು ತಿಳಿದವನಾದರೂ ಸ್ವಲ್ಪಖಿನ್ನಮನಸ್ಕನಾಗಿ, ಅನಿಷ್ಟಸೂಚಕವಾಗಿಯೂ, ವ್ಯಸನಹೇತುವಾಗಿಯೂ ಇರೋಣದರಿಂದ ಕೆಲವುಭಾಗಸ್ಪಷ್ಟವಾಗಿಯೂ, ಕೆಲವು ಭಾಗಅಸ್ಪಷ್ಟವಾಗಿಯೂ, ಹೇಳಲಾರಂಭಿಸಿದನು ॥೨೩॥

ಶ್ಲೋಕ॥ ಪುತ್ರಮಿತ್ರಕಳತ್ರಾದೌ
ಸತ್ಯಾಮಪಿ ಚ ಸಂಪದಿ ।
ಆತ್ಮೀಯಾಪಾಯಶಂಕಾ ಹಿ
ಶಂಕುಃ ಪ್ರಾಣಭೃತಾಂ ಹೃದಿ॥೨೪॥

ಟೀ॥ ಪುತ್ರಮಿತ್ರಕಳತ್ರಾದೌ-ಮಕ್ಕಳೂ, ಸ್ನೇಹಿತರೂ, ಪತ್ನಿಯೂ ಇವೇ ಮೊದಲಾಗುಳ್ಳ, ಸಂಪದಿ-ಐಶ್ವರ್ಯವು, ಸತ್ಯಾಮಪಿ ಚ-ಇದ್ದಾಗ್ಯೂ ಕೂಡ, ಪ್ರಾ

ಣಾಭೃತಾಂ-ಪ್ರಾಣಿಗಳ, ಹೃದಿ-ಮನಸ್ಸಿನಲ್ಲಿ, ಆತ್ಮೀಯಾಪಾಯಶಂಕಾ-ತನಗೆಕೇಡು ಉಂಟಾಗುವುದೆಂಬ ಭೀತಿಯು, ಶಂಕುಃ-ಮೊಳೆಯಲ್ಲವೆ?.

ತಾತ್ಪರ್ಯ ॥ ಪ್ರಾಣಿಗಳಿಗೆ ಪತ್ನೀಪುತ್ರಗೃಹಕ್ಷೇತ್ರವಿತ್ತಾದಿರೂಪವಾದ ಸಕಲ ಸಂಪತ್ತಿದ್ದಾಗ್ಯೂ, ತನಗೆ ಮರಣವುಂಟಾಗುವುದೆಂಬ ಭೀತಿಯು ಹೃದಯಕೀಲಿತ ಶಂಕುಪ್ರಾಯವಲ್ಲವೆ? ॥ ೨೪ ॥

ಶ್ಲೋಕ ॥ ದೇವಿ ದೃಷ್ಟಸ್ತ್ವಯಾಸ್ವಪ್ನೇ<br>
ಬಾಲಾಶೋಕಃ ಸಮೌಳಿಕಃ ।<br>
ಆಚಷ್ಟೇ ಸೋದಯಂ ಸೂನು-<br>
ಮಷ್ಟಮಾಲಾಸ್ತು ತದ್ವಧೂಃ ॥೨೫॥

ಟೀ ॥ ಹೇ ದೇವೀ-ಎಲೈ ವಿಜಯಾಮಹಾದೇವಿಯೇ!, ಸ್ವಪ್ನೇ-ಸ್ವಪ್ನದಲ್ಲಿ, ತ್ವಯಾ-ನಿನ್ನಿಂದ, ದೃಷ್ಟಃ-ನೋಡಲ್ಪಟ್ಟ, ಸಮೌಳಿಕಃ-ಶಿರೋಭೂಷಣ (ಕಿರೀಟ)ದಿಂದೊಡಗೂಡಿದ್ದ, ಬಾಲಾಶೋಕಃ-ಎಳೆಯದಾದ ಅಶೋಕವೃಕ್ಷವು, ಸೋದಯಃ-ಮಹಾಭಾಗ್ಯಶಾಲಿಯಾದ, ಸೂನುಂ-ಪುತ್ರನನ್ನು, ಆಚಷ್ಟೇ-ಹೇಳುತಲಿದೆ.

ತಾತ್ಪರ್ಯ ॥ ಎಲೈ ದೇವಿಯೇ! ನಿನ್ನಿಂದ ಸ್ವಪ್ನದಲ್ಲಿ ಕಾಣಲ್ಪಟ್ಟ ಕಿರೀಟದಿಂದೊಡಗೂಡಿದ ಎಳೇದಾದ ಅಶೋಕವೃಕ್ಷವನ್ನು ನೋಡಿದುದರಿಂದ ಮಹಾ ಭಾಗ್ಯಶಾಲಿಯಾದ ಪುತ್ರಪ್ರಾಪ್ತಿಯುಂಟಾಗುವುದೆಂತಲೂ, ಎಂಟು ಪುಷ್ಪ ಮಾಲಿಕೆಗಳನ್ನು ನೋಡಿದುದರಿಂದ ಅತನಿಗೆ ಎಂಟುಮಂದಿ ಪತ್ನಿಯರೆಂತಲೂ ಸೂಚಿಸುತ್ತದೆ. ॥ ೨೫ ॥

ಶ್ಲೋಕ ॥ ಆರ್ಯಪುತ್ರ ತತಃ ಪೂರ್ವಂ<br>
ದೃಷ್ಟಸ್ಯಾಸ್ಯ ಕಿಂ ಫಲಮ್ ।<br>
ಕಂಕೇಳೇರಿತಿ ಚೇದ್ದೇವೀ<br>
ಕಥಯತ್ಯೇಷ ಕಿಂಚನ ॥೨೬॥

ಟೀ ॥ ಹೇ ಆರ್ಯಪುತ್ರ-ಎಲೈ ಸ್ವಾಮಿಯೇ!, ತತಃಪೂರ್ವಂ-ಆ ಸ್ವಪ್ನಕ್ಕಿಂತಲೂ ಮುಂಚಿತವಾಗಿ, ದೃಷ್ಟಸ್ಯಾಸ್ಯ-ನೋಡಲ್ಪಟ್ಟ [illegible], ಕಂಕೇಳೇಃ-ಅಶೋಕವೃಕ್ಷಕ್ಕೆ, ಕಿಂ ಫಲಂ-ಏನುಫಲವು?, [illegible]

ಆದರೆ, ಹೇ ದೇವೀ-ಎಲೈ ದೇವಿಯೇ!, ಏಷಃ-ಈ ಸ್ವಪ್ನವು (ಅಶೋಕವು), ಕಿಂಚನ-ಯಾವುದೋ ಒಂದು ಅನಿರ್ವಚನೀಯಫಲವನ್ನು, ಕಥಯತಿ-ಸೂಚಿಸುತ್ತದೆ.

ತಾತ್ಪರ್ಯ ॥ ಎಲೈ ಆರ್ಯಪುತ್ರನೆ! ಅದಕ್ಕಿಂತಲೂ ಮುಂಚಿತವಾಗಿ ಕಾಣಲ್ಪಟ್ಟು, ಹಾಗೆಯೆ ನಷ್ಟವಾದ ಅಶೋಕವೃಕ್ಷಕ್ಕೇನುಫಲವೆಂದು ಪ್ರಶ್ನೆಮಾಡುವಿ? ಇದರಫಲವು ಹೇಳಬಾರದ ವಿಷಯವಾಗಿರುವುದು. ಅದರಜಿಜ್ಞಾಸೆಯು ಏತಕೆ? ॥ ೨೬ ॥

ಶ್ಲೋಕ ॥ ಇತೀಶವಾಕ್ಯಂ ಶುಶ್ರೂಷೀ
ಮಹಿಷೀ ಭುವಿ ಪೇತುಷೀ ।
ಮೂರ್ಛಿತಾ ತನ್ಮುಖಗ್ಲಾನೇ-
ರ್ವಕ್ತ್ರಂ ವಕ್ತಿ ಹಿ ಮಾನಸಮ್ ।೨೭॥

ಟೀ ॥ ಇತಿ-ಈ ಪ್ರಕಾರವಾದ, ಈಶವಾಕ್ಯಂ-ರಾಜನಮಾತನ್ನು, ಶುಶ್ರೂಷೀ-ಕೇಳಿದಂಥ, ಮಹಿಷೀ-ವಿಜಯಾದೇವಿಯು, ಭುವಿ ಭೂಮಿಯಲ್ಲಿ, ಪೇತುಷೀಸತೀ-ಬಿದ್ದವಳಾಗಿ, ತನ್ಮುಖಗ್ಲಾನೇಃ-ಆತನಮುಖದಕಾಂತಿಯು ಕುಂದಿದುದರ ದೆಸೆಯಿಂದ, ಮೂರ್ಛಿತಾ-ಮೂರ್ಛೆಯನ್ನೈದಿದಳು., ಮಾನಸಂ - ಮನೋಭಾವವನ್ನು, ವಕ್ತ್ರಂ-ಮುಖವು, ವಕ್ತಿ ಹಿ-ಹೇಳುತ್ತದೆಯಲ್ಲವೆ?.

ತಾತ್ಪರ್ಯ ॥ ಈಪ್ರಕಾರ ರಾಜನವಾಕ್ಯವನ್ನುಕೇಳಿ ವಿಜಯಾದೇವಿಯು ಭೂಮಿಯಲ್ಲಿಬಿದ್ದು, ಪತಿಯಮುಖವು ಕಳೆಗುಂದಿದುದರಿಂದ ಮೂರ್ಛಿತಳಾದಳು. ಮುಖವು ಮನೋಭಿಪ್ರಾಯವನ್ನು ತಿಳಿಸುವುದಲ್ಲವೆ. ॥ ೨೭ ॥

ಶ್ಲೋಕ ॥ ತನ್ಮೋಹಾನ್ಮೋಹಿತೋ ರಾಜಾ
ತಾಮೇವಾಯಮಬೂಬುಧತ್ ।
ಸತ್ಯಾಮಪ್ಯಭಿಷಂಗಾರ್ತೌ
ಜಾಗರ್ತ್ಯೇವ ಹಿ ಪೌರುಷಮ್ ॥೨೮॥

ಟೀ ॥ ತನ್ಮೋಹಾತ್-ಆ ವಿಜಯಾ ಮಹಾದೇವಿಯ ಮೋಹದ ದೆಸೆಯಿಂದ, ಮೋಹಿತಃ-ಮೋಹವನ್ನು ಹೊಂದಿರುವಂಥ, ಅಯಂ ರಾಜಾ-ಈಸತ್ಯಂಧರ ಮಹಾ

ರಾಜನು, ತಾಮೇವ-ಆ ದೇವಿಯನ್ನೇ, ಅಬೋಧಯತ್-ಬೋಧಿಸಿದನು., ಅಭಿಸಂಗಾ ತ್ತೌ-ಪರಾಭವಪ್ರಯುಕ್ತವಾದ ಮನೋವ್ಯಥೆಯು, ಸತ್ಯಾಮಪಿ-ಇದ್ದರೂಕೂ ಡ, ಪೌರುಷಂ-ಪುರುಷಪ್ರಯತ್ನವು, ಜಾಗರ್ತ್ಯೇವಹಿ-ಜಾಗರೂಕವಾಗಿದೆಯಷ್ಟೆ?

ತಾತ್ಪರ್ಯ ॥ ಆ ವಿಜಯಾಮಹಾದೇವಿಯಲ್ಲಿ ಅತ್ಯಂತ ಮೋಹಿತನಾದ ದೊರೆಯು ಆ ದೇವಿಯನ್ನ ಕುರಿತು ತತ್ವಬೋಧೆಯನ್ನು ಮಾಡಿದನು. ಲೋಕದಲ್ಲಿ ಧೀರರಾದವರಿಗೆ ತಮಗೊಂದಪಾಯಚಿಂತೆಯು ಇದ್ದಾಗ್ಯಾದರೂ ಮಾಡತಕ್ಕ ಪುರುಷಪ್ರಯತ್ನವು ಇದ್ದೇ ಇದೆ॥ ೨೮॥

ಶ್ಲೋಕ ॥ ಸ್ವಪ್ನದೃಷ್ಟಕೃತೇ ಸದ್ಯೋ
ನಷ್ಟಾಸುಂ ಕಿಂ ತನೋಷಿಮಾಮ್ ।
ನ ಹಿ ರಕ್ಷಿತುಮಿಚ್ಛಂತೋ
ನಿರ್ದಹನ್ತಿ ಫಲದ್ರುಮಮ್ ॥೨೯॥

ಟೀ॥ ಸ್ವಪ್ನದೃಷ್ಟಕೃತೇ-ಸ್ವಪ್ನದಲ್ಲಿ ನೋಡಲ್ಪಟ್ಟಮಾತ್ರಕ್ಕೇನೆ, ಮಾಂ-ನನ್ನನ್ನು, ಸದ್ಯಃ-ಈಗ, ನಷ್ಟಾಸುಂ-ಸಂತಂ-ಮರಣವನ್ನು ಹೊಂದಿದವನನ್ನಾಗಿ, ತನೋಷಿಕಿಂ-ಮಾಡುತ್ತೀಯೋ ಏನು? ಫಲದ್ರುಮಂ-ಫಲಿತವಾದ ಮರವನ್ನು, ರಕ್ಷಿತುಂ-ರಕ್ಷಿಸಲೋಸುಗ, ಇಚ್ಛಂತಃ-ಅಪೇಕ್ಷಿಸುವವರು, ನ ನಿರ್ದಹಂತಿ ಹಿ-ದಹಿಸುವದಿಲ್ಲವಷ್ಟೆ?.

ತಾತ್ಪರ್ಯ ॥ ಸ್ವಪ್ನದಲ್ಲಿಕಂಡಮಾತ್ರಕ್ಕೇನೆ ಈಗಲೇ ನನ್ನನ್ನು ಮೃತನನ್ನಾಗಿ ಮಾಡುವೆಯೊ ? ರಕ್ಷಿಸಲಿಚ್ಛಿಸುವವರು ಫಲಿತವಾದ ವೃಕ್ಷವನ್ನು ದಹಿಸುತ್ತಾರೆಯೆ ? ಆದುದರಿಂದ ಧೀರಳಾಗು. ॥ ೨೯ ॥

ಶ್ಲೋಕ ॥ ವಿಪದಃ ಪರಿಹಾರಾಯ
ಶೋಕಃ ಕಿಂ ಕಲ್ಪತೇ ನೃಣಾಮ್ ।
ಪಾವಕೇ ನ ಹಿ ಪಾತಃ ಸ್ಯಾ-
ದಾತಪಕ್ಲೇಶ ಶಾಂತಯೇ ॥೩೦॥

ಟೀ ॥ ಶೋಕಃ-ದುಃಖಪಡುವಿಕೆಯು, ನೃಣಾಂ- ಮನುಷ್ಯರಿಗೆ, ವಿಪದಃ-ಆಪತ್ತಿನ, ಪರಿಹಾರಾಯ-ಪರಿಹಾರಕ್ಕೋಸುಗ, ಕಲ್ಪತೇಕಿಂ- ಸಮರ್ಥವಾಗುತ್ತದೆಯೋ ಏನು ?, ಪಾವಕೇ-ಬೆಂಕಿಯಲ್ಲಿ, ಪಾತಃ-ಬೀಳುವಿಕೆಯು, ಆತಪಕ್ಲೇಶಶಾಂ

ತಯೋ-ಆತಪ-ಬಿಸಿಲಿನಿಂದುಂಟಾದ, ಕ್ಲೇಶ-ಆಯಾಸವು, ಶಾಂತಯೇ - ಪರಿಹಾರ ಕ್ಕೋಸುಗ, ನಹಿ-ಆಗುವದಿಲ್ಲವಷ್ಟೆ ?.

ತಾತ್ಪರ್ಯ ॥ ಎಲೈದೇವಿಯೆ ! ಆಪತ್ತಾದದ್ದು ದುಃಖದಿಂದ ಹೋಗಲಾಡಿಸತಕ್ಕುದಲ್ಲವು. ಬೆಂಕಿಯಲ್ಲಿ ಬಿದ್ದರೆ ಬಿಸಲಿನಿಂದುಂಟಾದ ತಾಪವು ಅಡಗುವುದೆ ? ॥ ೩೦ ॥

ಶ್ಲೋಕ॥ ತತೋ ವ್ಯಾಪತ್ಪ್ರತೀಕಾರಂ
ಧರ್ಮಮೇವ ವಿನಿಶ್ಚಿನು ।
ಪ್ರದೀಪೈರ್ದೀಪಿತೇದೇಶೇ
ನಹ್ಯಸ್ತಿ ತಮಸೋಗತಿಃ ॥೩೧॥

ಟೀ॥ ತತಃ-ಆದಕಾರಣದದೆಸೆಯಿಂದ, ಧರ್ಮಮೇವ-ಧರ್ಮವನ್ನೇ, ವ್ಯಾಪತ್ಪ್ರತೀಕಾರಂಸಂತಂ-ವ್ಯಾಪತ್-ವಿಪತ್ತಿಗೆ, ಪ್ರತೀಕಾರಂಸಂತಂ-ಪ್ರತಿಕ್ರಿಯೆಯನ್ನಾಗಿ, ವಿನಿಶ್ಚಿನು-ನಿಶ್ಚಯಿಸು., ಪ್ರದೀಪೈಃ-ಮಹಾದೀಪಗಳಿಂದ, ದೀಪಿತೇ-ಪ್ರಕಾಶಿಸಲ್ಪಟ್ಟ, ದೇಶೇ-ಪ್ರದೇಶದಲ್ಲಿ, ತಮಸಃ-ಕತ್ತಲೆಗೆ, ಗತಿಃ-ಸಂಚಾರವು, ನಹ್ಯಸ್ತಿ-ಇಲ್ಲವಷ್ಟೆ ?.

ತಾತ್ಪರ್ಯ ॥ ಆದುದರಿಂದ ಪುಣ್ಯವೇ ವಿಪತ್ತನ್ನು ಪರಿಹರಿಸತಕ್ಕದ್ದೆಂದುತಿಳಿ. ಮಹತ್ತಾದ ದೀಪಗಳಿಂದ ಪ್ರಕಾಶವಡಿಸಲ್ಪಟ್ಟ ಪ್ರದೇಶದಲ್ಲಿ ಕತ್ತಲೆಯು ವ್ಯಾಪಿಸುವದಿಲ್ಲವಷ್ಟೆ ? ॥ ೩೧ ॥

ಶ್ಲೋಕ ॥ ಇತ್ಯಾದಿ ಸ್ವಾಮಿವಾಕ್ಯೇನ
ಲಬ್ಧಾಶ್ವಾಸಾ ಯಥಾ ಪುರಮ್ ।
ಪತ್ಯಾಸಾಕಮಸೌ ರೇಮೇ
ದುಃಖಚಿನ್ತಾ ಹಿ ತತ್ಕ್ಷಣೇ ॥೩೨॥

ಟೀ ॥ ಅಸೌ-ಈ ವಿಜಯಾದೇವಿಯು, ಇತ್ಯಾದಿಸ್ವಾಮಿವಾಕ್ಯೇನ-ಇದೇ ಮೊದಲಾಗಿಉಳ್ಳ ಪತಿಯವಚನದಿಂದ, ಲಬ್ಧಾಶ್ವಾಸಾಸತಿ-ಪಡೆಯಲ್ಪಟ್ಟ ಸಮಾಧಾನವುಳ್ಳವಳಾಗಿ, ಯಥಾಪುರಂ-ಪೂರ್ವದಂತೆ, ಪತ್ಯಾಸಾಕಂ-ಪತಿಯೊಡನೆ, ರೇಮೆ-ಸಂತೋಷಿಸಿದಳು , ದುಃಖಚಿಂತಾ-ಶೋಕದಿಂದುಂಟಾಗುವ ಚಿಂತೆಯು, ತತ್ಕ್ಷಣೇ ಹಿ-ಆ ಕ್ಷಣದಲ್ಲಿಲ್ಲವೆ ?.

ತಾತ್ಪರ್ಯ ॥ ಈ ವಿಜಯಾದೇವಿಯು ಇವೇ ಮೊದಲಾದ ಸ್ವಾಮಿಯ ಮಾತುಗಳಿಂದ ಸಮಾಧಾನವನ್ನೈದಿ, ಪೂರ್ವದಂತೆ ಪತಿಯೊಡನೆ ಕೂಡ ಸಂತೋಷಿಸಿದಳು. ದುಃಖದಿಂದುಂಟಾದ ಚಿಂತೆಯು ಆ ಕ್ಷಣಮಾತ್ರದಲ್ಲೇ ಅಲ್ಲವೇ (ಸ್ಥಿರವಲ್ಲವೆಂದರ್ಥವು.) ॥ ೨೨ ॥

ಶ್ಲೋಕ ॥ ಅಥ ಪ್ರಬೋಧಿತಂ ಸ್ವಪ್ನಾ-
ದಪ್ರಬುದ್ಧಮಮುಂ ಪುನಃ ।
ಬೋಧಯನ್ತೀವ ಪತ್ನೀಯ-
ಮನ್ತರ್ವತ್ನೀಧುರಂ ದಧೌ ॥೨೩॥

ಟೀ ॥ ಅಥ-ಅನಂತರದಲ್ಲಿ, ಸ್ವಪ್ನಾತ್-ಸ್ವಪ್ನದದೆಸೆಯಿಂದ, ಪ್ರಬೋಧಿತಂ-ಪ್ರಕರ್ಷದಿಂ ಬೋಧಿಸಲ್ಪಟ್ಟ, ಅಪ್ರಬುದ್ಧಂ-ಮರತಿರತಕ್ಕ, ಅಮುಂ-ಈ ಸತ್ಯಂಧರಮಹಾರಾಜನನ್ನೂ, ಪುನಃ-ಮರಳಿ, ಬೋಧಯಂತೀವ-ಸ್ಮರಣೆಯನ್ನುಂಟುಮಾಡುವಳೋ ಎಂಬುವಂತೆ, ಪತ್ನೀ-ಪತ್ನಿಯಾದ, ಇಯಂ-ಈ ದೇವಿಯು, ಅಂತರ್ವತ್ನೀಧುರಂ-ಗರ್ಭಿಣೀಸ್ತ್ರೀಯ ಭಾರವನ್ನು, ದಧೌ-ಧರಿಸಿದಳು.

ತಾತ್ಪರ್ಯ ॥ ಅನಂತರದಲ್ಲಿ ಸ್ವಪ್ನದಿಂದ ತಿಳಿದು ಮರೆತಿದ್ದ ವಿಷಯವನ್ನು ಈ ಮಹಾರಾಜನಿಗೆ ಸ್ಮರಿಸಿಸುವಂತೆ, ಈ ವಿಜಯಾದೇವಿಗೆ ಗರ್ಭಿಣೀದೆಸೆಯು ಆವಿರ್ಭವಿಸಿತು. ಗರ್ಭಿಣಿಯಾದ ಪತ್ನಿಯನ್ನು ನೋಡಿ ಸ್ವಪ್ನಫಲವು ಸ್ಮರಿಸಿದನೆಂದು ತಾತ್ಪರ್ಯವು ॥ ೨೩ ॥

ಶ್ಲೋಕ ॥ ಸದೋಹಳಾಮಿಮಾಂ ವೀಕ್ಷ್ಯ
ದುಸ್ಸ್ವಪ್ನಫಲನಿಶ್ಚಯಾತ್ ।
ಅನುಶೇತೇಸ್ಮ ರಾಜಾಯ-
ಮಾತ್ಮರಕ್ಷಾಪರಾಯಣಃ ॥೨೪॥

ಟೀ ॥ ರಾಜಾ-ದೊರೆಯಾದ, ಅಯಂ-ಈಸತ್ಯಂಧರನು, ಸದೋಹಳಾಂ-ಗರ್ಭಲಕ್ಷಣವಾದ ಬಯಕೆಯೊಡನೆ ಕೂಡಿದ, ಇಮಾಂ-ಈ ವಿಜಯಾದೇವಿಯನ್ನು, ವೀಕ್ಷ್ಯ-ನೋಡಿ, ದುಸ್ಸ್ವಪ್ನಫಲನಿಶ್ಚಯಾತ್-ಕೆಟ್ಟಸ್ವಪ್ನಫಲವನಿಶ್ಚಯಿಸೋಣದರ ದೆಸೆಯಿಂದ, ಆತ್ಮರಕ್ಷಾಪರಾಯಣಸ್ಸನ್-ತನ್ನಸಂರಕ್ಷಣೆಯಲ್ಲಿ ಆಸಕ್ತನಾಗಿ, ಅನು

ಟೀತೇಸ್ಮ-ಪಶ್ಚಾತ್ತಾಪವನ್ನು ಹೊಂದಿದನು.

ತಾತ್ಪರ್ಯ ॥ ಸತ್ಯಂಧರ ಮಹಾರಾಜನು ಗರ್ಭಿಣಿಯಾದ ವಿಜಯಾಮಹಾದೇವಿಯನ್ನು ನೋಡಿ ಇದೇಪ್ರಕಾರ ದುಸ್ಸ್ವಪ್ನದ ಸಕಲಫಲವು ಸಿದ್ಧಿಸುತ್ತದೆಂದು ನಿಶ್ಚಯಿಸಿ ತನ್ನ ಸಂರಕ್ಷಣೆಯಲ್ಲಿ ಅಸಕ್ತನಾಗಿ ಪಶ್ಚಾತ್ತಾಪವನ್ನು ಹೊಂದಿದನು ॥ ೩೪ ॥

ಶ್ಲೋಕ ॥ ಮನ್ತ್ರಿಣಾಂ ಲಂಘಿತಂ ವಾಕ್ಯ-
ಮಭಾಗ್ಯೇನ ಮಯಾ ಮುಧಾ ।
ವಿಪಾಕೇ ಹಿ ಸತಾಂ ವಾಕ್ಯಂ-
ವಿಶ್ವಸನ್ತ್ಯವಿವೇಕಿನಃ ॥ ೩೫ ॥

ಟೀ ॥ ಮಂತ್ರಿಣಾಂ-ಮಂತ್ರಿಗಳ, ವಾಕ್ಯಂ-ವಚನವು, ಅಭಾಗ್ಯೇನ- ಭಾಗ್ಯಹೀನನಾದ, ಮಯಾ- ನನ್ನಿಂದ, ಮುಧಾ-ವ್ಯರ್ಥವಾಗಿ, ಲಂಘಿತಂ-ತಿರಸ್ಕರಿಸಲ್ಪಟ್ಟಿತು., ಅವಿವೇಕಿನಃ- ವಿವೇಕಶೂನ್ಯರು, ವಿಪಾಕೇ- ಫಲಪರಿಪಾಕದೆಸೆಯಲ್ಲಿ, ಸತಾಂ.ಸತ್ಪುರುಷರ, ವಾಕ್ಯಂ-ವಚನವನ್ನು, ವಿಶ್ವಸಂತಿಹಿ- ನಂಬುತ್ತಾರಲ್ಲವೆ?.

ತಾತ್ಪರ್ಯ ॥ ಮಂತ್ರಿಗಳ ಹಿತವಚನವು ಭಾಗ್ಯಹೀನನಾದ ನನ್ನಿಂದ ತಿರಸ್ಕರಿಸಲ್ಪಟ್ಟಿತು. ಅವಿವೇಕಿಗಳು ಸತ್ಪುರುಷರ ವಾಕ್ಯವನ್ನು ದುಷ್ಫಲಪರಿಪಾಕಕಾಲದಲ್ಲೇ ನಂಬುವರಷ್ಟೆ? ॥ ೩೫ ॥

ಶ್ಲೋಕ ॥ ನಹ್ಯಕಾಲಕೃತಾವಾಂಛಾ
ಸಂಪ್ರಾಪ್ನೋತಿ ಸಮೀಹಿತಂ ।
ಕಿಂ ಪುಷ್ಪಾಪಚಯಃ ಶಕ್ಯಃ
ಫಲಕಾಲೇ ಸಮಾಗತೇ ॥ ೩೬ ॥

ಟೀ ॥ ಅಕಾಲಕೃತಾ-ಕಾಲವಲ್ಲದಕಾಲದಲ್ಲಿ ಮಾಡಲ್ಪಟ್ಟ, ವಾಂಛಾ- ಇಚ್ಛೆಯು, ಸಮೀಹಿತಂ-ಇಷ್ಟಾರ್ಥವನ್ನು, ನ ಸಂಪ್ರಾಪ್ನೋತಿಹಿ-ಪೋಷಿಸುವದಿಲ್ಲವಷ್ಟೆ ?, ಫಲಕಾಲೇ-ಹಣ್ಣಿನಕಾಲವು, ಸಮಾಗತೇಸತಿ-ಬರುತ್ತಿರಲಿಕ್ಕಾಗಿ, ಪುಷ್ಪಾಪಚಯಃ-ಹೂವನ್ನುಕುಯ್ಯೋಣವು, ಶಕ್ಯಃಕಿಂ-ಸಾಧ್ಯವಾದೀತೇ ಏನು ?.

ತಾತ್ಪರ್ಯ ॥ ಅನುಚಿತಕಾಲದೊಳುಂಟಾದ ಅಪೇಕ್ಷೆಯು ಸಫಲ

ವಾಗುವದಿಲ್ಲವಷ್ಟೆ ? ಹಣ್ಣಿನಕಾಲದಲ್ಲಿ ಹೂವನ್ನಪೇಕ್ಷಿಸಿದುದಾದರೆ ದೊರೆಯುವದಿಲ್ಲವು. ॥ ೩೬ ॥

ಶ್ಲೋಕ ॥ ಇತ್ಯಾರ್ತೋ ವಂಶರಕ್ಷಾರ್ಥಂ
ಕೇಕಿಯನ್ತ್ರಮಚೀಕರತ್ ।
ಆಸ್ಥಾ ಸತಾಂ ಯಶಃ ಕಾಯೇ
ನಹ್ಯಸ್ಥಾಯಿ ಶರೀರಕೇ ॥೩೭॥

ಟೀ ॥ಇತಿ-ಈ ಪ್ರಕಾರವಾಗಿ, ಆರ್ತಃ- ಮನೋವ್ಯಥೆಯಿಂಕೂಡಿದ ಸತ್ಯಂಧ ರಮಹಾರಾಜನು, ವಂಶರಕ್ಷಾರ್ಥಂ- ಸಂತಾನಸಂರಕ್ಷಣೆಗೋಸುಗ, ಕೇಕಿಯಂತ್ರಂ-ನವಿಲುಯಂತ್ರವನ್ನು, ಅಚೀಕರತ್-ಮಾಡಿಸಿದನು., ಸತಾಂ- ಸತ್ಪುರುಷರಿಗೆ, ಯಶಃ ಕಾಯೇ-ಯಶಸ್ಸೆಂಬ ಶರೀರವಲ್ಲಿ, ಆಸ್ಥಾ-ಇಚ್ಛೆಯು, ಅಸ್ಥಾಯಿಶರೀರಕೆ- ಅನಿತ್ಯವಾದ ಈ ಹೇಯಭೌತಿಕ ಶರೀರದಲ್ಲಿ, ನಹಿ-ಇಲ್ಲವಷ್ಟೆ ?.

ತಾತ್ಪರ್ಯ ॥ ಈಪ್ರಕಾರ ಚಿಂತಾಕ್ರಾಂತನಾದ ಸತ್ಯಂಧರ ಮಹಾರಾಜನು ಉತ್ತರತ್ರ ಜನಿಸುವ ತನ್ನವಂಶೋದ್ಧಾರಕನಾದ ಪುತ್ರನ ಸಂರಕ್ಷಣೆಗೋಸುಗ ನವಿಲು ಯಂತ್ರವನ್ನು ಮಾಡಿಸಿದನು. ಸತ್ಪುರುಷರಿಗೆ ಯಶಸ್ಸಂಪಾದನೆಯೊಳು ದೃಷ್ಟಿಯೇಹೊರತು ನಾಶಶೀಲವಾದ ಈ ದೇಹದಲ್ಲಿ ದೃಷ್ಟಿ ಇಲ್ಲವಲ್ಲವೆ? ॥ ೩೭ ॥

ಶ್ಲೋಕ ॥ ಆಕ್ರೀಡೇ ದೌಹೃದಕ್ರೀಡಾ-
ಮನುಭೋಕ್ತುಂ ವಿಶಾಂಪತಿಃ ।
ವ್ಯಜೀಹರಚ್ಚ ಯನ್ತ್ರಸ್ಥಾಂ
ಪತ್ನೀಂ ವರ್ತ್ಮನಿ ವಾರ್ಮುಚಾಮ್ ॥೩೮॥

ಟೀ ॥ ವಿಶಾಂಪತಿಃ-ರಾಜನು, ಆಕ್ರೀಡೆ- ಉದ್ಯಾನವನದಲ್ಲಿ, ದೌಹೃದಕ್ರೀಡಾಂ-ಬಯಕೆಯಿಂದುಂಟಾದ ಲೀಲೆಯನ್ನು, ಅನುಭೋಕ್ತುಂ-ಅನುಭವಿಸಲೋಸುಗ, ಯಂತ್ರಸ್ಥಾಂ- ನವಿಲುಯಂತ್ರದಲ್ಲಿ ಕುಳಿತಿರುವ, ಪತ್ನೀಂ - ಪತ್ನಿಯಾದ ವಿಜಯಾದೇವಿಯನ್ನು, ವಾರ್ಮುಚಾಂ- ಮೇಘಗಳ, ವರ್ತ್ಮನಿ-ಮಾರ್ಗವಾದ ಅಂತರಿಕ್ಷದಲ್ಲಿ, ವ್ಯಜೀಹರಚ್ಚ-ವಿಹಾರವನ್ನೂ ಮಾಡಿಸಿದನು.

ತಾತ್ಪರ್ಯ ॥ ಸತ್ಯಂಧರ ಮಹಾರಾಜನು ಬಯಕೆಯಿಂದ ಉದ್ಯಾನದಲ್ಲಿ ವಿಹರಿಸಲೋಸುಗ ನವಿಲುಯಂತ್ರದಲ್ಲಿ ಕುಳಿತಿರುವ ಪತ್ನಿಯಾದ ವಿಜಯಾದೇವಿಯನ್ನು ಆಕಾಶದಲ್ಲಿ ಸಂಚಾರಮಾಡಿಸಿದನು ॥ ೩೮ ॥

ಶ್ಲೋಕ ॥ ತಾವತ್ಯೈವ ಕೃತಘ್ನಾಖ್ಯಾಂ
ರಾಜಘ್ನಾಖ್ಯಾಂ ಚ ಸಾಧಯನ್ ।
ಸ್ವವಿಧೇಯಾಂ ಭುವಂ ಚೇತಿ
ಕಾಷ್ಠಾಂಗಾರೋ ವ್ಯಚೀಚರತ್॥೩೯॥

ಟೀ ॥ ತಾವತ್ಯೈವ-ಅಷ್ಟರಲ್ಲಿಯೇ, ಕೃತಘ್ನಾಖ್ಯಾಂ-ಉಪಕಾರಿಗೆ ಪ್ರತಿ ಅಪಕಾರ ಮಾಡುವ ಕೃತಘ್ನನೆಂತೆಂಬ ಪ್ರಸಿದ್ಧಿಯನ್ನು, ರಾಜಘ್ನಾಖ್ಯಾಂ - ರಾಜದ್ರೋಹಿಯೆಂಬ ಪ್ರಸಿದ್ಧಿಯನ್ನು, ಭುವಂಚ - ಭೂಮಿಯನ್ನೂ ಕೂಡ. ಸ್ವವಿಧೇಯಾಂ-ತನಗಧೀನವನ್ನಾಗಿಯೂ, ಸಾಧಯನ್-ಸಾಧಿಸುವ, ಕಾಷ್ಠಾಂಗಾರಃ- ಕಾಷ್ಠಾಂಗಾರನು, ಇತಿ-ಈ ವಕ್ಷ್ಯಮಾಣ ಪ್ರಕಾರವಾಗಿ, ವ್ಯಚೀಚರತ್- ಆಲೋಚಿಸಿದನು.

ತಾತ್ಪರ್ಯ ॥ ಅಷ್ಟರಲ್ಲಿಯೇ ಉಪಕಾರಿಗೆ ಪ್ರತ್ಯಪಕಾರಮಾಡಿದ ಮಹಾಪಾಪಿಯೆಂತಲೂ, ರಾಜದ್ರೋಹಿಯೆಂತಲೂ, ಆ ಕೀರ್ತಿಯನ್ನು ಪಡೆಯಲೋಸುಗ ರಾಜಸಂಹಾರಪೂರ್ವಕವಾಗಿ ಭೂಮಿಯಂಸ್ವಾಧೀನಪಡಿಸಿಕೊಳ್ಳಲುಪಾಯವಂ ಮುಂದೆ ವಿವರಿಸುವಪ್ರಕಾರ ಕಾಷ್ಠಾಂಗಾರನು ಚಿಂತಿಸಿದನು ॥ ೩೯ ॥

ಶ್ಲೋಕ ॥ ಜೀವಿತಾತ್ತು ಪರಾಧೀನಾ
ಜೀವಾನಾಂ ಮರಣಂ ವರಂ ।
ಮೃಗೇಂದ್ರಸ್ಯ ಮೃಗೇಂದ್ರತ್ವಂ
ವಿತೀರ್ಣಂ ಕೇನ ಕಾನನೇ ॥೪೦॥

ಟೀ ॥ ಜೀವಾನಾಂ-ಪ್ರಾಣಿಗಳಿಗೆ, ಪರಾಧೀನಾತ್-ಪರತಂತ್ರವಾದ, ಜೀವಿತಾತ್ತು-ಜೀವನಕ್ಕಿಂತಲೂ, ಮರಣಂ-ಸಾಯೋಣವು, ವರಂ-ಉತ್ಕೃಷ್ಟವು, ಕಾನನೇ-ಅರಣ್ಯದಲ್ಲಿ, ಮೃಗೇಂದ್ರಸ್ಯ- ಸಿಂಹಕ್ಕೆ, ಮೃಗೇಂದ್ರತ್ವಂ- ಮೃಗಜಾತಿಗಳ್ಲ

ಕಸ್ಮೈ ದೊರೆಯೆನಿಸಿರೋಣವು, ಕೇನ-ಯಾರಿಂದ, ವಿತೀರ್ಣಂ-ಕೊಡಲ್ಪಟ್ಟಿತು ?.

ತಾತ್ಪರ್ಯ ॥ ಕಾಷ್ಠಾಂಗಾರನು ಚಿಂತಿಸುತ್ತಾನೆ.- ಪರಾಧೀನನಾಗಿ ಜೀವಿಸುವುದಕ್ಕಿಂತಲೂ ಸಾಯುವುದು ಉತ್ತಮವು. ಅರಣ್ಯದಲ್ಲಿ ಸಿಂಹಕ್ಕೆ ಮೃಗರಾಜಪದವಿಯನ್ನು ಯಾರುಕೊಟ್ಟರು ? ಹಾಗೆಯೇ ನಾನೂಕೂಡ ಪರಾಕ್ರಮೈಕಪ್ರಧಾನನಾಗಿಸ್ವತಂತ್ರರಾಜ್ಯವು ಪಡೆಯುವೆನೆಂಬ ಭಾವವು. ಶೂರರಿಗಲ್ಲವೇ ರಾಜ್ಯಲಕ್ಷ್ಮಿಯು. ॥ ೪೦ ॥

ಶ್ಲೋಕ ॥ ಆಚೀಕಥಚ್ಚ ಮನ್ತ್ರಿಭ್ಯೋ
ರಾಜದ್ರೋಹೋ ವಿಧೀಯತಾಮ್ ।
ಇತಿ ರಾಜದ್ರುಹಾ ನಿತ್ಯಂ
ದೈವತೇನಾಭಿಧೀಯತೇ ॥ ೪೧ ॥

ಟೀ ॥ ರಾಜದ್ರೋಹಃ-ದೊರೆಗೆ ದ್ರೋಹವು,ವಿಧೀಯತಾಂ-ಮಾಡಲ್ಪಡಲಿ., ಇತಿ-ಹೀಗೆಂದು, ರಾಜದ್ರುಹಾ-ಸತ್ಯಂಧರದ್ರೋಹಿಯಾದ, ದೈವತೇನ-ದೇವತೆಯಿಂದ, ನಿತ್ಯಂ-ಯಾವಾಗಲೂ, ಅಭಿಧೀಯತೇ-ಹೇಳಲ್ಪಡುತ್ತದೆ., ಇತಿ-ಹೀಗೆಂದು, ಮಂತ್ರಿಭ್ಯಃ-ಮಂತ್ರಿಗಳನ್ನುಕುರಿತು, ಸಃ- ಆ ಕಾಷ್ಠಾಂಗಾರನು, ಅಚೀಕಥಚ್ಚ-ಹೇಳಿದವನಾದನು.

ತಾತ್ಪರ್ಯ ॥ ಕಾಷ್ಠಾಂಗಾರನು ಮಂತ್ರಿಗಳಂಕುರಿತು ಹೇಳುತ್ತಾನೆ.-- ಸತ್ಯಂಧರನಿಗೆ ದ್ರೋಹಿಯಾದ ದೇವತೆಯು ರಾಜನಿಗೆ ದ್ರೋಹವಮಾಡೆಂದು ಪ್ರತಿದಿನವೂ ನನ್ನನ್ನು ಪೀಡಿಸುತ್ತದೆ. ॥ ೪೧ ॥

ಶ್ಲೋಕ ॥ ಸ್ವನ್ತಂ ಕಿನ್ನು ದುರನ್ತಂ ವಾ
ಕಿಮುದರ್ಕಂ ವಿತರ್ಕ್ಯತಾಮ್ ।
ಅತರ್ಕಿತಮಿದಂ ವೃತ್ತಂ
ತರ್ಕರೂಢಂ ಹಿ ನಿಶ್ಚಲಮ್ ॥ ೪೨ ॥

ಟೀ ॥ ಉದರ್ಕಂ-ಉತ್ತರಫಲವು, ಸ್ವಂತಂಕಿನ್ನು-ಸುಖವೇ ಕೊನೆಯಾಗಿರುಳ್ಳದ್ದೋ?, ದುರನ್ತಂ ವಾ-ದುಃಖವೇ ಕೊನೆಯಾಗಿವುಳ್ಳದ್ದೋ?, ವಿತರ್ಕ್ಯತಾಂ-ಆಲೋಚಿಸಲ್ಪಡಲಿ., ಇದಂ-ಈ ದೇವತಾಪ್ರೇರಿತಕಾರ್ಯವು, ಅತರ್ಕಿತಂ-ವಿಚಾರಿಸ

ಲ್ಪಡಲಿಲ್ಲವು., ತರ್ಕರೂಢಃ-ತರ್ಕದಿಂದ ನಿರ್ಣಯಿಸಲ್ಪಟ್ಟ, ಕೃತ್ಯಂ-ಕಾರ್ಯವು, ನಿಶ್ಚಲಂ ಹಿ-ಚಲನರಹಿತವಾದುದಲ್ಲವೆ?.

ತಾತ್ಪರ್ಯ ॥ ದೇವತಾ ಪ್ರೇರಿತವಾದ ರಾಜದ್ರೋಹವು ನಮಗೆ ಪರ್ಯವಸಾನದಲ್ಲಿ ಒಳ್ಳೇಫಲಕ್ಕೆ ಕಾರಣವಾಗುವುದೋ? ಕೆಟ್ಟಫಲಕ್ಕೆ ಕಾರಣವಾಗುವುದೋ? ಉತ್ತರ ಫಲವು ಚಿಂತಿಸಲ್ಪಡಲಿ. ಈ ಕಾರ್ಯವು ವಿಚಾರಿಸಲ್ಪಡಲಿಲ್ಲ. ಯಾವಕಾರ್ಯವನ್ನೂ ಪರ್ಯಾಲೋಚಿಸಿ ಮಾಡದಲ್ಲಿ ಫಲಕ್ಕೆ ಚ್ಯುತಿಯು ಸಂಭವಿಸುವುದಿಲ್ಲವು. (ಆದುದರಿಂದ ನಿಮ್ಮೊಡನೆ ಆಲೋಚಿಸಿದೆನೆಂದು ಭಾವವು.) ॥ ೪೦ ॥

ಶ್ಲೋಕ ॥ ಜಿಹ್ರೇಮಿ ವಕ್ತುಮಪ್ಯೇತ-
ದುಕ್ತಿರ್ದೈವಭಯಾದಿತಿ ।
ಮನಸ್ಯನ್ಯದ್ವಚಸ್ಯನ್ಯ-
ತ್ಕರ್ಮಣ್ಯನ್ಯದ್ಧಿ ಪಾಪಿನಾಮ್ ॥ ೪೧ ॥

ಟೀ ॥ ಏತತ್-ಈ ಮಾತನ್ನು, ವಕ್ತುಮಪಿ- ಹೇಳಲೋಸುಗವೂಕೂಡ, ಜಿಹ್ರೇಮಿ-ಲಜ್ಜೆಪಡುತ್ತೇನೆ., ಉಕ್ತಿಃ-ಹೇಳೋಣವು, ದೈವಭಯಾತ್ - ದೇವತೆಯಿಂದುಂಟಾದ ಭೀತಿಯದೆಸೆಯಿಂದ., ಇತಿ-ಈ ಪ್ರಕಾರ, ಪಾಪಿನಾಂ-ಪಾಪಿಷ್ಠರಿಗೆ, ಮನಸಿ-ಮನಸ್ಸಿನಲ್ಲಿ, ಅನ್ಯತ್-ಪ್ರಕಾರಾಂತರವಾಗಿಯೂ, ವಚಸಿ- ಮಾತಿನಲ್ಲಿ, ಅನ್ಯತ್-ಪ್ರಕಾರಾಂತರವಾಗಿಯೂ, ಕರ್ಮಣಿ-ಕಾರ್ಯದಲ್ಲಿ, ಅನ್ಯತ್-ಪ್ರಕಾರಾಂತರವಾಗಿಯೂ ಇರುವುದಲ್ಲವೆ?.

ತಾತ್ಪರ್ಯ ॥ ಈ ಮಾತನ್ನು ಹೇಳುವುದಕ್ಕೂಕೂಡ ನಾಚಿಕೆ ಪಡುತಲಿರುವೆನು. ದೇವತಾಭಯದ ದೆಸೆಯಿಂದ ನುಡಿದೆನು. ಇಂತೆಂದು ಕಾಷ್ಠಾಂಗಾರನು ವಂಚಿಸಿ ಹೇಳಿದನು. ಆದರೆ, ಪಾಪಿಗಳಿಗೆ ಮನಸ್ಸಿನಲ್ಲಿರುವದೊಂದು ಪ್ರಕಾರವಾಗಿಯೂ ಹಾಗೆಯೇ ಹೇಳುವದೊಂದು ಪ್ರಕಾರವಾಗಿಯೂ, ಕೃತ್ಯದಲ್ಲಿ ಮತ್ತೊಂದು ಪ್ರಕಾರ ವಾಗಿಯು ಇರುವುದಲ್ಲವೆ.

ಶ್ಲೋಕ ॥ ತದ್ವಾಕ್ಯಾದ್ವಾಚ್ಯತೋಽವಂಶ್ಯಾ
ಯಮಿನಃ ಪ್ರಾಣಿಹಿಂಸನಾತ್ ।

ಕ್ಷುದ್ರಾ ದುರ್ಭಿಕ್ಷತಶ್ಚೈವ
ಸಭ್ಯಾಸ್ಸರ್ವೇಽಪಿ ತತ್ರಸುಃ ॥ ೪೪ ॥

ಟೀ ॥ ತದ್ವಾಕ್ಯಾತ್- ಆ ಕಾಷ್ಠಾಂಗಾರನವಾಕ್ಯನದೆಸೆಯಿಂದ, ವಂಶ್ಯಾಃ- ಸತ್ಕುಲಪ್ರಸೂತರು, ವಾಚ್ಯತಏವ-ಅಪವಾದವದೆಸೆಯಿಂದಲೋಪಾದಿಯಲ್ಲಿಯೂ ಯಮಿನಃ- ಯತಿಗಳು, ಪ್ರಾಣಿಹಿಂಸನಾದಿವ-ಪ್ರಾಣಿಯನ್ನು ಹಿಂಸಿಸೋಣವದದೆಸೆಯಿಂದಲೋಪಾದಿಯಲ್ಲಿಯೂ, ಕ್ಷುದ್ರಾಃ-ದರಿದ್ರರು, ದುರ್ಭಿಕ್ಷತಶ್ಚೈವ- ಕ್ಷಾಮದದೆಸೆಯಿಂದಲೋಪಾದಿಯಲ್ಲಿಯೂ, ಸಭ್ಯಾಃ-ಸಭೆಯಲ್ಲಿರುವ, ಸರ್ವೇಽಪಿ- ಸಮಸ್ತ ಜನರೂಕೂಡ, ತತ್ರಸುಃ-ಹೆದರಿದರು.

ತಾತ್ಪರ್ಯ ॥ ಸಹಿಸಲಶಕ್ಯವಾದ ಆ ಕಾಷ್ಠಾಂಗಾರನ ವಾಕ್ಯವನ್ನು ಕೇಳಿ ಸತ್ಕುಲಪ್ರಸೂತರಾದವರು ಅಪವಾದದ ದೆಸೆಯಿಂದಲೂ, ಯತಿಗಳು ಪ್ರಾಣಿವಧೆಯ ದೆಸೆಯಿಂದಲೂ, ದರಿದ್ರರು ಕ್ಷಾಮದ ದೆಸೆಯಿಂದಲೂ ಭಯಪಡುವತೆರದಿ ಆ ಸಭೆಯಲ್ಲಿದ್ದ ಸಕಲಜನರೂ ಹೆದರಿದರು. ( ಅಂದರೆ ರಾಜದ್ರೋಹಕ್ಕಿಂತಲೂ ಮತ್ತೊಂದು ಮಹಾ ಭೀತಿ ಹೇತುವಾದ ಪಾಪಕೃತ್ಯ ವಿಲ್ಲವೆಂದರ್ಥವು). ॥ ೪೪ ॥

ಶ್ಲೋಕ ॥ ಆತ್ಮಘ್ನೀಂ ಧರ್ಮದತ್ತಾಖ್ಯ-
ಸ್ಸಚಿವೋ ವಾಚಮೂಚಿವಾನ್ ।
ಗಾಢಾ ಹಿ ಸ್ವಾಮಿಭಕ್ತಿಸ್ಸ್ಯಾ-
ದಾತ್ಮಪ್ರಾಣಾನಪೇಕ್ಷಿಣೀ ॥ ೪೫ ॥

ಟೀ॥ ಧರ್ಮದತ್ತಾಖ್ಯಃ-ಧರ್ಮದತ್ತನೆಂಬ, ಸಚಿವಃ-ಮಂತ್ರಿಯು, ಆತ್ಮಘ್ನೀಂ- ತನಗೆ ಹಾನಿಕರವಾದ, ವಾಚಂ-ವಾಕ್ಯವನ್ನು, ಊಚಿವಾನ್ - ಹೇಳಿದನು., ಗಾಢಾ- ದೃಢತರವಾದ, ಸ್ವಾಮಿಭಕ್ತಿಃ-ರಕ್ಷಕವಿಷಯಕವಾದ ಪ್ರೀತಿಯು, ಆತ್ಮಪ್ರಾಣಾನಪೇಕ್ಷಿಣೀ-ತನ್ನ ಪ್ರಾಣಗಳನ್ನುಕೂಡ ಉಪೇಕ್ಷಿಸುವುದಾಗಿ, ಸ್ಯಾದ್ಧಿ-ಆದೀತಲ್ಲವೆ?

ತಾತ್ಪರ್ಯ॥ ಧರ್ಮದತ್ತನೆಂಬಮಂತ್ರಿಯು ತನ್ನನ್ನು ಕೊಲ್ಲತಕ್ಕಮಾತನ್ನಾಡಿದನು. ದೃಢವಾದ ಸ್ವಾಮಿಭಕ್ತಿಇದ್ದಲ್ಲಿ ಪ್ರಜೆಗಳು ಸ್ವಾಮಿಯಾದರಾಜಹಿತಾರ್ಥವಾಗಿ ತಮ್ಮ ಪ್ರಾಣಗಳನ್ನುಕೂಡ ಉಪೇಕ್ಷಿಸಿ ಪ್ರಯತ್ನಿಸುವರು. (ಕೃತಜ್ಞರಿಗೆ ಪ್ರಾಣಕ್ಕಿಂತಲೂ ರಕ್ಷಕನು ಪ್ರಿಯನು.)॥೪೫

ಶ್ಲೋಕ ॥ ರಾಜಾನಃ ಪ್ರಾಣಿನಾಂ ಪ್ರಾಣಾ-
ಸ್ತೇಷು ಸತ್ಸ್ವೇವ ಜೀವನಾತ್ ।
ತತ್ತತ್ರ ಸದಸತ್ಕೃತ್ಯಂ
ಲೋಕ ಏವ ಕೃತಂ ಭವೇತ್ ॥ ೪೬ ॥

ಟೀ ॥ ರಾಜಾನಃ-ದೊರೆಗಳು, ಪ್ರಾಣಿನಾಂ-ಪ್ರಾಣಿಗಳಿಗೆ, ಪ್ರಾಣಾಃ-ಪ್ರಾಣಗಳು, ತೇಷು-ಆ ಪ್ರಾಣಭೂತರಾದ ದೊರೆಗಳು, ಸತ್ಸ್ವೇವ- ಇರುತ್ತಿರಲಾಗಿಯೇ, ಜೀವನಾತ್- ಜೀವಿಸಿರುವುದರಿಂದ, ತತ್- ಆ ಕಾರಣದ ದೆಸೆಯಿಂದ, ತತ್ರ-ಆ ರಾಜರಲ್ಲಿ, ಕೃತಂ-ಮಾಡಲ್ಪಟ್ಟ, ಸದಸತ್ಕೃತ್ಯಂ-ಒಳ್ಳೇಕೆಲಸಗಳು, ಕೆಟ್ಟಕೆಲಸಗಳು ಆದ ಇವುಗಳು, ಲೋಕಏವ-ಲೋಕದಲ್ಲಿಯೇ, ಕೃತಂ- ಮಾಡಲ್ಪಟ್ಟದ್ದಾಗಿ, ಭವೇತ್-ಆಗುವುದು.

ತಾತ್ಪರ್ಯ ॥ ರಾಜರು ಪ್ರಾಣಿಗಳಿಗೆ ಪ್ರಾಣಪ್ರಾಯರಾದವರು. ರಾಜರ ರಕ್ಷಣಬಲದಿಂದಲೇ ಪ್ರಾಣಿಗಳು ಜೀವಿಸಿರುವುದರಿಂದ ರಾಜರಿಗೆ ಉಪಕಾರಮಾಡಿದುದರಾದರೆಲೋಕೋಪಕಾರ ಮಾಡಿದಹಾಗಾಗುವುದು. ರಾಜರಿಗೆ ಅಪಕಾರಮಾಡಿದುದಾದರೆ ಲೋಕಕ್ಕೆ ಅಪಕಾರಮಾಡಿದ ಹಾಗಾಗುವುದು. (ಸ್ವಪ್ರಾಣಕ್ಕೆಮಾಡಿದ ಹಿತವು ದೇಹಕ್ಕಲ್ಲವೆ ?). ॥೪೬॥

ಶ್ಲೋಕ ॥ ಏವಂ ರಾಜದ್ರುಹಾಂ ಹನ್ತ
ಸರ್ವದ್ರೋಹಿತ್ವಸಂಭವೇ ।
ರಾಜದ್ರುಗೇವ ಕಿಂ ನ ಸ್ಯಾ-
ತ್ಪಂಚಪಾತಕ ಭಾಜನಮ್ ॥ ೪೭ ॥

ಟೀ॥ ಏವಂ ಈ ಪ್ರಕಾರವಾಗಿ, ರಾಜದ್ರುಹಾಂ-ರಾಜದ್ರೋಹಿಗಳಿಗೆ, ಸರ್ವದ್ರೋಹಿತ್ವಸಂಭವೆ-ಸಕಲಪ್ರಾಣಿಗಳಿಗೂ ದ್ರೋಹಮಾಡುವುದರ ದೋಷಪ್ರಾಪ್ತಿಯುಂಟಾಗುತಿರಲು, ರಾಜದ್ರುಗೇವ - ರಾಜದ್ರೋಹಮಾಡಿದವನೇ, ಪಂಚಪಾತಕಭಾಜನಂಸರ್ವ - ಕೊಲೆ, ಹುಸಿ, ಕಳವು, ಪರದಾರಗಮನ ಅತಿಕಾಂಕ್ಷಾರೂಪವಾದ ಪಂಚಮಹಾಪಾತಕಗಳಿಗೆ ಸ್ಥಾನಭೂತನಾಗಿ, ನಸ್ಯಾತ್ಕಿಂ-ಆಗುವುದಿಲ್ಲವೇ ಏನು ?.

ತಾತ್ಪರ್ಯ ॥ ಪ್ರಾಣಿಗಳಿಗೆ ಬಹಿಶ್ಚರ ಪ್ರಾಣಭೂತರಾದ ರಾಜರಿಗೆ

ದ್ರೋಹಮಾಡಿದವನು ಜಗದ್ದ್ರೋಹಿಯಾದುದರಿಂದ ಕೊಲೆ ಹುಸಿ ಮೊದಲಾದ ಪಂಚಮಹಾ ಪಾತಕಿಯಾಗಲಾರನೆ ? (ಇದಕ್ಕಿಂತಲೂ ಪಾತಕ ಉಂಟೇ?) ॥ ೪೬ ॥

ಶ್ಲೋಕ ॥ ರಕ್ಷನ್ತ್ಯೇವಾತ್ರ ರಾಜಾನೋ
ದೇವಾನ್ ದೇಹಭೃತೋಽಪಿಚ ।
ದೇವಾಸ್ತು ನಾತ್ಮನೋಽಪ್ಯೇವಂ
ರಾಜಾ ಹಿ ಪರದೇವತಾ ॥ ೪೭ ॥

ಟೀ॥ ಅತ್ರ-ಈ ಲೋಕದಲ್ಲಿ, ರಾಜಾನಃ- ದೊರೆಗಳು, ದೇವಾನ್-ದೇವತೆಗಳನ್ನು, ದೇಹಭೃತೋಽಪಿಚ-ಪ್ರಾಣಿಗಳನ್ನೂಕೂಡ, ರಕ್ಷನ್ತ್ಯೇವ-ನಿಯತವಾಗಿರಕ್ಷಿಸುತ್ತಾರೆ., ದೇವಾಸ್ತು-ದೇವತೆಗಳಾದರೋ, ಆತ್ಮನೋಽಪಿ- ತಮ್ಮನ್ನುಕೂಡ, ನ- ರಕ್ಷಿಸಿಕೊಳ್ಳುವುದಿಲ್ಲವು., ರಾಜಾ- ದೊರೆಯು, ಪರದೇವತಾ ಹಿ- ಉತ್ಕೃಷ್ಟದೇವತೆಯಲ್ಲವೆ?.

ತಾತ್ಪರ್ಯ ॥ ಈ ಲೋಕದಲ್ಲಿ ರಾಜರು ದೇವರ್ಕಳನ್ನೂ, ಸಕಲ ಪ್ರಾಣಿಗಳನ್ನೂಕೂಡ ರಕ್ಷಿಸುತ್ತಾರೆ. ದೇವತೆಗಳಾದರೋ ತಮ್ಮನ್ನೆ ರಕ್ಷಿಸಿಕೊಳ್ಳಲಾರರು. ಆದುದರಿಂದ ರಾಜರು ದೇವತೆಗಳಿಗಿಂತಲೂ ಶಕ್ತರು. ॥ ೪೭ ॥

ಶ್ಲೋಕ ॥ ಕಿಂ ಚಾತ್ರ ದೈವತಂ ಹನ್ತಿ
ದೈವತದ್ರೋಹಿಣಂ ಜನಮ್ ।
ರಾಜಾ ರಾಜದ್ರುಹಾಂ ವಂಶಂ
ವಂಶ್ಯಾನನ್ಯಾಂಶ್ಚ ತತ್ಕ್ಷಣೇ ॥ ೪೮ ॥

ಟೀ ॥ ಕಿಂಚ-ಮತ್ತೇನೆಂದರೆ, ಅತ್ರ-ಈ ಲೋಕದಲ್ಲಿ, ದೈವತಂ-ದೇವತೆಯು, ದೈವತದ್ರೋಹಿಣಂ-ದೇವತಾದ್ರೋಹವನ್ನು ಮಾಡಿದ, ಜನಂ-ಜನವನ್ನು, ಹಂತಿ-ಕೊಲ್ಲುತ್ತದೆ., ರಾಜಾ-ದೊರೆಯು, ರಾಜದ್ರುಹಾಂ-ರಾಜದ್ರೋಹಿಗಳ, ವಂಶಂ-ಕುಲವನ್ನು, ವಂಶ್ಯಾನ್-ಆ ವಂಶದಲ್ಲಿ ಹುಟ್ಟಿದವರನ್ನು, ಅನ್ಯಾಂಶ್ಚ- ಉಳಿದವರನ್ನು, ತತ್ಕ್ಷಣೇ-ಆ ಕ್ಷಣದಲ್ಲಿಯೇ, ಹಂತಿ-ನಾಶಮಾಡುತ್ತಾನೆ.

ತಾತ್ಪರ್ಯ ॥ ಮತ್ತು ಈಲೋಕದಲ್ಲಿ ದೇವತೆಯು ದೇವತಾದ್ರೋ

ಹಿಯಾದ ಜನವನ್ನು ಮಾತ್ರ ಕೊಲ್ಲುವುದು. ಘೋರೆಯು ರಾಜದ್ರೋಹಿಯ ವಂಶವನ್ನೂ, ಆ ವಂಶದಲ್ಲಿ ಹುಟ್ಟಿದವರನ್ನೂ, ತತ್ಸಂಬಂಧಿಯಾದ ಇತರರನ್ನೂ ಕೂಡ ಆಕ್ಷಣವೇ ಕೊಲ್ಲುವರು. ॥ ೪೯ ॥

ಶ್ಲೋಕ ॥ ಅರ್ಥಿನಾಂ ಜೀವನೋಪಾಯ-
ಮಪಾಯಂ ಚಾಭಿಭಾವಿನಾಮ್ ।
ಕುರ್ವನ್ತಃ ಖಲು ರಾಜಾನ-
ಸ್ಸೇವ್ಯಾ ಹವ್ಯವಹಾ ಯಥಾ ॥ ೫೦ ॥

ಟೀ ॥ ಅರ್ಥಿನಾಂ-ಅಪೇಕ್ಷಿಸುವವರಿಗೆ, ಜೀವನೋಪಾಯಂ-ಜೀವಿಸುವದಕ್ಕೆ ತಕ್ಕ ಉಪಾಯವನ್ನು, ಅಭಿಭಾವಿನಾಂ-ತಿರಸ್ಕರಿಸುವವರಿಗೆ, ಅಪಾಯಂಚ-ಕೇಡನ್ನೂ ಕೂಡ, ಕುರ್ವಂತಃ-ಉಂಟುಮಾಡುತಲಿರುವಂಥಾ, ರಾಜಾನಃ - ದೊರೆಗಳು, ಹವ್ಯವಹಾಯಥಾ - ಅಗ್ನಿಗಳೋಪಾದಿಯಲ್ಲಿ, ಸೇವ್ಯಾಃಖಲು - ಸೇವಿಸಲು ಯೋಗ್ಯರಲ್ಲವೆ ?.

ತಾತ್ಪರ್ಯ ॥ ಜೀವನಾಪೇಕ್ಷಿಗಳಿಗೆ ಜೀವನವನ್ನೂ, ಅನಾದರಿಸುವರಿಗೆ ಕೇಡನ್ನೂ ಕೂಡ ಮಾಡುತ್ತಲಿರುವ ರಾಜರು “ ಅಗ್ನಿಗಳು ಹೇಗೆ ಜಾಗರೂಕತೆಯಿಂದ ಸೇವಿಸಲೋಸುಗ ಯೋಗ್ಯಗಳೋ ” ಹಾಗೆ ಭಯ ಭಕ್ತಿ ಜಾಗರೂಕತೆಯಿಂದ ಸೇವ್ಯರು. ॥ ೫೦ ॥

ಶ್ಲೋಕ ॥ ಇತಿ ಧರ್ಮ್ಯವಚೋಪ್ಯಾಸೀ-
ನ್ಮರ್ಮಭಿತ್ತೀವ್ರಕರ್ಮಣಃ ।
ಪಿತ್ತಜ್ವರವತಃ ಕ್ಷೀರಂ
ತಿಕ್ತಮೇವ ಹಿ ಭಾಸತೇ ॥ ೫೧ ॥

ಟೀ ॥ ಇತಿ-ಈ ಪ್ರಕಾರ, ಧರ್ಮ್ಯವಚೋಪಿ-ಧರ್ಮಯುಕ್ತವಾದ ವಚನವೂ ಕೂಡ, ತೀವ್ರಕರ್ಮಣಃ-ಕ್ರೂರಕೃತ್ಯವುಳ್ಳ ಕಾಷ್ಠಾಂಗಾರನಿಗೆ, ಮರ್ಮಭಿತ್-ಮರ್ಮಸ್ಥಾನವನ್ನು ಸೀಳಲರ್ಹವಾದುದಾಗಿ, ಆಸೀತ್-ಆಯಿತು., ಪಿತ್ತಜ್ವರವತಃ-ಪಿತ್ತಜ್ವರವುಳ್ಳವನಿಗೆ, ಕ್ಷೀರಂ-ಹಾಲು, ತಿಕ್ತಮೇವ-ಕಹಿಯಾಗಿಯೇ, ಭಾಸತೇ ಹಿ-ತೋರುವುದಲ್ಲವೆ ?.

ತಾತ್ಪರ್ಯ॥ ಈ ಪ್ರಕಾರ ಧರ್ಮದತ್ತನೆಂಬ ಮಂತ್ರಿಯಿಂದ ಹೇಳಲ್ಪಟ್ಟ ಧರ್ಮದಿಂದೊಡಗೂಡಿದ ವಚನವೂ ಕೂಡ ರಾಜದ್ರೋಹದಲ್ಲಿ ಅತ್ಯಾಸಕ್ತನಾದ ಕಾಷ್ಠಾಂಗಾರನಿಗೆ ಹೃದಯಕೀಲಿತಶಂಕುಪ್ರಾಯವಾದುದು. ಪಿತ್ತಜ್ವರವುಳ್ಳವನಿಗೆ ಶ್ರೇಷ್ಠವಾದ ಗೋಕ್ಷೀರವೂ ಕೂಡ ಕಯ್ಯಾಗಿಯೆ ತೋರುತ್ತೆಯಷ್ಟೆ? ಧರ್ಮೋಪದೇಶವು ಪಾಪಿಗೆರುಚಿಸದು. ॥ ೫೦॥

ಶ್ಲೋಕ॥ ಸಕಾರ್ತಘ್ನ್ಯಾದಿದೋಷಂ ಚ
ಗುರುದ್ರೋಹಂ ಚ ಕಿಂ ಪರೈಃ ।
ಪರಿವಾದಂ ಚ ನಾದ್ರಾಕ್ಷೀ-
ದ್ದೋಷಂ ನಾರ್ಥೀಹ ಪಶ್ಯತಿ ॥ ೫೧ ॥

ಟೀ॥ ಸಃ-ಆ ಕಾಷ್ಠಾಂಗಾರನು, ಕಾರ್ತಘ್ನ್ಯಾದಿದೋಷಂ ಚ-ಕೃತಘ್ನತೆಯೇ ಮೊದಲಾದ ದೋಷಗಳನ್ನೂ, ಗುರುದ್ರೋಹಂ ಚ-ಗುರುದ್ರೋಹವನ್ನೂ, ಪರಿವಾದಂ ಚ-ಲೋಕಾಪವಾದವನ್ನೂ ಕೂಡ, ನಾದ್ರಾಕ್ಷೀತ್-ನೋಡಲಿಲ್ಲವು., ಪರೈಃ-ಉಳಿದವಿಷಯಗಳಿಂದ, ಕಿಂ-ಏನು?, ಇಹ-ಈಲೋಕದಲ್ಲಿ, ಅರ್ಥೀ-ಅರ್ಥಾತುರನು, ದೋಷಂ-ದೋಷವನ್ನು, ನಪಶ್ಯತಿ-ನೋಡುವುದಿಲ್ಲವಷ್ಟೆ?.

ತಾತ್ಪರ್ಯ॥ ಆ ಕಾಷ್ಠಾಂಗಾರನು, ಕೃತಘ್ನನೆಂಬದಾಗಿಯೂ, ರಾಜದ್ರೋಹಿಯೆಂಬದಾಗಿಯೂ, ಉತ್ತರತ್ರ ತನಗೆ ಸಂಭವಿಸುವ ಲೋಕಾಪವಾದವನ್ನೂ ಕೂಡ ನೋಡಲಿಲ್ಲವು. ಉಳಿದವುಗಳಿಂದ ಏನು ಪ್ರಯೋಜನವು? ಲೋಕದಲ್ಲಿ ಅರ್ಥಾತುರರಾದ ಜನರು ದೋಷವನ್ನು ನೋಡುವುದಿಲ್ಲವಷ್ಟೆ? (ಸ್ವಪ್ರಯೋಜನದಲ್ಲೇ ದೃಷ್ಟಿಯೆಂಬುದಭಿಪ್ರಾಯವು.)॥ ೫೧॥

ಶ್ಲೋಕ॥ ಮಥನೋ ನಾಮ ತತ್ಸ್ಯಾಲಃ
ತದ್ವಾಚಂ ಬಹ್ವಮನ್ಯತ ।
ತದ್ಧಿ ಪಾಣೌಕೃತಂ ದಾತ್ರಂ
ಪರಿಪಂಥಿವಿಧಾಯಿನಃ ॥೫೨॥

ಟೀ॥ ಮಥನೋ ನಾಮ-ಮಥನನೆಂಬ, ತತ್ಸ್ಯಾಲಃ-ಆ ಕಾಷ್ಠಾಂಗಾರನಭಾವಮೈದುನನು, ತದ್ವಾಚಂ-ಆ ಕಾಷ್ಠಾಂಗಾರವಚನವನ್ನು, ಬಹ್ವಮನ್ಯತ-ಗೌರವದಿಂದೆಣಿಸಿದನು., ತತ್-ಆ ಬಹುಮತಿಯು, ಪರಿಪಂಥಿವಿಧಾಯಿನಃ-ಶತ್ರುವಿಗೆ, ಪಾಣೌ-ಹಸ್ತದಲ್ಲಿ, ಕೃತಂ-ಮಾಡಲ್ಪಟ್ಟ, ದಾತ್ರಂಹಿ-ಕುಡುಗೋಲಲ್ಲವೆ?.

ತಾತ್ಪರ್ಯ॥ ಆ ರಾಜದ್ರೋಹೋಕ್ತಿಯನ್ನು ಕಾಷ್ಠಾಂಗಾರನ ಭಾವಮೈದನು ಬಹುಮಾನಿಸಿದನು. ಹೀಗೆ ಅಕಾರ್ಯಪ್ರವಿಷ್ಟನಿಗೆ ಅನುಮತಿದಾನಮಾಡೋಣವು ಹಗೆಯುಳ್ಳಗೆ ಆಯುಧವನ್ನು ಕೊಟ್ಟಂತೆಯಲ್ಲವೆ? ॥ ೪೩ ॥

ಶ್ಲೋಕ ॥ ಪ್ರಾಹೈಷೀಚ್ಚ ಬಲಂ ಹಂತುಂ
ರಾಜಾನಂ ಹನ್ತ ಪಾಪಧೀಃ ।
ಪಯೋಽಪ್ಯಾಸ್ಯಗತಂ ಶಕ್ಯಂ
ಪಾನನಿಷ್ಠೀವನದ್ವಯೇ ॥೪೪॥

ಟೀ॥ ಪಾಪಧೀಃ-ಪಾಪದಲ್ಲಿಯೇ ಬುದ್ಧಿಯುಳ್ಳ ಕಾಷ್ಠಾಂಗಾರನು, ರಾಜಾನಂ-ದೊರೆಯನ್ನು, ಹನ್ತುಂ-ಕೊಲ್ಲಲೋಸುಗ, ಬಲಂ-ಸೈನ್ಯವನ್ನು, ಪ್ರಾಹೈಷೀಚ್ಚ-ಕಳುಹಿಸಿಯೂ ಕೊಟ್ಟನು., ಹನ್ತ-ಕಷ್ಟವು!, ಆಸ್ಯಗತಂ-ಬಾಯನ್ನು ಹೊಂದಿರತಕ್ಕ, ಪಯಃ-ನೀರು, ಪಾನನಿಷ್ಠೀವನದ್ವಯೇ-ಕುಡಿಯೋಣ, ಉಗುಳೋಣವೆಂಬ ಎರಡುಕೆಲಸದಲ್ಲಿಯೂ, ಶಕ್ಯಂಹಿ-ಸಾಧ್ಯವಲ್ಲವೆ?.

ತಾತ್ಪರ್ಯ ॥ ಪಾಪಬುದ್ಧಿಯುಳ್ಳ ಕಾಷ್ಠಾಂಗಾರನು ಸತ್ಯಂಧರಮಹಾರಾಜನನ್ನು ಕೊಲ್ಲುವದಕ್ಕೋಸುಗ ಸೈನ್ಯವನ್ನೂ ಕೂಡ ಕಳುಹಿಸಿದನು. ರಾಜಪುರದಲ್ಲಿ ಸೈನ್ಯವು ಸನ್ನಾಹಿಸುವುದೆ? ( ಅಂದರೆ) ಬಾಯಲ್ಲಿರುವ ನೀರನ್ನು ಕುಡಿಯಲೂಬಹುದು ಉಗುಳಲೂ ಬಹುದಲ್ಲವೆ? ಹಾಗೆಯೇ (ಅತ್ಯಂತ ಪರಾಧೀನನಿಗೆ ಯಾವಯುದ್ಧವೂ ನಡೆಯುವುದಿಲ್ಲವೆಂಬಭಾವವು. ॥ ೪೪ ॥

ಶ್ಲೋಕ ॥ ದೌವಾರಿಕಮುಖಾದೇತ-
ದುಪಲಭ್ಯ ರುಷಾ ನೃಪಃ ।
ಉದತಿಷ್ಠತ ಸಂಗ್ರಾಮೇ
ನ ಹಿ ತಿಷ್ಠತಿ ರಾಜಸಮ್ ॥೪೫॥

ಟೀ॥ ನೃಪಃ-ರಾಜನು, ದೌವಾರಿಕಮುಖಾತ್-ದ್ವಾರಪಾಲಕನ ಬಾಯಿಯಿಂದ, ಏತತ್-ಈ ವೃತ್ತಾಂತವನ್ನು, ಉಪಲಭ್ಯ-ಕೇಳಿ, ರುಷಾ-ಕೋಪದಿಂದ,

ಉಪತಿಷ್ಠತೆ-ಉದ್ಯೋಗಿಸಿದನು, ಸಂಗ್ರಾಮೇ-ಯುದ್ಧದಲ್ಲಿ, ರಾಜಸಂ-ರಜೋಗುಣಕಾರ್ಯವಾದ ಅಜಾಗರೂಕತೆಯು, ನತಿಷ್ಠತಿ-ಇರುವದಿಲ್ಲವಷ್ಟೆ?.

ತಾತ್ಪರ್ಯ॥ ರಾಜನು ಜಾಗ್ರತೆಯುಳ್ಳವನು ಮುಂಬಡಿದ ಸೈನ್ಯವು ಆಕ್ರಮಿಸಿದ ವೃತ್ತಾಂತವನ್ನು ಕೇಳಿ ಕೋಪದಿಂದ ಯುದ್ಧಪ್ರಯತ್ನವನ್ನು ಮಾಡಿದನು. ರಾಜರಿಗೆ ಯುದ್ಧವು ಪ್ರಾಪ್ತವಾಗುತ್ತಿರಲು, ಅಜಾಗರೂಕತೆಯು ಇರುವುದಿಲ್ಲವಷ್ಟೆ? ॥ ೧೫॥

ಶ್ಲೋಕ ॥ ತಾವತಾರ್ಧಾಸನಾದ್ಭ್ರಷ್ಟಾಂ
ನಷ್ಟಾಸುಂ ಗರ್ಭಿಣೀಂ ಪ್ರಿಯಾಮ್ ।
ದೃಷ್ಟ್ವಾ ಪುನರ್ನ್ಯವರ್ತಿಷ್ಟ
ಸ್ತ್ರೀಷ್ವವಜ್ಞಾ ಹಿ ದುಸ್ಸಹಾ ॥೧೬॥

ಟೀ ॥ ತಾವತಾ-ಅಷ್ಟರಲ್ಲಿ, ಅರ್ಧಾಸನಾತ್-ಅರ್ಧಾಸನದ ದೆಸೆಯಿಂದ, ಭ್ರಷ್ಟಾಂ-ಕೆಳಗೆ ಬಿದ್ದಂಥ, ನಷ್ಟಾಸುಂ-ಮೂರ್ಛಿತಳಾದ, ಗರ್ಭಿಣೀಂ-ಗರ್ಭಿಣಿಯಾದ, ಪ್ರಿಯಾಂ-ಪತ್ನಿಯಾದ ವಿಜಯಾ ಮಹಾದೇವಿಯನ್ನು, ದೃಷ್ಟ್ವಾ-ನೋಡಿ, ಪುನಃ-ಮರಳಿ, ನ್ಯವರ್ತಿಷ್ಟ-ಹಿಂದಿರುಗಿದನು, ಸ್ತ್ರೀಷು-ಸ್ತ್ರೀಯರಲ್ಲಿ, ಅವಜ್ಞಾ-ತಿರಸ್ಕಾರವು, ದುಸ್ಸಹಾಹಿ-ಸಹಿಸಲಶಕ್ಯವಲ್ಲವೆ?.

ತಾತ್ಪರ್ಯ ॥ ಅಷ್ಟರಲ್ಲಿ ಅರ್ಧಾಸನದ ದೆಸೆಯಿಂದ ದುಃಖಾಕ್ರಾಂತಳಾಗಿ ಮೂರ್ಛಿತಳಾಗಿ ಬಿದ್ದ ಪತ್ನಿಯನ್ನು ನೋಡಿ ರಾಜನು ಹಿಂದಿರುಗಿದನು. ಸ್ತ್ರೀಯರಿಗೆ ವಿಪತ್ಕಾಲದಲ್ಲಿ ಅವಶ್ಯ ಆದರಿಸಿ ಸಮಾಧಾನ ಮಾಡಬೇಕೇ ಹೊರತು ಅನಾದರಿಸಕೂಡದಲ್ಲವೆ? ॥೧೬॥

ಶ್ಲೋಕ ॥ ಅಬೋಧಯಚ್ಚ ತಾಂ ಪತ್ನೀಂ
ಲಬ್ಧಬೋಧೋ ಮಹೀಪತಿಃ ।
ತತ್ತ್ವಜ್ಞಾನಂ ಹಿ ಜಾಗರ್ತಿ
ವಿದುಷಾಮಾರ್ತಿಸಂಭವೇ ॥೧೭॥

ಟೀ ॥ ಲಬ್ಧಬೋಧಃ-ಪಡೆಯಲ್ಪಟ್ಟ ತತ್ವಜ್ಞಾನವುಳ್ಳ, ಮಹೀಪತಿಃ-ಸತ್ಯಂಧರಮಹಾರಾಜನು, ಪತ್ನೀಂ-ಹೆಂಡತಿಯಾದ, ತಾಂ-ಆ ವಿಜಯಾದೇವಿಯನ್ನು,

ಅಬೋಧಯತ್-ಬೋಧಿಸಿದನು., ವಿದುಷಾಂ-ವಿದ್ವಾಂಸರಿಗೆ, ಆರ್ತಿಸಂಭವೇ ಸತಿ-ದುಃಖವು ಪ್ರಾಪ್ತವಾಗುತ್ತಿರಲಾಗಿ, ತತ್ವಜ್ಞಾನಂ-ವಸ್ತುಯಾಥಾತ್ಮ್ಯಜ್ಞಾನವು, ಜಾಗರ್ತಿಹಿ-ಪ್ರಕಾಶಿಸುತ್ತದಲ್ಲವೆ?.

ತಾತ್ಪರ್ಯ ॥ ಪಡೆಯಲ್ಪಟ್ಟ ತತ್ವಜ್ಞಾನವನುಳ್ಳ ಸತ್ಯಂಧರಮಹಾರಾಜನು ಪತ್ನಿಯಾದ ವಿಜಯಾಮಹಾದೇವಿಯನ್ನು ಕುರಿತು ಬೋಧಿಸಿದನು. ವಿದ್ವಾಂಸನಾಗಿದ್ದರೆ ಸಂಸಾರ ಸಂಬಂಧಿಯಾದ ದುಃಖವು ಪ್ರಾಪ್ತವಾಗುತ್ತಿರಲು ತತ್ವಜ್ಞಾನದಿಂದ ಅಡಗಿಸಬಹುದಷ್ಟೆ? ॥೫೭॥

ಶ್ಲೋಕ ॥ ಶೋಕೇನಾಲಮಪುಣ್ಯಾನಾಂ
ಪಾಪಂ ಕಿಂ ನ ಫಲಪ್ರದಮ್ ।
ದೀಪನಾಶೇ ತಮೋರಾಶಿಃ
ಕಿಮಾಹ್ವಾನಮಪೇಕ್ಷತೇ ॥೫೮॥

ಟೀ ॥ ಶೋಕೇನ-ದುಃಖದಿಂದ, ಅಲಂ-ಸಾಕು., ಅಪುಣ್ಯಾನಾಂ-ಪುಣ್ಯಹೀನರಿಗೆ, ಪಾಪಂ-ಪಾಪವು, ನಫಲಪ್ರದಂಕಿಂ-ಫಲವನ್ನು ಕೊಡದೇಇದ್ದೀತೇ ಏನು?, ದೀಪನಾಶೇ-ದೀಪವು ನಷ್ಟವಾಗುತ್ತಿರಲಿಕ್ಕಾಗಿ, ತಮೋರಾಶಿಃ-ಕತ್ತಲೆಯಸಮೂಹವು, ಆಹ್ವಾನಂ-ಕರೆಯೋಣವನ್ನು, ಅಪೇಕ್ಷತೇಕಿಂ-ಅಪೇಕ್ಷಿಸುವುದೇಏನು?.

ತಾತ್ಪರ್ಯ ॥ ಮಹಾರಾಜನು ಪತ್ನಿಯನ್ನು ಕುರಿತು ಹೇಳುತ್ತಾನೆ.— ಶೋಕವು ನಿಷ್ಫಲವು? ಸಾಕು, ಪುಣ್ಯಫಲವು ತೀರಿದನಂತರ ಅವಶ್ಯ ಪಾಪಫಲವನ್ನನುಭವಿಸಲೇಬೇಕಷ್ಟೆ? ದೀಪವು ನಷ್ಟವಾಗುತ್ತಿರಲು ಕತ್ತಲೆಯನ್ನು ಕರೆಯಬೇಕೆ? ಹಾಗೆ ನಮ್ಮಪ್ರಯತ್ನದಿಂದ ನಿವರ್ತಿಸಲಶಕ್ಯವಾದ ಭವಾಂತರಪಾಪವು ಫಲವನ್ನು ಕೊಟ್ಟೇ ನಿವರ್ತಿಸುತ್ತದೆ. ॥೫೮॥

ಶ್ಲೋಕ ॥ ಯೌವನಂ ಚ ಶರೀರಂ ಚ
ಸಂಪಚ್ಚ ವ್ಯೇತಿ ನಾದ್ಭುತಮ್ ।
ಜಲಬುದ್ಬುದನಿತ್ಯತ್ವೇ ।
ಚಿತ್ರೀಯಾ ನ ಹಿ ತತ್ಕ್ಷಯೇ ॥೫೯॥

ಟೀ ॥ ಯೌವನಂಚ-ಯೌವನವಯಸ್ಸೂ, ಶರೀರಂಚ - ಶರೀರವೂ, ಸಂಪಚ್ಚ-ಐಶ್ವರ್ಯವೂ, ಕ್ಷೀಯತೇ-ಕ್ಷಯಿಸುತ್ತದೆ., ಅದ್ಭುತಂ-ಆಶ್ಚರ್ಯವು, ನ-ಅಲ್ಲ., ಜಲಬುದ್ಬುದನಿತ್ಯತ್ವೇ-ನೀರುಗುಳ್ಳೆಯು ಸ್ಥಿರತ್ವದಲ್ಲಿ, ಚಿತ್ರೀಯತಾ-ಆಶ್ಚರ್ಯವು!, ತತ್ಕ್ಷಯೇ-ಅದು ಒಡದುಹೋಗುವುದರಲ್ಲಿ, ನಹಿ—ಇಲ್ಲವಷ್ಟೆ ?.

ತಾತ್ಪರ್ಯ ॥ ಒಳ್ಳೇ ಯೌವನವಯಸ್ಸೂ, ಭೋಗಾನುಭವಕ್ಕೆ ಮೂಲಕಾರಣವಾದ ಶರೀರವೂ, ಭೋಗೋಪಕರಣವಾದ ಐಶ್ವರ್ಯವೂ, ಇವುಗಳು ಕ್ಷಯವೇ ಸ್ವಭಾವವಾಗಿ ಉಳ್ಳವುಗಳೆಂಬದು ಆಶ್ಚರ್ಯವಲ್ಲವು. ನೀರಿನಗುಳ್ಳೆಯು ಎಷ್ಟುಹೊತ್ತುಇದ್ದಾಗ್ಯೂ ಕಡೆಗೆನಾಶವೇ ಸ್ವಭಾವವಾಗಿ ಉಳ್ಳದ್ದು. ಇದು ಆಶ್ಚರ್ಯಕರವಲ್ಲವು, ಅದು ಒಡೆಯದೆ ಹಾಗೆಯೇನಿತ್ಯವಾಗಿದ್ದಲ್ಲಿಆಶ್ಚರ್ಯವು! ಹಾಗೆಯೇ ಯೌವನ ಶರೀರ ಸಂಪತ್ತುಗಳು ನಶ್ವರವಾದುದರಿಂದ ನಾಶದಲ್ಲಿ ಆಶ್ಚರ್ಯವೇನು ? ॥೪೯॥

ಶ್ಲೋಕ ॥ ಸಂಯುಕ್ತಾನಾಂ ವಿಯೋಗಶ್ಚ
ಭವಿತಾ ಹಿ ನಿಯೋಗತಃ ।
ಕಿಮನ್ಯೈರಂಗತೋಽಪ್ಯಂಗೀ
ನಿಸ್ಸಂಗೋ ಹಿ ನಿವರ್ತತೇ ॥೫೦॥

ಟೀ ॥ ಸಂಯುಕ್ತಾನಾಂ—ಸೇರಿರತಕ್ಕ, ವಸ್ತುಗಳಿಗೆ, ವಿಯೋಗಶ್ಚ—ಆಗಲಿಕೆಯೂಕೂಡ, ನಿಯೋಗತಃ—ನಿಯತವಾಗಿರೋಣದರ ದೆಸೆಯಿಂದ, ಭವಿತಾಹಿ—ಆಗುತ್ತದೆಯಲ್ಲವೆ?, ಅಂಗೀ—ಶರೀರದೊಡಗೂಡಿದ ಆತ್ಮನು, ಅಂಗತೋಽಪಿ—ಶರೀರದದೆಸೆಯಿಂದಲೂಕೂಡ, ನಿಸ್ಸಂಗಃ—ಸಂಬಂಧರಹಿತನಾಗಿ, ನಿವರ್ತತೇಹಿ—ಹಿಂತಿರುಗುತ್ತಾನಲ್ಲವೆ?, ಅನ್ಯೈಃ—ಉಳಿದ ಐಶ್ವರ್ಯಾದಿಗಳಿಂದ, ಕಿಂ—ಏನು ?.

ತಾತ್ಪರ್ಯ ॥ ಯಾವುದು ಸೇರಿರುತ್ತದೆಯೊ ಅದುಅಗಲಿಹೋಗುವದೇ ಸ್ವಭಾವವು. ಹುಟ್ಟುವಾಗಲೇ ಶರೀರದೊಡನೆಯೇ ಹುಟ್ಟಿ ಅಂಥಾ ಶರೀರವನ್ನೇ ಪರಿತ್ಯಜಿಸಿ ಜೀವನು ನಿರ್ಯಾಣಹೊಂದುವದು ಪ್ರತ್ಯಕ್ಷವಾಗಿ ಕಾಣುತ್ತಿರುವಲ್ಲಿ ಮಧ್ಯೆ ಸಂಭವಿಸಿದ ಐಶ್ವರ್ಯಾದಿಗಳೂ, ಪತ್ನೀಪುತ್ರಾದಿಗಳೂ ಅಗಲಿಹೋಗುವುದು ಏನುಆಶ್ಚರ್ಯವು? ॥೫೦॥

ಶ್ಲೋಕ ॥ ಅನಾದೌ ಸತಿ ಸಂಸಾರೇ
ಕೇನ ಕಸ್ಯ ನ ಬಂಧುತಾ ।
ಸರ್ವಥಾ ಶತ್ರುಭಾವಶ್ಚ
ಸರ್ವಮೇಷೈವ ಕಲ್ಪನಾ ॥೬೦॥

ಟೀ ॥ ಸಂಸಾರೇ—ಚತುರ್ವಿಧಪ್ರಾಣಿಯೋನಿ ಸಂಸಾರವು, ಅನಾದೌ ಸತಿ—ಅನಾದಿಯಾಗಿರುತ್ತಿರಲಿಕ್ಕಾಗಿ, ಕೇನ—ಯಾರೊಡನೆ, ಕಸ್ಯ—ಯಾರಿಗೆ, ಬಂಧುತಾ—ಬಂಧುವಾಗಿರೋಣವು?, ಸರ್ವಥಾ—ಸರ್ವಪ್ರಕಾರದಿಂದ, ಶತ್ರುಭಾವಶ್ಚ—ಶತ್ರುತ್ವವೂಕೂಡ, ನ—ಇಲ್ಲವು., ಏತತ್ ಸರ್ವಂ—ಈ ಶತ್ರುತ್ವಬಂಧುತ್ವಾದಿ ಸಮಸ್ತವೂ, ಕಲ್ಪನಾಹಿ—ಭ್ರಾಂತಿಕಲ್ಪನೆಯಲ್ಲವೆ?.

ತಾತ್ಪರ್ಯ ॥ ಅನಾದಿಯಾಗಿ ನಾನಾಜನ್ಮಗಳಲ್ಲಿ ನಾನಾದೇಹದೊಡನೆ ಗೂಡಿ ಸಂಚರಿಸುತ್ತಲಿರುವ ಈ ಜೀವನಿಗೆ ಬಂಧೀ ಮಾತಾ ಪಿತೃ ಪತ್ನೀ ಪುತ್ರ ಶತ್ರುಮಿತ್ರರೆಂದು ನಿಯಮವಿಲ್ಲವಾದುದರಿಂದ ಈ ಸಂಬಂಧವು ನಾವೇ ನಮ್ಮಬುದ್ಧಿಯಿಂದ ಕಲ್ಪಿಸಿಕೊಂಡದ್ದೇ ಹೊರತು ಯಾವ ಆತ್ಮನಿಗೆ ಯಾವ ಆತ್ಮನೊಡನೆಯೂ ಬಂಧುತ್ವವೂ, ಶತ್ರುತ್ವವೂ ನಿಯತಧರ್ಮವಲ್ಲವು. ॥೬೦॥

ಶ್ಲೋಕ ॥ ಇತಿ ಧರ್ಮ್ಯಂ ವಚಸ್ತಸ್ಯಾ
ಲೇಭೆ ನೈವ ಪದಂ ಹೃದಿ ।
ದಗ್ಧಭೂಮ್ಯುಪ್ತಬೀಜಸ್ಯ
ನೈವಾಂಕುರ ಸಮರ್ಥತಾ ॥೬೧॥

ಟೀ ॥ ಇತಿ—ಈ ಪ್ರಕಾರವಾದ, ಧರ್ಮ್ಯಂ—ಧರ್ಮದಿಂದೊಡಗೂಡಿದ, ವಚಃ—ವಚನವು, ತಸ್ಯಾಃ—ಆ ವಿಜಯಾದೇವಿಯ, ಹೃದಿ—ಮನಸ್ಸಿನಲ್ಲಿ, ಪದಂ—ಸ್ಥಾನವನ್ನು, ನೈವಲೇಭೇ—ಹೊಂದಲೇಇಲ್ಲವು., ದಗ್ಧಭೂಮ್ಯುಪ್ತಬೀಜಸ್ಯ—ಬೆಂಕಿಯಿಂದ ಕಾದು ಸುಡುತಲಿರುವ ಭೂಮಿಯಲ್ಲಿ ಬಿತ್ತಲ್ಪಟ್ಟ ಬೀಜಕ್ಕೆ, ಅಂಕುರಸಮರ್ಥತಾ—ಮೊಳಕೆಯನ್ನುಂಟುಮಾಡತಕ್ಕ ಶಕ್ತಿಯು, ನಹಿ—ಇಲ್ಲವಷ್ಟೆ?.

ತಾತ್ಪರ್ಯ ॥ ಈ ಪೂರ್ವೋಕ್ತ ಪ್ರಕಾರವಾಗಿ ಧರ್ಮದಿಂದೊಡಗೂಡಿದ ವಚನವು ಶೋಕಾಗ್ನಿದಗ್ಧವಾದ ವಿಜಯಾದೇವಿಯ ಮನಸ್ಸಿನಲ್ಲಿ ಸ್ಥಿತಿಯನ್ನು ಹೊಂದಲಿಲ್ಲವು. ಇದು ಯುಕ್ತವೇಸರಿ; ಕಿಚ್ಚಿನಿಂದಾ

ಗಲೀ, ಅಥವಾ ಬೇಸಿಗೆಯ ಬಿಸಿಲಿನಿಂದಾಗಲೀ, ಸುಡಲ್ಪಟ್ಟ ಭೂಮಿಯಲ್ಲಿ ಬಿತ್ತಿದ ಬೀಜಕ್ಕೆ ಮೊಳಕೆಯನ್ನುಂಟುಮಾಡತಕ್ಕ ಸಾಮರ್ಥ್ಯವಿಲ್ಲವಷ್ಟೆ? ॥೨೨॥

ಶ್ಲೋಕ ॥ ಅಯಂ ತ್ವಾಪನ್ನಸತ್ವಾಂ ತಾ
ಮಾರೋಪ್ಯ ಶಿಖಿಯಂತ್ರಕಮ್ ।
ಸ್ವಯಂ ತದ್ಭ್ರಮಯಾಮಾಸ
ಹನ್ತ ಕ್ರೂರತಮೋ ವಿಧಿಃ ॥೨೩॥

ಟೀ ॥ ಅಯಂ ತು—ಈ ಮಹಾರಾಜನಾದರೋ, ಆಪನ್ನಸತ್ವಾಂ—ಗರ್ಭಿಣಿಯಾದ, ತಾಂ—ಆ ದೇವಿಯನ್ನು, ಶಿಖಿಯಂತ್ರಕಂ—ನವಿಲುಯಂತ್ರವನ್ನು, ಆರೋಪ್ಯ—ಹತ್ತಿಸಿ, ಸ್ವಯಂ—ತಾನೇ, ತತ್— ಆ ನವಿಲುಯಂತ್ರವನ್ನು, ಭ್ರಮಯಾಮಾಸ—ತಿರುಗಿಸಿದನು., ವಿಧಿಃ—ದೈವವು, ಕ್ರೂರತಮಃ—ಅತ್ಯಂತ ಕ್ರೂರವಾದದ್ದು, ಹನ್ತ—ಕಷ್ಟವು!.

ತಾತ್ಪರ್ಯ ॥ ಈ ಸತ್ಯಂಧರನು ಗರ್ಭಿಣಿಯಾದ ಪತ್ನಿಯನ್ನು ನವಿಲುಯಂತ್ರದಲ್ಲಿ ಕುಳ್ಳಿರಿಸಿ ತಾನೇ ತಿರುಗಿಸಿದನು. ವಿಧಿಯು ಬಹಳ ಕ್ರೂರವಾದದ್ದು, ಕಷ್ಟವು !! ( ಅದೃಷ್ಟದ ಕ್ರೂರಪರಿಪಾಕವೇ ದುಃಖಕಾರಣವೆಂಬ ಭಾವವು. ) ॥೨೩॥

ಶ್ಲೋಕ ॥ ವಿಯತಾಸ್ಮಿನ್ಗತೇ ಯೋದ್ಧುಂ
ಸಮೋಹಾದುಪಚಕ್ರಮೇ ।
ನಹ್ಯಂಗುಳಿರಸಹಾಯಸ್ಯ
ಸ್ವಯಂ ಶಬ್ದಾಯತೇತರಾಮ್ ॥೨೪॥

ಟೀ ॥ ಅಸ್ಮಿನ್—ಈ ನವಿಲುಯಂತ್ರವು, ವಿಯತಾ—ಆಕಾಶದಿಂದ, ಗತೇಸತಿ—ಹೋಗುತ್ತಿರಲು, ಸಃ—ಆ ಸತ್ಯಂಧರಮಹಾರಾಜನು, ಮೋಹಾತ್— ಅಜ್ಞಾನದ ದೆಸೆಯಿಂದ, ಯೋದ್ಧುಂ—ಯುದ್ಧಮಾಡುವದಕ್ಕಾಗಿ, ಉಪಚಕ್ರಮೇ—ಉಪಕ್ರಮಿಸಿದನು., ಅಸಹಾಯಸ್ಯ— ಮತ್ತೊಂದು ಸಹಾಯವಿಲ್ಲದ, ಅಂಗುಳಿಃ—ಬೆರಳು, ಸ್ವಯಂ—ತಾನೇ, ಶಬ್ದಾಯತೇತರಾಂ—ಅಧಿಕಶಬ್ದಮಾಡುವುದಿಲ್ಲವಷ್ಟೆ?.

ತಾತ್ಪರ್ಯ॥ ಈ ನವಿಲು ಯಂತ್ರವು ಗಗನಮಾರ್ಗದಿಂದ ಹೊರಟುಹೋಗುತ್ತಿರಲಿಕ್ಕಾಗಿ ಈ ಮಹಾರಾಜನು ಅಭ್ಯಾಸದಿಂದ ಯುದ್ಧಮಾಡಲೋಸುಗ ಪ್ರಾರಂಭಿಸಿದನು. ಒಂದೇದೆರಳು ಸಹಾಯವಿಲ್ಲದೆ ತಾನೆ ವಿಶೇಷ ಶಬ್ದಮಾಡೀತೆ? ॥೨೪॥

ಶ್ಲೋಕ॥ ಅಥ ಯುದ್ಧ್ವಾ ಚಿರಂಯೋದ್ಧಾ
ಮುಧಾ ಪ್ರಾಣಿವಧೇನ ಕಿಮ್ ।
ಇತ್ಯೂಹೇನ ವಿರಕ್ತೋಭೂ-
ದ್ಗತ್ಯಧೀನಂ ಹಿ ಮಾನಸಮ್ ॥೨೫॥

ಟೀ॥ ಅಥ–ಅನಂತರದಲ್ಲಿ, ಯೋದ್ಧಾ- ಯುದ್ಧವನ್ನು ಮಾಡುತಲಿರುವ ವೀರನಾದ ಸತ್ಯಂಧರನು, ಚಿರಂ–ಬಹುಕಾಲಪರ್ಯಂತವೂ, ಯುದ್ಧ್ವಾ– ಯುದ್ಧಮಾಡಿ, ಮುಧಾ–ವ್ಯರ್ಥವಾಗಿ, ಪ್ರಾಣಿವಧೇನ – ಪ್ರಾಣಿಗಳ ಸಂಹಾರದಿಂದ, ಕಿಂ–ಏನು ಪ್ರಯೋಜನವು?, ಇತಿ–ಹೀಗೆಂದು, ಊಹೇನ–ವಿಚಾರದಿಂದ, ವಿರಕ್ತಸ್ಸನ್–ವೈರಾಗ್ಯವುಳ್ಳವನಾಗಿ, ಅಭೂತ್-ಆದನು., ಮಾನಸಂ–ಮನಸ್ಸು, ಗತ್ಯಧೀನಂಹಿ ಮುಂದೆ ಉಂಟಾಗುವಗತಿಗೆ ಅನುಕೂಲವಾಗಿ ಪ್ರವರ್ತಿಸುವುದಲ್ಲವೆ?.

ತಾತ್ಪರ್ಯ॥ ಯುದ್ಧದಲ್ಲಿ ಮಹಾಸಮರ್ಥನಾದ ಸತ್ಯಂಧರ ಮಹಾರಾಜನು ಬಹುಕಾಲ ಯುದ್ಧಮಾಡಿ ವ್ಯರ್ಥವಾಗಿ ಪ್ರಾಣಿಗಳನ್ನು ಕೊಲ್ಲಕೂಡದೆಂದು ಪರ್ಯಾಲೋಚಿಸಿ ರಾಗದ್ವೇಷಾದಿಗಳನ್ನು ತೊರೆದನು. ಆವರೆ ಮನಸ್ಸು ಮುಂದಲಗತಿಗೆ ತಕ್ಕಹಾಗೆ ಪ್ರವರ್ತಿಸುವುದಲ್ಲವೆ. ೨೫॥

ಶ್ಲೋಕ॥ ವಿಷಯಾಸಙ್ಗದೋಷೋಯಂ
ತ್ವಯ್ಯೇವ ವಿಷಯಾತ್ಮಕಃ ।
ಸಾಂಪ್ರತಂ ವಾ ವಿಷಪ್ರಾಯೋ
ಮುಂಚಾತ್ಮನ್ವಿಷಯೇ ಸ್ಪೃಹಾಮ್ ॥೨೬॥

ಟೀ॥ ಹೇ ಆತ್ಮನ್!–ಎಲೈ ಆತ್ಮನೇ!, ಅಯಂವಿಷಯಾಸಂಗದೋಷಃ–ಈ ಸ್ತ್ರೀ ಮೊದಲಾದ ಭೋಗ್ಯವಸ್ತುಗಳ [illegible], ತ್ವಯ್ಯೇವ–ನಿನ್ನಿಂದಲೇ, ವಿಷಯಾತ್ಮಕಃ–[illegible], ಸಾಂಪ್ರ

ತುವಾ-ಈಗಲಾದರೂ, ವಿಷಪ್ರಖ್ಯೇ-ವಿಷಸಮಾನವಾದ, ವಿಷಯೇ-ಸ್ತ್ರೀಮೊದ
ಲಾದವಿಷಯಗಳಲ್ಲಿ, ಸ್ಪೃಹಾಂ-ಆಶೆಯನ್ನು, ಮುಂಚ-ಬಿಡು.

ತಾತ್ಪರ್ಯ॥ ಎಲೈ ಆತ್ಮನೆ! ಕಾಮನಿಂದ ಸಂಭವಿಸತಕ್ಕ ಅನ
ರ್ಥಗಳನ್ನು ನೀನೇ ಪ್ರತ್ಯಕ್ಷವಾಗಿ ಅನುಭವಿಸಿದೆ. ಇನ್ನುಮೇಲಾದ
ರೂ ವಿಷಸದೃಶವಾದ ಈಭೋಗದಲ್ಲಿ ದುರಾಶೆಯನ್ನುಬಿಡು. ॥ ೬೬ ॥

ಶ್ಲೋಕ ॥ ಭುಕ್ತಪೂರ್ವಮಿದಂ ಸರ್ವಂ
ತ್ವಯಾತ್ಮನ್ ಭುಜ್ಯತೇ ತತಃ ।
ಉಚ್ಛಿಷ್ಟಂ ತ್ಯಜ್ಯತಾಂ ರಾಜ್ಯ
ಮನಂತಾಹ್ಯಸುಭೃದ್ಭವಾಃ ॥ ೬೭ ॥

ಟೀ ॥ ಹೇ ಆತ್ಮನ್-ಎಲೈ ಆತ್ಮನೇ! ತ್ವಯಾ-ನಿನ್ನಿಂದ, ಭುಕ್ತಪೂರ್ವಂ-ಪೂ
ರ್ವದಲ್ಲಿ ಅನುಭವಿಸಲ್ಪಟ್ಟ, ಇದಂಸರ್ವಂ-ಈ ಸಮಸ್ತ ವಸ್ತುವೂ, ಭುಜ್ಯತೇ- ಅನು
ಭವಿಸಲ್ಪಡುತ್ತಬೆ., ತತಃ-ಆದಕಾರಣದ ದೆಸೆಯಿಂದ, ಉಚ್ಛಿಷ್ಟಂ- ಎಂಜಲಿಗೆ ಸ
ಮಾನವಾದ, ರಾಜ್ಯಂ-ರಾಜ್ಯವು, ತ್ಯಜ್ಯತಾಂ-ಬಿಡಲ್ಪಡಲಿ., ಅಸುಭೃದ್ಭವಾಃ-
ಪ್ರಾಣಿಗಳಿಗೆ ಜನ್ಮಗಳು, ಅನಂತಾಹಿ-ಅಪರಿಮಿತಗಳಲ್ಲವೆ?.

ತಾತ್ಪರ್ಯ॥ ಎಲೈ ಆತ್ಮನೆ! ಪ್ರಾಣಿಗಳಿಗೆ ಜನ್ಮಗಳು ಅಸಂಖ್ಯಾಕವಾ
ದುದರಿಂದ ಪೂರ್ವಪೂರ್ವಜನ್ಮಗಳಲ್ಲಿ ನಿನ್ನಿಂದನುಭವಿಸಲ್ಪಟ್ಟರಾಜ್ಯಾದಿ
ಭೋಗಗಳೇ ಅಲ್ಲವೆ ಉತ್ತರೋತ್ತರ ಜನ್ಮಗಳಲ್ಲಿಯೂ, ಅನುಭವಿಸಲ್ಪ
ಡುತ್ತೆ?. ಆದುದರಿಂದ ಭುಕ್ತಶೇಷವಾದ ಈ ರಾಜ್ಯಾದಿಗಳಲ್ಲಿ ಎಂಜಲಿ
ನತೆರದಿ ಜಿಹಾಸೆಯೇ ಉಚಿತವು. ॥ ೬೭ ॥

ಶ್ಲೋಕ ॥ ಅವಶ್ಯಂ ಯದಿ ನಶ್ಯಂತಿ
ಸ್ಥಿತ್ವಾಪಿ ವಿಷಯಾಶ್ಚಿರಮ್ ।
ಸ್ವಯಂ ತ್ಯಾಜ್ಯಾಸ್ತಥಾ ಹಿ ಸ್ಯಾ-
ನ್ಮುಕ್ತಿಸ್ಸಂಸೃತಿರನ್ಯಥಾ ॥ ೬೮ ॥

ಟೀ ॥ ವಿಷಯಾಃ-ಸ್ತ್ರೀ ಮೊದಲಾದ ಭೋಗೋಪಭೋಗಪದಾರ್ಥಗಳು,
ಚಿರಂ-ಬಹುಕಾಲಪರ್ಯಂತವೂ, ಸ್ಥಿತ್ವಾಪಿ-ಇದ್ದಾಗ್ಯೂ ಕೂಡ, ಅವಶ್ಯಂ-ನಿಯತ

ವಾಗಿ, ನಶ್ವರಿತ್ಯುದಿ-ನಾಶವನ್ನು ಹೊಂದುವರ್ದೇ ಆದರೆ, ಸ್ವಯಂ-ತಾನಾಗಿಯೇ ತ್ಯಾಜ್ಯಾಃ-ಬಿಡಲಿಕ್ಕೆಯೋಗ್ಯಗಳು, ತಥಾಹಿ-ಹಾಗಾದರೆ, ಮುಕ್ತಿಃ-ಮೋಕ್ಷವು ಸ್ಯಾತ್-ಆದೀತು, ಅನ್ಯಥಾ-ಹಾಗೆ ಬಿಡದೇ ಇದ್ದಲ್ಲಿ, ಸಂಸೃತಿಃ-ಸಂಸಾರವು, ಸ್ಯಾತ್-ಆದೀತು.?

ತಾತ್ಪರ್ಯ ॥ ರಾಜ್ಯಾದಿಭೋಗವಿಷಯಗಳು ಅವಶ್ಯವಾಗಿ ಕೊನೆಗೂ ನಾಶವನ್ನೇ ಹೊಂದತಕ್ಕವಾದುದರಿಂದ ನಾವಾಗಿಯೇ ಬಿಡುವುದುಚಿತವು. ನಾವೇ ವಿರಕ್ತರಾಗಿ ಪರಿತ್ಯಜಿಸಿದರೆ ಮೋಕ್ಷವು ಪ್ರಾಪ್ತವಾಗುವುದು. ಇಲ್ಲದಿದ್ದರೆ ಸಂಸಾರವೇ ಪ್ರಾಪ್ತವಾಗುವುದು.॥ ೬೪ ॥

ಶ್ಲೋಕ॥ ತ್ಯಜ್ಯತೇ ರಜ್ಯಮಾನೇನ
ರಾಜ್ಯೇನಾನ್ಯೇನವಾ ಜನಃ ।
ಭಜ್ಯತೇ ತ್ಯಜ್ಯಮಾನೇನ
ತತ್ತ್ಯಾಗೋಸ್ತು ವಿವೇಕಿನಾಮ್ ॥ ೬೫ ॥

ಟೀ ॥ ಜನಃ-ಜನವು, ರಜ್ಯಮಾನೇನ-ಪ್ರೀತಿ ವಿಷಯವಾಗಿ ಮಾಡಲ್ಪಟ್ಟ, ರಾಜ್ಯೇನ-ರಾಜ್ಯದಿಂದಲಾಗಲೀ, ಅನ್ಯೇನವಾ-ಇತರ ಭೋಗೋಪಭೋಗಪದಾರ್ಥದಿಂದಲಾಗಲಿ, ತ್ಯಜ್ಯತೇ- ಬಿಡಲ್ಪಡುವುದು, ತ್ಯಜ್ಯಮಾನೇನ-ಬಿಡಲ್ಪಡುತ್ತಿರುವ ಅನಿಷ್ಟವಾದ ದುಃಖಾದಿಗಳಿಂದ, ಭಜ್ಯತೆ-ಸೇವಿಸಲ್ಪಡುವುದು, ತತ್-ಆಪಕಾರಣದಸೆಯಿಂದ, ವಿವೇಕಿನಾಂ-ತತ್ವಜ್ಞಾನಿಗಳಿಗೆ, ತ್ಯಾಗಃ-ವಿಷಯ ವೈರಾಗ್ಯವು, ಅಸ್ತು-ವುಂಟಾಗಲಿ.

ತಾತ್ಪರ್ಯ ॥ ಜನಗಳು ಅತ್ಯಾಶೆಪಟ್ಟು ಪಡೆಯುವ ರಾಜ್ಯಾದಿಗಳಿಂದ ಬಿಡಲ್ಪಡುವರು. ನಮಗೆಂದಿಗೂ ಬೇಡವೆಂದು ಬಿಡಲ್ಪಡುತಿರುವ ದುಃಖವೇ ಮೊದಲಾದ ಅನಿಷ್ಟಗಳಿಂದ ಬಿಡದೇ ಆಕ್ರಮಿಸಲ್ಪಡುವರು. ಆದುದರಿಂದ ವಿವೇಕಿಗಳಿಗೆ ರಾಜ್ಯಾದಿಭೋಗೋಪ ಭೋಗಪದಾರ್ಥಗಳಲ್ಲಿವೈರಾಗ್ಯವೇಉಚಿತವು. (ರಾಗಕ್ಕೆದುಃಖವೇಫಲವೆಂದುಭಾವವು)॥೬೫॥

ಶ್ಲೋಕ ॥ ಇತಿ ಭಾವನಯಾ ರಾಜಾ
ವೈರಾಗ್ಯಂ ಪರಮಿಾಯಿವಾನ್ ।

ತ್ಯಕ್ತ್ವಾ ಸಂಗಂ ನಿಜಾಙ್ಗಂ ಚ
ದಿವ್ಯಾಂ ಸಂಪದಮಾಸದತ್ ॥ ೨೦ ॥

ಟೀ ॥ ಇತಿ-ಈ ಪ್ರಕಾರ, ಭಾವನಯಾ-ಭಾವಿಸೋಣವರಿಂದ, ರಾಜಾ-ಸತ್ಯಂಧರನು, ಪರಂ-ಉತ್ಕೃಷ್ಟವಾದ, ವೈರಾಗ್ಯಂ-ಭೋಗಾಶಾಪರಿತ್ಯಾಗವನ್ನು, ಈಯಿವಾನ್-ಹೊಂದಿದನು., ಸಂಗಂ-ವಿಷಯಾಸಕ್ತಿಯನ್ನು, ನಿಜಾಂಗಂಚ-ತನ್ನ ಶರೀರವನ್ನು ಕೂಡ, ತ್ಯಕ್ತ್ವಾ-ಬಿಟ್ಟು, ದಿವ್ಯಾಂ - ದೇವಸಂಬಂಧವಾದ, ಸಂಪದಂ-ಸಂಪತ್ತನ್ನು, ಆಸದತ್-ಪಡೆದನು.

ತಾತ್ಪರ್ಯ ॥ ಮಹಾರಾಜನಾದ ಸತ್ಯಂಧರನು ಈಪ್ರಕಾರ ಭಾವಿಸಿ ಉತ್ಕೃಷ್ಟವಾದ ವೈರಾಗ್ಯವನ್ನೈದಿ, ವಿಷಯಸಂಗವನ್ನೂ, ತನ್ನ ಶರೀರವನ್ನೂಕೂಡ ಬಿಟ್ಟು ದೇವಶ್ರೀಯನ್ನು ಹೊಂದಿದನು. ॥೨೦॥

ಶ್ಲೋಕ ॥ ಪೌರಾ ಜಾನಪದಾಸ್ಸರ್ವೇ
ನಿರ್ವೇದಂ ಪ್ರತಿಪೇದಿರೇ ।
ಪೀಡಾಹ್ಯಭಿನವಾ ನೄಣಾಂ
ಪ್ರಾಯೋವೈರಾಗ್ಯಕಾರಣಮ್ ॥ ೨೧ ॥

ಟೀ ॥ ಪೌರಾಃ- ಪಟ್ಟಣವಾಸಿಜನಗಳೂ, ಜಾನಪದಾಃ-ದೇಶವಳ್ಳಿರುವಜನಗಳೂ, ಸರ್ವೇ-ಸಮಸ್ತರೂ, ನಿರ್ವೇದಂ-ವೈರಾಗ್ಯವನ್ನು, ಪ್ರತಿಪೇದಿರೇ-ಹೊಂದಿದರು., ಅಭಿನವಾ-ನೂತನವಾದ, ಪೀಡಾ-ದುಃಖವು, ನೄಣಾಂ-ಮನುಷ್ಯರಿಗೆ, ಪ್ರಾಯಃ-ಬಹಳವಾಗಿ, ವೈರಾಗ್ಯಕಾರಣಂಹಿ-ವೈರಾಗ್ಯಕ್ಕೆ ಕಾರಣವಲ್ಲವೆ?.

ತಾತ್ಪರ್ಯ ॥ ಸತ್ಯಂಧರಮಹಾರಾಜನ ಮರಣ ದುಃಖದಿಂದ ಸಮಸ್ತಪ್ರಜೆಗಳೂ ವೈರಾಗ್ಯವನ್ನು ಹೊಂದಿದರು. ನೂತನದುಃಖವು ಪ್ರಾಯಶಃ ಮನುಷ್ಯರಿಗೆ ವೈರಾಗ್ಯಕಾರಣವಾಗುವುದಲ್ಲವೆ ? ॥ ೨೧ ॥

ಶ್ಲೋಕ ॥ ಅಧಿಸ್ತ್ರೀರಾಗಃ ಕ್ರೂರೋಯಂ
ರಾಜ್ಯಂ ಪ್ರಾಜ್ಯಮಸೂನಪಿ ।
ತದ್ವ್ಯಂಚಿತಾ ಹಿ ಮುಞ್ಚನ್ತಿ
ಕಿಂ ನ ಮುಞ್ಚನ್ತಿ ರಾಗಿಣಃ ॥ ೨೨ ॥

ಟೀ ॥ ಅಯಂ-ಈ ಅನುಭವಸಿದ್ಧವಾದ, ಅಧಿಸ್ತ್ರಿ - ಸ್ತ್ರೀಯಲ್ಲಿ ಉಂಟಾದ, ರಾಗಃ-ಪ್ರೀತಿಯು, ಕ್ರೂರಃ-ಕ್ರೂರವಾದದ್ದು, ತದ್ವಂಚಿತಾಃ-ಆ ಸ್ತ್ರೀ ಮೋಹ ಕ್ಕೆ ವಶ್ಯರಾದವರು, ಪ್ರಾಜ್ಯಂ-ಶ್ರೇಷ್ಠವಾದ, ರಾಜ್ಯಂ- ರಾಜ್ಯವನ್ನೂ, ಅಸೂನ ಪಿ-ಪ್ರಾಣಗಳನ್ನೂ ಕೂಡ, ಮುಂಚನ್ತಿಹಿ-ಬಿಡುವರಲ್ಲವೆ?, ರಾಗಿಣಃ-ಕಾಮುಕ ರು-ಕಿಂ-ಯಾವುದನ್ನು, ನಮುಂಚನ್ತಿ-ಬಿಡುವುದಿಲ್ಲವು?.

ತಾತ್ಪರ್ಯ ॥ ಸ್ತ್ರೀಮೋಹವು ಬಹಳಕೆಟ್ಟದ್ದು. ಸ್ತ್ರೀಮೋಹಿತರು ಉತ್ಕೃಷ್ಟವಾದರಾಜ್ಯವನ್ನೂ, ತಮ್ಮ ಪ್ರಾಣಗಳನ್ನೂಕೂಡ ಬಿಡುವರು. ಆದುದರಿಂದ ಕಾಮುಕರು ಕಾಮಪುರುಷಾರ್ಥಕ್ಕಾಗಿ ಯಾವುದನ್ನುಬಿಡುವುದಿಲ್ಲವು?. ( ಸಮಸ್ತವನ್ನೂ ಬಿಡುತ್ತಾರೆಂದು ಭಾವವು. ) ॥ ೨೦ ॥

ಶ್ಲೋಕ ॥ ನಾರೀ ಜಘನರನ್ಧ್ರಸ್ಥ
ವಿಣ್ಮೂತ್ರಮಯ ಚರ್ಮಣಾ ।
ವರಾಹ ಇವ ವಿಡ್ಭಕ್ಷೀ
ಹನ್ತ ಮೂಢಸ್ಸುಖಾಯತೇ ॥ ೨೩ ॥

ಟೀ ॥ ಮೂಢಃ- ಅವಿವೇಕಿಜನವು, ನಾರೀಜಘನರಂಧ್ರಸ್ಥವಿಣ್ಮೂತ್ರಮಯಚರ್ಮಣಾ-ನಾರೀ-ಸ್ತ್ರೀಯ, ಜಘನ-ಕಟಿಪುರೋಭಾಗದಲ್ಲಿ, ರಂಧ್ರ-ರಹಸ್ಯಸ್ಥಾನವಾದ ರಂಧ್ರದೊಳು, ಸ್ಥ-ಇರುತಲಿರುವ, ವಿಟ್-ಅಮೇಧ್ಯದಿಂದಲೂ, ಮೂತ್ರ-ಮೂತ್ರದಿಂದಲೂ, ಮಯ-ಪ್ರಚುರವಾದ, ಚರ್ಮಣಾ-ತೊಗಲಿನಿಂದ, ವಿಡ್ಭಕ್ಷೀ ಅಮೇಧ್ಯಭಕ್ಷಣ ಮಾಡುತಲಿರುವ, ವರಾಹಇವ-ಹಂದಿಯೋಪಾದಿಯಲ್ಲಿ, ಸುಖಾಯತೇ-ತನ್ನನ್ನು ಸುಖಿಯನ್ನಾಗಿ ತಿಳಿಯುತ್ತಾನೆ., ಹನ್ತ!-ಆಶ್ಚರ್ಯವು !!.

ತಾತ್ಪರ್ಯ ॥ ಸ್ತ್ರೀಯ ಕಟಿಪುರೋಭಾಗದಲ್ಲಿರುವ ಮಲಮೂತ್ರಮಯವಾದ ಚರ್ಮದಿಂದ ಮುಚ್ಚಲ್ಪಟ್ಟ ಗುಹ್ಯಾವಯವದಲ್ಲಿ ರಮಿಸಿ ಸಂತೋಷಿಸುವ ಮೂಢಜನಗಳು ಅಮೇಧ್ಯವನ್ನು ಭಕ್ಷಿಸಿ ಸಂತೋಷ ಪಡುತಲಿರುವ ಹಂದಿಗೆ ಸಮಾನರು. ॥ ೨೩ ॥

ಶ್ಲೋಕ ॥ ಕಿಂ ಕೀದೃಶಂ ಕಿಯತ್ಕ್ವೇತಿ
ವಿಚಾರೇಸತಿ ದುಸ್ಸಹಮ್ ।

ಅವಿಚಾರಿತರಮ್ಯಂ ಹಿ
ರಾಮಾಸಂಪರ್ಕಜಂ ಸುಖಮ್ ॥ ೨೪ ॥

ಟೀ ॥ ರಾಮಾಸಂಪರ್ಕಜಂ-ಸ್ತ್ರೀಸಂಯೋಗದಿಂದುಂಟಾಗುವ, ಸುಖಂ-ಸುಖವು, ಕಿಂ-ಯಾವುದು?, ಕೀದೃಶಂ-ಯಾವರೀತಿಯಾದದ್ದು?, ಕಿಯತ್-ಎಷ್ಟುಮಾತ್ರವಾದದ್ದು?, ಕ್ವ-ಎಲ್ಲಿ ಉಂಟಾದದ್ದು?, ಇತಿ-ಈಪ್ರಕಾರ, ವಿಚಾರೇಸತಿ-ವಿಚಾರಮಾಡುತ್ತಿರಲಾಗಿ, ದುಸ್ಸಹಂ-ಸಹಿಸಲಶಕ್ಯವು., ಅವಿಚಾರಿತರಮ್ಯಂಹಿ-ತತ್ವಸ್ಥಿತಿಯನ್ನುಜಿಜ್ಞಾಸೆಮಾಡದೇಇದ್ದಲ್ಲಿ ರಮಣೀಯವಲ್ಲವೆ?.

ತಾತ್ಪರ್ಯ ॥ ಸ್ತ್ರೀಸಂಭೋಗದಿಂದುಂಟಾಗುವ ಸುಖವನ್ನು ಇದು ಯಥಾರ್ಥವಾಗಿ ಸುಖವೆ? ಸುಖಭ್ರಾಂತಿಯೆ? ಇದು ಯಾವಪ್ರಕಾರವಾದದ್ದು? ಈ ಸುಖವು ಎಷ್ಟುಮಾತ್ರವಾದದ್ದು? ಇದು ಉತ್ಕೃಷ್ಟಸ್ಥಾನದಲ್ಲಿ ಉಂಟಾದದ್ದೊ? ಮಲಮೂತ್ರಮಯವಾದ ಹೇಯಸ್ಥಾನದಲ್ಲುಂಟಾದದ್ದೊ? ಎಂದು ವಸ್ತುಸ್ಥಿತಿಯನ್ನು ಪರಿಶೋಧಿಸುವಲ್ಲಿ ಅತ್ಯಂತ ಅಸಹ್ಯಕರವಾಗಿರುವುದು; ವಿಚಾರಮಾಡದೆ ಇದ್ದಲ್ಲಿ ಮನೋಹರವು. (ವಿಚಾರಮಾಡಿದರೆ ಅತಿಹೇಯಸ್ಥಾನದಲ್ಲಿ ಅತ್ಯಲ್ಪಕಾಲ ಅನುಭವಿಸತಕ್ಕದುದಾಗಿ ಸುಖಾಭಾಸಸ್ವರೂಪವೆಂದು ಭಾವವು.) ॥ ೨೪ ॥

ಶ್ಲೋಕ ॥ ನಿವಾರಿತಾಪ್ಯಕೃತ್ಯೇಸ್ಯಾ-
ನ್ನಿಷ್ಫಲಾ ದುಷ್ಫಲಾ ಚ ಧೀಃ ।
ಕೃತ್ಯೇ ತು ನಾಪಿ ಯತ್ನೇನ
ಕೋತ್ರ ಹೇತುರ್ನಿರೂಪ್ಯತಾಮ್ ॥ ೨೫ ॥

ಟೀ ॥ ಧೀಃ-ಬುದ್ಧಿಯು, ಅಕೃತ್ಯೇ-ಕೆಟ್ಟಕೆಲಸದಲ್ಲಿ, ನಿವಾರಿತಾಪಿ-ತಡೆಯಲ್ಪಟ್ಟಾಗ್ಯೂ, ನಿಷ್ಫಲಾ-ಒಳ್ಳೇ ಫಲವಿಲ್ಲದ್ದಾಗಿಯೂ, ದುಷ್ಫಲಾಚ-ಕೆಟ್ಟಫಲವುಳ್ಳದ್ದಾಗಿಯೂ, ಸ್ಯಾತ್-ಪ್ರವರ್ತಿಸೀತು., ಕೃತ್ಯೇತು-ಸತ್ಕಾರ್ಯದಲ್ಲಾದರೋ, ಯತ್ನೇನಾಪಿನ-ಪ್ರಯತ್ನದಿಂದಲೂ ಕೂಡ ಪ್ರವರ್ತಿಸುವುದಿಲ್ಲವು., ಅತ್ರ-ಈ ವಿಷಯದಲ್ಲಿ, ಹೇತುಃ-ಕಾರಣವು, ಕಃ-ಯಾವುದು?, ನಿರೂಪ್ಯತಾಂ-ನಿರೂಪಿಸಲ್ಪಡಲಿ.

ತಾತ್ಪರ್ಯ ॥ ಬುದ್ಧಿಯು ಪಾಪಕೃತ್ಯದಲ್ಲಿ ತಡೆಯಲ್ಪಟ್ಟಾಗ್ಯೂ ಒಳ್ಳೇಫಲವಿಲ್ಲದೆ ಕೆಟ್ಟಫಲ ಉಂಟಾಗತಕ್ಕದ್ದಾಗಿದ್ದರೂಕೂಡ ಸ್ವಾರಸಿಕವಾಗಿ ಪ್ರವರ್ತಿಸುತ್ತದೆ. ಸತ್ಕಾರ್ಯದಲ್ಲಿ ಪ್ರಯತ್ನಪಟ್ಟಾಗ್ಯೂ ಬು

ದ್ಧಿಯುಂಟಾಗುವುದಿಲ್ಲವು. ಇದಕ್ಕೇನು ಕಾರಣವೊ? ನಿರ್ಣಯಿ ಸಲ್ಪಡಲಿ. ॥ ೨೫ ॥

ಶ್ಲೋಕ॥ ನಿಶ್ಚಿತ್ಯಾಪ್ಯಘಹೇತುತ್ವಂ
ದುಶ್ಚಿತ್ತಾನಾಂ ನಿವಾರಣೇ ।
ಯೇನಾತ್ಮನ್ನಿಪುಣೋನಾಸಿ
ತದ್ಧಿ ದುಷ್ಕರ್ಮವೈಭವಮ್[6] ॥ ೨೬ ॥

ಟೀ ॥ ಹೇ ಆತ್ಮನ್-ಎಲೈ ಆತ್ಮನೇ !, ಅಘಹೇತುತ್ವಂ-ಪಾಪಕ್ಕೆ ಕಾರಣವಾಗಿರುವಿಕೆಯನ್ನು, ನಿಶ್ಚಿತ್ಯಾಪಿ-ನಿಶ್ಚಯಿಸಿಯೂ ಕೂಡ, ದುಶ್ಚಿತ್ತಾನಾಂ- ದುಶ್ವಿಷಯದಲ್ಲಿ ಪ್ರವರ್ತಿಸುವ ಮನಸ್ಸುಗಳ, ನಿವಾರಣೇ-ತಡೆಯೋಣದರಲ್ಲಿ, ಯೇನ-ಯಾವಕಾರಣದಿಂದ, ನಿಪುಣಃ-ಸಮರ್ಥನಾಗಿ, ನಾಸಿ-ಆಗುವದಿಲ್ಲವೋ, ತತ್-ಆ ಕಾರಣವು, ದುಷ್ಕರ್ಮವೈಭವಂಹಿ. ಪಾಪಕರ್ಮದ ಮಹಿಮೆಯುಲ್ಲವೆ?.

ತಾತ್ಪರ್ಯ ॥ ಎಲೈ ಆತ್ಮನೆ! ಕೆಟ್ಟಕೆಲಸದಲ್ಲಿ ಪ್ರವರ್ತಿಸುವುದು ಪಾಪಕ್ಕೆಕಾರಣವೆಂದು ತಿಳದಿದ್ದಾಗ್ಯೂ ದುಷ್ಟಮನಸ್ಸನ್ನು ತಡೆಯುವುದಕ್ಕೆ ನೀನು ಯಾವಕಾರಣದಿಂದ ಸಮರ್ಥನಾಗಲಿಲ್ಲವೋ ಆ ಕಾರಣವುಪಾಪಕರ್ಮದ ಮಹಿಮೆಯುಲ್ಲವೆ? (ಮನಸ್ಸು ಕರ್ಮಾಧೀನವಾಗಿ ಪ್ರವರ್ತಿಸುವದೆಂದು ಮುಖ್ಯಭಾವವು.)॥೨೬॥

ಶ್ಲೋಕ॥ ಹೇಯೇ ಸ್ವಯಂಸತೀಬುದ್ಧಿ-
ರ್ಯತ್ನೇನಾಪ್ಯಸತೀ ಶುಭೇ ।
ತದ್ಧೇತು ಕರ್ಮತದ್ವಂತ-
ಮಾತ್ಮಾನಮಪಿ ಸಾಧಯೇತ್[6] ॥ ೨೭ ॥

ಟೀ ॥ ಬುದ್ಧಿಃ- ಬುದ್ಧಿಯು, ಹೇಯೆ- ಕೆಟ್ಟಕೆಲಸದಲ್ಲಿ, ಸ್ವಯಂ- ತಾನೇ, ಸತೀ-ಉಂಟಾಗುತ್ತದೆ., ಶುಭೇ-ಒಳ್ಳೇಕೆಲಸದಲ್ಲಿ, ಯತ್ನೇನಾಪಿ-ಪ್ರಯತ್ನದಿಂದಲೂ ಕೂಡ, ಅಸತೀ-ಉಂಟಾಗುವದಿಲ್ಲವು., ತದ್ಧೇತುಕರ್ಮ- ಅದಕ್ಕೆ ಕಾರಣವಾದಕರ್ಮವು, ತದ್ವಂತಂ-ಆ ಕರ್ಮಕ್ಕೆ ಆಶ್ರಯವಾದಂಥ, ಆತ್ಮಾನಮಪಿ-ಆತ್ಮನನ್ನೂಕೂಡ, ಸಾಧಯೇತ್-ಸಾಧಿಸೀತು.

---

ಯೇನಾತ್ಮನ್ನಿಪುಣೋನಾಸೀತ್ „ ಎಂದು ಪಾಠಾಂತರವು.

ತಾತ್ಪರ್ಯ ॥ ಬುದ್ಧಿಯು ಕೆಟ್ಟಕೆಲಸದಲ್ಲಿ ತಾನಾಗಿಯೇ ಪ್ರವರ್ತಿಸುತ್ತದೆ. ಒಳ್ಳೇಕೆಲಸದಲ್ಲಿ ಬಲಾತ್ಕಾರದಿಂದಲೂ ಉಂಟಾಗುವದಿಲ್ಲವು. ಅದಕ್ಕೆ ಕಾರಣವು ಜನ್ಮಾಂತರ ಕರ್ಮವೇ. ಆ ಕರ್ಮವು ಪೂರ್ವ ಜನ್ಮದ ದೇಹಾದಿಗಳು ಆಗಲೇ ನಷ್ಟವಾದುದರಿಂದ ನಿತ್ಯವಾದ ಆತ್ಮನನ್ನು ಆಶ್ರಯಿಸಿ ಶುಭಾಶುಭಕೃತ್ಯಗಳಲ್ಲಿ ವಿಹಿತನಿವೃತ್ತಿಯನ್ನೂ, ನಿಷಿದ್ಧಪ್ರವರ್ತನೆಯನ್ನೂ ಉಂಟುಮಾಡುವುದು. ಇದರಿಂದಜೀವನು ಅನಿತ್ಯವಾದ ದೇಹಾದಿಗಳಿಗಿಂತಲೂ ಬೇರೆಯೆಂತಲೂ, ನಿತ್ಯವಸ್ತುವೆಂತಲೂ, ಚೈತನ್ಯಗುಣವುಳ್ಳವನೆಂತಲೂ, ಸಕಲ ಕರ್ಮಕರ್ತೃವೆಂತಲೂ, ಕರ್ಮಾಧೀನ ಪ್ರವೃತ್ತಿಯುಳ್ಳವನೆಂತಲೂ ಸಾಧಿಸಲ್ಪಡುತ್ತದೆ. ॥ ೭೭ ॥

ಶ್ಲೋಕ ॥ ಕೋಽಹಂ ಕೀದೃಗ್ಗುಣಃ ಕ್ವತ್ಯಃ
ಕಿಂ ಪ್ರಾಪ್ಯಃ ಕಿಂ ನಿಮಿತ್ತಕಃ ।
ಇತ್ಯೂಹಃ ಪ್ರತ್ಯಹಂ ನೋಚೇತ್
ಅಸ್ಥಾನೇ ಹಿ ಮತಿರ್ಭವೇತ್ ॥ ೭೮ ॥

ಟೀ ॥ ಅಹಂ-ನಾನು, ಕಃ-ಯಾರು? ಕೀದೃಗ್ಗುಣಃ-ಎಂಥಾಗುಣಉಳ್ಳವನು? ಕ್ವತ್ಯಃ-ಎಲ್ಲಿಯವನು? ಕಿಂಪ್ರಾಪ್ಯಃ-ಯಾವದನ್ನು ಪಡೆಯತಕ್ಕ ಫಲವನ್ನಾಗಿವುಳ್ಳವನು ,ಕಿಂನಿಮಿತ್ತಕಃ-ಪಡೆಯಲ್ಪಡುವಫಲಕ್ಕೆ ತಕ್ಕ ಯಾವಉಪಾಯಉಳ್ಳವನು? ಇತಿ-ಈಪ್ರಕಾರ, ಊಹಃ- ವಿಚಾರವು, ಪ್ರತ್ಯಹಂ- ಪ್ರತಿದಿನದಲ್ಲೂ, ನೋಚೇತ್- ಇಲ್ಲದೇಹೋದರೆ, ಅಸ್ಥಾನೆ-ಅಯೋಗ್ಯವಿಷಯದಲ್ಲಿ, ಮತಿಃ-ಬುದ್ಧಿಯು, ಭವೇದ್ಧಿ-ಉಂಟಾದೀತಲ್ಲವೆ ?.

ತಾತ್ಪರ್ಯ॥ ನಾನೆಂಬವಸ್ತುವಾದದ್ದು, ದೇಹೇಂದ್ರಿಯ ಮನಸ್ಸು ಪ್ರಾಣ ಬುದ್ಧಿಗಳಲ್ಲಿ ಯಾವುದಾದರೂ ಒಂದು ವಸ್ತುವಾಗಬಹುದೆ? ಅಥವಾ ಇವೆಲ್ಲಕ್ಕೂ ಆಧಾರನಾಗಿ, ನಿತ್ಯನಾಗಿ, ಪ್ರಭೆಗೆ ದೀಪದಂತೆ ಜ್ಞಾನವೆಂಬ ಗುಣಕ್ಕಾಶ್ರಯನಾಗಿ, ಸ್ವಯಂಪ್ರಕಾಶ ಪರಿಶುದ್ಧ ಸ್ವರೂಪನಾಗಿ, ಅನಂತಜ್ಞಾನಾದ್ಯಷ್ಟಮಹಾಗುಣಭಾಗಿಯಾಗಿ, ಸಕಲ ಕರ್ಮಕ್ಷಯವು ಪಡೆಯತಕ್ಕವನಾಗಿ, ರತ್ನತ್ರಯವೇ ಮತ್ತು ಧರ್ಮವೇ ಉಪಾಯವಾಗಿ ಉಳ್ಳವನೇ, ಎಂಬ ಈವಿಚಾರವು ಅನವರತದಲ್ಲೂ ಇಲ್ಲದೆಹೋದರೆ ಅಯೋಗ್ಯ

ವಾದಪಾಪಕೃತ್ಯದಲ್ಲಿ ಬುದ್ಧಿಯು ಉಂಟಾದೀತಲ್ಲವೆ? ಹೀಗೆ ಆತ್ಮವಿಚಾರಪರನಿಗೆ ಎಂದಿಗೂ ಪಾಪದಲ್ಲಿ ಬುದ್ಧಿಯುಂಟಾಗಲಾರದು. ॥ ೨೮ ॥

ಶ್ಲೋಕ ॥ ಮುಹ್ಯಂತಿ ದೇಹಿನೋ ಮೋಹಾತ್
ಮೋಹನೀಯೇನ ಕರ್ಮಣಾ ।
ನಿರ್ಮಿತಾನ್ನಿರ್ಮಿತಾಶೇಷ
ಕರ್ಮಣಾಧರ್ಮವೈರಿಣಾ ॥ ೨೯ ॥

ಟೀ ॥ ದೇಹಿನಃ-ಪ್ರಾಣಿಗಳು, ನಿರ್ಮಿತಾಶೇಷಕರ್ಮಣಾ- ನಿರ್ಮಿತ-ನಿರ್ಮಿಸಲ್ಪಟ್ಟ, ಅಶೇಷಕರ್ಮಣಾ-ಸಮಸ್ತ ಪಾಪಕೃತ್ಯಗಳುಳ್ಳ, ಮೋಹನೀಯೇನ-ಮೋಹನೀಯವೆಂಬ, ಧರ್ಮವೈರಿಣಾ-ಧರ್ಮಕ್ಕೆ ವಿರೋಧಿಯಾದ, ಕರ್ಮಣಾ-ಕರ್ಮದಿಂದ, ನಿರ್ಮಿತಾತ್-ಉಂಟುಮಾಡಲ್ಪಟ್ಟ, ಮೋಹಾತ್- ಅಜ್ಞಾನವಶದಿಂದ, ಮುಹ್ಯಂತಿ-ಮೋಹವನ್ನುಹೊಂದುತ್ತಾರೆ.

ತಾತ್ಪರ್ಯ ॥ ಪ್ರಾಣಿಗಳು ಅಜ್ಞಾನದಿಂದುತ್ಪನ್ನವಾಗಿ, ಧರ್ಮಕ್ಕೆ ವಿರೋಧಿಯಾಗಿ ಸಕಲ ಪಾಪಕರ್ಮಗಳಿಗೂ ಮುಖ್ಯಕಾರಣವಾದ ಮೋಹನೀಯವೆಂಬ ಕರ್ಮದಿಂದ ಮೋಹಪಡುವರು. ಅಜ್ಞಾನದಿಂದ ಸಕಲ ಪಾಪಕರ್ಮಹೇತುವಾದ ಮೋಹನೀಯಕರ್ಮವೂ, ಮೋಹನೀಯಕರ್ಮದಿಂದ ತಿರಿಗಿ ಅಜ್ಞಾನವೂ ಹೀಗೆ ಬೀಜಾಂಕುರನ್ಯಾಯದಿಂದ ಅನಾದಿಕರ್ಮಪ್ರವಾಹದಲ್ಲಿ ಆತ್ಮನು ತಿರುಗುತ್ತಿರುವನು. ॥ ೨೯॥

ಶ್ಲೋಕ ॥ ಕಿನ್ನುಕರ್ತುಂ ತ್ವಯಾರಬ್ಧಂ
ಕಿನ್ನು ವಾ ಕ್ರಿಯತೇಧುನಾ ।
ಆತ್ಮನ್ನಾರಬ್ಧಮುತ್ಸೃಜ್ಯ
ಹಂತ ಬಾಹ್ಯೇ ಹಿ ಮುಹ್ಯಸಿ ॥ ೩೦ ॥

ಟೀ ॥ ಹೇ ಆತ್ಮನ್-ಎಲೈಆತ್ಮನೆ!, ತ್ವಯಾ-ನಿನ್ನಿಂದ, ಕಿನ್ನುವಾ- ಯಾವಕೆಲಸವನ್ನಾದರೋ, ಕರ್ತುಂ-ಮಾಡಲೋಸುಗ, ಆರಬ್ಧಂ-ಪ್ರಾರಂಭಿಸಲ್ಪಟ್ಟಿತು?, ಅಧುನಾ-ಈಗ, ಕಿನ್ನುವಾ- ಯಾವಕೆಲಸವಾದರೋ, ಕ್ರಿಯತೆ- ಮಾಡಲ್ಪಡುತ್ತ? ಆರಬ್ಧಂ-ಆರಂಭಿಸಲ್ಪಟ್ಟಕೆಲಸವನ್ನು ಉತ್ಸೃಜ್ಯ-ಬಿಟ್ಟು, ಬಾಹ್ಯೆ-ಹೊರಗಿನವಿಷಯದಲ್ಲಿ, ಮುಹ್ಯಸಿ-ಮೋಹಪಡುತ್ತೀಯಲ್ಲಾ ಹಂತ-ಆಶ್ಚರ್ಯವು !!.

ತಾತ್ಪರ್ಯ ॥ ಎಲೈ ಆತ್ಮನೆ, ನೀನು ಯಾವಕೆಲಸವನಾರಂಭಿಸಿದೆ ? ಯಾವಕೆಲಸವಂ ಮಾಡುತ್ತೀಯೆ? ಆರಂಭಿಸಲ್ಪಟ್ಟ ಕೆಲಸವನ್ನು ಬಿಟ್ಟು ಸಂಸಾರ ವ್ಯಾಪಾರದಲ್ಲಿ ಮೋಹಪಡುತ್ತೀಯಲ್ಲವೆ? ॥ ೮೦ ॥

ಶ್ಲೋಕ॥ ಇದಮಿಷ್ಟಮನಿಷ್ಟಂವೇ
ತ್ಯಾತ್ಮನ್ಸಂಕಲ್ಪಯನ್ಮುಧಾ ।
ಕಿನ್ನು ಮೋಮುಹ್ಯಸೇ ಬಾಹ್ಯೇ
ಸ್ವಸ್ವಾಂತಂ ಸ್ವವಶೀಕುರು ॥ ೮೧ ॥

ಟೀ ॥ ಹೇಆತ್ಮನ್-ಎಲೈ ಆತ್ಮನೇ!, ಇದಂ-ಈವಸ್ತುವು, ಇಷ್ಟಂ-ಇಷ್ಟವಾದದ್ದು, ಇದಂವಾ-ಈವಸ್ತುವಾದರೋ, ಅನಿಷ್ಟಂ-ಅಭಿಮತವಾದುದಲ್ಲವು, ಇತಿ-ಹೀಗೆಂದು, ಮುಧಾ-ವ್ಯರ್ಥವಾಗಿ, ಸಂಕಲ್ಪಯನ್(ಸನ್)- ಸಂಕಲ್ಪಿಸುವವನಾಗಿ, ಬಾಹ್ಯೇ-ಹೊರಗಿನಸಾಂಸಾರಿಕವಿಷಯದಲ್ಲಿ, ಕಿನ್ನು-ಯಾತಕ್ಕೋಸುಗ, ಮೋಮುಹ್ಯಸೇ-ವಿಶೇಷಮೋಹಪಡುತ್ತೀಯೆ?, ಸ್ವಸ್ವಾಂತಂ- ಸ್ವೀಯವಾದಮನಸ್ಸನ್ನು, ಸ್ವವಶೀಕುರು-ಸ್ವಾಧೀನಮಾಡಿಕೊಳ್ಳುವವನಾಗು.

ತಾತ್ಪರ್ಯ ॥ ಎಲೈಆತ್ಮನೆ! ಈ ರಾಜ್ಯಸ್ತ್ರೀಮೊದಲಾದ ಐಶ್ವರ್ಯವು ನನಿಗೆಇಷ್ಟವು, ಇದು ನನಗೆ ವಿರೋಧಿಯು, ಇವನು ಶತ್ರುವು, ಇವನು ಮಿತ್ರನು, ಹೀಗೆಂದು ವ್ಯರ್ಥವಾಗಿ ಸಂಕಲ್ಪಿಸಿಕೊಂಡು ಯಾತಕ್ಕೋಸುಗ ಮೋಹಪಡುತ್ತೀಯೆ ? ನಿನ್ನ ಮನಸ್ಸನ್ನು ಈಪ್ರಕಾರವಾದ ರಾಗದ್ವೇಷಾದಿಗಳವಶಕ್ಕೆ ಕೊಡದೆ ಸ್ವಾಧೀನಪಡಿಸಿಕೊ. ರಾಗದ್ವೇಷಾದಿಗಳೆ ಮೂಲಕವಾಗಿಯೇಸಕಲಅನರ್ಥಗಳೂ ಸಂಭವಿಸುವುವು. ॥೮೧॥

ಶ್ಲೋಕ ॥ ಲೋಕದ್ವಯಾಹಿತೋತ್ಪಾದಿ
ಹನ್ತ ಸ್ವಾಂತಮಶಾಂತಿಮತ್ ।
ನ ದ್ವೇಕ್ಷಿ ದ್ವೇಕ್ಷಿ ತೇ ಮೌಢ್ಯಾ-
ದನ್ಯಂ ಸಂಕಲ್ಪ್ಯ ವಿದ್ವಿಷಮ್ ॥೮೨॥

ಟೀ ॥ ಹೇ ಆತ್ಮನ್-ಎಲೈ ಆತ್ಮನೆ!, ಲೋಕದ್ವಯಾಹಿತೋತ್ಪಾದಿ—ಈಲೋಕಪರಲೋಕಗಳೆರಡಕ್ಕೆಯೂ ಕೇಡನ್ನುಂಟುಮಾಡತಕ್ಕುದಾದ, ಅಶಾಂತಿಮತ್-ರಾಗದ್ವೇಷೋಪಹತವಾದ, ಸ್ವಾಂತಂ-ಮನಸ್ಸನ್ನುಕುರಿತು, ನದ್ವೇಕ್ಷಿ-ದ್ವೇಷ

ಪಡುವುದಿಲ್ಲವು, ತೇ-ನಿನ್ನ, ಮೌಢ್ಯಾತ್-ಮೂಢತ್ವದೆಸೆಯಿಂದ, ಅನ್ಯಂ- ಇತರನನ್ನು, ವಿದ್ವಿಷಂ(ಸನ್ತಂ)-ಶತ್ರುವನ್ನಾಗಿ, ಸಂಕಲ್ಪ್ಯ-ಭಾವಿಸಿಕೊಂಡು, ದ್ವೇಕ್ಷಿ-ದ್ವೇಷಪಡುತ್ತೀಯೆ?, ಹಂತ-ಆಶ್ಚರ್ಯವು!!.

ತಾತ್ಪರ್ಯ॥ ತತ್ವವಿಚಾರ ಮಾಡುವಲ್ಲಿ ಈಲೋಕ ಪರಲೋಕಗಳಲ್ಲಿಯೂ ಕೇಡನ್ನುಂಟುಮಾಡುವುದು ಕಷಾಯಿತವಾದ ನಮ್ಮ ಮನಸ್ಸೇಯೆ. ಆದುದರಿಂದ ಆತ್ಮನಿಗೆ ರಾಗದ್ವೇಷಾದಿ ಕಷಾಯಕಲುಷಿತವಾದ ತನ್ನಮನಸ್ಸೇ ಶತ್ರುವು. ಅದೇ ಕಷಾಯರಹಿತವಾದರೆ ಮಿತ್ರನು. ಇದನ್ನರಿಯದೆ ವ್ಯರ್ಥವಾಗಿ ಅನ್ಯನನ್ನು ದ್ವೇಷಿಯೆಂದು ತಿಳಿದು ದ್ವೇಷಪಡುವುದು. ನ್ಯಾಯ ಪರ್ಯಾಲೋಚನೆ ಮಾಡುವಲ್ಲಿ ತನ್ನ ಮನಸ್ಸನ್ನೇಕುರಿತು ದ್ವೇಷಿಸಬೇಕು. ॥೮೨॥

ಶ್ಲೋಕ ॥ ಅನ್ಯದೀಯಮಿವಾತ್ಮೀಯ-
ಮಪಿದೋಷಂ ಪ್ರಪಶ್ಯತಾ ।
ಕಃ ಸಮಃ ಖಲು ಮುಕ್ತೋಯಂ
ಯುಕ್ತಃ ಕಾಯೇನ ಚೇದಪಿ ॥೮೩॥

ಟೀ ॥ ಅನ್ಯದೀಯಂ- ಇತರ ಸಂಬಂಧಿಯಾದ, ದೋಷಮಿವ-ದೋಷವನ್ನೀಪಾದಿಯಲ್ಲಿ, ಆತ್ಮೀಯಂ-ತನ್ನಸಂಬಂಧಿಯಾದ, ದೋಷಮಪಿ-ದೋಷವನ್ನು ಕೂಡ, ಪ್ರಪಶ್ಯತಾ-ಚನ್ನಾಗಿ ನೋಡತಕ್ಕವನೊಡನೆ, ಕಃ-ಯಾವನು, ಸಮಃ-ಸಮಾನನು?, ಅಯಂ-ಈ ಆತ್ಮದೋಷದರ್ಶಿಯು, ಕಾಯೇನ-ಶರೀರದೊಡನೆ, ಯುಕ್ತಶ್ಚೇದಪಿ-ಕೂಡಿದ್ದಾಗ್ಯೂ, ಮುಕ್ತಃಖಲು-ಮುಕ್ತಾತ್ಮನಿಗೆಸಮಾನನಲ್ಲವೆ?.

ತಾತ್ಪರ್ಯ॥ ಯಾವನು ಪರರದೋಷವನ್ನೀಪಾದಿಯಲ್ಲಿ ಸ್ವದೋಷವನ್ನೂಕೂಡ ಚನ್ನಾಗಿ ತಿಳಿಯುತ್ತಾನೆಯೋ ಅಂಥಾವನು ಶರೀರದೊಡನೆ ಕೂಡಿದ್ದವನಾದರೂ ಮುಕ್ತನಿಗೆಸಮಾನನು. ಈ ಲೋಕದಲ್ಲಿ ಅರೀತಿಯಾದ ಆತ್ಮನಿಗೆ ಯಾರೂ ಸಮಾನರಲ್ಲವು. ॥೮೩॥

ಶ್ಲೋಕ ॥ ಇತ್ಯಾದ್ಯೂಹಪರೇ ಲೋಕೇ
ಕೇಕೀ ತು ವಿಯತಾಗತಃ ।

ಪಾತಯಾಮಾಸ ರಾಜ್ಞೀಂ ತಾಂ
ತತ್ಪುರಪ್ರೇತವೇಶ್ಮನಿ ॥೮೪॥

ಟೀ ॥ ಲೋಕೇ-ಜನರು, ಇತ್ಯಾದ್ಯುಪವದತಿ-ಇದೇ ಮೊದಲಾದ ಊಹೆಯಲ್ಲಿ ಆಸಕ್ತರಾಗಿರುತ್ತಿರಲು, ವಿಯತಾ-ಆಕಾಶಮಾರ್ಗದಿಂದ, ಗತಃ-ಹೋದ, ಕೇಕೀಶು-ನವಿಲುಯಂತ್ರವಾಹನರೂ, ರಾಜ್ಞೀಂ-ಪಟ್ಟಮಹಿಷಿಯಾದ, ತಾಂ-ಆವಿಜಯಾದೇವಿಯನ್ನು, ತತ್ಪುರಪ್ರೇತವೇಶ್ಮನಿ-ಆ ರಾಜಪುರೀಪಟ್ಟಣದ ಶ್ಮಶಾನ ಭೂಮಿಯಲ್ಲಿ, ಪಾತಯಾಮಾಸ-ಕೆಡವಿದುದು.

ತಾತ್ಪರ್ಯ ॥ ಜನರು ಈಪ್ರಕಾರ ಆಲೋಚಿಸುತ್ತಿರಲಾಗಿ ಇತ್ತಲು ಆಕಾಶಮಾರ್ಗದಿಂದ ಹೊರಟುಹೋದ ಯಂತ್ರರೂಪವಾದ ನವಿಲಾದುದು ರಾಜಪತ್ನಿಯಾದ ವಿಜಯಾದೇವಿಯನ್ನು ಆ ರಾಜಪುರೀ ಶ್ಮಶಾನದಲ್ಲಿ ಕೆಡವಿದುದು. ॥೮೪॥



ಶ್ಲೋಕ ॥ ಜೀವಾನಾಂ ಪಾಪವೈಚಿತ್ರ್ಯಂ
ಶ್ರುತವನ್ತಶ್ಶ್ರುತೌ ಪುರಾ
ಪಶ್ಯೇಯುರಧುನೇತೀವ
ಶ್ರೀಕಲ್ಪಾಭೂದಕಿಂಚನಾ ॥೮೫॥



ಟೀ ॥ ಜೀವಾನಾಂ-ಪ್ರಾಣಿಗಳ, ಪಾಪವೈಚಿತ್ರ್ಯಂ-ಪಾಪಕರ್ಮದ ವಿಚಿತ್ರತೆಯನ್ನು, ಪುರಾ-ಪೂರ್ವದಲ್ಲಿ, ಶ್ರುತೌ-ಶಾಸ್ತ್ರದಲ್ಲಿ, ಶ್ರುತವಂತಃ-ಕೇಳಿದ್ದ ಜನಗಳು, ಅಧುನಾ-ಈಗ, ಪಶ್ಯೇಯುಃ-ನೋಡಲಿ., ಇತೀವ-ಹೀಗೆಂಬತೆರದಿ, ಶ್ರೀಕಲ್ಪಾ-ಲಕ್ಷ್ಮೀಸಮಾನಳಾದ ರಾಜಪತ್ನಿಯು, ಅಕಿಂಚನಾ-ಯಾರೂ ರಕ್ಷಕರಿಲ್ಲದವಳಾಗಿ, ಅಭೂತ್-ಆದಳು.

ತಾತ್ಪರ್ಯ ॥ ಪ್ರಾಣಿಗಳಿಗೆ ಪಾಪಗಳು ಫಲಕಾಲದಲ್ಲಿ ನಾನಾವಿಚಿತ್ರವಾದ ಘೋರಪರಿಪಾಕವುಳ್ಳದ್ದೆಂದು ಶಾಸ್ತ್ರದಲ್ಲಿ ಕೇಳಿದ್ದ ಜನಗಳು ಈಗ ಪ್ರತ್ಯಕ್ಷವಾಗಿ ನೋಡಲೆಂದು ಪಾಪದ ಕ್ರೌರ್ಯವನ್ನು ತೋರಿಸಲೋಸುಗವೋಪಾದಿಯಲ್ಲಿ ಸಾಕ್ಷಾಲ್ಲಕ್ಷ್ಮೀಸಮಾನಳಾದ ರಾಜಪತ್ನಿಯು ಅನಾಥಳಾಗಿ ಕ್ಷಣಕಾಲದೊಳು ಸರ್ವಸಂಪದವೂ ನಾಶವಂ ಪೊಂದಿ ದುರ್ದಶೆಯನ್ನೈದಿದಳು. ॥೮೫॥

ಶ್ಲೋಕ ॥ ಕ್ಷಣನಶ್ವರಮೈಶ್ವರ್ಯ-
ಮಿತ್ಯರ್ಥಂ ಸರ್ವಥಾ ಜನಃ ।
ನಿರಣೈಷೀದಿಮಾಂ ದೃಷ್ಟ್ವಾ
ದೃಷ್ಟಾನ್ತೇ ಹಿ ಸ್ಫುಟಾ ಮತಿಃ ॥೮೬॥

ಟೀ ॥ ಐಶ್ವರ್ಯಂ-ಸಂಪದವು, ಕ್ಷಣನಶ್ವರಂ-ಕ್ಷಣಮಾತ್ರದಲ್ಲೇ, ನಾಶವನ್ನು ಹೊಂದತಕ್ಕದ್ದು, ಇತಿ-ಹೀಗೆಂಬ, ಅರ್ಥಂ-ಅರ್ಥವನ್ನು, ಸರ್ವಥಾ-ಸರ್ವಪ್ರಕಾರದಲ್ಲಿಯೂ, ಜನಃ-ಜನವು, ಇಮಾಂ-ಈ ವಿಜಯಾದೇವಿಯನ್ನು, ದೃಷ್ಟ್ವಾ-ನೋಡಿ, ನಿರಣೈಷೀತ್-ನಿಶ್ಚಯಿಸಿತು., ಮತಿಃ-ಬುದ್ಧಿಯು, ದೃಷ್ಟಾನ್ತೇ-ದೃಷ್ಟಾಂತದಲ್ಲಿ, ಸ್ಫುಟಾಹಿ-ವ್ಯಕ್ತವಾಗುವುದಲ್ಲವೆ?.

ತಾತ್ಪರ್ಯ ॥ ಐಶ್ವರ್ಯವು ಕ್ಷಣಮಾತ್ರದಲ್ಲೇ ನಷ್ಟವಾಗತಕ್ಕದ್ದೆಂಬ ಈ ಅರ್ಥವನ್ನು ಜನಗಳು ಸರ್ವಪ್ರಕಾರದಿಂದಲೂ ಈ ದೇವಿಯನ್ನು ನೋಡಿ ನಿರ್ಣಯಿಸಿದರು. ಲೋಕವು ದೃಷ್ಟಾಂತವಿದ್ದಲ್ಲಿ ನಂಬುವುದಲ್ಲವೆ ? ॥೮೬॥

ಶ್ಲೋಕ ॥ ಪೂರ್ವಾಹ್ಣೇ ಪೂಜಿತಾ ರಾಜ್ಞೀ
ರಾಜ್ಞಾ ಸೈವಾಪರಾಹ್ಣಕೇ ।
ಪರೇತಭೂಶರಣ್ಯಾಭೂ-
ತ್ಪಾಪಾದ್ಬಿಭ್ಯತು ಪಂಡಿತಾಃ ॥೮೭॥

ಟೀ ॥ ರಾಜ್ಞೀ-ರಾಜಮಹಿಷಿಯಾದವಿಜಯಾದೇವಿಯು, ರಾಜ್ಞಾ-ದೊರೆಯಿಂದ, ಪೂರ್ವಾಹ್ಣೇ-ಪ್ರಾತಃಕಾಲದಲ್ಲಿ, ಪೂಜಿತಾ-ಸಂತೋಷಪಡಿಸಲ್ಪಟ್ಟಳು., ಸೈವ ಅವಳೇಯೇ, ಅಪರಾಹ್ಣಕೇ- ಸಾಯಂಕಾಲದಲ್ಲಿ, ಪರೇತಭೂಶರಣ್ಯಾ(ಸತೀ)- ಶ್ಮಶಾನಮಾತ್ರರಕ್ಷಕವಾಗುಳ್ಳವಳಾಗಿ, ಅಭೂತ್-ಆದಳು., ಪಂಡಿತಾಃ-ವಿವೇಕಿಗಳು, ಪಾಪಾತ್-ಪಾಪದಿಸೆಯಿಂದ, ಬಿಭ್ಯತು-ಹೆದರಲಿ.

ತಾತ್ಪರ್ಯ ॥ ರಾಜಮಹಿಷಿಯಾದ ಇವಳು ಬೆಳಗ್ಗೆ ರಾಜನಿಂದ ಬಹಳವಾಗಿ ಲಾಲಿಸಲ್ಪಟ್ಟಳು; ಆದೇ ದೇವಿಯು ಸಾಯಂಕಾಲದಲ್ಲೇ ಅನಾಥಳಾಗಿ ಶ್ಮಶಾನವೇ ಗತಿಯಾಗಿ ಉಳ್ಳವಳಾದಳು. ಆದುದರಿಂದ ವಿವೇಕಿಗಳು ಪಾಪಕ್ಕೆ ಹೆದರಬೇಕು. ॥೮೭॥

ಶ್ಲೋಕ ॥ ಸಾ ತು ಮೂರ್ಛಾಪರಾಧೀನಾ
ಸೂತಿಪೀಡಾಮಜಾನತೀ ।
ಮಾಸಿ ವೈ ಜನನೇ ಸೂನುಂ
ಸುಷುವೆ ಹನ್ತ ತದ್ದಿನೇ ॥೮೮॥

ಟೀ ॥ ಮೂರ್ಛಾಪರಾಧೀನಾ-ಮೂರ್ಛೆಯಿಂದ ಪರವಶಳಾದ, ಸಾತು-ಆವಿಜಯಾದೇವಿಯಾದರೋ, ಸೂತಿಪೀಡಾಂ-ಪ್ರಸವವೇದನೆಯನ್ನು, ಅಜಾನತೀ(ಸತಿ)-ತಿಳಿಯದೇಇರುವವಳಾಗಿ, ವೈಜನನೇ-ಪ್ರಸವತಿಂಗಳಾದ, ಮಾಸಿ-ಆತಿಂಗಳಲ್ಲಿ, ತದ್ದಿನೇ-ಆ ದಿನದಲ್ಲೇ, ಸೂನುಂ-ಪುತ್ರನನ್ನು, ಸುಷುವೇ-ಪ್ರಸವಿಸಿದಳು., ಹಂತ-ಆಶ್ಚರ್ಯವು!.

ತಾತ್ಪರ್ಯ ॥ ನವಿಲುಯಂತ್ರದಿಂದ ಬಿದ್ದು ಮೂರ್ಛಿತಳಾದ ವಿಜಯಾದೇವಿಯು ಪ್ರಸವವೇದನೆಯನ್ನೇ ತಿಳಿಯದೇಇರುವವಳಾಗಿ ಪ್ರಸವಯೋಗ್ಯತಿಂಗಳಾದ(ಆದೇತಿಂಗಳಲ್ಲಿ)ಆದೇದಿನದಲ್ಲಿಯೇ ಪುತ್ರನನ್ನು ಪ್ರಸವಿಸಿದಳು. ಆಶ್ಚರ್ಯವು! ॥೮೮॥

ಶ್ಲೋಕ ॥ ತಾವತಾ ದೇವತಾ ಕಾಚಿ-
ದ್ಧಾತ್ರೀವೇಷೇಣ ಸನ್ನ್ಯಧಾತ್ ।
ತತ್ರೈವ ಪುತ್ರಪುಣ್ಯೇನ
ಪುಣ್ಯೇ ಕಿಂವಾ ದುರಾಸದಮ್ ॥೮೯॥

ಟೀ॥ತಾವತಾ-ಅಷ್ಟರಲ್ಲೇ, ತತ್ರೈವ-ಆಸ್ಮಶಾನದಲ್ಲಿಯೇ, ಕಾಚಿದ್ದೇವತಾ-ಒಂದುದೇವತೆಯು, ಧಾತ್ರೀವೇಷೇಣ-ದಾದಿಯಸ್ವರೂಪದಿಂದ, ಪುತ್ರಪುಣ್ಯೇನ-ಶಿಶುವಿನಸುಕೃತದದೆಸೆಯಿಂದ, ಸನ್ನ್ಯಧಾತ್-ಸಮೀಪಸ್ಥಳಾದಳು., ಪುಣ್ಯೇ(ಸತಿ)-ಸುಕೃತವುಇರುತ್ತಿರಲಿಕ್ಕಾಗಿ, ಕಿಂವಾ- ಯಾವುದು ತಾನೇ, ದುರಾಸದಂ- ಪಡೆಯಲಶಕ್ಯವು ?.

ತಾತ್ಪರ್ಯ ॥ ಆ ಸ್ಮಶಾನದಲ್ಲಿಯೇ ಆ ಶಿಶುವಿನ ಸುಕೃತದದೆಸೆಯಿಂದ (ಒಂದುದೇವತೆಯು) ದೇವಿಗೆ ಪರಿಚಿತಳಾಗಿದ್ದ ದಾದಿಯಸ್ವರೂಪದಿಂದ ಸಮೀಪಕ್ಕೆ ಬಂದಳು. ಪುಣ್ಯದಿಂದ ಸಕಲವೂ ಸಾಧ್ಯವಾಗುವುದು ॥ ೮೯ ॥

ಶ್ಲೋಕ ॥ ತಾಂ ಪಶ್ಯನ್ತ್ಯಾ ಅಭೂತ್ತಸ್ಯಾ
ಉದ್ವೇಲಶೋಕಸಾಗರಃ ।
ಸನ್ನಿಧೌ ಹಿ ಸ್ವಬಂಧೂನಾಂ
ದುಃಖಮುನ್ಮಸ್ತಕಂ ಭವೇತ್ ॥೯೦॥

ಟೀ ॥ ತಾಂ-ಅವಳನ್ನು, ಪಶ್ಯಂತ್ಯಾಃ-ನೋಡುತ್ತಲಿರುವ, ತಸ್ಯಾಃ-ಆ ದೇವಿಗೆ, ಉದ್ವೇಲಃ-ವೇಲಾತೀತವಾದ, ಶೋಕಸಾಗರಃ-ದುಃಖವೆಂಬ ಸಮುದ್ರವು, ಅಭೂತ್-ಉಂಟಾದುದು., ಸ್ವಬಂಧೂನಾಂ-ತನ್ನ ಬಂಧುಜನಗಳ, ಸನ್ನಿಧೌ-ಸಮೀಪದಲ್ಲಿ, ದುಃಖಂ-ಶೋಕವು, ಉನ್ಮಸ್ತಕಂ-ತಲೆಮೀರಿದುದಾಗಿ, ಭವೇದ್ಧಿ-ಉಂಟಾಗುವುದಲ್ಲವೆ?.

ತಾತ್ಪರ್ಯ॥ಆ ಬಂದದಾದಿಯನ್ನು ನೋಡುತ್ತಲೇ ದೇವಿಗೆ ದಡವನ್ನತಿಕ್ರಮಿಸಿದ ಸಮುದ್ರದಂತೆ ದುಃಖವು ಹೆಚ್ಚಿದುದು. ದುಃಖದ ದೆಸೆಯಲ್ಲಿಬಂಧುಗಳನ್ನು ನೋಡುತ್ತಲೂ ದುಃಖವುಹೆಚ್ಚುವುದಲ್ಲವೆ! ॥೯೦॥

ಶ್ಲೋಕ ॥ ದೇವತಾ ತು ಸಮಾಶ್ವಾಸ್ಯ
ಜಾತಮಾಹಾತ್ಮ್ಯವರ್ಣನೈಃ ।
ಊರ್ಣಾದಿದರ್ಶನೋದ್ಭೂತೈ-
ರ್ದೇವೀಂ ತಾಮಿತ್ಯಬೋಚತ ॥೯೧॥

ಟೀ॥ದೇವತಾತು-ದೇವತೆಯಾದರೋ, ಊರ್ಣಾದಿದರ್ಶನೋದ್ಭೂತೈಃ-ಹುಬ್ಬಿನನಡುವೆ ಇರುವ ಸುಳಿಯೇ ಮೊದಲಾದ ರಾಜಲಕ್ಷಣಗಳನ್ನು ನೋಡುವುದರಿಂದುಂಟಾದ, ಜಾತಮಾಹಾತ್ಮ್ಯವರ್ಣನೈಃ ಪುತ್ರನ ಮಹಿಮೆಯ ವರ್ಣನೆಗಳಿಂದ-ಸಮಾಶ್ವಾಸ್ಯ-ಸಮಾಧಾನಪಡಿಸಿ, ದೇವೀಂ-ರಾಜಮಹಿಷಿಯಾದ, ತಾಂ-ಆ ವಿಜಯಾದೇವಿಯನ್ನು, ಇತಿ-ಈ ವಕ್ಷ್ಯಮಾಣಪ್ರಕಾರವಾಗಿ, ಅವೋಚತ-ಹೇಳಿದಳು.

ತಾತ್ಪರ್ಯ ॥ ಆ ದೇವತೆಯಾದ ದಾದಿಯು ಶಿಶುವಿನ ಹುಬ್ಬಿನನಡುವೆಇರುವ ಸುಳಿಯೇ ಮೊದಲಾದ ರಾಜಲಕ್ಷಣಗಳನ್ನು ನೋಡಿ ಪುತ್ರನಮಹಿಮೆಯನ್ನು ವರ್ಣಿಸಿ, ದೇವಿಯನ್ನು ಸಮಾಧಾನಪಡಿಸಿ ಮುಂದೆ ಹೇಳುವಪ್ರಕಾರ ಹೇಳಿದಳು. ॥ ೯೧ ॥

ಶ್ಲೋಕ ॥ ಪುತ್ರಾಭಿವರ್ಧನೋಪಾಯೇ
ದೇವಿ ಚಿನ್ತಾ ನಿವರ್ತ್ಯತಾಮ್ ।
ಕ್ಷತ್ರಪುತ್ರೋಚಿತಃ ಕಶ್ಚಿ-
ದೇನಂ ಸಂವರ್ಧಯಿಷ್ಯತಿ ॥೯೧

ಟೀ ॥ ಹೇ ದೇವಿ-ಎಲೈ ದೇವಿಯೇ!, ಪುತ್ರಾಭಿವರ್ಧನೋಪಾಯೇ-ಮಗುವನ್ನು ರಕ್ಷಿಸುವುದಕ್ಕೆ ತಕ್ಕ ಉಪಾಯದಲ್ಲಿ, ಚಿಂತಾ-ಆಲೋಚನೆಯು, ನಿವರ್ತ್ಯತಾಂ-ಬಿಡಲ್ಪಡಲಿ., ಕ್ಷತ್ರಪುತ್ರೋಚಿತಃ-ರಾಜಪುತ್ರನಿಗೆ ಅನುರೂಪನಾದ, ಕಶ್ಚಿತ್-ಒಬ್ಬ ಪುರುಷನು, ಏನಂ-ಈ ಶಿಶುವನ್ನು, ಸಂವರ್ಧಯಿಷ್ಯತಿ-ಚೆನ್ನಾಗಿ ಪೋಷಿಸುತ್ತಾನೆ.

ತಾತ್ಪರ್ಯ ॥ ಎಲೈ ದೇವಿಯೇ ! ಮಗುವನ್ನು ಸಾಕುವವಿಷಯದಲ್ಲಿ ಚಿಂತೆಯನ್ನು ಬಿಡು; ಕ್ಷತ್ರಿಯಪುತ್ರನನ್ನು ಸಂರಕ್ಷಿಸುವದಕ್ಕೆ ಯೋಗ್ಯನಾದ ಒಬ್ಬನು ಈಶಿಶುವನ್ನು ರಕ್ಷಿಸುತ್ತಾನೆ. ॥೯೧॥

ಶ್ಲೋಕ॥ ಇತ್ಯುಕ್ತೇ ಕೋಪಿ ದೃಷ್ಟೋಽಭೂ-
ದ್ವಿಸೃಷ್ಟಪ್ರೇತಸೂನುಕಃ ।
ಸೂನುಂ ಸೂನೃತಯೋಗೀಂದ್ರ-
ವಾಕ್ಯಾತ್ತತ್ರ ಗವೇಷಯನ್ ॥೯೨॥

ಟೀ ॥ ಇತಿ-ಈ ಪ್ರಕಾರ, ಉಕ್ತೇ (ಸತಿ)-ಹೇಳಲ್ಪಡುತ್ತಿರಲಿಕಾಗಿ, ವಿಸೃಷ್ಟಪ್ರೇತಸೂನುಕಃ-ಬಿಡಲ್ಪಟ್ಟ ಸತ್ತಮಗುವುಳ್ಳ, ಸೂನೃತಯೋಗೀಂದ್ರವಾಕ್ಯಾತ್-ಸತ್ಯಪ್ರಿಯವಾದ ಮುನಿಶ್ರೇಷ್ಠರವಚನದದೆಸೆಯಿಂದ, ಸೂನುಂ-ಪುತ್ರನನ್ನು, ತತ್ರ-ಆ ಸ್ಮಶಾನದಲ್ಲಿ, ಗವೇಷಯನ್-ಹುಡುಕುತ್ತಲಿರುವ, ಕೋಪಿ-ಒಬ್ಬ ಪುರುಷನು, ದೃಷ್ಟಸ್ಸನ್-ನೋಡಲ್ಪಟ್ಟವನಾಗಿ, ಅಭೂತ್-ಆದನು.

ತಾತ್ಪರ್ಯ ॥ ಹೀಗೆ ದೇವತೆಯು ಹೇಳಿದವೊಡನೆಯೇ ಸತ್ತ ತನ್ನ ಮಗುವನ್ನು ಸ್ಮಶಾನದಲ್ಲಿಹಾಕಿ ಸತ್ಯಪ್ರಿಯವಾದ ಒಬ್ಬ ಯೋಗಿಶ್ರೇಷ್ಠರ ವಾಕ್ಯದದೆಸೆಯಿಂದ ಪುತ್ರನನ್ನು ಹುಡುಕುತ್ತಾ ಬರುವ ಒಬ್ಬ ಪುರುಷನು ಗೋಚರಿಸಿದನು. ॥೯೨॥

ಶ್ಲೋಕ ॥ ತದ್ದರ್ಶನೇನ ತದ್ವಾಕ್ಯಂ
ಪ್ರಮಾಣಂ ನಿರ್ಣಿನಾಯ ಸಾ ।
ನಿಶ್ಚಲಾದವಿಸಂವಾದಾ-
ದ್ವಸ್ತುನೋ ಹಿ ವಿನಿಶ್ಚಯಃ ॥೯೪॥

ಟೀ ॥ ಸಾ-ಆವಿಜಯಾದೇವಿಯು, ತದ್ದರ್ಶನೇನ- ಆ ಪುರುಷನನ್ನು ನೋಡಿದುದರಿಂದ, ತದ್ವಾಕ್ಯಂ-ಆ ದೇವತಾರೂಪಿಣಿಯಾದ ದಾದಿಯಮಾತನ್ನು, ಪ್ರಮಾಣಂ(ಸತ್,-ಯಥಾರ್ಥವನ್ನಾಗಿ, ನಿರ್ಣಿನಾಯ-ನಿಶ್ಚಯಿಸಿದಳು., ನಿಶ್ಚಲಾತ್- ವ್ಯತ್ಯಸ್ತವಾಗದೇಇರುವ, ಅವಿಸಂವಾದಾತ್-ಪರೀಕ್ಷಿಸುವಲ್ಲಿ ಹೇಳಲ್ಪಟ್ಟ ಪ್ರಕಾರವೇ ಪ್ರತ್ಯಕ್ಷಿಸಲ್ಪಡುವ ಅರ್ಥವುಳ್ಳ ಯಥಾರ್ಥವಚನದದೆಸೆಯಿಂದ, ವಸ್ತುನಃ - ವಸ್ತುವಿನ, ವಿನಿಶ್ಚಯೋಹಿ-ನಿರ್ಣಯವುಂಟಾಗುವುದಲ್ಲವೆ ?.

ತಾತ್ಪರ್ಯ ॥ ಆಗಲಾ ವಿಜಯಾದೇವಿಯು ಆ ಬರುವಪುರುಷನನ್ನು ನೋಡಿ ದಾದಿಯಮಾತನ್ನು ಯಥಾರ್ಥವೆಂದು ನಂಬಿದಳು. ಪ್ರತ್ಯಕ್ಷಿಸಿ ನೋಡುವಲ್ಲಿ ವ್ಯತ್ಯಾಸವಿಲ್ಲದ ಮಾತಿನಿಂದಲ್ಲವೆ ನಂಬಿಕೆಯುಂಟಾದೀತು ? ॥೯೪॥

ಶ್ಲೋಕ ॥ ತತೋ ಗತ್ಯಂತರಾಭಾವಾ-
ದ್ದೇವತಾಪ್ರೇರಣಾಚ್ಚ ಸಾ ।
ಪಿತ್ರೀಯಮುದ್ರಯೋಪೇತ-
ಮಾಶಾಸ್ಯಾನ್ತರಧಾತ್ಸುತಮ್ ॥೯೫॥

ಟೀ ॥ ಸಾ- ಆ ವಿಜಯಾದೇವಿಯು, ತತಃ-ಅನಂತರದಲ್ಲಿ, ಗತ್ಯಂತರಾಭಾವಾತ್-ಬೇರೆಗತಿಇಲ್ಲದಿರೋಣದರ ದೆಸೆಯಿಂದಲೂ, ದೇವತಾಪ್ರೇರಣಾಚ್ಚ - ದೇವತೆಯಮಾತಿನದೆಸೆಯಿಂದಲೂ, ಪಿತ್ರೀಯಮುದ್ರಯೋಪೇತಂ - ತಂದೆಯ ಸಂಬಂಧಿಯಾದ ರಾಜಲಕ್ಷಣದಿಂದೊಡಗೂಡಿರುವ, ಸುತಂ-ಮಗನನ್ನು, ಆಶಾಸ್ಯ - ಹರಸಿ, ಅಂತರಧಾತ್-ಮರೆಯಾದಳು.

ತಾತ್ಪರ್ಯ ॥ ಆದೇವಿಯು ಅನಂತರದಲ್ಲಿ ಅರೀತಿಯಾದ ದುರ್ದಶೆಯೊಳು ಪುತ್ರಸಂರಕ್ಷಣೆಗೆ ಯಾವುದೊಂದುಪಾಯವೂ ಇಲ್ಲವಾದುದರಿಂದಲೂ, ಈದೇವತೆಯು ಹೇಳುವ ನಂಬಿಕೆಯಾದ ಮಾತುಗಳ ದೆಸೆಯಿಂ

ದಳೂ, ತಂದೆಯು ರಾಜಲಕ್ಷಣದಿಂದೊಡಗೂಡಿದ ಮಗನನ್ನು ಆಶೀರ್ವ
ಚಿಸಿ ಮರೆಯಾದಳು. ॥೯೫॥

ಶ್ಲೋಕ ॥ ಗಂಧೋತ್ಕಟೋಽಪಿ ತಂ ಪಶ್ಯ-
ನ್ನತೃಪದ್ವೈಶ್ಯನಾಯಕಃ ।
ವಿಘೋಽನ್ವೇಷಿಜನೈರ್ದೃಷ್ಟಃ
ಕಿಂ ವಾ ನ ಪ್ರೀತಯೇ ಮಣಿಃ ॥೯೬॥

ಟೀ ॥ ವೈಶ್ಯನಾಯಕಃ-ವೈಶ್ಯರಿಗೆ ಸ್ವಾಮಿಯಾದ, ಗಂಧೋತ್ಕಟೋಽಪಿ-ಗಂ
ಧೋತ್ಕಟಶ್ರೇಷ್ಠಿಯೂ ಕೂಡ, ತಂ-ಆ ಶಿಶುವನ್ನು, ಪಶ್ಯನ್(ಸನ್) - ನೋಡುವವ
ನಾಗಿ, ಅತೃಪತ್-ಸಂತೋಷಿಸಿದನು., ವಿಧೋಽನ್ವೇಷಿಜನೈಃ-ಸೌದೆಯನ್ನು ಹುಡು
ಕುತ್ತಲಿರುವ ಜನಗಳಿಂದ, ದೃಷ್ಟಃ-ನೋಡಲ್ಪಟ್ಟ, ಮಣಿಃ-ರತ್ನಮಣಿಯು, ಪ್ರೀತ
ಯೇ-ಸಂತೋಷಕ್ಕೋಸುಗ, ನಕಿಂವಾ-ಆಗುವುದಿಲ್ಲವೇ ಏನು?.

ತಾತ್ಪರ್ಯ ॥ ವೈಶ್ಯಶ್ರೇಷ್ಠನಾದ ಗಂಧೋತ್ಕಟಶ್ರೇಷ್ಠಿಯು ಆ
ಮಗುವನ್ನು ನೋಡುತ್ತಿರುವವನಾಗಿ ಬಹಳ ಸಂತೋಷಿಸಿದನು. ಕಾಡಿ
ನಲ್ಲಿ ಸೌದೆಯನ್ನು ಹುಡುಕುತ್ತಾಬರುವ ಜನಕ್ಕೆ ರತ್ನವು ದೊರೆತ್ತುದೇ
ಆದರೆ ಸಂತೋಷಕ್ಕೆ ಪಾರವುಂಟೆ? ॥೯೬॥

ಶ್ಲೋಕ ॥ ಹರ್ಷಕಂಟಕಿತಾಂಗೋಽಯ-
ಮಾದಧಾನಸ್ತಮಙ್ಗಜಮ್ ।
ಜೀವೇತ್ಯಾಶಿಷಮಾಕರ್ಣ್ಯ
ತನ್ನಾಮ ಸಮಕಲ್ಪಯತ್ ॥೯೭॥

ಟೀ ॥ ಹರ್ಷಕಂಟಕಿತಾಂಗಃ- ಸಂತೋಷದಿಂದ ರೋಮಾಂಚಿತವಾದ ಶರೀ
ರವುಳ್ಳ, ಅಯಂ-ಈಗಂಧೋತ್ಕಟಶ್ರೇಷ್ಠಿಯು, ತಮಂಗಜಂ-ಆ ಮಗನನ್ನು, ಆದ
ಧಾನ(ಸ್ಸನ್)-ಎತ್ತಿಕೊಂಡವನಾಗಿ, ಜೀವೇತಿ-ಜೀವಎಂತೆಂಬ, ಆಶಿಷಂ-ಆಶೀರ್ವಾದವ
ನ್ನು, ಆಕರ್ಣ್ಯ-ಕೇಳಿ, ತತ್-ಆ ಜೀವಎಂಬಶಬ್ದವನ್ನೇ, ನಾಮ-ಹೆಸರನ್ನಾಗಿ, ಸ
ಮಕಲ್ಪಯತ್-ಸಂಕಲ್ಪಿಸಿದನು.

ತಾತ್ಪರ್ಯ ॥ ಸಂತೋಷದಿಂದ ರೋಮಾಂಚಿತವಾದ ಶರೀರವುಳ್ಳ
ಈ ಗಂಧೋತ್ಕಟಶ್ರೇಷ್ಠಿಯು ಆಮಗುವನ್ನು ಎತ್ತಿಕೊಂಡು (ಆಕಾ

ಲದಲ್ಲಿ ಜೀವ ಎಂಬ ಆಶೀರ್ವಚನವನ್ನು ಕೇಳಿ ಆ ಶಿಶುವಿಗೆ ಆ ಶಬ್ದವನ್ನೇ ನಾಮಧೇಯವನ್ನಾಗಿ ಸಂಕಲ್ಪಿಸಿದನು. ॥೯೭॥

ಶ್ಲೋಕ ॥ ಅಮೃತಂ ಸೂನುಮಜ್ಞಾನಾ-
ತ್ಸಂಸ್ಥಿತಂ ಕಥಮಭ್ಯಧಾಃ ।
ಇತಿ ಕ್ರುಧ್ಯನ್ಸ್ವಭಾರ್ಯಾಯೈ
ಸಾನಂದೋಽಯಮದಾತ್ಸುತಮ್ ॥ ೯೮ ॥

ಟೀ ॥ ಅಮೃತಂ-ಬದುಕಿರುವ, ಸೂನುಂ-ಮೊಗುವನ್ನು, ಅಜ್ಞಾನಾತ್- ಅಜ್ಞಾನದದೆಸೆಯಿಂದ, ಸಂಸ್ಥಿತಂ(ಸಂತಂ)-ಸತ್ತವನನ್ನಾಗಿ, ಕಥಂ-ಹೇಗೆ, ಅಭ್ಯಧಾಃ-ಹೇಳಿದೆ? ಇತಿ-ಈಪ್ರಕಾರ, ಅಯಂ-ಈ ಗಂಧೋತ್ಕಟಶ್ರೇಷ್ಠಿಯು, ಸ್ವಭಾರ್ಯಾಯೈ-ತನ್ನ ಹೆಂಡತಿಗೋಸುಗ, ಕ್ರುಧ್ಯನ್(ಸನ್)-ಕೋಪಿಸಿಕೊಳ್ಳುವವನಾಗಿ, ಸಾನಂದ(ಸ್ಸನ್)-ಸಂತೋಷದಿಂದೊಡಗೂಡಿದವನಾಗಿ, ಸುತಂ- ಮಗನನ್ನು, ಅದಾತ್-ಕೊಟ್ಟನು.

ತಾತ್ಪರ್ಯ ॥ ಈ ಗಂಧೋತ್ಕಟಶ್ರೇಷ್ಠಿಯು ತನ್ನ ಹೆಂಡತಿಯನ್ನು ಕುರಿತು ಈ ಮೊಗುವಿನಲ್ಲಿ ಅವಳಿಗೆ ದೃಢವಾದ ವಾತ್ಸಲ್ಯ ಉಂಟಾಗುವುದಕ್ಕೋಸುಗ ಜೀವಿಸಿರುವ ಮಗನನ್ನು ಅಜ್ಞಾನದದೆಸೆಯಿಂದ ಸತ್ತನೆಂದು ಹೇಗೆ ಹೇಳಿದೆ? ಎಂದು ಕೋಪಿಸಿಕೊಂಡು ಅನಂತರ ಬಹುಸಂತೋಷದೊಡನೆ ಆ ಮಗನನ್ನು ಪತ್ನಿಗೆ ಕೊಟ್ಟನು. ಮಮತೆಯೇ ಪ್ರೀತಿಗೆ ಮುಖ್ಯಕಾರಣವಾದುದರಿಂದ ಪತ್ನಿಯು ತನ್ನಮಗನೆಂದು ನಂಬಿ ಪ್ರೀತಿಇಡಲೋಸುಗ ಶ್ರೇಷ್ಠಿಯು ಪತ್ನಿಯಲ್ಲಿ ಕೋಪವಂ ನಟಿಸಿದನು॥೯೮

ಶ್ಲೋಕ ॥ ಅಭ್ಯನಂದೀತ್ಸುನಂದಾಪಿ
ನಂದನಸ್ಯಾವಲೋಕನಾತ್ ।
ಪ್ರಾಣವತ್ಪ್ರೀತಯೇ ಪುತ್ರಾ-
ಮೃತೋತ್ಪನ್ನಾಸ್ತು ಕಿಂ ಪುನಃ ॥ ೯೯ ॥

ಟೀ ॥ ಸುನಂದಾಪಿ-ಗಂಧೋತ್ಕಟಪತ್ನಿಯಾದ ಸುನಂದೆಯು ಕೂಡ, ನಂದನಸ್ಯ-ಮಗನ, ಅವಲೋಕನಾತ್ ನೋಡೋಣದದೆಸೆಯಿಂದ, ಅಭ್ಯನಂದೀತ್-

ಸಂತೋಷಿಸಿದಳು., ಪುತ್ರಾಃ ಮಕ್ಕಳು, ಪ್ರಾಣವತ್- ಪ್ರಾಣದೋಪಾದಿಯಲ್ಲಿ, ಪ್ರೀತಯೇ-ಸಂತೋಷಕ್ಕೋಸ್ಕರ, ಭವಂತಿ-ಆಗುತ್ತಾರೆ., ಪ್ರತ್ಯುತ್ಪನ್ನಾಸ್ತು-ಸತ್ತುಹುಟ್ಟಿದಮಕ್ಕಳಾದರೋ, ಕಿಂಪುನಃ-ಹೇಳತಕ್ಕದ್ದೇನು ?.

ತಾತ್ಪರ್ಯ ॥ ಗಂಧೋತ್ಕಟಪತ್ನಿಯಾದ ಸುನಂದೆಯೂ ಕೂಡ ಪುತ್ರನನ್ನು ನೋಡಿ ಸಂತೋಷಿಸಿದಳು. ಮಕ್ಕಳೇ ತಾಯಿ ತಂದೆಗಳಿಗೆ ಪ್ರಾಣದಂತೆ ಪ್ರಿಯರು. ಹೀಗಿರುವಲ್ಲಿ, ಸತ್ತುಹುಟ್ಟಿದ ಮಗುವಾದರೋ ಹೇಳತಕ್ಕದ್ದೇನು ?. ॥೯೯॥

ಶ್ಲೋಕ ॥ ದೇವತಾ ಜನನೀಮಸ್ಯ
ಬಂಧುವೇಶ್ಮಪರಾಙ್ಮುಖೀಮ್ ।
ದಂಡಕಾರಣ್ಯಮಧ್ಯಸ್ಥ-
ಮನೈಷೀತ್ತಾಪಸಾಶ್ರಮಮ್ ॥ ೧೦೦ ॥

ಟೀ ॥ ದೇವತಾ-ದೇವತೆಯು, ಬಂಧುವೇಶ್ಮಪರಾಙ್ಮುಖೀಂ-ಬಂಧುಗೃಹದಲ್ಲಿ ವಿಮುಖಳಾದ, ಅಸ್ಯ-ಈ ಮಗುವಿನ, ಜನನೀಂ-ತಾಯಿಯನ್ನು, ದಂಡಕಾರಣ್ಯಮಧ್ಯಸ್ಥಂ-ದಂಡಕಾರಣ್ಯದ ಮಧ್ಯದಲ್ಲಿರುವ, ತಾಪಸಾಶ್ರಮಂ-ಮುನಿಗಳವಾಸಸ್ಥಾನವನ್ನು, ಅನೈಷೀತ್-ಹೊಂದಿಸಿದಳು.

ತಾತ್ಪರ್ಯ ॥ ದೇವತೆಯು ಬಂಧುಗಳ ಮನೆಯಲ್ಲಿ ಹೋಗಿ ವಾಸ ಮಾಡಲು ಸಮ್ಮತಿಸದೇಇರುವ ಈ ವಿಜಯಾದೇವಿಯನ್ನು ದಂಡಕಾರಣ್ಯಮಧ್ಯದಲ್ಲಿ ಮುನಿಗಳ ಆಶ್ರಮವನ್ನೈದಿಸಿದಳು. ॥೧೦೦॥

ಶ್ಲೋಕ ॥ ಕೃತ್ವಾ ಚ ತಾಂ ತಪಸ್ವಿನೀಂ
ಸತೋಷಾ ಸಾಮಿಷಾದಗಾತ್ ।
ಸಮೀಹಿತಾರ್ಥಸಂಸಿದ್ಧೌ
ಮನಃ ಕಸ್ಯ ನ ತುಷ್ಯತಿ ॥ ೧೦೧ ॥

ಟೀ ॥ ಸಾ-ಆ ದೇವತೆಯು, ತಾಂ-ಆ ವಿಜಯಾದೇವಿಯನ್ನು, ತಪಸ್ವಿನೀಂ ಚ-ತಪಸ್ಸನ್ನು ಗೈಯ್ಯುವವಳನ್ನಾಗಿಯೂ, ಕೃತ್ವಾ-ಮಾಡಿ, ಸತೋಷಾ(ಸತಿ)-ಸಂತುಷ್ಟಳಾಗಿ, ಮಿಷಾತ್-ವ್ಯಾಜದನೆವದಿಂದ, ಅಗಾತ್-ಹೋದಳು., ಸಮೀಹಿ

ತಾರ್ಥಸಂಸಿದ್ಧೌ-ಇಷ್ಟಾರ್ಥಸಿದ್ಧಿಯಾಗುತ್ತಿರಲಾಗಿ, ಕಸ್ಯ-ಯಾರ, ಮನಃ-ಮನಸ್ಸು, ನತುಷ್ಯತಿ-ಸಂತೋಷಿಸುವದಿಲ್ಲವು?

ತಾತ್ಪರ್ಯ ॥ ದೇವತೆಯು ವಿಜಯಾದೇವಿಯನ್ನು ತಪಸ್ವಿನಿಯನ್ನಾಗಿಯೂ ಮಾಡಿ ಸಂತುಷ್ಟಳಾಗಿ ಹೊರಟುಹೋದಳು. ಲೋಕದಲ್ಲಿ ಅವರವರ ಇಷ್ಟಸಿದ್ಧಿಯಾದರೆ ಸಂತೋಷಿಸುತ್ತಾರಲ್ಲವೆ?.॥೧೧೧॥

ಶ್ಲೋಕ॥ ಅವಾತ್ಸೀದ್ರಾಜಪತ್ನೀ ಚ
ವತ್ಸಂ ನಿಜಮನೋಗೃಹೇ ।
ಜಿನಪಾದಾಂಬುಜಂ ಚೈವ
ಧ್ಯಾಯನ್ತೀ ಹನ್ತ ತಾಪಸೀ ॥ ೧೦೨ ॥

ಟೀ ॥ ರಾಜಪತ್ನೀಚ- ಸತ್ಯಂಧರಪತ್ನಿಯಾದ ವಿಜಯಾದೇವಿಯೂ ಕೂಡ, ನಿಜಮನೋಗೃಹೇ-ತನ್ನ ಮನಸ್ಸೆಂಬ ಮನೆಯಲ್ಲಿ, ವತ್ಸಂ-ಮಗನನ್ನು, ಜಿನಪಾದಾಂಬುಜಂಚೈವ-ಅರ್ಹತ್ಪರಮೇಶ್ವರನ ಪಾದಕಮಲವನ್ನು ಕೂಡ, ಧ್ಯಾಯನ್ತೀ(ಸತೀ)-ಧ್ಯಾನಮಾಡುವವಳಾಗಿ, ತಾಪಸೀ(ಸತೀ)-ತಪಸ್ವಿನಿಯಾಗಿ, ಅವಾತ್ಸೀತ್-ವಾಸಮಾಡಿದಳು.

ತಾತ್ಪರ್ಯ ॥ ತಪಸ್ವಿನಿಯಾದ ರಾಜಪತ್ನಿಯು ತನ್ನ ಮನಸ್ಸೆಂಬ ಗೃಹದಲ್ಲಿ ತನ್ನ ಮಗುವನ್ನೂ, ಅರ್ಹತ್ಪರಮೇಶ್ವರನಪಾದಕಮಲವನ್ನೂ ಕೂಡ ಧ್ಯಾನಮಾಡುವವಳಾಗಿ ವಾಸಮಾಡಿದಳು.॥೧೧೨॥

ಶ್ಲೋಕ॥ ಅನಲ್ಪತೂಲತಲ್ಪಸ್ಥ-
ಸವೃಂತಪ್ರಸವಾದಪಿ ।
ನಿರ್ಭರಂ ಹನ್ತ ಸೀದನ್ತ್ಯೈ-
ದರ್ಭಶಯ್ಯಾಪ್ಯರೋಚತ ॥ ೧೦೩ ॥

ಟೀ ॥ ಅನಲ್ಪತೂಲತಲ್ಪಸ್ಥಸವೃಂತಪ್ರಸವಾದಪಿ-ಬಹಳಅರಳೆಯುಳ್ಳ ಹಾಸಿಗೆಯಲ್ಲಿ ತೊಟ್ಟಿನೊಡನೆಕೂಡಿಕೊಂಡಿರುವ ಪುಷ್ಪದೆಸೆಯಿಂದಲೂಕೂಡ, ನಿರ್ಭರಂ-ಅಧಿಕವಾಗಿ, ಸೀದನ್ತ್ಯೈ-ವ್ಯಥೆಪಡುತ್ತಿದ್ದ ವಿಜಯಾದೇವಿಗೆ, ದರ್ಭಶಯ್ಯಾಪಿ-ಕಠಿನವಾದ ದರ್ಭೆಹುಲ್ಲಿನ ಹಾಸಿಗೆಯೂಕೂಡ, ಅರೋಚತ-ಇಷ್ಟವಾದುದು, ಹನ್ತ-ಆಶ್ಚರ್ಯವು !!.

ತಾತ್ಪರ್ಯ ॥ ಮಹತ್ತಾದ ಹಂಸತೂಲಿಕಾತಲ್ಪದಲ್ಲಿ ಸುಕುಮಾರವಾದ ಪುಷ್ಪದ ತೊಟ್ಟು ಒತ್ತಿದರೆ ಬಹಳವಾಗಿ ವ್ಯಥೆಪಡುತಲಿದ್ದ ವಿಜಯಾದೇವಿಗೆ ತಪಸ್ವಿನೀದೆಸೆಯಲ್ಲಿ ಕಠಿನವಾದ ದರ್ಭೆಹುಲ್ಲಿನ ಹಾಸಿಗೆಯೇ ರುಚಿಸಿದುದು. ॥ ೧೦೩ ॥

ಶ್ಲೋಕ ॥ ಸ್ವಹಸ್ತಲೂನನೀವಾರೋ-
ಪ್ಯಾಹಾರೋಸ್ಯಾಃ ಪರೇಣ ಕಿಮ್ |
ಅವಶ್ಯಮನುಭೋಕ್ತವ್ಯಂ
ಕೃತಂ ಕರ್ಮ ಶುಭಾಶುಭಮ್ ॥ ೧೦೪ ॥

ಟೀ ॥ ಅಸ್ಯಾಃ-ಈ ದೇವಿಗೆ, ಸ್ವಹಸ್ತಲೂನನೀವಾರೋಪಿ-ತನ್ನ ಕೈಯಿಂದ ಕೊಯಿದ ತೃಣಧಾನ್ಯವೂ ಕೂಡ, ಆಹಾರಃ-ಆಹಾರವಾದುದು., ಪರೇಣ-ಉಳಿದ ದುರವಸ್ಥೆಯ ವರ್ಣನೆಯಿಂದ, ಕಿಂ-ಏನು ಪ್ರಯೋಜನವು ?, ಕೃತಂ-ಜನ್ಮಾಂತರದಲ್ಲಿ ಮಾಡಲ್ಪಟ್ಟ, ಶುಭಾಶುಭಂ-ಪುಣ್ಯಪಾಪರೂಪವಾದ, ಕರ್ಮ-ಕರ್ಮವು, ಅವಶ್ಯಂ-ನಿಯತವಾಗಿ, ಅನುಭೋಕ್ತವ್ಯಂ-ಅನುಭವಿಸಲೇಬೇಕು.

ತಾತ್ಪರ್ಯ ॥ ಈ ರಾಜಪತ್ನಿಗೆ ತನ್ನಕೈಯಿಂದ ಕೊಯಿದ ತೃಣಧಾನ್ಯವೂ ಕೂಡ ಆಹಾರವಾದುದು. ಉಳಿದ ಕ್ಲೇಶವೆಂದೇನು ?. ಪ್ರಾಣಿಯು ಜನ್ಮಾಂತರದಲ್ಲಿ ಮಾಡಿದ ಪುಣ್ಯಪಾಪಗಳ ಫಲವನ್ನು ಅನುಭವಿಸಿಯೇ ತೀರಿಸಬೇಕು. ॥೧೦೪॥

ಶ್ಲೋಕ ॥ ಅಥಗಂಧೋತ್ಕಟಾಯಾರ್ಥ-
ಮರ್ಭಕಾರ್ಥಂ ಮಹೋತ್ಸವಮ್ ।
ಆತ್ಮಾರ್ಥಂ ಗಣಯನ್ಮೂಢಃ
ಕಾಷ್ಠಾಂಗಾರೋಪ್ಯದಾನ್ಮುದಾ ॥ ೧೦೫ ॥

ಟೀ ॥ ಅಥ-ಅನಂತರದಲ್ಲಿ, ಅರ್ಭಕಾರ್ಥಂ- ಮಗುವಿಗೋಸುಗ ನಡೆಯುವ, ಮಹೋತ್ಸವಂ-ಮಹತ್ತಾದ ಜಾತಕರಣೋತ್ಸವವನ್ನು, ಆತ್ಮಾರ್ಥಂ- ತನಗೋಸುಗವೆಂದು, ಗಣಯನ್-ಎಣಿಸುತಲಿರುವ, ಮೂಢಃ-ಅಜ್ಞಾನಿಯಾದ, ಕಾಷ್ಠಾಂಗಾರೋಪಿ-ಕಾಷ್ಠಾಂಗಾರನೂ ಕೂಡ, ಮುದಾ- ಸಂತೋಷದಿಂದ, ಗಂಧೋತ್ಕ

ಟ

ಟಾಯ - ಗಂಧೋತ್ಕಟಶ್ರೇಷ್ಠಿಗೋಸುಗ, ಅರ್ಥಂ - ದ್ರವ್ಯವನ್ನು, ಅದಾತ್-
ಕೊಟ್ಟನು.

ತಾತ್ಪರ್ಯ ॥ ಅನಂತರದಲ್ಲಿ ಮೂಢನಾದ ಕಾಷ್ಠಾಂಗಾರನು ಮೊಗುವಿಗೋಸುಗ ನಡೆಸುವ ಜಾತಕರಣ ನಾಮಕರಣ ಮಹೋತ್ಸವಗಳನ್ನು ತನಿಗೋಸುಗವಾಗಿ ನಡೆಸುತ್ತಾನೆಂದು ತಿಳಿದು ಸಂತೋಷದಿಂದ ದ್ರವ್ಯವನ್ನು ಕೊಟ್ಟನು. ॥೧೨೫॥

ಶ್ಲೋಕ॥ ತತ್ಕ್ಷಣೇ ತತ್ಪುರೇ ಜಾತಾನ್
ಜಾತಾನಪಿ ತದಾಜ್ಞಯಾ ।
ಲಬ್ಧ್ವಾ ವೈಶ್ಯಪತಿಃ ಪುತ್ರಂ
ಮಿತ್ರೈಸ್ಸಾರ್ಧಮವರ್ಧಯತ್ ॥ ೧೨೬ ॥

ಟೀ ॥ ವೈಶ್ಯಪತಿಃ-ವೈಶ್ಯಶ್ರೇಷ್ಠನಾದ ಗಂಧೋತ್ಕಟಶ್ರೇಷ್ಠಿಯು, ತತ್ಕ್ಷಣೇ-ಆ ಕ್ಷಣದಲ್ಲಿ, ತತ್ಪುರೇ-ಆ ಪಟ್ಟಣದೊಳು, ಜಾತಾನ್-ಹುಟ್ಟಿದಂಥ, ಜಾತಾನಪಿ-ಶಿಶುಗಳನ್ನುಕೂಡ, ತದಾಜ್ಞಯಾ-ಆ ಕಾಷ್ಠಾಂಗಾರನ ಅಪ್ಪಣೆಯಿಂದ, ಲಬ್ಧ್ವಾ-ಪಡೆದು, ಪುತ್ರಂ-ಮಗನನ್ನು, ಮಿತ್ರೈಸ್ಸಾರ್ಧಂ-ಸ್ನೇಹಿತರೊಡನೆಕೂಡ, ಅವರ್ಧಯತ್-ವೃದ್ಧಿಹೊಂದಿಸಿದನು.

ತಾತ್ಪರ್ಯ॥ ಗಂಧೋತ್ಕಟಶ್ರೇಷ್ಠಿಯು ಆ ಕ್ಷಣದಲ್ಲಿ ಆ ರಾಜಪುರೀ ಪಟ್ಟಣದೊಳು ಹುಟ್ಟಿದ ಮಕ್ಕಳನ್ನೆಲ್ಲಾ ರಾಜಾಜ್ಞೆಯಿಂದ ಪಡೆದು ತನ್ನ ಮಗನನ್ನು ಸ್ನೇಹಿತರೊಡನೆ ಕೂಡ ವೃದ್ಧಿಹೊಂದಿಸಿದನು.॥೧೨೬

ಶ್ಲೋಕ ॥ ಅಥ ಜಾತಸ್ಸುನಂದಾಯಾ
ನಂದಾಢ್ಯೋನಾಮ ನಂದನಃ ।
ತೇನ ಜೀವಂಧರೋ ರೇಜೇ
ಸೌಭ್ರಾತ್ರಂ ಹಿ ದುರಾಸದಮ್ ॥ ೧೨೭ ॥

ಟೀ ॥ ಅಥ-ಅನಂತರದಲ್ಲಿ, ಸುನಂದಾಯಾಃ-ಸುನಂದೆಗೆ, ನಂದಾಢ್ಯೋ ನಾಮ-ನಂದಾಢ್ಯನೆಂದು ಪ್ರಸಿದ್ಧನಾದ, ನಂದನಃ-ಮಗನು, ಜಾತಃ - ಹುಟ್ಟಿದನು, ತೇನ-ಆ ನಂದಾಢ್ಯನೊಡನೆ, ಜೀವಂಧರಃ-ಜೀವಂಧರನು, ರೇಜೇ-ಪ್ರಕಾಶಿಸಿದನು.,

ಸೌಭ್ರಾತ್ರಂ-ಒಳ್ಳೇಸಹೋದರರಿರುವಿಕೆಯು, ಪುರಾಸದಾಹಿ-ಸಾಧಾರಣವಾಗಿಪ
ಡೆಯಲಶಕ್ಯವಲ್ಲವೆ?.

ತಾತ್ಪರ್ಯ ॥ ಅನಂತರದಲ್ಲಿ ಗಂಧೋತ್ಕಟನ ಪತ್ನಿಯಾದ ಸುನಂ
ದೆಗೆ ನಂದಾಢ್ಯನೆಂಬ ಮಗನು ಜನಿಸಿದನು. ಆ ಮಗನಿಂದ ಜೀವಂಧರ
ನು ಪ್ರಕಾಶಿಸಿದನು. ಸಹೋದರರಿಗೆ ಪರಸ್ಪರ ಅತಿಶಯವಾದ ಪ್ರೀತಿ
ಯು ಎಲ್ಲರಿಗೂ ಉಂಟಾಗತಕ್ಕದ್ದಲ್ಲವಷ್ಟೆ?. ॥ ೧೦೩ ॥

ಶ್ಲೋಕ ॥ ಏವಂ ಸದ್ಬಂಧುಮಿತ್ರೋಽಯ-
ಮೇಧಮಾನೋ ದಿನೇದಿನೇ ।
ಅತಿಶೇತೇಸ್ಮ ಶೀತಾಂಶು-
ಮಕಲಂಕಾಂಗಭಾವತಃ ॥ ೧೦೪ ॥

ಟೀ ॥ ಏವಂ-ಈ ಪ್ರಕಾರವಾಗಿ, ಸದ್ಬಂಧುಮಿತ್ರಃ- ಶ್ರೇಷ್ಠರಾದ ಬಂಧುಗ
ಳೂ, ಸ್ನೇಹಿತರೂಉಳ್ಳ, ಅಯಂ-ಈ ಜೀವಂಧರಸ್ವಾಮಿಯು, ದಿನೇದಿನೇ- ಪ್ರತಿದಿ
ನದಲ್ಲೂ, ಏಧಮಾನಃ(ಸ್ಸನ್)-ವೃದ್ಧಿ ಹೊಂದುವವನಾಗಿ, ಅಕಲಂಕಾಂಗಭಾವತಃ-ನಿ
ರ್ದೋಷವಾದ ಶರೀರವುಳ್ಳವನಾದದೆಸೆಯಿಂದ, ಶೀತಾಂಶುಂ-ಚಂದ್ರನನ್ನು, ಅತಿ
ಶೇತೇಸ್ಮ-ಅತಿಕ್ರಮಿಸಿದನು.

ತಾತ್ಪರ್ಯ ॥ ಈ ಪ್ರಕಾರ ಜೀವಂಧರನು ಶ್ರೇಷ್ಠರಾದ ಬಂಧುಗ
ಳಿಂದಲೂ, ಸ್ನೇಹಿತರಿಂದಲೂ ಒಡಗೂಡಿದವನಾಗಿ ದಿನೇದಿನೇವೃದ್ಧಿಹೊಂ
ದುವವನಾಗಿ ಕಳಂಕರಹಿತವಾದ ಶರೀರವುಳ್ಳವನಾದುದರಿಂದ ಚಂದ್ರನಿ
ಗಿಂತಲೂ ಅತಿಶಯವನ್ನೈದಿದನು. ಅದರೆ, ಚಂದ್ರನೂಕೂಡ ಜೀವಂ
ಧರನಂತೆ ಸದ್ಬಂಧುಮಿತ್ರನೇ! ಎಂದರೆ.-ಸತ್-ನಕ್ಷತ್ರಗಳೆಂಬ, ಬಂಧು-
ಬಂಧುಗಳೂ, ಮಿತ್ರಃ-ಸಹಚರರೂ ಉಳ್ಳವನು, ನಕ್ಷತ್ರಗಳು ಚಂದ್ರನ
ಉದಯಾಸ್ತಮನಗಳಲ್ಲಿ ತಾವೂ ಸಮಾನ ದೆಸೆಯುಳ್ಳವುಗಳಾದುದರಿಂ
ದ ಕಷ್ಟಸುಖಗಳಿಗೆ ಭಾಗಿಯಾದ ಬಂಧುವಿನಂತಾದುದು. ನಿಯಮೇ
ನ ಒಂದೇ ಸ್ಥಳದಲ್ಲಿ ಅಂದರೆ.-ಆಕಾಶದಲ್ಲಿ ಸಾಹಚರ್ಯವಿರೋಣದರಿಂದ,
ಸ್ನೇಹಿತರಂತೆಯೂ ಆಯಿತು. ಪ್ರತಿದಿನವೂ ವೃದ್ಧಿಯೂಕೂಡ ಜೀವಂ
ಧರನಲ್ಲಿಯೂ, ಚಂದ್ರನಲ್ಲಿಯೂ ಸಮಾನವು. ಆದರೆ, ಚಂದ್ರನ ಕಳಂ

ಕೇ, ಜೀವಂಧರ ನಿಷ್ಕಳಂಕ; ಇದೇ ಜೀವಂಧರನಲ್ಲಿ ಅತಿಶಯವು. ಆಕಾಶಕ್ಕೆ ಪ್ರಕಾಶಿಸುವ ನಕ್ಷತ್ರದಿಂದೊಡಗೂಡಿದ ಪೂರ್ಣಮಾಸಿಚಂದ್ರನಂತೆ, ಭೂಲೋಕಕ್ಕೆ ತೇಜಸ್ವಿಗಳಾದ ಅನೇಕ ಮಿತ್ರರಿಂದೊಡಗೂಡಿದ ಜೀವಂಧರನು ಚಂದ್ರನೆಂದು ಭಾವವು.

ಶ್ಲೋಕ ॥ ತತಶ್ಶೈಶವಸಂಭೂಷ್ಣು-
ಸ್ಸರ್ವವ್ಯಸನದೂರಗಃ ।
ಪಂಚಮಂ ಚ ವಯೋ ಭೇಜೇ
ಭಾಗ್ಯೇ ಜಾಗ್ರತಿ ಕಾ ವ್ಯಥಾ ॥ ೧೦೯ ॥

ಟೀ ॥ ತತಃ-ಅನಂತರದಲ್ಲಿ, ಶೈಶವಸಂಭೂಷ್ಣುಃ- ಬಾಲ್ಯವಯಸ್ಸಿನಲ್ಲಿಇರುವ ಸರ್ವವ್ಯಸನದೂರಗಃ-ಸಕಲದುಃಖಗಳಿಗೂ ದೂರದಲ್ಲಿರುವ ಜೀವಂಧರನು, ಪಂಚಮಂ-ಐದನೆಯದಾದ, ವಯಃ-ವಯಸ್ಸನ್ನು, ಭೇಜೇ-ಹೊಂದಿದನು., ಭಾಗ್ಯೇ-ಅದೃಷ್ಟವು, ಜಾಗ್ರತಿ(ಸತಿ)- ಜಾಗರೂಕವಾಗಿರುತ್ತಿರಲಾಗಿ, ವ್ಯಥಾ- ದುಃಖವು, ಕಾ-ಯಾವುದು?.

ತಾತ್ಪರ್ಯ ॥ ವ್ಯಸನಸ್ವರೂಪವನ್ನೇ ತಿಳಿಯಲನರ್ಹ ಕಾಲವಾದ ಬಾಲ್ಯವಯಸ್ಸಿನಲ್ಲಿರುವ ಜೀವಂಧರನಿಗೆ ಐದನೆಯ ವರುಷವು ಪ್ರಾಪ್ತವಾದುದು. ಭಾಗ್ಯಶಾಲಿಗೆ ದುಃಖವು ಯಾವ ಕಾರಣದಿಂದ ಸಂಭವಿಸುವುದು? ॥ ೧೦೯ ॥

ಶ್ಲೋಕ ॥ ಅಥಾನರ್ಥಕಮವ್ಯಕ್ತ-
ಮತಿಹೃದ್ಯಂ ಚ ವಾಙ್ಮಯಮ್ ।
ಮುಕ್ತ್ವಾತಿವ್ಯಕ್ತಗೀರಾಸೀ-
ತ್ಸ್ವಯಂ ವೃಣ್ವನ್ತಿ ಹಿ ಶ್ರಿಯಃ ॥ ೧೧೦ ॥

ಟೀ ॥ ಅಥ-ಅನಂತರದಲ್ಲಿ, ಸಃ-ಆ ಜೀವಂಧರನು, ಅನರ್ಥಕಂ- ಅರ್ಥಶೂನ್ಯವಾಗಿಯೂ, ಅವ್ಯಕ್ತಂ-ತೊದಲುನುಡಿಯಾಗಿಯೂ, ಅತಿಹೃದ್ಯಂ-ಅತ್ಯಂತ ಮನೋಹರವಾಗಿಯೂ ಇರುವ, ವಾಙ್ಮಯಂ- ವಚನಸ್ವರೂಪವನ್ನು, ಮುಕ್ತ್ವಾ-

ಬಿಟ್ಟು, ಅತಿವ್ಯಕ್ತಗೀಃ(ಸ್ಸ್ಕ್)-ಅತಿ ಸ್ಫುಟವಾಕ್ಕುಳ್ಳವನಾಗಿ, ಆಸೀತ್-ಆದನು. ಸ್ತ್ರಿಯಃ-ಸ್ತ್ರೀಯರು, ಸ್ವಯಂ-ತಾವಾಗಿಯೇ, ವೃಣ್ವಂತಿಹಿ-ವರಿಸುತ್ತಾರಲ್ಲವೆ?

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರನು ಅರ್ಥಶೂನ್ಯವಾಗಿ, ತೊದಲು ನುಡಿಯಾಗಿ, ಅತಿರಮ್ಯವಾಗಿರುವವಾಕ್ಕನ್ನು ಬಿಟ್ಟು ಅತಿ ಸ್ಫುಟವಾದ ವಾಕ್ಕುಳ್ಳವನಾದನು. ಪ್ರಯತ್ನವಿಲ್ಲದೆ ವಯಃಕ್ರಮದಿಂ ದಾಸಃಗಿ ಅರ್ಭವಿಸಿದ ಸ್ಫುಟವಾಕ್ಕು, ಸ್ತ್ರೀಯುವತಿಯನ್ನು ಸ್ವಯಂ ವರಿಸುವಂತೆ ಜೀವಂಧರನನ್ನು ವರಿಸಿತೋ ಏನು ? ॥೧೧೦॥

ಶ್ಲೋಕ ॥ ಆಚಾರ್ಯಕವಪುಃ ಕಶ್ಚಿ-
ದಾರ್ಯನಂದೀತಿ ಕೀರ್ತಿತಃ ।
ಆಸೀದಸ್ಯ ಗುರುಃ ಪುಣ್ಯಾ-
ದ್ಗುರುರೇವ ಹಿ ದೇವತಾ ॥೧೧೧॥

ಟೀ ॥ ಆಚಾರ್ಯಕವಪುಃ-ಆಚಾರ್ಯತ್ವವೆಂಬ ಧರ್ಮವೇ ಸ್ವರೂಪವಾಗುಳ್ಳ, ಆರ್ಯನಂದೀತಿ-ಅರ್ಯನಂದಿಯೆಂದು, ಕೀರ್ತಿತಃ-ಹೇಳಲ್ಪಟ್ಟ, ಕಶ್ಚಿತ್-ಒಬ್ಬನು, ಅಸ್ಯ-ಈ ಜೀವಂಧರನಿಗೆ, ಪುಣ್ಯಾತ್-ಸುಕೃತದ ದೆಸೆಯಿಂದ, ಗುರು(ಸ್ಸ್ಕ್)-ಗುರುವಾಗಿ, ಆಸೀತ್-ಆದನು., ಗುರುರೇವ-ಆಚಾರ್ಯನೇಯೆ, ದೇವತಾಹಿ-ದೇವತೆಯಲ್ಲವೆ?.

ತಾತ್ಪರ್ಯ ॥ ಆಚಾರ್ಯಧರ್ಮವೇ ಶರೀರವನ್ನು ಧರಿಸಿದೆಯೋ ಎಂಬಂತೆ ಆರ್ಯನಂದಿ ಎಂದು ನಾಮಧೇಯವುಳ್ಳ ಒಬ್ಬನು ಈ ಜೀವಂಧರನ ಪುಣ್ಯದ ದೆಸೆಯಿಂದ ಗುರುವಾಗಿ ದೊರೆಕಿದನು. ಗುರುವೇ ದೇವತೆಯಲ್ಲವೆ? . ( ಯೋಗ್ಯನಾದ ಗುರುವು ಪುಣ್ಯಹೊರತು ದೊರಕಲಾರನು. ಗುರುವಿನಲ್ಲಿಯೂ, ದೇವರಲ್ಲಿಯೂ ಸಮಾನಭಕ್ತಿಯನ್ನಿಡಬೇಕು ) . ॥ ೧೧೧ ॥

ಶ್ಲೋಕ ॥ ನಿಷ್ಪ್ರತ್ಯೂಹೇಷ್ಟಸಿದ್ಧ್ಯರ್ಥಂ
ಸಿದ್ಧಪೂಜಾದಿಪೂರ್ವಕಮ್ ।
ಸಿದ್ಧಮಾತೃಕಯಾಸಿದ್ಧಾ-
ಮಥ ಲೇಭೇ ಸರಸ್ವತೀಮ್ ॥ ೧೧೩ ॥

ಟೀ ॥ ಸಃ-ಆ ಜೀವಂಧರನು, ನಿಷ್ಪ್ರತ್ಯೂಹೇಷ್ಟಸಿದ್ಧ್ಯರ್ಥಂ-ನಿರ್ವಿಘ್ನವಾಗಿ ಇಷ್ಟಸಿದ್ಧಿಯಾಗುವುದಕ್ಕೋಸುಗ, ಸಿದ್ಧಪೂಜಾದಿಪೂರ್ವಕಂ-ಸಿದ್ಧ ಪರಮೇಷ್ಠಿಗಳ ಪೂಜೆಯೇ ಮೊದಲಾಗುಳ್ಳ ಕ್ರಿಯೆಗಳೊಡನೆ ಕೂಡಿದ್ದಾಗಿ, ಸಿದ್ಧಮಾತೃಕಯಾ-ಓಂನಮಸ್ಸಿದ್ಧೇಭ್ಯಃ ಎಂಬ ವರ್ಣಾವಳೀರೂಪವಾದ ಮೇಲುಪಂಕ್ತಿಯಿಂದ, ಸಿದ್ಧಾಂ-ಸಿದ್ಧಿಯನ್ನು ಹೊಂದಿರುವಂಥ, ಸರಸ್ವತೀಂ-ದೇವಿಯನ್ನು, ವಿದ್ಯೆಯನ್ನು, ಅಥ-ಅನಂತರದಲ್ಲಿ, ಲೇಭೇ—ಪಡೆದನು.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರನು ನಿರ್ವಿಘ್ನವಾಗಿ ಇಷ್ಟಸಿದ್ಧಿಗೋಸುಗ ಮೊದಲು ಸಿದ್ಧಪರಮೇಷ್ಠಿಯ ಪೂಜೆಯನ್ನುಮಾಡಿ ಸಿದ್ಧಮಂತ್ರ ವರ್ಣಾವಳಿಯ ಮೇಲುಪಂಕ್ತಿಯಿಂದೊಡಗೂಡಿದ ವಿದ್ಯೆಯನ್ನು ಪಡೆದನು. ಶಾಸ್ತ್ರೋಕ್ತಪ್ರಕಾರ ವಿದ್ಯಾಭ್ಯಾಸ ಮಾಡಿದನೆಂದು ಭಾವವು.

ಇತಿ ಶ್ರೀಮದ್ವಾದೀಭಸಿಂಹಸೂರಿ ವಿರಚಿತವಾದ ಕ್ಷತ್ರಚೂಡಾಮಣಿಯೆಂಬೀ ಕಾವ್ಯದೊಳು ಕುರುಕುಲಶ್ರೇಷ್ಠನಾದ ಸತ್ಯಂಧರ ಮಹಾರಾಜನ ಪ್ರಜಾಪರಿಪಾಲನಾದಿ ದೇಹಾವಸಾನಪರ್ಯಂತವೃತ್ತಾಂತವೂ, ತದನಂತರ ಗರ್ಭಿಣಿಯಾಗಿದ್ದ ತತ್ಪತ್ನಿಯಾದ ವಿಜಯಾಮಹಾದೇವಿಯೊಳು ಶ್ಮಶಾನದಲ್ಲಿ ಮಹಾಪುಣ್ಯಪುರುಷ ಚರಮಾಂಗಧರ ಜೀವಂಧರಕುಮಾರೋತ್ಪತ್ತಿಯೂ, ಆ ಜೀವಂಧರರಿಗೆ ಗಂಧೋತ್ಕಟಶ್ರೇಷ್ಠಿಕಾರಿತ ವಿದ್ಯಾಭ್ಯಾಸಪರ್ಯಂತ ವೃತ್ತಾಂತವರ್ಣನವೆಂಬಿಲ್ಲಿಗೆ,

ಪ್ರಥಮಲಂಬವು ಸಮಾಪ್ತವಾದುದು.





‖ ಓಂ ನಮಸ್ಸಿದ್ಧೇಭ್ಯಃ ‖

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ

# ದ್ವಿತೀಯೋಲಂಬಃ.

ಶ್ಲೋಕ ‖ ಅಥ ವಿದ್ಯಾಗೃಹಂ ಕಿಂಚಿ-
ದಾಸಾದ್ಯ ಸಖಿ ಮಣ್ಡಿತಃ |
ಪಂಡಿತಾದ್ವಿಶ್ವವಿದ್ಯಾಯಾ-
ಮಧ್ಯಗೀಷ್ಟಾತಿಪಂಡಿತಃ ‖ ೧ ‖

ಟೀ ‖ ಅಥ-ಅನಂತರದಲ್ಲಿ, ಅತಿಪಂಡಿತಃ-ಪಂಡಿತರನ್ನತಿಕ್ರಮಿಸಿದ ಮೇಧಾವಿಯಾದ ಜೀವಂಧರನು, ಕಿಂಚಿತ್-ಒಂದಾನೊಂದು, ವಿದ್ಯಾಗೃಹಂ-ವಿದ್ಯಾಶಾಲೆಯನ್ನು, ಆಸಾದ್ಯ-ಹೊಂದಿ, ಸಖಿಮಂಡಿತಸ್ಸನ್ - ಮಿತ್ರರಿಂದಲಂಕರಿಸಲ್ಪಟ್ಟವನಾಗಿ, ಪಂಡಿತಾತ್-ವಿದ್ವಾಂಸರಾದ ಆರ್ಯನಂದ್ಯಾಚಾರ್ಯರದೆಸೆಯಿಂದ, ವಿಶ್ವವಿದ್ಯಾಯಾಂ-ಸಮಸ್ತವಿದ್ಯೆಗಳಲ್ಲಿಯೂ, ಅಧ್ಯಗೀಷ್ಟ-ಅಧ್ಯಯನ ಮಾಡಿದನು.

ತಾತ್ಪರ್ಯ ‖ ಅನಂತರದಲ್ಲಿ ಮಹಾಮೇಧಾವಿಯಾದ ಜೀವಂಧರನು ಒಂದು ವಿದ್ಯಾಶಾಲೆಯನ್ನೈದಿ ಮಿತ್ರರೊಡಗೂಡಿ ಮಹಾಪಂಡಿತರಾದ ಆರ್ಯನಂದ್ಯಾಚಾರ್ಯರ ದೆಸೆಯಿಂದ ಸಮಸ್ತ ವಿದ್ಯೆಗಳಲ್ಲೂ ಅಧ್ಯಯನ ಮಾಡಿದನು. ‖ ೧ ‖

ಶ್ಲೋಕ ‖ ತಸ್ಯ ಪ್ರಶ್ರಯಶುಶ್ರೂಷಾ-
ಚಾತುರ್ಯಾದ್ಗುರುಗೋಚರಾತ್ |
ಸ್ಫೀತಾಶ್ಚ ವಾಭವನ್ ವಿದ್ಯಾ-
ಗುರುಸ್ನೇಹೋ ಹಿ ಕಾಮಸೂಃ ‖ ೨ ‖

ಟೀ ‖ ತಸ್ಯ-ಆ ಜೀವಂಧರನಿಗೆ, ಗುರುಗೋಚರಾತ್ - ಗುರುವಿಷಯಕವಾದ,

ಪ್ರಶ್ರಯಶುಶ್ರೂಷಾಚಾತುರ್ಯಾತ್-ವಿನಯದಿಂದೊಡಗೂಡಿದ ಉಪಚಾರದ ಕೌಶಲ್ಯದ ದೆಸೆಯಿಂದ, ವಿದ್ಯಾಃ-ವಿದ್ಯೆಗಳು, ಸ್ಮೃತಾಇವ-ಸ್ಮರಿಸಲ್ಪಟ್ಟವುಗಳೋಪಾದಿಯಲ್ಲಿ, ಅಭವನ್-ಆದವು., ಗುರುಸ್ನೇಹಃ- ಗುರುಭಕ್ತಿಯು, ಕಾಮಸೂಃಹಿ - ಇಷ್ಟಾರ್ಥವನ್ನುಂಟುಮಾಡುವುದಲ್ಲವೆ?.

ತಾತ್ಪರ್ಯ ॥ ಆ ಜೀವಂಧರನಿಗೆ ಗುರುಭಕ್ತಿ ಪೂರ್ವಕ ವಿನಯದಿಂದ ಮಾಡಿದ ಉಪಚಾರಬಲದಿಂದ ಸಕಲವಿದ್ಯೆಗಳೂ ಸ್ಮೃತಿವಿಷಯವಾಗಿ ಮಾಡಲ್ಪಟ್ಟಂತೆ ಆದವು. ಗುರುಭಕ್ತಿಯು ಇಷ್ಟಾರ್ಥವನ್ನು ಕೊಡುವುದಲ್ಲವೆ? ॥ ೧ ॥

ಶ್ಲೋಕ ॥ ಅನುಜೀವಕಮೇವಾತ್ರ
ಜೀವಲೋಕೇ ವಿಪಶ್ಚಿತಃ ।
ಇತಿ ನಿಶ್ಚಯತಸ್ಸೂರಿ-
ಸ್ಸುತರಾಂಪ್ರೀತಿಮವ್ರಜತ್ ॥ ೩ ॥

ಟೀ ॥ ಅತ್ರಜೀವಲೋಕೆ-ಈ ಮನುಷ್ಯಲೋಕದಲ್ಲಿ, ವಿಪಶ್ಚಿತಃ - ವಿದ್ವಾಂಸರು, ಅನುಜೀವಕಮೇವ-ಜೀವಂಧರಾನಂತರ ಪರಿಗಣನೀಯರು., ಇತಿ-ಈಪ್ರಕಾರ, ನಿಶ್ಚಯತಃ-ನಿಶ್ಚಯದ ದೆಸೆಯಿಂದ, ಸೂರಿಃ-ಆರ್ಯನಂದ್ಯಾಚಾರ್ಯರು, ಸುತರಾಂ-ಬಹಳವಾಗಿ, ಪ್ರೀತಿಂ-ಸಂತೋಷವನ್ನು, ಅವ್ರಜತ್-ಐದಿದರು.

ತಾತ್ಪರ್ಯ ॥ ಈ ಲೋಕದಲ್ಲಿ ವಿದ್ವಾಂಸರು ಜೀವಂಧರನಿಗಿಂತಲೂ ಅನಂತರಗಣ್ಯರೇ ಹೊರತು ಜೀವಂಧರನಿಗೆ ಅಧಿಕರೂ ಇಲ್ಲವು ಸದೃಶರೂ ಇಲ್ಲವು. ಹೀಗೆಂದು ನಿಶ್ಚಯಿಸಿ ಗುರುವು ಬಹಳ ಸಂತೋಷಿಸಿದರು. ॥ ೩ ॥

ಶ್ಲೋಕ ॥ ಆತ್ಮಕೃತ್ಯಮಕೃತ್ಯಂ ಚ
ಸಫಲಂ ಪ್ರೀತಯೇ ನೃಣಾಮ್ ।
ಕಿಂ ಪುನಶ್ಶಾಸ್ತ್ರಭೂತಂ ತ-
ತ್ರಿಂವಿದ್ಯಾಸ್ಥಾಪನಾತ್ಪರಮ್ ॥ ೪ ॥

ಟೀ ॥ ನೃಣಾಂ-ಮನುಷ್ಯರಿಗೆ, ಆತ್ಮಕೃತ್ಯಂ-ತನ್ನಕೆಲಸವು, ಅಕೃತ್ಯಂಚ-ಕೆಟ್ಟಕೆಲಸವಾದಾಗ್ಯೂ, ಸಫಲಂಚೇತ್-ಪ್ರಯೋಜನಸಿದ್ಧಿಯಾದದ್ದೇಆದರೆ, ಪ್ರೀತಯೇ- ಸಂತೋಷಕ್ಕೋಸುಗ ಆಗುವುದು. ಶ್ಲಾಘ್ಯಭೂತಂ - ಶ್ಲಾಘಿಸುವುದಕ್ಕೆ ಯೋಗ್ಯವಾದ, ತತ್-ಆ ಕೆಲಸವಾದರೋ, ಕಿಂಪುನಃ-ಹೇಳತಕ್ಕದ್ದೇನು?, ವಿದ್ಯಾಸ್ಥಾಪನಾತ್-ವಿದ್ಯಾಪ್ರದಾನಕ್ಕಿಂತಲೂ, ಪರಂ-ಉತ್ಕೃಷ್ಟವಾದದ್ದು, ಕಿಂ- ಯಾವುದು ?.

ತಾತ್ಪರ್ಯ ॥ ಲೋಕದಲ್ಲಿ ತಾನು ಮಾಡುವಕೆಲಸವು ಕೆಟ್ಟದ್ದಾದರೂ ಫಲಿಸಿದರೆ ಸಂತೋಷವು; ಹೀಗಿರುವಲ್ಲಿ ಸರ್ವೋತ್ತಮವಾದ ವಿದ್ಯಾಪ್ರದಾನ ಕಾರ್ಯವು ಸಫಲವಾದುದರಿಂದ ಗುರುವು ಬಹಳ ಸಂತೋಷಿಸಿದರು. ॥ ೪ ॥

ಶ್ಲೋಕ ॥ ಅಥ ಪ್ರಸನ್ನಧೀಸ್ಸೂರಿ-
ರಂತೇವಾಸಿನಮೇಕದಾ ॥
ಏಕಾನ್ತೇ ಹಿ ನಿಜಪ್ರಾನ್ತ-
ಮಾವಸನ್ತಮಚೀಕಥತ್ ॥ ೫ ॥

ಟೀ ॥ ಅಥ-ಅನಂತರದಲ್ಲಿ, ಪ್ರಸನ್ನಧೀಃ-ನಿರ್ಮಲಬುದ್ಧಿಯುಳ್ಳ, ಸೂರಿಃ-ಆರ್ಯನಂದ್ಯಾಚಾರ್ಯರು, ಏಕದಾ-ಒಂದಾನೊಂದುಕಾಲದಲ್ಲಿ, ಏಕಾಂತೇ- ರಹಸ್ಯದೊಳು, ನಿಜಪ್ರಾಂತಂ-ತನ್ನಸಮೀಪದಲ್ಲಿ, ಆವಸಂತಂ-ಇರುತಲಿರುವ, ಅಂತೇವಾಸಿನಂ-ಶಿಷ್ಯನನ್ನು, ಅಚೀಕಥದ್ಧಿ-ಹೇಳಿದರಲ್ಲವೆ?.

ತಾತ್ಪರ್ಯ ॥ ಅನಂತರದಲ್ಲಿ ಸಂತುಷ್ಟರಾದ ಗುರುಗಳು ಒಂದು ದಿವಸ ಏಕಾಂತದಲ್ಲಿ ತನ್ನ ಸಮೀಪದಲ್ಲಿರುವ ಶಿಷ್ಯನಾದ ಜೀವಂಧರನನ್ನು ಕುರಿತು ಒಂದು ರಹಸ್ಯವಾದ ವೃತ್ತಾಂತವಂ ಹೇಳಿದರು. ॥ ೫ ॥

ಶ್ಲೋಕ ॥ ಶ್ರುತಶಾಲಿನ್ ಮಹಾಭಾಗ
ಶ್ರೂಯತಾಮಿಹ ಕಸ್ಯಚಿತ್ ।
ಚರಿತಂ ಚರಿತಾರ್ಥೇನ
ಯದತ್ಯರ್ಥಂ ದಯಾವಹಮ್ ॥ ೬ ॥

ಟೀ ॥ ಹೇ ಶ್ರುತಶಾಲಿನ್-ಎಲ್ಲೈ ಶಾಸ್ತ್ರಜ್ಞಾನದಿಂದ ಪ್ರಕಾಶಿಸುವವನೇ!, ಮಹಾಭಾಗ-ಮಹಾಭಾಗ್ಯಶಾಲಿಯೆ !, ಇಹ-ಈ ಸಮಯದಲ್ಲಿ, ( ಈಲೋಕದಲ್ಲಿ ) ಕಸ್ಯಚಿತ್-ಒಬ್ಬಪುರುಷನ, ಚರಿತಂ-ಚರಿತ್ರವು, ಚರಿತಾರ್ಥೇನ-ಕೃತಕೃತ್ಯನಾದ ನಿನ್ನಿಂದ, ಶ್ರೂಯತಾಂ-ಕೇಳಲ್ಪಡಲಿ., ಯತ್-ಯಾವಚರಿತ್ರವು, ಅತ್ಯರ್ಥಂ-ಅಧಿಕವಾಗಿ, ದಯಾವಹಂ-ಕರುಣೆಯನ್ನುಂಟುಮಾಡುವುದೋ?.

ತಾತ್ಪರ್ಯ ॥ ಎಲ್ಲೈ ಶಾಸ್ತ್ರಜ್ಞಾನಶಾಲಿಯಾದ ಮಹಾಭಾಗ್ಯಶಾಲಿಯೆ ! ಒಬ್ಬ ಪುರುಷನ ದಯಾಯೋಗ್ಯವಾದ ಚರಿತ್ರವು ಕೇಳಲ್ಪಡಲಿ. ನೀನು ಕೃತಾರ್ಥನು. ( ಅಂದರೆ ) ನನಗೆ ಮಹಾಪ್ರಯೋಜನವನ್ನುಂಟುಮಾಡಿರತಕ್ಕವನು. ಅದನ್ನೇ ವಿಸ್ತಾರವಾಗಿ ಹೇಳುತ್ತೇನೆಂದು ಭಾವವು. ॥ ೬ ॥

ಶ್ಲೋಕ ॥ ವಿದ್ಯಾಧರಾಸ್ಪದೇಲೋಕೇ
ಲೋಕಪಾಲಾಹ್ವಯಾನ್ವಿತಃ ।
ಲೋಕಂ ವೈ ಪಾಲಯನ್ ಭೂಪಃ
ಕೋಽಪಿ ಕಾಲಮಜೀಗಮತ್ ॥ ೭ ॥

ಟೀ ॥ ವಿದ್ಯಾಧರಾಸ್ಪದೇ-ವಿದ್ಯಾಧರರಿಗೆ ಸ್ಥಾನವಾದ, ಲೋಕೆ-ಲೋಕದಲ್ಲಿ, ಲೋಕಪಾಲಾಹ್ವಯಾನ್ವಿತಃ-ಲೋಕಪಾಲನೆಂಬ ನಾಮಧೇಯದಿಂದೊಡಗೂಡಿರುವ, ಕೋಽಪಿಭೂಪಃ-ಒಬ್ಬಧೊರೆಯು, ಲೋಕಂ-ಲೋಕವನ್ನು, ಪಾಲಯನ್(ಸನ್)-ಪರಿಪಾಲಿಸುವವನಾಗಿ, ಕಾಲಂ-ಕಾಲವನ್ನು, ಅಜೀಗಮದ್ವೈ-ಕಳೆದನಲ್ಲವೆ?.

ತಾತ್ಪರ್ಯ ॥ ವಿದ್ಯಾಧರರಿಗೆ ಸ್ಥಾನವಾದ ಲೋಕದಲ್ಲಿ ಲೋಕಪಾಲನೆಂದು ನಾಮಧೇಯವುಳ್ಳ ಒಬ್ಬ ಧೊರೆಯು ಪ್ರಜಾಪರಿಪಾಲನ ಮಾಡುವವನಾಗಿ ಕಾಲವನ್ನು ಕಳೆದನಲ್ಲವೆ ? ॥ ೭ ॥

ಶ್ಲೋಕ ॥ ಕ್ಷಣಕ್ಷೀಣತ್ವಮೈಶ್ವರ್ಯೇ
ಕ್ಷೀಬಾಣಾಮಿವ ಚೋದಯತ್ ।
ಕ್ಷೇಪೀಯಃ ಪಶ್ಯತಾಂ ನಶ್ಯ-
ದಭ್ರಸ್ಸ್ಮಿಕ್ಷಿಪ್ಟ ಸೋಽಧಿರಾಟ್ ॥ ೮ ॥

ಟೀ ॥ ಅಧಿರಾಟ್-ಮಂಡಲೇಶ್ವರನಾದ, ಸಃ-ಆ ವಿದ್ಯಾಧರರಾಜನು, ಐಶ್ವರ್ಯ-ಸಂಪತ್ತಿನಲ್ಲಿ, ಕ್ಷಣಕ್ಷೀಣತ್ವಂ-ಅತ್ಯಲ್ಪಕಾಲದಲ್ಲಿನಾಶಹೊಂದೋಣವನ್ನು, ಕ್ಷೀಬಾಣಾಂ-ಮತ್ತರಾದವರಿಗೆ, ಚೋದಯದಿವ-ಪ್ರೇರಿಸುತಲಿದೆಯೋ ಎಂಬಹಾಗೆ, ಕ್ಷೇಪೀಯಃ-ಕ್ಷಿಪ್ರಗಾಮಿಯಾದ, ಪಶ್ಯತಾಂ-ನೋಡುವವರ ಕಣ್ಣಿದುರಿಗೇನೆ, ನಶ್ಯತ್-ನಾಶಹೊಂದುತ್ತಿರುವ, ಅಭ್ರಂ-ಮೇಘವನ್ನು, ಐಕ್ಷಿಷ್ಟ-ನೋಡಿದನು.

ತಾತ್ಪರ್ಯ ॥ ವಿದ್ಯಾಧರ ರಾಜನಾದ ಆ ಲೋಕಪಾಲನು ಐಶ್ವರ್ಯವು ಸ್ಥಿರವೆಂದು ಮದಿಸಿರುವ ಜನಗಳಿಗೆ ಐಶ್ವರ್ಯವು ಕ್ಷಣಮಾತ್ರದಲ್ಲಿನಾಶವನ್ನೈದುವುದೆಂಬದಾಗಿ ಪ್ರೇರಿಸುತ್ತಿದೆಯೋ ಎಂಬಹಾಗೆ ಆಕಾಶದಲ್ಲಿ ಶೀಘ್ರವಾಗಿ ಹೋಗುತ್ತಲೇ ನೋಡುತ್ತಿದ್ದಹಾಗೆಯೇ ಕರಗಿಹೋದಒಂದು ಮೇಘವನ್ನು ನೋಡಿದನು. ॥ ೮ ॥

ಶ್ಲೋಕ ॥ ತದ್ವೀಕ್ಷಣೇನ ವೈರಾಗ್ಯಂ
ವಿಜಜೃಂಭೇ ಮಹೀಭುಜಃ ।
ಸಂಫುಲ್ಲತಿ ಹಿ ನಿರ್ವೇಗೋ
ಭವ್ಯಾನಾಂ ಕಾಲಪಾಕತಃ ॥ ೯ ॥

ಟೀ ॥ ತದ್ವೀಕ್ಷಣೇನ-ಆ ಮೇಘವನ್ನು ನೋಡೋಣದರಿಂದ, ಮಹೀಭುಜಃ-ರಾಜನಿಗೆ, ವೈರಾಗ್ಯಂ-ವೈರಾಗ್ಯವು, ವಿಜಜೃಂಭೇ-ವೃದ್ಧಿಹೊಂದಿದುದು., ಭವ್ಯಾನಾಂ-ಭವ್ಯಪ್ರಾಣಿಗಳಿಗೆ, ಕಾಲಪಾಕತಃ - ಕಾಲಲಬ್ಧಿ ರೂಪವಾದ ಪರಿಪಾಕದಶೆಯಿಂದ, ನಿರ್ವೇಗಃ-ವೈರಾಗ್ಯವು, ಸಂಫುಲ್ಲತಿಹಿ-ವೃದ್ಧಿಹೊಂದುತ್ತಲ್ಲವೆ?.

ತಾತ್ಪರ್ಯ ॥ ಆ ಮೇಘವನ್ನು ನೋಡೋಣದರಿಂದ ವಿದ್ಯಾಧರ ರಾಜನಿಗೆ ವೈರಾಗ್ಯವು ವೃದ್ಧಿಹೊಂದಿತು. ಆಸನ್ನಭವ್ಯ ಪ್ರಾಣಿಗಳಿಗೆ ಕಾಲಲಬ್ಧಿ ಉಂಟಾದಲ್ಲಿ ವೈರಾಗ್ಯವು ವೃದ್ಧಿಹೊಂದುವುದಲ್ಲವೆ? ॥ ೯ ॥

ಶ್ಲೋಕ ॥ ತತೋಯಂ ಪುತ್ರನಿಕ್ಷಿಪ್ತ
ರಾಜ್ಯಭಾರಃ ಕ್ಷಿತೀಶ್ವರಃ ।
ಜೈನೀಂ ದೀಕ್ಷಾಮುಪಾದತ್ತ
ಯಸ್ಯಾಂ ಕಾಯೇಪಿ ಹೇಯತಾ ॥ ೧೦ ॥

ಟೀ ॥ ತತಃ-ಅನಂತರದಲ್ಲಿ, ಅಯಂ ಕ್ಷಿತೀಶ್ವರಃ-ರಾಜನಾದ ಈ ಲೋಕಪಾಲನು, ಪುತ್ರಸಿಕ್ಷಿಪ್ತರಾಜ್ಯಭಾರ(ಸ್ಸನ್)-ಮಗನಲ್ಲಿರಿಸಲ್ಪಟ್ಟ ರಾಜ್ಯಭಾರವುಳ್ಳವನಾಗಿ, ಜೈನೀಂ-ಜಿನೇಶ್ವರಸಂಬಂಧಿಯಾದ, ದೀಕ್ಷಾಂ-ದೀಕ್ಷೆಯನ್ನು, ಉಪಾದತ್ತ-ಅಂಗೀಕರಿಸಿದನು., ಯಸ್ಯಾಂ-ಯಾವಜಿನದೀಕ್ಷೆಯಲ್ಲಿ, ಕಾಯೇಪಿ-ಶರೀರದಲ್ಲಿಯೂಕೂಡ, ಹೇಯತಾ-ಜಿಗುಪ್ಸೆಯೋ?.

ತಾತ್ಪರ್ಯ ॥ ಅನಂತರದಲ್ಲಿ ಲೋಕಪಾಲ ಮಹಾರಾಜನು ಪುತ್ರನಲ್ಲಿ ರಾಜ್ಯಭಾರವನ್ನು ಸ್ಥಾಪಿಸಿ ಜಿನದೀಕ್ಷೆಯನ್ನಂಗೀಕರಿಸಿದನು. ಯಾವಜಿನದೀಕ್ಷೆಯ ಲ್ಲಿ ಶರೀರದಲ್ಲಿಕೂಡ ವೈರಾಗ್ಯವೊ ? ( ಅಂದರೆ.- ಜಿನದೀಕ್ಷೆಯು ಅತಿಕಠಿನವೆಂಬ ಭಾವವು. ) ॥ ೧೦ ॥

ಶ್ಲೋಕ ॥ ತಪಾಂಸಿ ತಪ್ಯಮಾನಸ್ಯ
ತಸ್ಯಂಚಾಸೀನಹೋ ಪುನಃ ।
ಭಸ್ಮಕಾಖ್ಯೋ ಮಹಾರೋಗೋ
ಭುಕ್ತಂ ಯೋ ಭಸ್ಮಯೇತ್‌ಕ್ಷಣಾತ್ ॥ ೧೧ ॥

ಟೀ ॥ ತಪಾಂಸಿ-ತಪಸ್ಸುಗಳನ್ನು, ತಪ್ಯಮಾನಸ್ಯ- ಮಾಡುತಲಿರುವ, ತಸ್ಯಚಪುನಃ-ಆ ಲೋಕಪಾಲಮುನಿಗಾದರೋ, ಭಸ್ಮಕಾಖ್ಯಃ-ಭಸ್ಮಕವೆಂತೆಂಬ, ಮಹಾರೋಗಃ- ಪ್ರಬಲರೋಗವು, ಆಸೀತ್-ಉಂಟಾಯಿತು., ಅಹೋ!-ಆಶ್ಚರ್ಯವು!!, ಯಃ-ಯಾವ ರೋಗವು, ಭುಕ್ತಂ-ಭೋಜನಮಾಡಲ್ಪಟ್ಟ ವಸ್ತುವನ್ನು, ಕ್ಷಣಾತ್-ಕ್ಷಣಕಾಲದಪರಿಸೆಯಿಂದ, ಭಸ್ಮಯೇತ್-ಭಸ್ಮವನ್ನಾಗಿ ಜೀರ್ಣಮಾಡುವುದೋ?.

ತಾತ್ಪರ್ಯ ॥ ತಪಸ್ಸುಗಳನ್ನು ಮಾಡುತ್ತಿರುವ ಆ ಲೋಕಪಾಲನಿಗೆ ಭಸ್ಮಕವೆಂಬ ಪ್ರಬಲರೋಗವು ಉಂಟಾದುದು. ಯಾವ ಭಸ್ಮಕರೋಗವು ಭೋಜನಮಾಡಲ್ಪಟ್ಟ ವಸ್ತುವನ್ನು ಕ್ಷಣಮಾತ್ರದಲ್ಲಿಯೇಭಸ್ಮೀಕರಿಸುವುದೋ ಆ ಭಸ್ಮಕರೋಗವು ಸರ್ವದಾ ಮಹಾ ಹಸಿವನ್ನುಂಟುಮಾಡಿ ತಪೋವಿಘ್ನವಾಯಿತೆಂಬಭಿಪ್ರಾಯವು. ॥ ೧೧ ॥

ಶ್ಲೋಕ ॥ ನಹಿ ಪಾರಯಿತುಂ ಶಕ್ಯಂ
ದುಷ್ಕರ್ಮಾಲ್ಪತಪಸ್ಯಯಾ ।

ವಿಸ್ಫುಲಿಂಗೇನ ಕಿಂ ಶಕ್ಯಂ
ದಗ್ಧುಮಾರ್ದ್ರಮಪೀಂಧನಮ್ ॥೧೨॥

ಟೀ॥ ದುಷ್ಕರ್ಮ-ಪಾಪಕರ್ಮವು, ಅಲ್ಪತಪಸ್ಯಯಾ- ಅಲ್ಪವಾದ ತಪಸ್ಸಿನಿಂದ, ವಾರಯಿತುಂ-ತಡೆಯಲೋಸುಗ, ನಶಕ್ಯಂ-ಸಾಧ್ಯವಾಗುವುದಿಲ್ಲವಷ್ಟೆ?, ಆರ್ದ್ರಮಪಿ-ಹಸೀದಾಗಿಯೂ ಇರುವ, ಇಂಧನಂ-ಸೌದೆಯು, ವಿಸ್ಫುಲಿಂಗೇನ-ಬೆಂಕಿಯ ಸಣ್ಣಕಿಡಿಯಿಂದ, ದಗ್ಧುಂ-ದಹಿಸಲೋಸುಗ, ಶಕ್ಯಂ ಕಿಂ-ಸಾಧ್ಯವಾದೀತೇ ಏನು?.

ತಾತ್ಪರ್ಯ ॥ ಪ್ರಬಲತರವಾದ ಪಾಪವು ಅಲ್ಪಶಕ್ತಿಕವಾದ ತಪಸ್ಸಿನಿಂದ ನಾಶಮಾಡಲಶಕ್ಯವು. ಒಂದು ಬೆಂಕಿಯ ಕಿಡಿಯಿಂದ ಹಸೀ ಸೌದೆಯನ್ನು ಭಸ್ಮಮಾಡಲಾದೀತೆ ? ॥ ೧೨ ॥

ಶ್ಲೋಕ ॥ ಅಶಕ್ತ್ಯೈವ ತಪಃ ಸೋಽಯಂ
ರಾಜಾ ರಾಜ್ಯಮಿವಾತ್ಯಜತ್ ।
ಶ್ರೇಯಾಂಸಿ ಬಹುವಿಘ್ನಾನೀ-
ತ್ಯೇತಸ್ಮಿನ್ನಧುನಾಭವತ್ ॥ ೧೩ ॥

ಟೀ॥ ಸೋಽಯಂರಾಜಾ - ಆ ಈ ರಾಜನಾಗಿದ್ದ ಲೋಕಪಾಲಮುನಿಯು, ರಾಜ್ಯಮಿವ-ರಾಜ್ಯವನ್ನೀಪಾದಿಯಲ್ಲಿ, ಅಶಕ್ತ್ಯೈವ-ಸಾಮರ್ಥ್ಯವಿಲ್ಲದೇಇರೋಣದರಿಂದಲೇ, ತಪಃ-ತಪಸ್ಸನ್ನು,ಅತ್ಯಜತ್-ಬಿಟ್ಟನು., ಶ್ರೇಯಾಂಸಿ- ಸತ್ಕಾರ್ಯಗಳು, ಬಹುವಿಘ್ನಾನಿ-ಅನೇಕಪ್ರತಿಬಂಧವುಳ್ಳವುಗಳು., ಇತಿ-ಹೀಗೆಂಬ ನ್ಯಾಯವು, ಏತಸ್ಮಿನ್-ಈ ಲೋಕಪಾಲನಲ್ಲಿ, ಅಧುನಾ- ಈಗ, ಅಭವತ್-ಸಂಭವಿಸಿದುದು.

ತಾತ್ಪರ್ಯ ॥ ಮೊದಲು ರಾಜನಾಗಿದ್ದ ಲೋಕಪಾಲನು ವೈರಾಗ್ಯದಿಂದ ರಾಜ್ಯವಂ ತ್ಯಜಿಸಿ ತಪಸ್ವಿಯಾಗಿ, ಅಶಕ್ತಿಯಿಂದಲೇ ಆ ತಪಸ್ಸನ್ನೂಕೂಡ ತ್ಯಜಿಸಿ ಉಭಯಭ್ರಷ್ಟನಾದನು. ಒಳ್ಳೇಕೆಲಸಕ್ಕೆ ಅನೇಕವಿಘ್ನವೆಂಬ ನ್ಯಾಯವು ಈ ಲೋಕಪಾಲನಲ್ಲೇ ಸಂಭವಿಸಿದುದು. (ಇಲ್ಲಿ ಕೆಲವರು ಪ್ರಕಾರಾಂತರವಾಗಿ ಅನ್ವಯಿಸುವರು. ಹೇಗೆಂದರೆ ? ) ಸೋಽಯಂ- ಆ ಈ ಲೋಕಪಾಲನು, ರಾಜಾ-ರಾಜನು,ರಾಜ್ಯಮಿವ ರಾಜ್ಯವನ್ನೀಪಾದಿಯಲ್ಲಿ, ಅಶಕ್ತ್ಯೈವ-ಅಶಕ್ತಿಯಿಂದಲೇಯೇ, ತಪಃ-ತಪಸ್ಸನ್ನು, ಅತ್ಯಜತ್-ಬಿಟ್ಟನು. ಈ ಅನ್ವಯದಲ್ಲಿ ರಾಜನಿಗೆ ರಾ

ಜ್ಯವುಹೇಗೋ ತಪಸ್ವಿಗೆ ತಪಸ್ಸುಹಾಗೆ ಪರಿಪಾಲನೀಯವೆಂದು ತಾತ್ಪರ್ಯವು. ಅಶಕ್ತಿಯಿಂದ ಪರಿತ್ಯಾಗವು, ರಾಜನಿಗೂ, ತಪಸ್ವಿಗೂ, ಸಮಾನವು. (ವಿವೇಕಿಗಳಾದ ಗುಣಗ್ರಾಹಿಗಳು ಯಾವುದು ಸರಸವೋ ಅದನ್ನು ಪರಿಗ್ರಹಿಸಲಿ.) ॥ ೧೩ ॥

ಶ್ಲೋಕ ॥ ತಪಸಾಚ್ಛಾದಿತಸ್ತಿಷ್ಠನ್
ಸ್ವೈರಾಚಾರೀ ಹಿ ಪಾತಕೀ ।
ಗುಲ್ಮೇನಾಂತರ್ಹಿತೋ ಗೃಹ್ಣನ್-
ನ್ವಿಷ್ಕಿರಾನಿವ ನಾಫಲಃ ॥ ೧೪ ॥

ಟೀ ॥ ತಪಸಾ-ತಪಸ್ಸಿನಿಂದ, ಆಚ್ಛಾದಿತಃ-ಮರೆಸಲ್ಪಟ್ಟವನಾಗಿ, ತಿಷ್ಠನ್-ಇರುವ,ಸ್ವೈರಾಚಾರೀ-ಸ್ವೇಚ್ಛಾಚಾರವುಳ್ಳವನು, ಗುಲ್ಮೇನ-ಹೊದರಿನಿಂದ, ಅಂತರ್ಹಿತಃ - ಮರೆಸಲ್ಪಟ್ಟವನಾಗಿ, ವಿಷ್ಕಿರಾನ್ - ಪಕ್ಷಿಗಳನ್ನು, ಗೃಹ್ಣನ್-ಹಿಡಿಯುತಲಿರುವ, ನಾಫಲಇವ - ಬೇಡನೋಪಾದಿಯಲ್ಲಿ, ಪಾತಕೀಹಿ - ಪಾಪಿಯಾಗುತ್ತಾನಲ್ಲವೆ?.

ತಾತ್ಪರ್ಯ ॥ ತಪಸ್ವಿಯಂತೆ ಇದ್ದುಕೊಂಡು ದುರಾಚಾರಉಳ್ಳ ಪುರುಷನು ಹೊದರಿನಲ್ಲಿ ಅವುತುಕೊಂಡು ಪಕ್ಷಿಗಳನ್ನು ಹಿಡಿಯುವ ಬೇಡನಂತೆ, ಪಾಪಿಷ್ಠನಾಗುತ್ತಾನಲ್ಲವೆ? ॥ ೧೪ ॥

ಶ್ಲೋಕ ॥ ಅವರ್ತಿಷ್ಟ ಯಥೇಷ್ಟಂ ಸ
ಪಾಷಂಡಿತಪಸಾ ಪುನಃ ।
ಚಿತ್ರಂ ಜೈನೀತಪಸ್ಯಾ ಹಿ
ಸ್ವೈರಾಚಾರವಿರೋಧಿನೀ ॥ ೧೫ ॥

ಟೀ ॥ ಸಃ-ಆ ಲೋಕಪಾಲನು, ಪಾಷಂಡಿತಪಸಾಪುನಃ- ಕುದೃಷ್ಟಿಯ ತಪಸ್ಸಿನಿಂದಲಾದರೋ, ಯಥೇಷ್ಟಂ-ಸ್ವೇಚ್ಛಾನುಸಾರವಾಗಿ, ಅವರ್ತಿಷ್ಟ-ಇದ್ದನು., ಜೈನೀ-ಜಿನೇಶ್ವರಸಂಬಂಧಿಯಾದ, ತಪಸ್ಯಾ-ತಪಸ್ಥಿತಿಯು, ಸ್ವೈರಾಚಾರವಿರೋಧಿನೀಹಿ-ಸ್ವೇಚ್ಛಾಚಾರಕ್ಕೆ ವಿರೋಧಿಯಲ್ಲವೆ?. ಚಿತ್ರಂ-ಆಶ್ಚರ್ಯವು!.

ತಾತ್ಪರ್ಯ ॥ ಆ ಲೋಕಪಾಲನು ಕುದೃಷ್ಟಿಗಳ ತಪಸ್ಸಿನಿಂದ

ಸ್ವೇಚ್ಛಾನುಸಾರವಾಗಿ ಇದ್ದನು. ಜೈನತಪಸ್ಸು ಸ್ವೇಚ್ಛಾಚಾರಕ್ಕೆ ವಿರೋಧಿಯಷ್ಟೆ? ಇತರರ ತಪೋನಿಯಮಕ್ಕಿಂತಲೂ ಜೈನತಪಸ್ಸು ಬಹಳಕಠಿನತರವೆಂಬಭಿಪ್ರಾಯವು. ‖ ೧೫ ‖

ಶ್ಲೋಕ ‖ ಅಥ ಭಿಕ್ಷುರ್ಬುಭುಕ್ಷುಸ್ಸನ್
ಗಂಧೋತ್ಕಟಗೃಹಂ ಗತಃ ।
ಉಪತಾಪರುಜೋಪ್ಯೇಷ
ಧಾರ್ಮಿಕಾಣಾಂ ಭಿಷಕ್ತಮಃ ‖ ೧೬ ‖

ಟೀ ‖ ಅಥ-ಅನಂತರದಲ್ಲಿ, ಭಿಕ್ಷುಃ-ಮುನಿಯು, ಬುಭುಕ್ಷುಸ್ಸನ್ - ಭೋಜನೇಚ್ಛೆಯುಳ್ಳವನಾಗಿ, ಗಂಧೋತ್ಕಟಗೃಹಂ-ಗಂಧೋತ್ಕಟಶ್ರೇಷ್ಠಿಯಮನೆಯನ್ನು, ಗತಃ-ಹೊಂದಿದನು., ಏಷಃ-ಈ ಗಂಧೋತ್ಕಟಶ್ರೇಷ್ಠಿಯು, ಧಾರ್ಮಿಕಾಣಾಂ-ಧರ್ಮಿಷ್ಠರ, ಉಪತಾಪರುಜೋಪಿ-ಸಂತಾಪವೆಂಬ ರೋಗಕ್ಕೂ ಕೂಡ, ಭಿಷಕ್ತಮಃ-ವೈದ್ಯಶ್ರೇಷ್ಠನು.

ತಾತ್ಪರ್ಯ ‖ ಈ ಲೋಕಪಾಲಮುನಿಯು ಭೋಜನಮಾಡಲಿಚ್ಛೈಸಿ ಗಂಧೋತ್ಕಟಶ್ರೇಷ್ಠಿಯ ಮನೆಯನ್ನು ಹೊಂದಿದನು. ಈ ಗಂಧೋತ್ಕಟಶ್ರೇಷ್ಠಿಯು ಧರ್ಮಿಷ್ಠರ ಸಂತಾಪವೆಂಬ ರೋಗಕ್ಕೆಕೂಡವೈದ್ಯಶ್ರೇಷ್ಠನು. ‖ ೧೬ ‖

ಶ್ಲೋಕ ‖ ಧಾರ್ಮಿಕಾಣಾಂ ಶರಣ್ಯಂ ಹಿ
ಧಾರ್ಮಿಕಾಏವ ನಾಪರೇ ।
ಅಹೇರ್ನಕುಲವತ್ತೇಷಾಂ
ಪ್ರಕೃತ್ಯಾನ್ಯೇ ಹಿ ವಿದ್ವಿಷಃ ‖ ೧೭ ‖

ಟೀ ‖ ಧಾರ್ಮಿಕಾಏವ- ಧರ್ಮಿಷ್ಠರೇಜೋ, ಧಾರ್ಮಿಕಾಣಾಂ-ಧರ್ಮಿಷ್ಠರಿಗೆ, ಶರಣ್ಯಂ ಹಿ-ರಕ್ಷಕರಲ್ಲವೆ?, ಅಪರೇ-ಇತರರಾದ ಅಧರ್ಮಿಷ್ಠರು, ನ-ಅಲ್ಲವು., ಅಹೇಃ- ಸರ್ಪಕ್ಕೆ, ನಕುಲವತ್-ಮುಂಗಿಸಿಯೋಪಾದಿಯಲ್ಲಿ, ಅನ್ಯೇ - ಇತರರಾದ ದುರ್ಜನರು, ತೇಷಾಂ-ಆ ಸಜ್ಜನರಿಗೆ, ಪ್ರಕೃತ್ಯಾ-ಸ್ವಭಾವದಿಂದ, ವಿದ್ವಿಷೋಹಿ-ಶತ್ರುಗಳಲ್ಲವೆ?.

ತಾತ್ಪರ್ಯ ‖ ಧರ್ಮಿಷ್ಠರಿಗೆ ಧರ್ಮಿಷ್ಠರೇ ರಕ್ಷಕರು. ಉಳಿದವರ

ಲ್ಲವು. ಸರ್ಪಕ್ಕೆ ಮುಂಗಿಸಿಯೋಪಾದಿಯಲ್ಲಿ ಆ ಸಜ್ಜನರಿಗೆ ದುರ್ಜನರು ಸ್ವಭಾವದಿಂದಲೇ ವೈರಿಗಳಲ್ಲವೆ? ॥ ೧೭ ॥

ಶ್ಲೋಕ ॥ ತತ್ರಮಧ್ಯೇ ಗೃಹಂ ಭಿಕ್ಷು-
ರದ್ರಾಕ್ಷೀತ್ಪುತ್ರಪುಂಗವಮ್ ।
ಅಂಗ ತ್ವಾಂ ತ್ವಂ ಚ ತಂ ವೀಕ್ಷ್ಯ
ತದ್ಬುಭುಕ್ಷಾಮಲಕ್ಷಯಃ ॥ ೧೮ ॥

ಟೀ ॥ ತತ್ರ-ಅಲ್ಲಿ, ಮಧ್ಯೇಗೃಹಂ-ನಡುಮನೆಯೊಳು, ಭಿಕ್ಷುಃ-ಲೋಕಪಾಲಮುನಿಯು, ಪುತ್ರಪುಂಗವಂ-ಪುತ್ರಶ್ರೇಷ್ಠನಾದ, ತ್ವಾಂ-ನಿನ್ನನ್ನು, ಅದ್ರಾಕ್ಷೀತ್-ಕಂಡನು., ಅಂಗ-ಎಲೈ, ತ್ವಂಚ-ನೀನೂಕೂಡ, ತಂ-ಆ ಮುನಿಯನ್ನು, ವೀಕ್ಷ್ಯ-ನೋಡಿ, ತದ್ಬುಭುಕ್ಷಾಂ-ಆ ಮುನಿಯಹಸಿವನ್ನು, ಅಲಕ್ಷಯಃ-ತಿಳಿದೆ.

ತಾತ್ಪರ್ಯ ॥ ಆ ಗಂಧೋತ್ಕಟಶ್ರೇಷ್ಠಿಯು ಗೃಹಮಧ್ಯದಲ್ಲಿ ಇರುವ ನಿನ್ನನ್ನು ಆ ಮುನಿಯು ಕಂಡನು. ನೀನೂಕೂಡ ನೋಡಿದಮಾತ್ರಕ್ಕೆ ಅವನ ಹಸಿವನ್ನೂ ತಿಳಿದವನಾದೆ. ॥ ೧೮ ॥

ಶ್ಲೋಕ ॥ ಭೋಕ್ತುಮಾರಭಮಾಣಸ್ತ್ವಂ
ಪೌರೋಗವಮಚೀಕಥಃ ।
ಭೋಜ್ಯತಾಮಯಮಿತ್ಯೇಷ
ಪುನರೇನಮಬೂಭುಜತ್ ॥ ೧೯ ॥

ಟೀ ॥ ಭೋಕ್ತುಂ-ಭೋಜನಮಾಡಲೋಸುಗ, ಆರಭಮಾಣಃ-ಆರಂಭಿಸಿದಂಥ, ತ್ವಂ-ನೀನು, ಪೌರೋಗವಂ-ಅಡಿಗೆಯ ಅಧ್ಯಕ್ಷನನ್ನು, ಅಯಂ- ಈ ಮುನಿಯು, ಭೋಜ್ಯತಾಂ-ಭೋಜನಮಾಡಿಸಲ್ಪಡಲಿ., ಇತಿ-ಹೀಗೆಂತೆಂದು, ಅಚೀಕಥಃ-ಹೇಳಿದೆ., ಏಷಪುನಃ-ಈ ಪಾಕಶಾಲಾಧಿಕಾರಿಯಾದರೋ, ಏನಂ-ಈಮುನಿಯನ್ನು, ಅಬೂಭುಜತ್-ಭೋಜನ ಮಾಡಿಸಿದನು.

ತಾತ್ಪರ್ಯ ॥ ಭೋಜನಮಾಡಲಾರಂಭಿಸಿರುವ ನೀನು ಪಾಕಶಾಲಾಧಿಕಾರಿಯನ್ನು ಈ ಮುನಿಗೆ ಭೋಜನಮಾಡಿಸೆಂದಾಜ್ಞಾಪಿಸಿದೆ; ಈ ಪಾಕಶಾಲಾಧಿಕಾರಿಯಾದರೋ ಅಪ್ಪಣೆಯ ಪ್ರಕಾರವೇ ಮುನಿಯನ್ನುಭೋಜನಮಾಡಿಸಿದನು. ॥ ೧೯ ॥

ಶ್ಲೋಕ ॥ ಅನ್ನೈಸ್ತದ್ಗೃಹಸಂಪನ್ನೈ-
ರ್ನಾಭೂತ್ತತ್ಕುಕ್ಷಿಪೂರಣಮ್ ।
ಅಹೋ ಪಾಪಸ್ಯ ಘೋರತ್ವ-
ಮಾಶಾಬ್ಧಿಃ ಕೇನ ಪೂರ್ಯತೇ ॥ ೨೦ ॥

ಟೀ ॥ ತದ್ಗೃಹಸಂಪನ್ನೈಃ-ಆ ಅಡಿಗೆಯ ಮನೆಯಲ್ಲಿ ಸಮೃದ್ಧವಾಗಿದ್ದ, ಅನ್ನೈಃ-ಅನ್ನಗಳಿಂದ, ತತ್ಕುಕ್ಷಿಪೂರಣಂ- ಆ ಮುನಿಯ ಉದರಪೂರ್ತಿಯು, ನಾಭೂತ್-ಆಗಲಿಲ್ಲವು., ಪಾಪಸ್ಯ-ಪಾಪದ, ಘೋರತ್ವಂ-ಕ್ರೂರಭಾವವು, ಅಹೋ-ಆಶ್ಚರ್ಯಕರವಾದದ್ದು!, ಆಶಾಬ್ಧಿಃ-ಆಶೆಯೆಂಬ ಸಮುದ್ರವು, ಕೇನ - ಯಾತರಿಂದ, ಪೂರ್ಯತೇ-ತುಂಬಲ್ಪಡುವುದು ?.

ತಾತ್ಪರ್ಯ ॥ ಆ ಪಾಕಶಾಲೆಯಲ್ಲಿ ಸಂಪೂರ್ಣವಾಗಿದ್ದ ಸಕಲಭಕ್ಷ್ಯಭೋಜ್ಯಾದಿಗಳಿಂದಲೂ ಈ ಮುನಿಯ ಉದರಪೂರ್ತಿಯಾಗಲಿಲ್ಲವು. ಪಾಪಕರ್ಮದ ಕ್ರೂರತ್ವವು ಅತ್ಯಾಶ್ಚರ್ಯಕರವು. ಆಶೆಯೆಂಬ ಸಮುದ್ರವು ಯಾವುದರಿಂದ ತುಂಬೀತು ? ॥ ೨೦ ॥

ಶ್ಲೋಕ ॥ ಅಭುಂಜಾನಸ್ತ್ವಮಾಶ್ಚರ್ಯಾ-
ದಾಸೀನೋಸ್ಮೈ ವಿತೀರ್ಣವಾನ್ ।
ಕಾರುಣ್ಯಾದಸ್ಯ ಪುಣ್ಯಾದ್ವಾ
ಕರಸ್ಥಂ ಕಬಳಂ ಮುದಾ ॥ ೨೧ ॥

ಟೀ ॥ ಆಶ್ಚರ್ಯಾತ್-ಆಶ್ಚರ್ಯದೆಸೆಯಿಂದ, ಅಭುಂಜಾನಃ-ಭೋಜನಮಾಡದೇ ಇರುವವನಾಗಿ, ಆಸೀನಃ-ಕುಳಿತಿರುವಂಥಾ, ತ್ವಂ-ನೀನು, ಅಸ್ಯ-ಈ ಮುನಿಯ ವಿಷಯದಲ್ಲಿ, ಕಾರುಣ್ಯಾತ್-ಕರುಣೆಯ ದೆಸೆಯಿಂದಲೋ?, ವಾ- ಹಾಗಲ್ಲದಿದ್ದರೆ, ಪುಣ್ಯಾತ್-ಪುಣ್ಯದ ದೆಸೆಯಿಂದಲೋ, ಕರಸ್ಥಂ-ಹಸ್ತದಲ್ಲಿರುವ, ಕಬಳಂ - ತುತ್ತನ್ನು, ಅಸ್ಮೈ-ಈಮುನಿಗೋಸುಗ, ಮುದಾ-ಸಂತೋಷದಿಂದ, ವಿತೀರ್ಣವಾನ್-ಕೊಟ್ಟೆ.

ತಾತ್ಪರ್ಯ ॥ ಆಶ್ಚರ್ಯದ ದೆಸೆಯಿಂದ ಭೋಜನಮಾಡದೇ ಕುಳಿತಿದ್ದ ನೀನು ಕರುಣೆಯಿಂದಲೋ, ಈ ಮುನಿಯ ಪುಣ್ಯದಿಂದಲೋ ಕೈಯಲ್ಲಿರುವ ತುತ್ತನ್ನು ಸಂತುಷ್ಟನಾಗಿ ಈಮುನಿಗೆ ಕೊಟ್ಟವನಾದೆ॥೨೧॥

ಶ್ಲೋಕ॥ ವರ್ಣಿನೋ ಜಠರಂ ಪೂರ್ಣಂ
ತದಾಸ್ವಾದನತಃ ಕ್ಷಣಾತ್ ।
ಆಶಾಬ್ಧಿರಿವ ನೈರಾಶ್ಯಾ-
ದಹೋ ಪುಣ್ಯಸ್ಯ ವೈಭವಮ್ ॥ ೨೨ ॥

ಟೀ॥ ತದಾಸ್ವಾದನತಃ-ಆ ತುತ್ತನ್ನು ಭೋಜನಮಾಡಿದುದರದೆಸೆಯಿಂದ, ಆಶಾಬ್ಧಿಃ - ಆಶೆಯೆಂಬ ಸಮುದ್ರವು, ನೈರಾಶ್ಯಾದಿವ-ವೈರಾಗ್ಯದ ದೆಸೆಯಿಂದಲೋಪಾದಿಯಲ್ಲಿ, ಕ್ಷಣಾತ್-ಕ್ಷಣಮಾತ್ರದ ದೆಸೆಯಿಂದ, ವರ್ಣಿನಃ-ಮುನಿಯ, ಜಠರಂ-ಉದರವು, ಪೂರ್ಣಂ-ತುಂಬಿದುದು., ಪುಣ್ಯಸ್ಯ-ಸುಕೃತದ, ವೈಭವಂ- ಮಹಿಮೆಯು, ಅಹೋ!-ಆಶ್ಚರ್ಯಕರವು !.

ತಾತ್ಪರ್ಯ॥ ನೀನುಕೊಟ್ಟ ಆ ತುತ್ತನ್ನು ಭೋಜನಮಾಡೋಣದರ ದೆಸೆಯಿಂದ ಕ್ಷಣಮಾತ್ರದಲ್ಲೇ ಆಶೆಯೆಂಬ ಸಮುದ್ರವು ವೈರಾಗ್ಯದಿಂದ ಹೇಗೋಹಾಗೆ ಮುನಿಯ ಉದರವು ಪೂರ್ಣವಾಯಿತು. ಪುಣ್ಯದ ಮಹಿಮೆಯು ಬಹಳ ಆಶ್ಚರ್ಯಕರವಾದದ್ದು. ॥ ೨೨ ॥

ಶ್ಲೋಕ॥ ಪರಿವ್ರಾಡಪಿ ಸಂಪ್ರಾಪ್ಯ
ಸೌಹಿತ್ಯಂ ತತ್‌ಕ್ಷಣೇ ಚಿರಾತ್ ।
ಮಹೋಪಕಾರಿಣೋಽಸ್ಯಾಹಂ
ಕಿಂ ಕರೋಮೀತ್ಯಚಿಂತಯತ್ ॥೨೩॥

ಟೀ॥ ಪರಿವ್ರಾಡಪಿ-ಮುನಿಯುಕೂಡ, ತತ್‌ಕ್ಷಣೇ-ಆ ಕ್ಷಣದಲ್ಲೇ, ಸೌಹಿತ್ಯಂ-ತೃಪ್ತಿಯನ್ನು, ಸಂಪ್ರಾಪ್ಯ-ಹೊಂದಿ, ಚಿರಾತ್-ಬಹಳಹೊತ್ತು, ಮಹೋಪಕಾರಿಣಃ-ಮಹತ್ತಾದ ಉಪಕಾರವನ್ನುಮಾಡಿದ, ಅಸ್ಯ-ಇವನಿಗೆ, ಅಹಂ-ನಾನು, ಕಿಂ-ಏನನ್ನು, ಕರೋಮಿ - ಪ್ರತ್ಯುಪಕಾರವನ್ನಾಗಿಮಾಡಲಿ., ಇತಿ-ಹೀಗೆಂದು, ಅಚಿಂತಯತ್- ಆಲೋಚಿಸಿದನು.

ತಾತ್ಪರ್ಯ॥ ಮುನಿಯುಕೂಡ ಆಕ್ಷಣದಲ್ಲೇ ತೃಪ್ತನಾಗಿ ಮಹೋಪಕಾರವನ್ನುಮಾಡಿದ ಇವನಿಗೆ ನಾನೇನು ಪ್ರತ್ಯುಪಕಾರ ಮಾಡಲೆಂದು ಬಹಳಹೊತ್ತು ಆಲೋಚಿಸಿದನು. ॥ ೨೩ ॥

ಶ್ಲೋಕ ॥ ಅಪಶ್ಚಿಮಫಲಾಂ ವಿದ್ಯಾಂ
ನಿಶ್ಚಿತ್ಯಾತ್ರ ಪ್ರತಿಕ್ರಿಯಾಮ್ ।
ಆಯುಷ್ಮಂತಮಸೌ ಪಶ್ಚಾ-
ದ್ವಿಪಶ್ಚಿತಮಕಲ್ಪಯತ್ ॥ ೨೪ ॥

ಟೀ ॥ ಅತ್ರ- ಈ ವಿಷಯದಲ್ಲಿ (ಈ ಜೀವಂಧರನ ವಿಷಯದಲ್ಲಿ), ಅಸೌ- ಈ ಮುನಿಯು, ಅಪಶ್ಚಿಮಫಲಾಂ- ಮೊದಲನೇದಾದ ಧರ್ಮವೇ ಮುಖ್ಯಫಲವಾಗುಳ್ಳ, ವಿದ್ಯಾಂ-ವಿದ್ಯವನ್ನು, ಪ್ರತಿಕ್ರಿಯಾಂ(ಸತೀಂ)-ಪ್ರತ್ಯುಪಕಾರವನ್ನಾಗಿ, ನಿಶ್ಚಿತ್ಯ-ನಿಶ್ಚಯಿಸಿ, ಪಶ್ಚಾತ್- ಅನಂತರದಲ್ಲಿ, ಆಯುಷ್ಮಂತಂ - ಚಿರಂಜೀವಿಯಾದ ನಿನ್ನನ್ನು, ವಿಪಶ್ಚಿತಂ(ಸಂತಂ)-ವಿದ್ವಾಂಸನನ್ನಾಗಿ, ಅಕಲ್ಪಯತ್-ಮಾಡಿದನು.

ತಾತ್ಪರ್ಯ ॥ ಈ ಮುನಿಯು ಧರ್ಮಸಿದ್ಧಿಗೆ ಮೂಲಕಾರಣವಾದವಿದ್ಯೆಯನ್ನೇ ಇದಕ್ಕೆ ಪ್ರತ್ಯುಪಕಾರವೆಂದು ನಿರ್ಣಯಿಸಿ ದೀರ್ಘಾಯುಷ್ಮಂತನಾದ ನಿನ್ನನ್ನು ವಿದ್ವಾಂಸನನ್ನಾಗಿ ಮಾಡಿದನು. ವಿದ್ಯೆಯಿಂದ ಧರ್ಮಸ್ವರೂಪವೂ, ಆಚರಣಕ್ರಮವೂ ತಿಳಿಯುವುದು. ಧರ್ಮದಿಂದ ಸರ್ವ ಪುರುಷಾರ್ಥ ಸಿದ್ಧಿಯೂ ಉಂಟಾಗುವುದು. ಆದುದರಿಂದ ವಿದ್ಯೆಯೇ ಸಕಲಪುರುಷಾರ್ಥಪ್ರಾಪ್ತಿಗೂ ಮೂಲಕಾರಣವು.॥೭೪॥

ಶ್ಲೋಕ ॥ ವಿದ್ಯಾ ಹಿ ವಿದ್ಯಮಾನೇಯಂ
ವಿತೀರ್ಣಾಪಿ ಪ್ರಕೃಷ್ಯತೇ।
ನಾಕೃಷ್ಯತೇ ಚ ಚೋರಾದ್ಯೈಃ
ಪುಷ್ಯತ್ಯೇವ ಮನೀಷಿತಮ್ ॥ ೨೫ ॥

ಟೀ ॥ ಇಯಂವಿದ್ಯಾ-ಈ ವಿದ್ಯವು, ವಿತೀರ್ಣಾಪಿ-ಕೊಡಲ್ಪಟ್ಟಾಗ್ಯೂ, ವಿದ್ಯಮಾನಾ(ಸತೀ)-ಇರುತ್ತಲಿರುವುದಾಗಿಯೆ, ಪ್ರಕೃಷ್ಯತೆ-ವೃದ್ಧಿಹೊಂದುತ್ತದೆ., ಚೋರಾದ್ಯೈಃ-ಕಳ್ಳರೇಮೊದಲಾದವರಿಂದ, ನಾಕೃಷ್ಯತೇಚ- ಅಪಹರಿಸಲ್ಪಡುವುದೂಇಲ್ಲವು., ಮನೀಷಿತಂ-ಇಷ್ಟಾರ್ಥವನ್ನು, ಪುಷ್ಯತ್ಯೇವ-ಪುಷ್ಟೀಕರಿಸುತ್ತಲೂಇದೆ.

ತಾತ್ಪರ್ಯ ॥ ಈ ವಿದ್ಯವು ಇತರರಿಗೆ ಕೊಟ್ಟರೆ ಕೊಟ್ಟವನಲ್ಲಿಯೇ ಇದ್ದುಕೊಂಡು ವೃದ್ಧಿ ಹೊಂದುತ್ತದೆ. ಕಳ್ಳರೇಮೊದಲಾದವರಿಂದ ಕದಿಯಲ್ಪಡತಕ್ಕದ್ದಲ್ಲವು. ಇಷ್ಟಾರ್ಥವನ್ನೂ ಪೂರ್ತಿಮಾಡುತ್ತದೆ.॥೭೫॥

ಶ್ಲೋಕ॥ ವೈದುಷ್ಯೇಣ ಹಿ ವಂಶ್ಯತ್ವಂ
ವೈಭವಂ * ಸಾಧುಪಶ್ಯತಾ ।
ಸದಸ್ಯತಾಲಮುಕ್ತೇನ
ವಿದ್ವಾನ್ಸರ್ವತ್ರ ಪೂಜ್ಯತೇ ॥ ೨೬ ॥

ಟೀ ॥ ವೈದುಷ್ಯೇಣಹಿ-ವಿದ್ಯೆಯಿಂದಲ್ಲವೆ, ವಂಶ್ಯತ್ವಂ-ಸತ್ಕುಲ ಉಳ್ಳೋಣವೂ, ವೈಭವಂ-ಮಾಹಾತ್ಮ್ಯವೂ, ಸಾಧುಪಶ್ಯತಾ-ಸಮ್ಯಗ್ದರ್ಶನವೂಕೂಡ,(ಭವತಿಹಿ-ಉಂಟಾಗುತ್ತಲ್ಲವೆ?), ಸದಸ್ಯತಾ- ಸಭಾಯೋಗ್ಯತೆಯು, ಉಕ್ತೇನ -ವಿಶೇಷಮಾತಿನಿಂದ, ಅಲಂ-ಸಾಕು, ವಿದ್ವಾನ್-ವಿದ್ವಾಂಸನು, ಸರ್ವತ್ರ- ಎಲ್ಲಾ ಸ್ಥಲದಲ್ಲಿಯೂ, ಪೂಜ್ಯತೇ-ಪೂಜಿಸಲ್ಪಡುತ್ತಾನೆ.

ತಾತ್ಪರ್ಯ ॥ ವಿದ್ಯೆಯಿಂದ ಕುಲವೇನು, ಸಮ್ಯಗ್ದರ್ಶನವೇನು, ವೈಭವವೇನು, ಸಭಾಯೋಗ್ಯತೆಯೇನು, ಇವೆಲ್ಲವೂ ಉಂಟಾಗುತ್ತವೆ. ವಿದ್ವಾಂಸನು ಸರ್ವತ್ರ ಪೂಜಿಸಲ್ಪಡುತ್ತಾನೆ. ವಿಶೇಷವಾಗಿ ಹೇಳಿದುದರಿಂದೇನು ? ಸಾಧು—ಸಮ್ಯಕ್+ಪಶ್ಯತೀತಿ=ಸಾಧುಪಶ್ಯಃ, ತಸ್ಯಭಾವಃ—ಸಾಧುಪಶ್ಯತಾ. ಸಮ್ಯಗ್ದರ್ಶನವೂಕೂಡ ವಿದ್ಯಾಫಲವಾದುದರಿಂದ ಆವಾಗ ಈಪದಕ್ಕೆ ಸಮ್ಯಗ್ದರ್ಶನವೆಂದು ಅಬಾಧಿತವ್ಯುತ್ಪತ್ತಿ ಸಿದ್ಧಾರ್ಥವು. ಮತ್ತು ( ಸದುಪಾಸ್ಯತಾ, ಸದಸ್ಯತಾ ) ಎಂಬೆರಡುಪದಗಳಿಗೆ ನಿರೂಪಣಮಾಡಿದ್ದಲ್ಲಿ ಅರ್ಥವಿಶೇಷವಿಲ್ಲವಾಗಿ ಏಕಾರ್ಥವಾದುದರಿಂದ ಅರ್ಥವಿಶೇಷೋಪಲಂಭಕವಾದ (ಸಾಧುಪಶ್ಯತಾ) ಎಂಬಪಾಠವೇ ಸಮೀಚೀನವು ॥ ೨೬ ॥

ಶ್ಲೋಕ ॥ ವೈಪಶ್ಚಿತ್ಯಂ ಹಿ ಜೀವಾನಾ-
ಮಾಜೀವಿತಮನಿಂದಿತಮ್ ।
ಅಪವರ್ಗೇಪಿ ಮಾರ್ಗೋಯ-
ಮದಃಕ್ಷೀರಮಿವೌಷಧಮ್ ॥ ೨೭ ॥

---

* ಕಾವ್ಯಾಂಬುಧಿಯಲ್ಲಿ ಸಾಧುಪಶ್ಯತಾ ಎಂಬಸ್ಥಳದಲ್ಲಿ ಸದುಪಾಸ್ಯತಾ ಎಂದು ಪಾಠಾಂತರವು.

೭೭ನೇ ಶ್ಲೋ॥ಟೀಕಿನಲ್ಲಿ–ಸಾಧುಪಶ್ಯತಾ-ಸಮ್ಯಗ್ದರ್ಶನವೂ, ಸದಸ್ಯತಾ-ಸಭಾ ಯೋಗ್ಯತೆಯೂಕೂಡ, ಭವತಿ ಹಿ-ಉಂಟಾಗುತ್ತದಲ್ಲವೆ ಎಂದು ಅನ್ವಯಿಸಬೇಕು.

ಟೀ ॥ ವೈದಗ್ಧ್ಯಂ-ಪಾಂಡಿತ್ಯವು, ಜೀವಾನಾಂ-ಪ್ರಾಣಿಗಳಿಗೆ, ಅನಿಂದಿತಂ-ಶ್ಲಾಘ್ಯವಾದ, ಆಜೀವಿತಂ ಹಿ-ಜೀವನೋಪಾಯವಲ್ಲವೆ?. ಅಯಂ-ಈ ಪಾಂಡಿತ್ಯವು, ಅಪವರ್ಗೇಪಿ-ಮೋಕ್ಷದಲ್ಲಿಯೂಕೂಡ, ಮಾರ್ಗಃ-ದಾರಿಯು, ಅಸೌ-ಈ ಪಾಂಡಿತ್ಯವು, ಔಷಧಂ-ಔಷಧರೂಪವಾದ, ಕ್ಷೀರಮಿವ-ಹಾಲಿನೋಪಾದಿಯಲ್ಲಿ.

ತಾತ್ಪರ್ಯ ॥ ಪಾಂಡಿತ್ಯವು ಪ್ರಾಣಿಗಳಿಗೆ ಯೋಗ್ಯವಾದ ಜೀವನವು. ಮೋಕ್ಷಕ್ಕೂ ಮಾರ್ಗವಾದದ್ದು ಆದುದರಿಂದ ವಿದ್ಯೆಯೇ ಜೀವನ ಸಾಧನವೆಂದುಪಯೋಗಿಸಿಕೊಳ್ಳೋಣವು. ಕ್ಷೀರವನ್ನೇ ಔಷಧವನ್ನಾಗಿ ಸೇವಿಸಿಮಾಡುವಂತಾಯಿತು ॥೭೭॥

ಶ್ಲೋಕ ॥ ಇತ್ಯುದಂತಂ ಗುರೋಃ ಶ್ರುತ್ವಾ
ಶಿಷ್ಯೋನೋತ್ತರಮೂಚಿವಾನ್ ।
ಸ್ವವಾಚಾ ಕಿಂ ತು ವಕ್ತ್ರೇಣ
ಶೈಷ್ಯೋಪಾಧ್ಯಾಯಿಕಾ ಹಿ ಸಾ ॥ ೭೮ ॥

ಟೀ ॥ ಇತಿ-ಈ ಪೂರ್ವೋಕ್ತವಾದ, ಗುರೋಃ-ಆರ್ಯನಂದ್ಯಾಚಾರ್ಯಸಂಬಂಧಿಯಾದ, ಉದಂತಂ-ವೃತ್ತಾಂತವನ್ನು, ಶ್ರುತ್ವಾ-ಕೇಳಿ, ಶಿಷ್ಯಃ-ಶಿಷ್ಯನಾದ ಜೀವಂಧರನು, ಸ್ವವಾಚಾ-ತನ್ನವಾಕ್ಕಿನಿಂದ, ಉತ್ತರಂ- ಪ್ರತ್ಯುತ್ತರವನ್ನು, ನೋಚಿವಾನ್-ಹೇಳಲಿಲ್ಲವು., ಕಿಂತು- ಮತ್ತೇನೆಂದರೆ, ವಕ್ತ್ರೇಣ - ಮುಖದಿಂದ, ಊಚಿವಾನ್-ಹೇಳಿದನು., ಸಾ-ಆ ಗುರುವಾಕ್ಕಿನೊಡನೆ ವಾಚ್ಯಶ್ರಣವಾಡದೇಇರೋಣವು, ಶೈಷ್ಯೋಪಾಧ್ಯಾಯಿಕಾಹಿ-ಶಿಷ್ಯೋಪಾಧ್ಯಾಯಲಕ್ಷಣವಲ್ಲವೆ ?.

ತಾತ್ಪರ್ಯ ॥ ಈ ಪ್ರಕಾರವಾದ ಗುರುವಿನ ವೃತ್ತಾಂತವನ್ನು ಕೇಳಿ ಶಿಷ್ಯನಾದ ಜೀವಂಧರನು ತನ್ನ ವಾಕ್ಕಿನಿಂದ ಉತ್ತರವನ್ನು ಹೇಳಲಿಲ್ಲವು ಮುಖದಿಂದಲೇ ಹೇಳಿದನು. ಗುರುವಾಕ್ಕಿನೊಡನೆ ತನ್ನ ವಾಕ್ಕನ್ನು ಮಿಶ್ರಮಾಡೋಣವು ಗುರುಶಿಷ್ಯಭಾವಕ್ಕೆ ವಿರೋಧವಲ್ಲವೆ?. ಆದುದರಿಂದ ಮೌನಿಯಾಗಿ ಮುಖಭಾವದಿಂದಲೇ ಉತ್ತರವಂ ಸೂಚಿಸಿದನೆಂದರ್ಥವು.

ಶ್ಲೋಕ ॥ ವಿಜ್ಞಾತಗುರುಶುದ್ಧಿಸ್ಸ-
ವಿಶೇಷಾತ್ಪ್ರೀತೋತ್ತರಾಮ್ ।

ಮಾಣಿಕ್ಯಸ್ಯ ಹಿ ಲಬ್ಧಸ್ಯ
ಶುದ್ಧೇರ್ಮೋದೋ ವಿಶೇಷತಃ ॥೨೯॥

ಟೀ ॥ ವಿಜ್ಞಾತಗುರುಶುದ್ಧಿಃ-ತಿಳಿಯಲ್ಪಟ್ಟ ಗುರುವಿನ ಪಾರಿಶುದ್ಧ್ಯವುಳ್ಳ, ಸಃ-ಆ ಜೀವಂಧರಸ್ವಾಮಿಯು, ವಿಶೇಷಾತ್ - ಅತಿಶಯವದೆಸೆಯಿಂದ, ಪ್ರಿಯೇತರಾಂ-ವಿಶೇಷವಾಗಿ ಪ್ರೀತಿಪಟ್ಟನು., ಲಬ್ಧಸ್ಯ-ಪಡೆಯಲ್ಪಟ್ಟ, ಮಾಣಿಕ್ಯಸ್ಯ- ರತ್ನದ, ಶುದ್ಧೇಃ-ದೋಷರಹಿತವಾಗಿರುವುದರದೆಸೆಯಿಂದ, ವಿಶೇಷತಃ-ಅಧಿಕವಾಗಿ, ಮೋದೋಹಿ-ಸಂತೋಷವಲ್ಲವೆ?.

ತಾತ್ಪರ್ಯ ॥ ಜೀವಂಧರನು ಗುರುವಿನ ವಂಶಪಾರಿಶುದ್ಧ್ಯಾದಿಗಳನ್ನು ಕೇಳಿ ವಿಶೇಷವಾಗಿ ಪ್ರೀತಿಪಟ್ಟನು. ಪ್ರಯತ್ನವಿಲ್ಲದೆ ಸಿಕ್ಕಿದ ರತ್ನಕ್ಕೆ ನಿರ್ದೋಷತ್ವವೂ ತಿಳಿಯಬಂದಲ್ಲಿ ವಿಶೇಷಸಂತೋಷವುಂಟಾದೀತಲ್ಲವೆ ? ॥೨೯॥

ಶ್ಲೋಕ ॥ ರತ್ನತ್ರಯವಿಶುದ್ಧಸ್ಸನ್
ಪಾತ್ರಸ್ನೇಹೀ ಪರಾರ್ಥಕೃತ್ ।
ಪರಿಪಾಲಿತಧರ್ಮೋ ಹಿ
ಭವಾಬ್ಧೇಸ್ತಾರಕೋ ಗುರುಃ ॥೩೦॥

ಟೀ ॥ ರತ್ನತ್ರಯವಿಶುದ್ಧಸ್ಸನ್-ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳೆಂಬರತ್ನತ್ರಯದಿಂದ ಪರಿಶುದ್ಧವಾಗಿ, ಪಾತ್ರಸ್ನೇಹೀ-ಉತ್ತಮವಾದದಾನಪಾತ್ರದಲ್ಲಿ ಪ್ರೀತಿಯುಳ್ಳವನಾಗಿ, ಪರಾರ್ಥಕೃತ್-ಇತರರ ಪ್ರಯೋಜನವನ್ನುಂಟುಮಾಡುವವನಾಗಿ, ಪರಿಪಾಲಿತಧರ್ಮಃ-ಸಂರಕ್ಷಿಸಲ್ಪಟ್ಟ ಧರ್ಮವುಳ್ಳವನಾಗಿ, ಭವಾಬ್ಧೇಃ-ಸಂಸಾರವೆಂಬಕಡಲಿಗೆ, ತಾರಕಃ-ದಾಂಟಿಸತಕ್ಕವನಾಗಿಯೂ ಇರುವ ಪುರುಷನು, ಗುರುರ್ಹಿ-ಗುರುವಲ್ಲವೆ?.

ತಾತ್ಪರ್ಯ॥ ಸಮ್ಯಗ್ದರ್ಶನಜ್ಞಾನಚಾರಿತ್ರದಿಂದ ಪರಿಶುದ್ಧನಾಗಿಯೂ ಸತ್ಪಾತ್ರದೊಳು ದಾನಮಾಡುವದರಲ್ಲಿ ಪ್ರೀತಿಶಾಲಿಯಾಗಿಯೂ, ಪರಪ್ರಯೋಜನವೇ ಸ್ವಪ್ರಯೋಜನವೆಂದು ತಿಳಿದು ಆಚರಿಸುವವನಾಗಿಯೂ, ಧರ್ಮಪರಿಪಾಲಕನಾಗಿಯೂ ಇರುವ ಪುರುಷನು ಸಂಸಾರಸಾಗರವಂ ದಾಂಟಿಸತಕ್ಕ ಗುರುವೆನಿಸುವನಲ್ಲವೆ ? ॥೩೦॥

ಶ್ಲೋಕ॥ ಗುರುಭಕ್ತೋ ಭವಾದ್ಭೀತೋ
ವಿನೀತೋ ಧಾರ್ಮಿಕಸ್ಸುಧೀಃ ।
ಶಾಂತಸ್ವಾಂತೋಹ್ಯತಂದ್ರಾಳುಃ
ಶಿಷ್ಟಃ ಶಿಷ್ಯೋಯಮಿಷ್ಯತೇ ॥೩೧॥

ಟೀ॥ ಗುರುಭಕ್ತಃ-ಗುರುವಿನಲ್ಲಿ ಭಕ್ತಿಯುಳ್ಳವನಾಗಿಯೂ, ಭವಾತ್- ಸಂಸಾರದ ದೆಸೆಯಿಂದ, ಭೀತಃ-ಭಯಪಟ್ಟವನಾಗಿಯೂ, ವಿನೀತಃ-ವಿನಯಗುಣವುಳ್ಳವನಾಗಿಯೂ, ಧಾರ್ಮಿಕಃ-ಧರ್ಮಿಷ್ಠನಾಗಿಯೂ, ಸುಧೀಃ-ಒಳ್ಳೇ ಬುದ್ಧಿಯುಳ್ಳವನಾಗಿಯೂ, ಶಾಂತಸ್ವಾಂತಃ - ರಾಗದ್ವೇಷಾದಿ ರಹಿತವಾದ ಮನಸ್ಸುಳ್ಳವನಾಗಿಯೂ, ಅತಂದ್ರಾಳುಃ-ಜಾಗರೂಕನಾಗಿಯೂ, ಶಿಷ್ಟಃ-ಇಷ್ಟಸಾಧನತಾಂಶದಲ್ಲಿಭ್ರಾಂತಿರಹಿತನಾಗಿಯೂಇರುವ, ಅಯಂ-ಈ ಪುರುಷನು, ಶಿಷ್ಯ(ಸ್ಸಃ) ಶಿಷ್ಯನಾಗಿ, ಇಷ್ಯತೇಹಿ-ಶಾಸ್ತ್ರಜ್ಞರಿಂದ ಅಂಗೀಕರಿಸಲ್ಪಡುತ್ತಾನಲ್ಲವೆ?.

ತಾತ್ಪರ್ಯ॥ ಪೂರ್ವಶ್ಲೋಕದಲ್ಲಿ ಗುರುವಿನ ಲಕ್ಷಣವು ಹೇಳಲ್ಪಟ್ಟಿತಲ್ಲವೆ. ಈ ಶ್ಲೋಕದಲ್ಲಿ ಶಿಷ್ಯಲಕ್ಷಣವು ಹೇಳಲ್ಪಡುತ್ತದೆ. ಗುರುವಿನಲ್ಲಿ ಭಕ್ತಿಯುಳ್ಳವನಾಗಿಯೂ, ಸಂಸಾರದದೆಸೆಯಿಂದ ಹೆದರಿದವನಾಗಿಯೂ, ವಿನಯಗುಣವುಳ್ಳವನಾಗಿಯೂ, ಧರ್ಮಿಷ್ಠನಾಗಿಯೂ, ಒಳ್ಳೇ ಬುದ್ಧಿಯುಳ್ಳವನಾಗಿಯೂ, ಭೋಗೋಪಭೋಗೇಚ್ಛೆಯಂ ತೊರೆದು ರಾಗದ್ವೇಷಾದಿ ರಹಿತವಾದ ನಿರ್ಮಲಮನಸ್ಸುಳ್ಳವನಾಗಿಯೂ, ವಿದ್ಯಾಸಂಗ್ರಹ, ಧರ್ಮಸಂಗ್ರಹ, ಮೋಕ್ಷಸಂಗ್ರಹದಲ್ಲಿ ಆಲಸ್ಯವಿಲ್ಲದೆ ಸದಾಜಾಗರೂಕನಾಗಿಯೂ, ಶಾಸ್ತ್ರೋಕ್ತಾರ್ಥದಲ್ಲಿ ಭ್ರಾಂತಿಇಲ್ಲದೆ ದೃಢವಿಶ್ವಾಸದಿಂದಾಚರಿಸುವನಾಗಿಯೂ ಇರುವ ಪುರುಷನು ಶಿಷ್ಯನೆಂದು ಶಾಸ್ತ್ರಜ್ಞರಿಂದ ಅಂಗೀಕರಿಸಲ್ಪಟ್ಟಿರುವನಲ್ಲವೆ? ॥೩೧॥

ಶ್ಲೋಕ॥ ಗುರುಭಕ್ತಿಸ್ಸತೀಮುಕ್ತ್ಯೈ
ಕ್ಷುದ್ರಂ ಕಿಂ ವಾ ನ ಸಾಧಯೇತ್।
ತ್ರಿಲೋಕೀಮೂಲ್ಯರತ್ನೇನ
ದುರ್ಲಭಃ ಕಿಂ ತುಷೋತ್ಕರಃ ॥೩೨॥

ಟೀ ॥ (ಸತೀ)-ಇರುತ್ತಲಿರುವ, ಗುರುಭಕ್ತಿಃ-ಗುರುವಿನಲ್ಲಿ ಮಾಡಲ್ಪಟ್ಟಭಕ್ತಿ ಯು, ಮುಕ್ತ್ಯೈ-ಮೋಕ್ಷಕ್ಕೋಸುಗ, (ಭವತಿ-ಆಗುತ್ತದೆ.) ಕ್ಷುದ್ರಂ-ಅಲ್ಪವಾದ ಕಿಂವಾ-ಯಾವ ಪುರುಷಾರ್ಥವನ್ನಾದರೋ, ನಸಾಧಯೇತ್ - ಸಾಧಿಸಲಾರದು.,

ಮುಕ್ತ್ಯೈ-ಸತೀ-ಗುರುಭಕ್ತಿಂ-ಕ್ಷುದ್ರಂ-ಕಿಂವಾ-ನಸಾಧಯೇತ್,

ಈ ಅನ್ವಯದಲ್ಲಿ ಅಧ್ಯಾಹಾರವಿಲ್ಲವು. ಸರಸವಾಗಿದೆ.

ತ್ರಿಲೋಕೀಮೂಲ್ಯರತ್ನೇನ-ಮೂರುಲೋಕವೇ ಕ್ರಯವಾಗಿಉಳ್ಳರತ್ನದಿಂದ, ತು ಷೋತ್ಕರಃ-ಹೊಟ್ಟಿನರಾಶಿಯು, ದುರ್ಲಭಃ ಕಿಂ-ಪಡೆಯಲಶಕ್ಯವೇ ಏನು ?.

ತಾತ್ಪರ್ಯ. ॥ ಸ್ಥಿರವಾಗಿರುತ್ತಿರುವ ಗುರುಭಕ್ತಿಯು ಮೋಕ್ಷ ಕ್ಕಾಗಿಯೇ ಕಾರಣವಾಗುತ್ತದೆ. ಹೀಗಿರುವಲ್ಲಿ ಅಲ್ಪವಾದ ಇನ್ನಾವ ಪುರುಷಾರ್ಥವು ಇದರಿಂದ ಸಾಧ್ಯವಾಗುವದಿಲ್ಲವು? ಸಕಲ ಪುರುಷಾರ್ಥ ವೂ ಗುರುಭಕ್ತಿಯುಳ್ಳವನಿಗೆ ಸಿದ್ಧಿಸುವುದೆಂದರ್ಥವು. ಮೂರುಲೋಕ ವೇಬೆಲೆಯಾಗಿಉಳ್ಳ ರತ್ನದಿಂದ ಹೊಟ್ಟಿನರಾಶಿಯು ದೊರಕಲಾರದೆ? ಗುರುಭಕ್ತಿಯು ಅನರ್ಘ್ಯರತ್ನದಂತೆಂದಭಿಪ್ರಾಯವು॥೩೦॥

ಶ್ಲೋಕ॥ ಗುರುದ್ರುಹಾಂ ಗುಣಃ ಕೋವಾ
ಕೃತಘ್ನಾನಾಂ ನ ನಶ್ಯತಿ ।
ವಿದ್ಯಾಪಿ ವಿದ್ಯುದಾಭಾಸ್ಯಾ-
ದಮೂಲಸ್ಯ ಕುತಃ ಸ್ಥಿತಿಃ ॥೩೧॥

ಟೀ ॥ ಗುರುದ್ರುಹಾಂ-ಗುರುವಿಗೋಸುಗ ದ್ರೋಹಮಾಡುತಲಿರುವ, ಕೃ ತಘ್ನಾನಾಂ-ಉಪಕಾರಕ್ಕೆ ಪ್ರತಿ ಅಪಕಾರಮಾಡುವವರಿಗೆ, ಕೋವಾಗುಣಃ-ಯಾ ವಗುಣವುತಾನೇ, ನನಶ್ಯತಿ-ನಾಶವನ್ನು ಹೊಂದುವುದಿಲ್ಲವು?, ವಿದ್ಯಾಪಿ-ವಿದ್ಯವೂ ಕೂಡ, ವಿದ್ಯುದಾಭಾ(ಸತೀ)-ಮಿಂಚಿಗೆಸಮಾನವಾಗಿ, ಸ್ಯಾತ್-ಆದೀತು?, ಅಮೂ ಲಸ್ಯ-ಬುಡವಿಲ್ಲದೆಇರುವುದಕ್ಕೆ, ಸ್ಥಿತಿಃ-ಇರುವಿಕೆಯು, ಕುತಃ-ಎಲ್ಲಿಂದುಂಟಾದೀತು?.

ತಾತ್ಪರ್ಯ ॥ ಗುರುದ್ರೋಹಿಯಾಗಿ ಉಪಕಾರಕ್ಕೆ ಪ್ರತಿಯಾಗಿ ಅ ಪಕಾರಮಾಡುವವನಿಗೆ ಸಮಸ್ತಗುಣವೂ ನಾಶವನ್ನೈದುವುದು. ವಿದ್ಯೆ ಯೂಕೂಡ ಮಿಂಚಿಗೆ ಸಮಾನವಾಗುತ್ತದೆಂದರೆ.- ಅತಿಶೀಘ್ರದಿಂದ ಮರೆ ತುಹೋಗುತ್ತೆ. ಬುಡವಿಲ್ಲದೆಮರವು ಹೇಗೆ ನಿಲ್ಲುವುದಿಲ್ಲವೋ ಹಾಗೆ ಗು

ರುಭಕ್ತಿನಷ್ಟವಾದಲ್ಲಿ ಸಕಲಗುಣಗಳೂ, ವಿದ್ಯೆಯೂ, ಧರ್ಮಾದಿಪುರುಷಾರ್ಥಗಳೂ ಕೂಡ ನಷ್ಟವಾಗುವುದು. ‖೩೩‖

ಶ್ಲೋಕ ‖ ಗುರುದ್ರುಹೋ ನ ಹಿ ಕ್ವಾಪಿ
ವಿಶ್ವಾಸ್ಯಾ ವಿಶ್ವಘಾತಿನಃ ।
ಅಬಿಭ್ಯತಾಂ ಗುರುದ್ರೋಹಾ-
ದನ್ಯದ್ರೋಹಾತ್ಕುತೋಭಯಮ್ ।೩೪।

ಟೀ ‖ ವಿಶ್ವಘಾತಿನಃ-ಸಮಸ್ತವನ್ನೂ ನಾಶಮಾಡುತಲಿರುವ, ಗುರುದ್ರುಹಃ-ಗುರುದ್ರೋಹಿಗಳು, ಕ್ವಾಪಿ-ಯಾವಕಾರ್ಯದಲ್ಲಿಯೂ, ನವಿಶ್ವಾಸ್ಯಾಹಿ - ನಂಬಿಕೆಗೆ ಯೋಗ್ಯರಲ್ಲವಷ್ಟೆ?, ಗುರುದ್ರೋಹಾತ್ - ಗುರುದ್ರೋಹದ ದೆಸೆಯಿಂದ, ಅಬಿಭ್ಯತಾಂ-ಹೆದರದೇಇರುವವರಿಗೆ, ಅನ್ಯದ್ರೋಹಾತ್- ಇತರರಿಗೋಸುಗ ದ್ರೋಹಮಾಡೋಣವದೆಸೆಯಿಂದ, ಭಯಂ-ಭೀತಿಯು, ಕುತಃ- ಯಾವ ಕಾರಣದ ದೆಸೆಯಿಂದ ಉಂಟಾದೀತು ?.

ತಾತ್ಪರ್ಯ ‖ ಪ್ರಪಂಚವನ್ನೇ ನಾಶಮಾಡತಕ್ಕವರಾದ ಗುರುದ್ರೋಹಿಗಳು ಯಾವ ಕೆಲಸದಲ್ಲೂ ನಂಬಿಕೆಗೆ ಅರ್ಹರಲ್ಲವು. ಗುರುದ್ರೋಹಕ್ಕೆ ಭಯಪಡದವನು ಇತರರಿಗೆ ದ್ರೋಹಮಾಡುವುದಕ್ಕಂಜುವನೇ?‖೩೪‖

ಶ್ಲೋಕ ‖ ಅಥ ಕೃತ್ಯವಿದಾಚಾರ್ಯಃ
ಕೃತಕೃತ್ಯಂ ಯಥಾವಿಧಿ ।
ಛಾತ್ರಂ ಪ್ರಬೋಧಯಾಮಾಸ
ಸಧರ್ಮಂ ಗೃಹಮೇಧಿನಾಮ್ ।೩೫‖

ಟೀ ‖ ಅಥ-ಅನಂತರದಲ್ಲಿ, ಕೃತ್ಯವಿತ್-ಮಾಡತಕ್ಕ ಕೆಲಸವನ್ನು ಬಲ್ಲವನಾದ, ಆಚಾರ್ಯಃ-ಆ ಆರ್ಯನಂದ್ಯಾಚಾರ್ಯನು, ಕೃತಕೃತ್ಯಂ-ಕೃತಾರ್ಥನಾದ, ಛಾತ್ರಂ- ಶಿಷ್ಯನಾದ ಜೀವಂಧರಸ್ವಾಮಿಯನ್ನು ಕುರಿತು, ಯಥಾವಿಧಿ-ಶಾಸ್ತ್ರೋಕ್ತಪ್ರಕಾರವಾಗಿ, ಗೃಹಮೇಧಿನಾಂ-ಗೃಹಸ್ಥರ, ಧರ್ಮಂ-ಧರ್ಮವನ್ನು, ಪ್ರಬೋಧಯಾಮಾಸ-ವಿಶೇಷವಾಗಿ ಬೋಧಿಸಿದನು.

ತಾತ್ಪರ್ಯ ‖ ಅನಂತರದಲ್ಲಿ ಮಾಡತಕ್ಕ ಕೆಲಸವನ್ನು ತಿಳಿದಿರುವ ಆ

ರ್ಯನಂದ್ಯಾಚಾರ್ಯರು ಶಿಷ್ಯನಾದ ಜೀವಂಧರನಿಗೆ ಗೃಹಸ್ಥ ಧರ್ಮವನ್ನು
ದೇಶಿಸಿದರು. ॥೨೫॥

ಶ್ಲೋಕ ॥ ಪ್ರಸಕ್ತ್ಯಾ ರಾಜಪುತ್ರತ್ವ-
ಮಪಿಬೋಧಯಿತುಂ ಗುರುಃ ।
ಅನುಗೃಹ್ಯಾಭ್ಯಧಾತ್ತಸ್ಯ
ತದುದಂತಮಿದಂ ತಯಾ ॥೨೬॥

ಟೀ ॥ ಗುರುಃ-ಆರ್ಯನಂದ್ಯಾಚಾರ್ಯರು, ಪ್ರಸಕ್ತ್ಯಾ-ಮರಳಿಯು, ರಾಜಪುತ್ರತ್ವ
ಮಪಿ-ದೊರೆಮಗನಾಗಿರೋಣವನ್ನು ಕೂಡ, ಬೋಧಯಿತುಂ- ಬೋಧಿಸಲೋಸ್ಕ
ಗ, ಅನುಗೃಹ್ಯ-ಅನುಗ್ರಹಿಸಿ, ತಸ್ಯ-ಆ ಜೀವಂಧರನಿಗೆ, ತದುದಂತಂ-ಆ ಸತ್ಯಂಧರ
ಪುತ್ರಭಾವವೃತ್ತಾಂತವನ್ನು, ಇದಂ ತಯಾ-ಇದು ಹೀಗೆಂಬುವುದರಿಂದ, ಅಭ್ಯಧಾ
ತ್-ಹೇಳಿದರು.

ತಾತ್ಪರ್ಯ ॥ ಮರಳಿ ಗುರುವಾದ ಆರ್ಯನಂದ್ಯಾಚಾರ್ಯರು ಜೀವಂಧ
ರನಿಗೆ ನೀನು ಸತ್ಯಂಧರನಪುತ್ರನೆಂಬ ವೃತ್ತಾಂತವನ್ನು ಯಥಾಕ್ರಮವಾ
ಗಿ ಹೇಳಿದರು ॥೨೬॥

ಶ್ಲೋಕ ॥ ಕಾಷ್ಠಾಂಗಾರಮಸೌ ಜ್ಞಾತ್ವಾ
ರಾಜಘ್ನಂ ಗುರುವಾಕ್ಯತಃ ।
ಸತ್ಯಂಧರಾತ್ಮಜಃ ಕ್ರೋಧಾ-
ತ್ಸನ್ನಾಹಂ ತದ್ವಧೇ ವ್ಯಧಾತ್ ॥೨೭॥

ಟೀ ॥ ಸತ್ಯಂಧರಾತ್ಮಜಃ ಸತ್ಯಂಧರ ಮಹಾರಾಜನ ಮಗನಾದ, ಅಸೌ- ಈ
ಜೀವಂಧರನು, ಗುರುವಾಕ್ಯತಃ-ಗುರುವಾದಆರ್ಯನಂದ್ಯಾಚಾರ್ಯರವಚನದಸೆಯಿಂ
ದ, ಕಾಷ್ಠಾಂಗಾರಂ-ಕಾಷ್ಠಾಂಗಾರನನ್ನು, ರಾಜಘ್ನಂ (ಸಂತಂ) - ಸತ್ಯಂಧರನನ್ನು
ಸಂಹರಿಸಿದವನನ್ನಾಗಿ, ಜ್ಞಾತ್ವಾ-ತಿಳಿದು, ಕ್ರೋಧಾತ್-ಕೋಪದದೆಸೆಯಿಂದ,
ತದ್ವಧೇ-ಆಕಾಷ್ಠಾಂಗಾರ ಸಂಹಾರದಲ್ಲಿ, ಸನ್ನಾಹಂ-ಪ್ರಯತ್ನವನ್ನು, ವ್ಯಧಾತ್-
ಮಾಡಿದನು.

ತಾತ್ಪರ್ಯ ॥ ಈ ಸತ್ಯಂಧರ ಮಹಾರಾಜನ ಮಗನಾದ ಜೀವಂಧರ
ಸ್ವಾಮಿಯು ಗುರುವಚನದ ದೆಸೆಯಿಂದ ಕಾಷ್ಠಾಂಗಾರನು ತನ್ನ ತಂದೆ

ಯನ್ನು ಕೊಂದನೆಂದು ತಿಳಿದು ಕೋಪದಿಂದ ಆ ಕಾಷ್ಠಾಂಗಾರನ ಸಂಹಾರಕ್ಕೋಸುಗ ಪ್ರಯತ್ನಿಸಿದನು. ॥೭೭॥

ಶ್ಲೋಕ ॥ ಮುಹುರ್ನಿವಾರ್ಯಮಾಣೋಪಿ
ಸೂರಿಣಾ ನ ಶಶಾಮ ಸಃ ।
ಹಂತಾತ್ಮಾನಮಪಿ ಘ್ನಂತಃ
ಕ್ರುದ್ಧಾಃ ಕಿಂ ಕಿಂ ನ ಕುರ್ವತೇ ॥೭೮॥

ಟೀ ॥ ಸಃ-ಆ ಜೀವಂಧರನು, ಸೂರಿಣಾ-ಪಂಡಿತರಾದ ಆರ್ಯನಂದ್ಯಾಚಾರ್ಯರಿಂದ, ಮುಹುಃ-ಬಾರಿಬಾರಿಗೂ, ನಿವಾರ್ಯಮಾಣೋಪಿ - ತಡೆಯಲ್ಪಟ್ಟವನಾದಾಗ್ಯೂ, ನ ಶಶಾಮ-ಕೋಪಶಮನವನ್ನು ಹೊಂದಲಿಲ್ಲವು., ಆತ್ಮಾನಮಪಿ- ತನ್ನನ್ನೂಕೂಡ, ಘ್ನಂತಃ-ಕೊಲ್ಲುತ್ತಲಿರುವ, ಕ್ರುದ್ಧಾಃ-ಕೋಪಿಷ್ಠರು, ಕಿಂಕಿಂ-ಯಾವಯಾವಕಾರ್ಯವನ್ನು, ನಕುರ್ವತೇ-ಮಾಡುವುದಿಲ್ಲವು., ಹಂತ-ಕಷ್ಟವು!!.

ತಾತ್ಪರ್ಯ ॥ ಕೋಪಾವಿಷ್ಟನಾದ ಜೀವಂಧರನು ಗುರುವಾದ ಆರ್ಯನಂದ್ಯಾಚಾರ್ಯರಿಂದ ಎಷ್ಟು ತಡೆಯಲ್ಪಟ್ಟವನಾದಾಗ್ಯೂ ಶಾಂತಿಯನ್ನೈದಲಿಲ್ಲವು. ಕೋಪಾವಿಷ್ಟರು ತಮ್ಮನ್ನೇ ತಾವು ಸಂಹರಿಸಿಕೊಳ್ಳುವರು. ಹೀಗಿರುವಲ್ಲಿ ಇನ್ನೇನನ್ನು ತಾನೇ ಮಾಡುವದಿಲ್ಲವು?. ಎಂಥಾ ವಿವೇಕಿಗೂ ಕೋಪದಿಂದ ಕೃತ್ಯಾಕೃತ್ಯ ವಿವೇಕನು ನಷ್ಟವಾಗುತ್ತೆಂಬರ್ಥವು. ಆದುದರಿಂದ ವಿವೇಕಿಗಳು ಕೋಪಕ್ಕೆ ವಶ್ಯರಾಗಲಾಗದು॥೭೮॥

ಶ್ಲೋಕ ॥ ವತ್ಸರಂ ಕ್ಷಮ್ಯತಾಮೇಕಂ
ವತ್ಸೇಯಂ ಗುರುದಕ್ಷಿಣಾ ।
ಗುರುಣೇತಿ ನಿಷಿದ್ಧೋಭೂ-
ತ್ಕೋನಘೋ ಲಂಘಯೇದ್ಗುರುಮ್॥೭೯॥

ಟೀ ॥ ಹೇ ವತ್ಸ-ಎಲೈ ಮಗನೆ!, ಏಕಂ-ಒಂದಾದ, ವತ್ಸರಂ-ಸಂವತ್ಸರವು, ಕ್ಷಮ್ಯತಾಂ-ಕ್ಷಮಿಸಲ್ಪಡಲಿ., ಇಯಂ-ಇದು, ಗುರುದಕ್ಷಿಣಾ-ಗುರುವಿಗಾಗಿ ಕೊಡತಕ್ಕ ದಕ್ಷಿಣೆಯು, ಇತಿ-ಈ ಪ್ರಕಾರ, ಗುರುಣಾ-ಆರ್ಯನಂದ್ಯಾಚಾರ್ಯರಿಂದ, ನಿಷಿದ್ಧ(ಸ್ಸನ್)-ತಡೆಯಲ್ಪಟ್ಟವನಾಗಿ, ಅಭೂತ್-ಆದನು., ಅನಘಃ-ನಿರ್ದೋಷಿಯಾದ, ಕಃ-ಯಾವನು, ಗುರುಂ-ಗುರುವನ್ನು, ಲಂಘಯೇತ್-ಅತಿಕ್ರಮಿಸುವನು?.

ತಾತ್ಪರ್ಯ ॥ ಎಲೈ ಬಾಲನಾದ ಜೀವಂಧರನೇ! ಒಂದು ವರುಷಕಾಲ ಕ್ಷಮಿಸು. ಈ ಕ್ಷಮೆಯೇ ನನಗೆ ಗುರುದಕ್ಷಿಣೆಯು. ಎಂಬದಾಗಿ ಗು ರುವಿನಿಂದ ತಡೆಯಲ್ಪಟ್ಟವನಾದನು. ವಿವೇಕಿಯಾದ ಯಾವನು ಗುರುವಿ ನ ಅಪ್ಪಣೆಯನ್ನು ವಿಚಾರಿ ನಡೆಯುವನು? ಹಾಗೆ ಗುರುವಿನ ಆಜ್ಞೆಯನ್ನು ತಿಕ್ರಮಿಸುವ ಪುರುಷನು ಅವಿವೇಕಿಯೆನಿಸಿಕೊಳ್ಳುವನು ॥೩೯॥

ಶ್ಲೋಕ ॥ ಪಶ್ಯನ್ಕೋಪಕ್ಷಣೇ ತಸ್ಯ
ಪಾರವಶ್ಯಮಸೌ ಗುರುಃ ।
ಅಶಿಕ್ಷಯತ್ಪುನಶ್ಚೈನ
ಮಪಥಘ್ನೀ ಹಿ ವಾಕ್‌ಗುರೋಃ ॥೪೦॥

ಟೀ ॥ ಗುರುವಾದ, ಅಸೌ-ಈ ಆರ್ಯನಂದ್ಯಾಚಾರ್ಯನು, ಕೋಪಕ್ಷಣೇ-ಕೋ ಪಕಾಲದಲ್ಲಿ, ತಸ್ಯ-ಆ ಜೀವಂಧರನ, ಪಾರವಶ್ಯಂ-ಪರವಶತ್ವವನ್ನು, ಪಶ್ಯನ್(ಸನ್)- ನೋಡುವವನಾಗಿ, ಪುನಶ್ಚ-ಮರಳಿಯು, ಏನಂ-ಈ ಜೀವಂಧರನನ್ನು, ಅಶಿಕ್ಷಯ ತ್-ಶಿಕ್ಷಿಸಿದನು., ಗುರೋಃ-ಗುರುವಿನ, ವಾಕ್-ವಚನವು, ಅಪಥಘ್ನೀ- ದುರ್ಮಾರ್ಗ ಪ್ರವೃತ್ತಿಯನ್ನು ನಾಶಮಾಡತಕ್ಕದ್ದಲ್ಲವೆ?.

ತಾತ್ಪರ್ಯ ॥ ಕೋಪಸಂಭವಿಸಿದ ಕಾಲದಲ್ಲಿ ಜೀವಂಧರನ ಕೋಪ ಪಾರವಶ್ಯವನ್ನು ನೋಡಿದ ಗುರುವು ಮರಳಿಯು ಜೀವಂಧರನಿಗೆ ವಿವೇ ಕವನ್ನು ಬೋಧಿಸಿದರು. ಗುರೂಪದೇಶವು ದುರ್ಮಾರ್ಗವನ್ನು ತಪ್ಪಿಸತ ಕ್ಕದ್ದಲ್ಲವೆ ? ॥೪೦॥

ಶ್ಲೋಕ ॥ ಅವಶಃ ಕಿಮಕೋಪೋ(ಹಾ-
ದಕುಪಃ ಪುತ್ರಪುಂಗವ ।
ಸತಿ ಹೇತೌ ವಿಕಾರಸ್ಯ
ತದಭಾವೋ ಹಿ ಧೀರತಾ ॥೪೧॥

ಟೀ ॥ ಹೇ ಪುತ್ರಪುಂಗವ! ಎಲೈ ಪುತ್ರಶ್ರೇಷ್ಠನೆ!, ಮೋಹಾತ್-ಅಜ್ಞಾನ ಪಡೆಸಿಯಿಂದ, ಅವಶಃ(ಸನ್)-ಪರವಶನಾಗಿ, ಕಿಂ-ಯಾತಕ್ಕೋಸುಗ, ಅಕುಪಃ- ಕೋಪಿಸಿಕೊಂಡವನಾದೆ?, ಅಹೋ!-ಆಶ್ಚರ್ಯವು!!, ನಿಃಕಾರಸ್ಯ-ಕೋಪವೆಂಬ

ಲಾವ ವಿಕಾರಕ್ಕೆ, ಹೇತೌ-ಕಾರಣವು, ಸತಿ-ಇರುತ್ತಿರಲಾಗಿ, ತವಭಾವಃ- ಆ ವಿಕಾರರಾಹಿತ್ಯವು, ಧೀರತಾಹಿ-ಧೈರ್ಯವೆಂಬ ಗುಣವಲ್ಲವೆ?.

ತಾತ್ಪರ್ಯ॥ ಎಲೈ ಪುತ್ರಶ್ರೇಷ್ಠನೇ! ಅಜ್ಞಾನದ ವೆಸೆಯಿಂದ ಪರವಶನಾಗಿ ಏತಕ್ಕೆ ಕೋಪಿಸಿಕೊಂಡವನಾದೆ? ಕೋಪಾದಿವಿಕಾರಕ್ಕೆ ಕಾರಣವಿದ್ದಾಗ್ಯೂ ನಿರ್ವಿಕಾರನಾಗಿರೋಣವೇ ಅಲ್ಲವೆ ಧೀರತ್ವವೆಂಬ ಗುಣವು. ಪ್ರಾಜ್ಞನಿಗೂ ಕೋಪಾದಿವಿಕಾರ ಪಾಪವಶ್ಯ ಉಂಟಾದಲ್ಲಿ ಅಜ್ಞಾನಿಗೂ, ಪ್ರಾಜ್ಞನಿಗೂ ಏನೂ ಭೇದವಿಲ್ಲವೆಂದು ಭಾವವು ॥೪೮॥

ಶ್ಲೋಕ॥ ಅಪಕುರ್ವತಿ ಕೋಪಶ್ಚೇ-
ತ್ಕಿಂ ನ ಕೋಪಾಯ ಕುಪ್ಯಸಿ।
ತ್ರಿವರ್ಗಸ್ಯಾಪವರ್ಗಸ್ಯ
ಜೀವಿತಸ್ಯ ಚ ನಾಶಿನೇ ॥೪೯॥

ಟೀ॥ ಅಪಕುರ್ವತಿ-ಅಪಕಾರಮಾಡುವವನಲ್ಲಿ, ಕೋಪಃ-ಕೋಪವು, ಚೇತ್-ಉಂಟಾದುದೇ ಆದರೆ, ತ್ರಿವರ್ಗಸ್ಯ-ಧರ್ಮಾರ್ಥ ಕಾಮಗಳೆಂಬ ತ್ರಿವರ್ಗಕ್ಕೂ, ಅಪವರ್ಗಸ್ಯ-ಮೋಕ್ಷಕ್ಕೂ, ಜೀವಿತಸ್ಯ ಚ-ಪ್ರಾಣಕ್ಕೂ ಕೂಡ, ನಾಶಿನೇ - ನಾಶವನ್ನುಂಟುಮಾಡುವ, ಕೋಪಾಯ-ಕೋಪಕ್ಕೋಸುಗ, ಕಿಂ-ಯಾತಕ್ಕಾಗಿ, ನಕುಪ್ಯಸಿ-ಕೋಪಿಸಿಕೊಳ್ಳುವುದಿಲ್ಲವು?.

ತಾತ್ಪರ್ಯ॥ ಅಪಕಾರಿಯಲ್ಲಿ ಕೋಪವನ್ನು ಮಾಡುವುದೇ ನ್ಯಾಯವಾದಪಕ್ಷದಲ್ಲಿ ಧರ್ಮಾರ್ಥ ಕಾಮಮೋಕ್ಷ ರೂಪವಾದ ಪುರುಷಾರ್ಥಗಳನ್ನು ಭಂಗಗೊಳಿಸಿ ಮತ್ತು ಪ್ರಾಣಹಾನಿಯನ್ನು ಕೂಡಮಾಡತಕ್ಕದ್ದಾದ, ಆದುದರಿಂದಲೇ ನಮಗೆ ಮಹಾ ಅಪಕಾರಿಯೆನಿಸುವ ಕೋಪಕ್ಕೋಸ್ಕರವೇ ಏತಕ್ಕೆ ನೀನು ಕೋಪಿಸಿಕೊಳ್ಳುವುದಿಲ್ಲವು? ನಮಗೆ ಪೂರ್ವೋಕ್ತವಾದ ಮಹಾಹಾನಿಯನ್ನುಂಟುಮಾಡುವ ಅಂತರಂಗಶತ್ರುವಾದ ಕೋಪದಲ್ಲಿ ಕೋಪವನ್ನು ಮಾಡಬೇಕೆಂದರೆ (ಕೋಪವನ್ನುತ್ಯಜಿಸಬೇಕೆಂದರ್ಥವು.) ॥೪೯॥

ಶ್ಲೋಕ॥ ದಹೇತ್ಸ್ವಮೇವ ರೋಷಾಗ್ನಿ-
ರಾಶ್ರಯಂ ವಿಷಯಂ ಪ್ರತಿ।

ಕ್ರುದ್ಧ್ಯನ್ನಿಕ್ಷಿಪತಿ ಸ್ವಾಂಗೇ
ವಹ್ನಿಮನ್ಯದಿಧಕ್ಷಯಾ ॥ ೪೩ ॥

ಟೀ॥ ರೋಷಾಗ್ನಿಃ-ಕೋಪವೆಂಬಬೆಂಕಿಯು, ಸ್ವಮೇವ-ತನ್ನಾಶ್ರಯವನ್ನೇ, ದಹೇ
ತ್-ದಹಿಸೀತು ?. ಅಪರಂ-ಬೇರೆಯಾದ, ವಿಷಯಂ-ಪದಾರ್ಥವನ್ನು, (ನದಹೇತ್-ದಹಿ
ಸಲಾರದು.,) ತತಃ-ಆದಕಾರಣದದೆಸೆಯಿಂದ, ಕ್ರುಧ್ಯನ್-ಕೋಪಗೊಳ್ಳುವಪುರು
ಷನು, ಅನ್ಯದಿಧಕ್ಷಯಾ - ಇತರನಾದ ವೈರಿಯನ್ನು ದಹಿಸಲೋಸುಗ ಇಚ್ಛೆಯಿಂದ,
ಸ್ವಾಂಗೇ-ತನ್ನಶರೀರದಲ್ಲಿ, ವಹ್ನಿಂ-ಬೆಂಕಿಯನ್ನು, ನಿಕ್ಷಿಪತಿ- ಇಟ್ಟುಕೊಳ್ಳುತ್ತಾನೆ.

ತಾ॥ ರೋಷವೆಂಬ ಬೆಂಕಿಯು ತನ್ನಾಶ್ರಯವಾದ ದೇಹವನ್ನೇ ದಹಿಸು
ವುದು ; ಇತರವಿಷಯವನ್ನು ದಹಿಸಲಾರದು. ಆದಕಾರಣದ ದೆಸೆಯಿಂದ
ಯಾವನು ಕೋಪಗೊಳ್ಳುವನೋ ಆಪುರುಷನು ಇತರವಸ್ತುವನ್ನು ದಹಿ
ಸುವೆನೆಂದು ಇಚ್ಛಿಸಿ ತನ್ನ ಶರೀರದಲ್ಲಿಯೇ ಬೆಂಕಿಯನ್ನಿಟ್ಟುಕೊಳ್ಳುವವ
ನಂತಾದನು. ಆದುದರಿಂದ ತನ್ನಾಶ್ರಯವನ್ನೇ ದಹಿಸುವ ಕೋಪಾಗ್ನಿಯು
ಪ್ರಾಜ್ಞರಿಂದ ಪರಿತ್ಯಜಿಸಲೋಸುಗಯೋಗ್ಯವೇ ಹೊರತು ಹಿತಕರ
ವಲ್ಲವು. ॥೪೩॥

ಶ್ಲೋಕ ॥ ಹೇಯೋಪಾದೇಯವಿಜ್ಞಾನಂ
ನೋಚೇದ್ವ್ಯರ್ಥಶ್ಶ್ರಮಶ್ಶ್ರುತೌ ।
ಕಿಂ ವ್ರೀಹಿಖಂಡನಾಯಾಸೈ-
ಸ್ತಂಡುಲಾನಾಮಸಂಭವೇ ॥ ೪೪ ॥

ಟೀ ॥ ಹೇಯೋಪಾದೇಯವಿಜ್ಞಾನಂ-ಬಿಡುವುದಕ್ಕೂ ಸ್ವೀಕರಿಸುವುದಕ್ಕೂ
ಯೋಗ್ಯವಾದ ವಿಷಯದ ವಿವೇಕವು, ನೋಚೇತ್ - ಇಲ್ಲದೇ ಹೋದರೆ, ಶ್ರುತೌ-
ಶಾಸ್ತ್ರದಲ್ಲಿ, ಶ್ರಮಃ-ಶ್ರಮವು, ವ್ಯರ್ಥಃ-ನಿಷ್ಫಲವು., ತಂಡುಲಾನಾಂ- ಅಕ್ಕಿಗಳ,
ಅಸಂಭವೇ-ಲಾಭವಿಲ್ಲದೇಹೋದಲ್ಲಿ, ವ್ರೀಹಿಖಂಡನಾಯಾಸೈಃ-ಭತ್ತವನ್ನುಕುಟ್ಟೋ
ಣದರಿಂದುಂಟಾದ ಆಯಾಸಗಳಿಂದ, ಕಿಂ - ಏನು ಪ್ರಯೋಜನವು.?

ತಾತ್ಪರ್ಯ ॥ ಇದು ಬಿಡತಕ್ಕ ವಿಷಯವು, ಇದು ಸ್ವೀಕರಿಸತಕ್ಕ
ವಿಷಯವೆಂಬ ವಿವೇಕವು ಹುಟ್ಟದೆ ಹೋದರೆ ಶಾಸ್ತ್ರಾಭ್ಯಾಸ ಶ್ರಮವು

ವ್ಯರ್ಥವಾಗುವುದು. ಹೇಗಂದರೆ.- ಭತ್ತವನ್ನು ಎಷ್ಟು ಕುಟ್ಟಿದಾಗ್ಯೂ ಅಕ್ಕಿಯು ದೊರೆಯದೇ ಹೋದರೆ ಕುಟ್ಟಿದಶ್ರಮವು ನಿಷ್ಫಲವಲ್ಲವೆ ॥೪೪॥

ಶ್ಲೋಕ॥ ತತ್ವಜ್ಞಾನಂ ಚ ಮೋಘಂ ಸ್ಯಾ-
ತ್ತದ್ವಿರುದ್ಧಪ್ರವರ್ತಿನಾಮ್ ।
ಪಾಣೌ ಕೃತೇನ ದೀಪೇನ-
ಕಿಂ ಕೂಪೇ ಪತತಾಂ ಫಲಮ್ ॥ ೪೫॥

ಟೀ ॥ ತದ್ವಿರುದ್ಧಪ್ರವರ್ತಿನಾಂ-ಆ ಶಾಸ್ತ್ರನಿಷಿದ್ಧ ಕೃತ್ಯದಲ್ಲಿ ಪ್ರವರ್ತಿಸುವವರಿಗೆ, ತತ್ತ್ವಜ್ಞಾನಂಚ-ತತ್ವಯಾಥಾರ್ಥ್ಯಜ್ಞಾನವೂಕೂಡ, ಮೋಘಂ (ಸತ್)-ನಿಷ್ಫಲವಾಗಿ, ಸ್ಯಾತ್-ಆದೀತು?, ಕೂಪೇ-ಭಾವಿಯಲ್ಲಿ, ಪತತಾಂ-ಬೀಳುವಜನರಿಗೆ, ಪಾಣೌ-ಕೈಯಲ್ಲಿ, ಕೃತೇನ-ಮಾಡಲ್ಪಟ್ಟ, ದೀಪೇನ-ದೀಪದಿಂದ, ಕಿಂ-ಏನು ಪ್ರಯೋಜನವು ?.

ತಾತ್ಪರ್ಯ॥ಶಾಸ್ತ್ರವನ್ನು ಓದಿಯೂ ಪಾಪಕೃತ್ಯದಲ್ಲಿ ಪ್ರವರ್ತಿಸುವವರಿಗೆ ತತ್ತ್ವಜ್ಞಾನವೂ ಕೂಡ ವ್ಯರ್ಥವು. ಕೈಯಲ್ಲಿ ದೀಪವನ್ನು ಹಿಡಿದುಕೊಂಡಿದ್ದರೂ ಕೂಡ ಭಾವಿಯಲ್ಲಿ ಬಿದ್ದರೆ ಆ ದೀಪದಿಂದೇನುಪ್ರಯೋಜನವಾಯಿತು ? ॥೪೫॥

ಶ್ಲೋಕ॥ ತತ್ವಜ್ಞಾನಾನುಕೂಲಂ ತ-
ದನುಷ್ಠಾತುಂ ತ್ವಮರ್ಹಸಿ ।
ಮುಷಿತಂ ಧೀಧನಂ ನ ಸ್ಯಾ-
ದ್ಯಥಾ ಮೋಹಾದಿದಸ್ಯುಭಿಃ ॥ ೪೬ ॥

ಟೀ ॥ ತ್ವಂ-ನೀನು, ತತ್ವಜ್ಞಾನಾನುಕೂಲಂ-ಶಾಸ್ತ್ರಜನ್ಯವಾದ ತತ್ವಯಾಥಾರ್ಥ್ಯಜ್ಞಾನಕ್ಕೆ ವಿರುದ್ಧವಲ್ಲದ, ತತ್- ಆ ಪ್ರಾಜ್ಞೋಚಿತಕೃತ್ಯವನ್ನು, ಮೋಹಾದಿದಸ್ಯುಭಿಃ-ಮೋಹನೀಯಕರ್ಮವೇ ಮೊದಲಾದ ಕಳ್ಳರಿಂದ, ಧೀಧನಂ - ವಿವೇಕವೆಂಬದ್ರವ್ಯವು, ಮುಷಿತಂ(ಸತ್)-ಕದಿಯಲ್ಪಟ್ಟದ್ದಾಗಿ, ಯಥಾ-ಹೇಗೆ,ನಸ್ಯಾತ್-ಆಗಲಾರದೋ, ತಥಾ-ಹಾಗೆ, ಅನುಷ್ಠಾತುಂ-ಆಚರಿಸಲಿಕ್ಕೋಸುಗ, ಅರ್ಹಸಿ- ಯೋಗ್ಯನಾಗುತ್ತೀಯೆ.

ತಾತ್ಪರ್ಯ ॥ ಕಳ್ಳರಿಂದ ದ್ರವ್ಯವು ಅಪಹರಿಸಲ್ಪಡುವಂತೆ ಮೋಹನೀಯವೇ ಮೊದಲಾದ ಕರ್ಮಗಳಿಂದ ಶಾಸ್ತ್ರಜನ್ಯವಾದ ಹೇಯೋಪಾದೇಯ ವಿವೇಕವು ಹೇಗೆ ನಷ್ಟವಾಗಬಾರದೋ ಹಾಗೆ ಶಾಸ್ತ್ರವಿರುದ್ಧವಲ್ಲದ ಕರ್ಮವನ್ನು ನೀನು ಅನುಷ್ಠಾನಮಾಡಲೋಸುಗ ಯೋಗ್ಯನು. ॥೪೬॥

ಶ್ಲೋಕ ॥ ಸ್ತ್ರೀಮುಖೇನ ಕೃತದ್ವಾರಾನ್
ಸ್ವಪಥೋತ್ಸುಕ ಮಾನಸಾನ್ ।
ದುರ್ಜನಾಹೀನ್ ಜಹೀ ಹಿ ತ್ವಂ
ತೇ ಹಿ ಸರ್ವಂಕಷಾಃ ಖಲಾಃ ॥ ೪೭ ॥

ಟೀ ॥ ತ್ವಂ-ನೀನು, ಸ್ತ್ರೀಮುಖೇನ-ಸ್ತ್ರೀಯೇ ಮೊದಲಾಗಿವುಳ್ಳ ರಾಗಾದಿ ಹೇತುಭೂತವಸ್ತುವಿನಿಂದ (ಗೆದ್ದಲು ಹುಳುವಿನಿಂದ), ಕೃತದ್ವಾರಾನ್- ಮಾಡಲ್ಪಟ್ಟ ಅಕಾರ್ಯಪ್ರವೇಶಮಾರ್ಗವುಳ್ಳ (ಮಾಡಲ್ಪಟ್ಟಬಿಲಗಳುಳ್ಳ), ಸ್ವಪಥೋತ್ಸುಕಮಾನಸಾನ್-ಚೆನ್ನಾಗಿ ದುರ್ಮಾರ್ಗದಲ್ಲಿ ಆಸಕ್ತವಾದ ಮನಸ್ಸುಳ್ಳ, ದುರ್ಜನಾಹೀನ್-ದುಷ್ಟಜನರೆಂಬಸರ್ಪಗಳನ್ನು, ಜಹೀಹಿ-ಬಿಡು., ತೇಖಲಾಃ-ನೀಚರಾದ ಆದುರ್ಜನರು, ಸರ್ವಂಕಷಾಹಿ-ಸಮಸ್ತರನ್ನೂ ಕೆಡಿಸುವರಲ್ಲವೆ ?.

ತಾತ್ಪರ್ಯ ॥ ನೀನು ದುರ್ಜನರನ್ನು ಸರ್ಪದಂತೆ ತಿಳಿದು ದೂರದಲ್ಲಿರು. ಆ ದುರ್ಜನರು ಸಮಸ್ತರನ್ನೂ ಕೆಡಿಸುವರಲ್ಲವೆ?. ದುರ್ಜನರು ಸರ್ಪಸಮಾನರೆಂಬುದು ಹೇಗೆಂದರೆ ದುರ್ಜನರು ಸ್ತ್ರೀಯೇ ಮೊದಲಾದುದರರಾಗಮೂಲಕವಾಗಿ ಅಕಾರ್ಯದಲ್ಲಿ ಪ್ರವೇಶಿಸುವರು. ಸರ್ಪವು ಗೆದ್ದಲು ಹುಳುವಿನಿಂದ ಮಾಡಲ್ಪಟ್ಟ ಹುತ್ತದ ರಂಧ್ರವುಳ್ಳದ್ದು. ಮತ್ತು ದುರ್ಜನರು ಚೆನ್ನಾಗಿ ದುರ್ಮಾರ್ಗದಲ್ಲಿಯೇ ಆಸಕ್ತವಾದ ಮನಸ್ಸುಳ್ಳವರು. ಸರ್ಪಗಳೂ ಕೂಡಜನಗಳು ಸಂಚರಿಸುವ ದೊಡ್ಡಮಾರ್ಗವನ್ನು ಬಿಟ್ಟು ಸಂದಿಗೊಂದಿ ಕತ್ತಲೆಯುಳ್ಳ ಪ್ರದೇಶಗಳಲ್ಲಿ ಆಸಕ್ತವಾದ ಮನಸ್ಸುಳ್ಳದ್ದು. ಇಲ್ಲಿ ದುರ್ಜನರಿಗೂ, ಸರ್ಪಕ್ಕೂ, ಅನುರೂಪವಾದ ಎರಡರ್ಥವುಳ್ಳ ( ಸ್ತ್ರೀಮುಖೇನಕೃತದ್ವಾರಾನ್ ಸ್ವಪಥೋತ್ಸುಕಮಾನಸಾನ್) ಎಂಬ ಎರಡು ಸಮಾನ ವಿಶೇಷಣಗಳಿಂದ ಸಾದೃಶ್ಯವು.

ಶ್ಲೋಕ ॥ ಸ್ಪೃಷ್ಟಾನಾಮಹಿಭಿರ್ನಶ್ಯೇ-
ದ್ಗಾತ್ರಂ ಖಲಜನೇನ ತು ।
ವಂಶವೈಭವವೈದುಷ್ಯ
ಕ್ಷಾಂತಿಕೀರ್ತ್ಯಾದಿಕಂ ಕ್ಷಣಾತ್ ॥ ೪೮ ॥

ಟೀ ॥ ಅಹಿಭಿಃ-ಸರ್ಪಗಳಿಂದ, ಸ್ಪೃಷ್ಟಾನಾಂ-ಸ್ಪರ್ಶಿಸಲ್ಪಟ್ಟವರ, ಗಾತ್ರಂ-ಶರೀರವು, ನಶ್ಯೇತ್-ನಾಶವನ್ನು ಹೊಂದೀತು?, ಖಲಜನೇನತು-ದುರ್ಜನದಿಂದಲಾದರೋ, (ಸ್ಪೃಷ್ಟಾನಾಂ- ಮುಟ್ಟಲ್ಪಟ್ಟವರಿಗೆ,) ವಂಶವೈಭವವೈದುಷ್ಯಕ್ಷಾಂತಿಕೀರ್ತ್ಯಾದಿಕಂ–ಸತ್ಕುಲವೂ, ಮಹಿಮೆಯೂ, ಪಾಂಡಿತ್ಯವೂ, ಕ್ಷಮಾಗುಣವೂ, ಯಶಸ್ಸು ಇವೇ ಮೊದಲಾದವುಗಳು, ಕ್ಷಣಾತ್-ಕ್ಷಣಮಾತ್ರದಿಂದ, (ನಶ್ಯೇತ್-ನಾಶವನ್ನುಹೊಂದೀತಲ್ಲವೆ)?-

ತಾತ್ಪರ್ಯ॥ಹಾವಿನಿಂದ ಕಚ್ಚಲ್ಪಟ್ಟರೆ.ಶರೀರಮಾತ್ರ ನಾಶವನ್ನೈದುವುದು. ದುರ್ಜನರೊಡನೆ ಸಹವಾಸಮಾಡಲ್ಪಟ್ಟ ಜನಕ್ಕಾದರೋ ಸತ್ಕುಲ, ಮಹಿಮೆ, ಪಾಂಡಿತ್ಯ, ಕ್ಷಮಾಗುಣ, ಕೀರ್ತಿ ಇವೇ ಮೊದಲಾದ ಉತ್ತಮಗುಣಗಳೆಲ್ಲವೂ ಕ್ಷಣದಲ್ಲಿ ನಷ್ಟವಾಗುತ್ತವೆ. ಆದುದರಿಂದ ದುರ್ಜನನು ಸರ್ಪಕ್ಕಿಂತಲೂ ಕೆಟ್ಟವನು. ॥೪೮॥

ಶ್ಲೋಕ ॥ ಖಲಃ ಕುರ್ಯಾತ್ಖಲಂ ಲೋಕ-
ಮನ್ಯಮನ್ಯೋ ನ ಕಂಚನ ।
ನಹಿ ಶಕ್ಯಂ ಪದಾರ್ಥಾನಾಂ
ಭಾವನಂ ಚ ವಿನಾಶವತ್ ॥ ೪೯ ॥

ಟೀ ॥ ಖಲಃ-ದುರ್ಜನನು, ಲೋಕಂ-ಜನವನ್ನು, ಖಲಂ(ಸನ್ತಂ)- ದುರ್ಜನನನ್ನಾಗಿ, ಕುರ್ಯಾತ್-ಮಾಡ್ಯಾನು?, ಅನ್ಯಃ-ಸಜ್ಜನನು, ಕಂಚನ- ಯಾವನಾದರೊಬ್ಬನನ್ನು, ಅನ್ಯಂ(ಸನ್ತಂ)-ಸಜ್ಜನನನ್ನಾಗಿ, ನಕುರ್ಯಾತ್-ಮಾಡಲಾರನು., ಪದಾರ್ಥಾನಾಂ-ವಸ್ತುಗಳಿಗೆ, ಭಾವನಂ ಚ- ಉತ್ಪತ್ತಿಯನ್ನುಂಟುಮಾಡೋಣವೂ ಕೂಡ, ವಿನಾಶವತ್-ನಾಶದೋಪಾದಿಯಲ್ಲಿ, ನಶಕ್ಯಂ-ಸಾಧ್ಯವಲ್ಲವಷ್ಟೆ?.

ತಾತ್ಪರ್ಯ॥ದುರ್ಜನನು ಲೋಕವೆಲ್ಲವನ್ನೂ ಕ್ಷಣಕ್ಕೆ ತನ್ನಂತೆ ದುರ್ಜನನನ್ನಾಗಿಮಾಡೀತು. ಸಜ್ಜನನಾದರೋ ಒಬ್ಬನನ್ನು ಕೂಡ ತ

ನ್ನಂತೆ ಸಜ್ಜನವನ್ನಾಗಿ ಮಾಡಲಾರದು. ಅದು ಹೇಗಂದರೆ.— ಯಾವ
ಸ್ತುವಿಗೂ ಉತ್ಪತ್ತಿಯಾದನ್ನು ಕ್ರಮಸಾಧ್ಯವು. ನಾಶವಾದರೋ ಅನ
ಯಾಸದಿಂದ ಸಾಧ್ಯವಲ್ಲವೆ ? ॥ ೪೯ ॥

ಶ್ಲೋಕ ॥ ಸಜ್ಜನಾಸ್ತು ಸತಾಂ ಪೂರ್ವಂ
ಸಮಾವರ್ಜ್ಯಾಃ ಪ್ರಯತ್ನತಃ ।
ಕಿಂ ಲೋಕೇ ಲೋಷ್ಟವತ್ಪ್ರಾಪ್ಯಂ
ಶ್ಲಾಘ್ಯಂ ರತ್ನಮಯತ್ನತಃ ॥ ೫೦ ॥

ಟೀ ॥ ಸಜ್ಜನಾಸ್ತು-ಸತ್ಪುರುಷರಾದರೋ, ಸತಾಂ - ಸತ್ಪುರುಷರಿಗೆ, ಪೂ
ರ್ವಂ-ಮೊದಲು, ಪ್ರಯತ್ನತಃ-ಪ್ರಯತ್ನದ ದೆಸೆಯಿಂದ, ಸಮಾವರ್ಜ್ಯಾಃ-ಸಂಪಾ
ದಿಸಲೋಸುಗ ಯೋಗ್ಯರು., ಲೋಕೇ-ಲೋಕದಲ್ಲಿ, ಶ್ಲಾಘ್ಯಂ- ಶ್ರೇಷ್ಠವಾದ, ರ
ತ್ನಂ-ರತ್ನವು, ಅಯತ್ನತಃ-ಪ್ರಯತ್ನವಿಲ್ಲದೆ, ಲೋಷ್ಟವತ್ - ಮಣ್ಣು ಹೆಂಟೆಯೋ
ಪಾದಿಯಲ್ಲಿ, ಪ್ರಾಪ್ಯಂ ಕಿಂ-ಪಡೆಯಲೋಸುಗ ಯೋಗ್ಯವೇ ಏನು ?.

ತಾತ್ಪರ್ಯ ॥ ಸತ್ಪುರುಷರಾದವರು ಮೊದಲು ಸತ್ಪುರುಷರನ್ನು
ಸಂಪಾದಿಸಬೇಕು. ಸತ್ಪುರುಷರು ಬಹಳ ದುರ್ಲಭರು. ಅದು ಹೇ
ಗೆಂದರೆ.— ಶ್ಲಾಘ್ಯವಾದ ರತ್ನವು ಮಣ್ಣು ಹೆಂಟೆಯೋಪಾದಿಯಲ್ಲಿ ಯತ್ನ
ವಿಲ್ಲದೆಯೇ ದೊರಕುವದಿಲ್ಲವಷ್ಟೆ? ರತ್ನದಂತೆ ಸತ್ಪುರುಷರು ಅತ್ಯಂತ
ದುರ್ಲಭವೆಂದಭಿಪ್ರಾಯವು ॥ ೫೦ ॥

ಶ್ಲೋಕ ॥ ಜಾಗ್ರತ್ತ್ವಂ ಸೌಮನಸ್ಯಂ ಚ
ಕುರ್ಯಾತ್ಸದ್ವಾಗಲಂ ಪರೈಃ ।
ಅಜಲಾಶಯಸಂಭೂತ-
ಮಮೃತಂ ಹಿ ಸತಾಂ ವಚಃ ॥ ೫೧ ॥

ಟೀ ॥ ಸದ್ವಾಕ್-ಸತ್ಪುರುಷರ ಹಿತೋಪದೇಶರೂಪವಾದ ವಚನವು, ಜಾಗ್ರ
ತ್ತ್ವಂ-ನಿರ್ನಿದ್ರತೆಯನ್ನು, (ಜಾಗರೂಕತ್ವವನ್ನು), ಸೌಮನಸ್ಯಂ ಚ - ಪಾಂಡಿತ್ಯ
ನ್ನೂ (ಒಳ್ಳೇ ಮನಸ್ಸುಳ್ಳೋಣವನ್ನೂ, ದೇವತ್ವವನ್ನೂ), ಕುರ್ಯಾತ್- ಉಂಟ
ಮಾಡೀತು ?, ಪರೈಃ-ಉಳಿದವುಗಳಿಂದ, ಅಲಂ-ಸಾಕು., ಸತಾಂ-ಸತ್ಪುರುಷರ,
ಚಃ-ವಾಕ್ಯ, ಅಜಲಾಶಯಸಂಭೂತಂ - ಸಮುದ್ರದಲ್ಲಿ ಉತ್ಪನ್ನವಾಗದೇ ಇರು

(ಮೂಢಮನಸ್ಸಿನಿಂದಉತ್ಪನ್ನವಲ್ಲದೇ ಇರುವ), ಅಮೃತಂ ಹಿ-ಅಮೃತವಲ್ಲವೆ?.

ತಾತ್ಪರ್ಯ ॥ ಸತ್ಪುರುಷವಚನವು ಲೋಕ ಪ್ರಸಿದ್ಧವಾಗಿರುವ ಅಮೃತಕ್ಕಿಂತಲೂ ಗುಣಾತಿಶಯವುಳ್ಳದಾದುದರಿಂ ವಿಲಕ್ಷಣವಾದ ಅಮೃತವೆನ್ನಲ್ಪಡುವುದು. ಅಮೃತಸೇವನೆಯಿಂದ ಜಾಗ್ರತ್ತ್ವವೂ, ಸೌಮನಸ್ಯವೂ ಉಂಟಾಗುವುದು. (ಅಂದರೆ--ನಿದ್ರಾಶೂನ್ಯತ್ವವೂ, ದೇವತ್ವವೂ ಉಂಟಾಗುವುದೆಂದರ್ಥವು.) ಸತ್ಪುರುಷರ ವಾಕ್ಕಿನಿಂದಲೂ ಜಾಗರೂಕತೆಯೂ, ಒಳ್ಳೇಮನಸ್ಸುಳ್ಳೋಣವೂ ಸಹ ಉಂಟಾಗುವುದು. ಹೀಗಿರುವಲ್ಲಿ ಸದ್ವಾಕ್ಕಿನಿಂದ ಉಳಿವ ಸಕಲಗುಣಗಳೂ ಸಿದ್ಧಿಸುವುದೆಂಬ ವಿಷಯದಲ್ಲಿ ಹೇಳತಕ್ಕದ್ದೇನು?. ಆದರೆ ಪ್ರಸಿದ್ಧಾಮೃತವಾದರೋ ಲ-ಡ. ಎಂಬೆರಡಕ್ಷರಕ್ಕೂ ಭೇದವಿಲ್ಲವೆಂದಂಗೀಕರಿಸಿ, ಸಮುದ್ರದಿಂದುತ್ಪನ್ನವಾದುದೆಂಬರ್ಥವಂ ಕೊಡುವ ಜಡಾಶಯಸಂಭೂತವೆಂಬ ಶಬ್ದಾರ್ಥವನ್ನು ವಿಚಾರಿಸುವಲ್ಲಿ ಜಡಮತಿಯಾದವನಿಂದುತ್ಪನ್ನವಾದುದೆಂಬರ್ಥಕ್ಕೂ, ಆಸ್ಪದವಾದುದರಿಂದ ಶಬ್ದದೋಷಾಸ್ಪದವಾಗಿ ನ್ಯೂನಗುಣವುಳ್ಳದ್ದಾದುದು. ಸತ್ಪುರುಷ ವಚನವಾದರೋ ಅಮೃತದಂತೆಸಮುದ್ರದಿಂದುತ್ಪನ್ನವಲ್ಲವೆಂತಲೂ ಪ್ರಾಜ್ಞರಿಂದುತ್ಪನ್ನವಾದುದೆಂತಲೂ ಅರ್ಥದ್ವಯವಂ ಕೊಡುವ ಅಜಡಾಶಯ ಸಂಭೂತವೆಂಬ ಶಬ್ದದಿಂ ಹೇಳಲ್ಪಡೋಣದರಿಂ ಗುಣಾತಿಶಯಕ್ಕಾಸ್ಪದ ವಾದುದೆಂದು ನಿರ್ಗಳಿತ ಭಾವವು.

ಶ್ಲೋಕ ॥ ಯೌವನಂ ಸತ್ವಮೈಶ್ವರ್ಯ-
ಮೇಕೈಕಂ ಚ ವಿಕಾರಕೃತ್ ।
ಸಮವಾಯೋ ನ ಕಿಂ ಕುರ್ಯಾ-
ದವಿಕಾರೋಸ್ತು ತೈರಪಿ ॥ ೫೭ ॥

ಟೀ ॥ ಯೌವನಂ - ಯೌವನ ವಯಸ್ಸೂ, ಸತ್ವಂ- ಬಲವೂ, ಐಶ್ವರ್ಯಂ- ಸಂಪದವೂ ಇವುಗಳು, ಏಕೈಕಂಚ - ಒಂದೊಂದೇ, ವಿಕಾರಕೃತ್ - ಮನೋವಿಕಾರವನ್ನುಂಟು ಮಾಡತಕ್ಕವುಗಳು, ಸಮವಾಯಃ- ಇವೆಲ್ಲಾ ಸೇರಿರೋಣವು, ಕಿಂ-ಏನನ್ನು, ನಕುರ್ಯಾತ್-ಮಾಡಲಾರದು ?, ತೈರಪಿ-ಅವುಗಳಿಂದಲೂ, ಅವಿಕಾರಃ- ವಿಕಾರವಿಲ್ಲದೇ ಇರುವಿಕೆಯು, (ನೀನಿನಗೆ) ಅಸ್ತು-ಆಗಲಿ.

ತಾತ್ಪರ್ಯ ॥ ಭೋಗಯೋಗ್ಯವಾದ ಯೌವನ ವಯಸ್ಸೇನೂ, ಬ[illegible]
ವೇನೂ, ಐಶ್ವರ್ಯವೇನೂ ಇವುಗಳು ಒಂದೊಂದೇ ಮನಸ್ಸಿಗೆ ಮು[illegible]
ವಿಕಾರವನ್ನುಂಟುಮಾಡತಕ್ಕವುಗಳು. ಹೀಗಿರುವಲ್ಲಿ ಇವೆಲ್ಲವೂ ಸೇ[illegible]
ವರೆ ಹೇಳತಕ್ಕದ್ದೇನು? ನಿನಗೆ ಈ ಪೂರ್ವೋಕ್ತವಾದ ವಿಕಾರ ಕಾರ[illegible]
ಗಳು ಸಂಭವಿಸುತ್ತಿರಲಿಕ್ಕಾಗಿ ವಿಕಾರವು ಉಂಟಾಗದೇ ಇರಲಿ ॥೫೨॥

ಶ್ಲೋಕ ॥ ನಹಿ ವಿಕ್ರಿಯತೇ ಚೇತಃ
ಸತಾಂ ತದ್ಧೇತುಸನ್ನಿಧೌ ।
ಕಿಂ ಗೋಷ್ಪದಜಲಕ್ಷೋಭಿ
ಕ್ಷೋಭಯೇಜ್ಜಲಧೇರ್ಜಲಮ್ ॥ ೫೩ ॥

ಟೀ ॥ ಸತಾಂ-ಸತ್ಪುರುಷರ, ಚೇತಃ-ಮನಸ್ಸು, ತದ್ಧೇತುಸನ್ನಿಧೌ-ಆ ವಿಕಾ[illegible]
ರ ಹೇತುವಾದ ವಿಷಯಸಾನ್ನಿಧ್ಯದಲ್ಲಿ, ನವಿಕ್ರಿಯತೇ ಹಿ-ವಿಕಾರವನ್ನು ಹೊಂದುವು[illegible]
ದಿಲ್ಲವಷ್ಟೆ ?, ಗೋಷ್ಪದಜಲಕ್ಷೋಭಿ-ಹಸುವಿನ ಹೆಜ್ಜೆಯುಮುಳುಗುವಷ್ಟುನೀರನ್ನು[illegible]
ಕಲಕತಕ್ಕವಸ್ತುವು, ಜಲಧೇಃ-ಸಮುದ್ರದ, ಜಲಂ-ನೀರನ್ನು, ಕ್ಷೋಭಯೇತ್ಕಿಂ-[illegible]
ಕಲಕೀತೇನು ?.

ತಾತ್ಪರ್ಯ ॥ ಸತ್ಪುರುಷರ ಮನಸ್ಸು ವಿಕಾರ ಹೇತುವಾದ ವಸ್ತುಗ[illegible]
ಳು ಸಮೀಪದಲ್ಲಿದ್ದಾಗ್ಯೂ ವಿಕಾರವನ್ನು ಹೊಂದುವುದಿಲ್ಲವು. ಹಸುವಿನ
ಹೆಜ್ಜೆಯುಮುಳುಗುವಷ್ಟುನೀರನ್ನು ಕಲಕುವವಸ್ತುವಿನಿಂದ ಸಮುದ್ರ
ದನೀರನ್ನು ಕಲಕಬಹುದೇ? ಹಾಗೆ ಮೂಢರಿಗೆ ವಿಕಾರವನ್ನುಂಟುಮಾಡು
ವವಸ್ತುವು ಪ್ರಾಜ್ಞರಿಗೆ ವಿಕಾರವನ್ನುಂಟುಮಾಡೀತೆ ?॥೫೩॥

ಶ್ಲೋಕ ॥ ದೇಶಕಾಲ ಖಲಾಃ ಕಿಂ ತೈ-
ಶ್ಲಾ ಘೀರೇವ ಬಾಧಿಕಾ ।
ಅಪಹಿತೋಽತ್ರ ಧರ್ಮಸ್ಯಾ-
ದಪಧಾನಂ ಹಿ ಮುಕ್ತಯೇ ॥ ೫೪ ॥

ಟೀ ॥ ದೇಶಕಾಲಖಲಾಃ-? ದೇಶವೂ, ಕಾಲವೂ, ದುರ್ಜನರೂ ಇವರುಗಳು,
ಸಂತು-ಇರಲಿ., ತೈಃ - ಅವರುಗಳಿಂದ, ಕಿಂ-ಏನು ?, ಚಲಾ - ಚಂಚಲವಾದ,

ಧೀರೇವ-ಬುದ್ಧಿಯೇ, ಬಾಧಿಕಾ-ಬಾಧೆಯನ್ನುಂಟುಮಾಡತಕ್ಕದ್ದು, ಅತ್ರ-ಈ ಲೋಕದಲ್ಲಿ, ಧರ್ಮೇ-ಧರ್ಮದಲ್ಲಿ, ಜನಃ-ಜನವು, ಅವಹಿತಸ್ಯಾತ್-ಜಾಗರೂಕನಾಗಿ, ಸ್ಯಾತ್-ಇರಬೇಕು, ಅವಧಾನಂ-ಜಾಗರೂಕತೆಯು, ಮುಕ್ತಯೇ-ಮೋಕ್ಷಕ್ಕೆ ಸುಗಮವಾಗುತ್ತದಲ್ಲವೆ?.

ತಾತ್ಪರ್ಯ ॥ ದೇಹವಿಶೇಷದಿಂದಲೂ ಕಾಲವಿಶೇಷದಿಂದಲೂ, ದುರ್ಜನರಿಂದಲೂ ಒಳ್ಳೇಬುದ್ಧಿಯೂ ಕೂಡ ಕೆಟ್ಟುಹೋಗುವುದೆಂದು ಹೇಳುತ್ತಾರಲ್ಲವೆ? ತನ್ನ ಬುದ್ಧಿಯು ಧರ್ಮದಲ್ಲಿ ಸ್ಥಿರವಾಗಿರುತ್ತಿರಲು ಇವುಗಳಾವುವೂ ಕೆಡಿಸಲಾರವು. ಆದುದರಿಂದ ಚಂಚಲವಾದ ನಮ್ಮ ಬುದ್ಧಿಯೇ ನಮ್ಮನ್ನು ಬಾಧಿಸುವದು. ಮುಖ್ಯವಾಗಿ ಈ ಲೋಕದಲ್ಲಿ ಧರ್ಮದೊಳು ಜಾಗರೂಕನಾಗಿರಬೇಕು. ಅವಧಾನವು ಮೋಕ್ಷಕಾರಣವಲ್ಲವೆ?॥ ೫೮॥

ಶ್ಲೋಕ ॥ ಶಿಕ್ಷಾವಚಸ್ಸಹಸ್ರೈರ್ವಾ
ಕ್ಷೀಣಪುಣ್ಯೇನ ಧರ್ಮಧೀಃ ।
ಪಾತ್ರೇ ತು ಸ್ವಾಯತೇ ತಸ್ಮಾ-
ದಾತ್ಮೈವ ಗುರುರಾತ್ಮನಃ ॥ ೫೯ ॥

ಟೀ ॥ ಶಿಕ್ಷಾವಚಸ್ಸಹಸ್ರೈರ್ವಾ-ಶಿಕ್ಷೋಪದೇಶರೂಪವಾದ ಮಾತುಗಳ ಅನೇಕ ಸಹಸ್ರಗಳಿಂದಲೂ ಕೂಡ, ಕ್ಷೀಣಪುಣ್ಯೇ-ನಷ್ಟವಾದ ಸುಕೃತವುಳ್ಳವನಲ್ಲಿ, ಧರ್ಮಧೀಃ-ಧರ್ಮದಲ್ಲಿ ಬುದ್ಧಿಯು, ನ-ಉಂಟಾಗುವದಿಲ್ಲವು, ಪಾತ್ರೇ ತು-ಸತ್ಪಾತ್ರದಲ್ಲಾದರೋ, ಸ್ವಾಯತೇ-ವೃದ್ಧಿಹೊಂದುತ್ತದೆ, ತಸ್ಮಾತ್-ಆ ಕಾರಣದ ದೆಸೆಯಿಂದ, ಆತ್ಮೈವ-ತಾನೇ, ಆತ್ಮನಃ-ತನಗೆ, ಗುರುಃ-ಉಪದೇಶಮಾಡತಕ್ಕವನು.

ತಾತ್ಪರ್ಯ ॥ ಪುಣ್ಯಹೀನನಾದವನಿಗೆ ಎಷ್ಟು ಉಪದೇಶಮಾಡಿದಾಗ್ಯೂ ಧರ್ಮಬುದ್ಧಿಯುಂಟಾಗುವುದಿಲ್ಲವು. ಧರ್ಮಪ್ರಾಣಿಯಲ್ಲಾದರೋ ವೃದ್ಧಿಹೊಂದುತ್ತದೆ. ಆದುದರಿಂದ ತನ್ನಾತ್ಮನೇ ತನಗೆ ಗುರುವು. (ಅಂದರೆ) ಸುಕೃತವಿಶೇಷವೇ ಧರ್ಮದಲ್ಲಿ ಬುದ್ಧಿಯುಂಟಾಗುವುದಕ್ಕೆ ಮುಖ್ಯಕಾರಣವೆಂದು ಭಾವವು. ॥ ೫೯ ॥

ಶ್ಲೋಕ ॥ ನ ಕೃಷ್ಯಂತಿ ನ ಬಧ್ಯಂತಿ
ನ ಪ್ರಯಾಂತಿ ಚ ಸದ್ಗತಿಮ್ ।

ಪ್ರಯಾಂತೋಽಪಿ ನ ಕಾರ್ಯಾಂತಂ
ಧನಾಂಧಾಇತಿ ಚಿಂತ್ಯತಾಮ್ ॥ ೫೬ ॥

ಟೀ ॥ ಧನಾಂಧಾಃ-ದ್ರವ್ಯದಿಂದಮೂಢರಾದವರು, ನಶೃಣ್ವಂತಿ-ಹಿತೋ
ದೇಶವನ್ನು ಕೇಳುವುದಿಲ್ಲವು., ನಬುಧ್ಯಂತಿ-ಸ್ವಯಂ ತಿಳಿಯುವುದೂ ಇಲ್ಲವು., ಸತ್
ಥಂ-ಸನ್ಮಾರ್ಗವನ್ನು, ನಪ್ರಯಾಂತಿ ಚ-ಹೊಂದುವುದೂ ಇಲ್ಲವು., ಪ್ರಯಾಂತೋ
ಪಿ-ಹೊಂದಿದಾಗ್ಯೂ ಕೂಡ, ಕಾರ್ಯಾಂತಂ-ಕೆಲಸದ ಕೊನೆಯನ್ನು, ನ- ಹೊಂದುವು
ದಿಲ್ಲವು., ಇತಿ-ಈ ಪ್ರಕಾರ, ಚಿಂತ್ಯತಾಂ-ಆಲೋಚಿಸಲ್ಪಡಲಿ.

ತಾತ್ಪರ್ಯ ॥ ಹಣದ ಮದವುಳ್ಳವರು ಸತ್ಪುರುಷರ ವಚನವನ್ನು
ಕೇಳುವುದಿಲ್ಲವು. ಅಥವಾ, ತಾವೂ ತಿಳಿಯುವುದಿಲ್ಲವು. ಸನ್ಮಾರ್ಗ
ವನ್ನು ಆಶ್ರಯಿಸುವುದಿಲ್ಲವು. ಆಶ್ರಯಿಸಿದಾಗ್ಯೂ ಕೆಲಸವನ್ನು ಫಲಕಾ
ರ್ಯಂತವಾಗಿ ಮಾಡುವುದಿಲ್ಲವು. ಹೀಗೆಂದು ತಿಳಿಯಲ್ಪಡಲಿ. ॥ ೫೬

ಶ್ಲೋಕ ॥ ಇತ್ಯಾಶಾಸ್ಯ ತಮಾಶ್ವಾಸ್ಯ
ಕೃಚ್ಛ್ರಂ ಸತಪಸೇಗತಃ ।
ಪ್ರಾಣಪ್ರಯಾಣವೇಳಾಯಾಂ
ನ ಹಿ ಲೋಕೇ ಪ್ರತಿಕ್ರಿಯಾ ॥ ೫೭ ॥

ಟೀ ॥ ಸಃ-ಆ ಗುರುವಾದ ಆರ್ಯನಂದ್ಯಾಚಾರ್ಯರು, ಇತಿ-ಈ ಪ್ರಕಾರ, ತಂ
ಆಜೀವಂಧರನನ್ನು, ಆಶಾಸ್ಯ-ಧರ್ಮಬೋಧೆಯಿಂದನುಗ್ರಹಿಸಿ, ಆಶ್ವಾಸ್ಯ-ಸಮಾಧಾ
ನಪಡಿಸಿ, ಕೃಛ್ರಂಯಥಾತಥಾ-ಕ್ಲೇಶದೊಡನೆಕೂಡಿರೋಣವೇಗೋಹಾಗೆ, ತಪಸೇ
ತಪಸ್ಸಿಗೋಸುಗ, ಗತಃ-ಹೊರಟುಹೋದರು., ಲೋಕೇ-ಲೋಕದಲ್ಲಿ, ಪ್ರಾಣ
ಪ್ರಯಾಣವೇಳಾಯಾಂ-ಪ್ರಾಣಹೋಗುವ ಕಾಲದಲ್ಲಿ, ಪ್ರತಿಕ್ರಿಯಾ-ಪ್ರತೀಕಾ
ವು, ನಹಿ-ಇಲ್ಲವಷ್ಟೆ?.

ತಾತ್ಪರ್ಯ ॥ ಗುರುವು ಈಪ್ರಕಾರ ಆ ಜೀವಂಧರನನ್ನು ಕುರಿತ
ಧರ್ಮವಂ ಬೋಧಿಸಿ ಸಮಾಧಾನವಚನಗಳಿಂದ ತನ್ನನ್ನಗಲಲಾರದೆ ದುಃ
ಸುವ ಶಿಷ್ಯನಾದ ಆತನ ದುಃಖವಂ ಪರಿಹರಿಸಿ ಅವನನ್ನು ಬಿಡಲಾರ
ಮನಃಕ್ಲೇಶದೊಡನೆ ತಪಸ್ಸಿಗೆ ಹೋದರು. ಲೋಕದಲ್ಲಿ ಪ್ರಾಣಹೋ
ಗುವ ಕಾಲದೊಳು ಯಾವ ಪ್ರತೀಕಾರವೂ ಅಶಕ್ಯವಷ್ಟೆ? ॥ ೫೭

ಶ್ಲೋಕ ॥ ಪ್ರವ್ರಜ್ಯಾಥ ತಪಶ್ಶಕ್ತ್ಯಾ
ನಿತ್ಯಮಾನಂದಮವ್ರಜತ್ ।
ನಿಷ್ಪ್ರತ್ಯೂಹಾ ಹಿ ಸಾಮಗ್ರೀ
ನಿಯತಂ ಕಾರ್ಯಕಾರಿಣೀ ॥ ೫೮ ॥

ಟೀ ॥ ಅಥ-ಅನಂತರದಲ್ಲಿ, ಸಃ - ಆ ಆರ್ಯನಂದ್ಯಾಚಾರ್ಯರು, ಪ್ರವ್ರಜ್ಯ- ದೀಕ್ಷೆಯನ್ನಂಗೀಕರಿಸಿ, ತಪಶ್ಶಕ್ತ್ಯಾ- ತಪಸ್ಸಿನ ಸಾಮರ್ಥ್ಯದ ದೆಸೆಯಿಂದ, ನಿತ್ಯಂ-ಶಾಶ್ವತವಾದ, ಆನಂದಂ-ಮೋಕ್ಷಾನಂದವನ್ನು, ಅವ್ರಜತ್-ಹೊಂದಿದರು., ನಿಷ್ಪ್ರತ್ಯೂಹಾ-ವಿಘ್ನರಹಿತವಾದ, ಸಾಮಗ್ರೀ-ಕಾರಣಸಮೂಹವು, ನಿಯತಂ-ತಪ್ಪದೇ,ಕಾರ್ಯಕಾರಿಣೀಹಿ-ಫಲವನ್ನುಕೊಡುತ್ತದಲ್ಲವೆ?.

ತಾತ್ಪರ್ಯ॥ ಅನಂತರದಲ್ಲಿ ಆರ್ಯನಂದ್ಯಾಚಾರ್ಯರು ದೀಕ್ಷೆಯನ್ನಂಗೀಕರಿಸಿತಪೋಬಲದಿಂದ ಮೋಕ್ಷಾನಂದವನ್ನೈದಿದರು. ಲೋಕದಲ್ಲಿವಿಘ್ನವಿಲ್ಲದೆಸಮಸ್ತಕಾರಣವೂ ಸೇರಿದಲ್ಲಿ ತಪ್ಪದೆಫಲವುಂಟಾಗುವುದಲ್ಲವೆ? ॥೫೮॥

ಶ್ಲೋಕ ॥ ತಪೋವನಂ ಗುರೌ ಪ್ರಾಪ್ತೇ
ಶುಚಂ ಪ್ರಾಪತ್ಸ ಕೌರವಃ ।
ಗರ್ಭಾಧಾನಕ್ರಿಯಾಮಾತ್ರ
ನ್ಯೂನೌ ಹಿ ಪಿತರೌ ಗುರುಃ ॥ ೫೯ ॥

ಟೀ ॥ ಕೌರವಃ-ಕುರುವಂಶೋತ್ಪನ್ನನಾದ, ಸಃ-ಆ ಜೀವಂಧರನು, ಗುರೌ-ಆರ್ಯನಂದ್ಯಾಚಾರ್ಯರು, ತಪೋವನಂ-ತಪೋವನವನ್ನು, ಪ್ರಾಪ್ತೇ(ಸತಿ)- ಹೊಂದುತ್ತಿರಲು, ಶುಚಂ-ದುಃಖವನ್ನು, ಪ್ರಾಪತ್-ಹೊಂದಿದನು., ಗುರುಃ- ಗುರುವು, ಗರ್ಭಾಧಾನಕ್ರಿಯಾಮಾತ್ರನ್ಯೂನೌ- ಗರ್ಭೋತ್ಪಾದನ ರೂಪವಾದ ಕೆಲಸಮಾತ್ರದಿಂದ ಕಡಮೆಯಾದ, ಪಿತರೌಹಿ-ತಾಯಿತಂದೆಯಲ್ಲವೆ ?.

ತಾತ್ಪರ್ಯ ॥ ಆರ್ಯನಂದ್ಯಾಚಾರ್ಯರು ತಪೋವನವನ್ನು ಹೊಂದುತಿರಲಾಗಿ ಶಿಷ್ಯನಾದ ಜೀವಂಧರನು ವ್ಯಸನಾಕ್ರಾಂತನಾದನು. ಗುರುವು ಗರ್ಭದಾನ ಕ್ರಿಯೆಯೊಂದನ್ನು ಹೊರತು ಇತರ ಸಕಲವಿಷಯದಲ್ಲಿಯೂ ತಾಯಿತಂದೆಗಳಿಗೆ ಸಮಾನನಲ್ಲವೆ ? ಜ್ಞಾನಪ್ರದಾನ ಮಾಡಿದ ಗುರುವು ಪರಮೋಪಕಾರಿಯು. ಶರೀರದಾನಕ್ಕಿಂತಲೂ ಜ್ಞಾನದಾನವು ಉತ್ಕೃಷ್ಟವೆಂಬುಭಾವವು ॥ ೫೯ ॥

ಶ್ಲೋಕ ॥ ತತ್ತ್ವಜ್ಞಾನಜಲೇನಾಥ
ಶೋಕಾಗ್ನಿಂ ನಿರವಾಪಯತ್ ।
ಶೈತ್ಯೇ ಜಾಗ್ರತಿ ಕಿನ್ನುಸ್ಯಾ-
ದಾತಪಾರ್ತಿಃ ಕದಾಚನ ॥ ೬೦ ॥

ಟೀ॥ ಅಥ-ಅನಂತರದಲ್ಲಿ, ತತ್ತ್ವಜ್ಞಾನಜಲೇನ-ತತ್ತ್ವಜ್ಞಾನವೆಂಬ ನೀರಿನಿಂ
ದ, ಸಃ-ಆ ಜೀವಂಧರನು, ಶೋಕಾಗ್ನಿಂ-ದುಃಖವೆಂಬ ಬೆಂಕಿಯನ್ನು, ನಿರವಾ
ಯತ್-ಶಮನಪಡಿಸಿದನು., ಶೈತ್ಯೇ-ಶೀತಗುಣವು, ಜಾಗ್ರತಿ(ಸತಿ)- ಪ್ರಕಾಶಿಸು
ತ್ತಿರಲಾಗಿ, ಆತಪಾರ್ತಿಃ-ಬಿಸಿಲಿನ ಸಂತಾಪವು, ಕದಾಚನ - ಯಾವಾಗಲಾದರೂ
ಸ್ಯಾತ್ಕಿನ್ನು-ಉಂಟಾದೀತೇ ಏನು ?.

ತಾತ್ಪರ್ಯ ॥ ಆ ಜೀವಂಧರನು ಶಾಸ್ತ್ರಜನ್ಯವಾದ ವಸ್ತು ಯಾಥಾ
ತ್ಮ್ಯಜ್ಞಾನವೆಂಬ ನೀರಿನಿಂದ ಗುರುವಿನವಿಯೋಗದಿಂದುಂಟಾದ ಸಂತಾ
ಪವೆಂಬ ಬೆಂಕಿಯನ್ನಾರಿಸಿಕೊಂಡನು. ಶೈತ್ಯಗುಣವಿರುವಸ್ಥಲದಲ್ಲಿ ಬಿ
ಸಲಿನಿಂದ ಬಳಲಿಕೆಯು ಯಾವಾಗಲೂ ಸಂಭವಿಸುವದಿಲ್ಲವಷ್ಟೆ ?॥೬೦

ಶ್ಲೋಕ ॥ ಅಥಾಸ್ಮಿನ್ವಿದ್ಯಯಾಕಾಂತ್ಯಾ
ವಿದುಷಾಂ ಯೋಷಿತಾಂ ಹೃದಿ ।
ರಥೇ ಚ ಯೋಗ್ಯಯಾ ಭಾತಿ
ತತ್ರ ಪ್ರಸ್ತುತಮುಚ್ಯತೇ ॥ ೬೧ ॥

ಟೀ॥ ಅಥ-ಅನಂತರದಲ್ಲಿ, ಯೋಗ್ಯಯಾ-ಶ್ರೇಷ್ಠವಾದ, ವಿದ್ಯಯಾ-ವಿದ್ಯೆಯಿಂ
ದಲೂ, ಕಾಂತ್ಯಾ-ಸೌಂದರ್ಯದಿಂದಲೂ, ವಿದುಷಾಂ-ವಿದ್ವಾಂಸರ, ಹೃದಿ- ಮತ್ತು
ಯೋಷಿತಾಂ-ಸ್ತ್ರೀಯರ, ಹೃದಿ-ಮನಸ್ಸಿನಲ್ಲಿಯೂ, ರಥೇಚ- ರಥದಲ್ಲಿಯೂಕೂಡ
ಅಸ್ಮಿನ್-ಈ ಜೀವಂಧರನು, ಭಾತಿ(ಸತಿ)-ಪ್ರಕಾಶಿಸುತ್ತಿರಲಿಕ್ಕಾಗಿ, ತತ್ರ-ಆ ಜೀವಂ
ಧರನವಿಷಯದಲ್ಲಿ, ಪ್ರಸ್ತುತಂ-ಪ್ರಕೃತಾರ್ಥವು, ಉಚ್ಯತೇ- ಹೇಳಲ್ಪಡುತ್ತದೆ.

ತಾತ್ಪರ್ಯ॥ಅನಂತರದಲ್ಲಿಈಜೀವಂಧರನುಉತ್ತಮವಿದ್ಯೆಯಿಂದವಿದ್ವಾಂ
ಸರ ಮನಸ್ಸನ್ನು ಸಂತೋಷಪಡಿಸುವವನಾಗಿಯೂ, ಸರ್ವೋತ್ತಮವಾ
ದ ಸೌಂದರ್ಯದಿಂದ ಸ್ತ್ರೀಜನ ಚಿತ್ತಾಕರ್ಷಕನಾಗಿ ರಥದಲ್ಲಿಯೂ, ಪ್ರ

ಕಾಣಿಸುತ್ತಿರಲಿಕ್ಕಾಗಿ ಆ ಜೀವಂಧರನ ವಿಷಯದಲ್ಲಿ ಒಂದು ಪ್ರಕೃತಾರ್ಥವು ವರ್ಣಿಸಲ್ಪಡುತ್ತದೆ. ॥ ೬೧ ॥

ಶ್ಲೋಕ॥ ಅಥೈಕದಾ ಸಮಭ್ಯೇತ್ಯ
ರಾಜಾಂಗಣಭುವಿಸ್ಥಿತಾಃ ।
ಗಾವೋಽವಸ್ಕಂದಿತಾವ್ಯಾಧೈ-
ರಿತಿಗೋಪಾ ಹಿ ಚುಕ್ರುಶುಃ ॥ ೬೨ ॥

ಟೀ॥ ಅಥ-ಅನಂತರದಲ್ಲಿ, ಏಕದಾ-ಒಂದುಕಾಲದೊಳು, ಗೋಪಾಃ- ಗೊಲ್ಲರು, ಸಮಭ್ಯೇತ್ಯ-ಬಂದು, ರಾಜಾಂಗಣಭುವಿ-ಅರಮನೆಯ ಅಂಗಣ ಪ್ರದೇಶದಲ್ಲಿ, ಸ್ಥಿತಾಃ(ಸ್ಸಂತಃ) ಇರುವವರಾಗಿ, ವ್ಯಾಧೈಃ-ಬೇಡರಿಂದ, ಗಾವಃ-ಗೋವುಗಳು, ಅವಸ್ಕಂದಿತಾಃ-ಅಕ್ರಮಿಸಲ್ಪಟ್ಟವು., ಇತಿ-ಹೀಗೆಂದು, ಚುಕ್ರುಶುಃಹಿ- ಕೂಗಿದರಲ್ಲವೆ?

ತಾತ್ಪರ್ಯ॥ ಅನಂತರದಲ್ಲಿ ಒಂದಾನೊಂದು ಕಾಲದೊಳು ಕೆಲವರು ಗೊಲ್ಲರುಬಂದು ಅರಮನೆಯ ಮೈದಾನದಲ್ಲಿ ನಿಂತು ಬೇಡರಿಂದ ಗೋವುಗಳು ಅಪಹರಿಸಲ್ಪಟ್ಟವೆಂದು ದುಃಖದಿಂದ ಹೇಳಿಕೊಂಡರು. ॥ ೬೨॥

ಶ್ಲೋಕ॥ ಕಾಷ್ಠಾಂಗಾರೋಽಪಿ ರುಷ್ಟೋಽಭೂ-
ತ್ತದಾಕ್ರೋಶವಚಶ್ಶ್ರುತೇಃ ।
ಅಸಮಾನಕೃತಾವಜ್ಞಾ
ಪೂಜ್ಯಾನಾಂ ಹಿ ಸುದುಸ್ಸಹಾ ॥ ೬೩ ॥

ಟೀ॥ ಕಾಷ್ಠಾಂಗಾರೋಽಪಿ-ಕಾಷ್ಠಾಂಗಾರನೂಕೂಡ, ತದಾಕ್ರೋಶವಚಶ್ಶ್ರುತೇಃ-ಆ ಗೊಲ್ಲರು ಕೂಗಿಹೇಳಿದಮಾತನ್ನು ಕೇಳೋಣದರದೆಸೆಯಿಂದ, ರುಷ್ಟ(ಸ್ಸನ್)-ಕೋಪಗೊಂಡವನಾಗಿ, ಅಭೂತ್-ಆದನು., ಅಸಮಾನಕೃತಾವಜ್ಞಾ-ಹೀನಜನದಿಂದ ಮಾಡಲ್ಪಟ್ಟ ತಿರಸ್ಕಾರವು, ಪೂಜ್ಯಾನಾಂ-ಪೂಜಾ ಯೋಗ್ಯರಾದ ಜನಗಳಿಗೆ, ಸುದುಸ್ಸಹಾಹಿ-ಸಹಿಸಲಶಕ್ಯವಲ್ಲವೆ?.

ತಾತ್ಪರ್ಯ॥ ಆ ಗೊಲ್ಲರು ಹೇಳಿಕೊಂಡ ಮನವಿಯನ್ನು ಕೇಳಿ ಕಾಷ್ಠಾಂಗಾರನೂಕೂಡ ಕೋಪಿಸಿಕೊಂಡನು. ಅಯೋಗ್ಯರಿಂದ ಮಾಡಲ್ಪಟ್ಟ ತಿರಸ್ಕಾರವು ಪೂಜಾರ್ಹರಾದಜನಕ್ಕೆ ಸಹಿಸಲಶಕ್ಯವು. ॥೬೩॥

ಶ್ಲೋಕ ॥ ಪರಾಜೇಷ್ಟಪುನಸ್ತೇನ
ಗವಾರ್ಥಂ ಪ್ರಹಿತಂಬಲಮ್ ।
ಸ್ವದೇಶೇ ಹಿ ಶಶಃ ಪ್ರಾಯೋ
ಬಲಿಷ್ಠಃ ಕುಂಜರಾದಪಿ ॥ ೬೪ ॥

ಟೀ ॥ ತೇನಪುನಃ-ಆ ಕಾಷ್ಠಾಂಗಾರನಿಂದಲಾದರೋ, ಗವಾರ್ಥಂ- ಗೋವ
ಗೋಸುಗ, ಪ್ರಹಿತಂ-ಕಳುಹಿಸಲ್ಪಟ್ಟ, ಬಲಂ-ಸೈನ್ಯವು, ಪರಾಜೇಷ್ಟ- ಅಪಜಯ
ವನ್ನು ಹೊಂದಿದುದು., ಸ್ವದೇಶೇ-ತನ್ನಸ್ಥಾನದಲ್ಲಿ, ಶಶಃ-ಮೊಲವು, ಪ್ರಾಯಃ-ಬ
ಹಳವಾಗಿ, ಕುಂಜರಾದಪಿ-ಆನೆಗಿಂತಲೂ, ಬಲಿಷ್ಠೋಹಿ-ಬಲಶಾಲಿಯಲ್ಲವೆ ?.

ತಾತ್ಪರ್ಯ॥ ಆ ಕಾಷ್ಠಾಂಗಾರನಿಂದ ಗೋಧನ ಸಂರಕ್ಷಣಕ್ಕೋಸುಗ
ಕಳುಹಿಸಲ್ಪಟ್ಟ ಸೈನ್ಯವು ಬೇಡರಿಂದ ಜಯಿಸಲ್ಪಟ್ಟಿತು. ಇದು ಆಶ್ಚ
ರ್ಯವಲ್ಲವು. ತನ್ನ ಸ್ಥಾನದಲ್ಲಿ ಮೊಲವೂಕೂಡ ಆನೆಗಿಂತಲೂ ಬಲಿ
ಷ್ಠವು. ಆದುದರಿಂದ ಬೇಡರು ಜಯಿಸಿದುದು ಯುಕ್ತವು. ॥೬೪॥

ಶ್ಲೋಕ॥ ವ್ಯಜೇಷ್ಟವ್ಯಾಧಸೇನೇತಿ
ಶ್ರುತ್ವಾಘೋಷೋಪಿ ಚುಕ್ಷುಭೇ ।
ನಬಿಭೇತಿ ಕುತೋಲೋಕ
ಆಜೀವನಪರಿಕ್ಷಯೇ ॥ ೬೫ ॥

ಟೀ॥ ವ್ಯಾಧಸೇನಾ-ಬೇಡರ ಸೈನ್ಯವು, ವ್ಯಜೇಷ್ಟ-ಜಯಿಸಿತು., ಇತಿ-ಹೀಗೆಂ
ಬ ಮಾತನ್ನು, ಶ್ರುತ್ವಾ-ಕೇಳಿ, ಘೋಷೋಪಿ-ಗೊಲ್ಲರಹಳ್ಳಿಯೂಕೂಡ, ಚುಕ್ಷು
ಭೇ-ಭಯಪಟ್ಟಿತು., ಲೋಕಃ-ಜನವು, ಆಜೀವನಪರಿಕ್ಷಯೇ(ಸತಿ)- ಜೀವನೋಪಾ
ಯವು ನಷ್ಟವಾಗುತ್ತಿರಲಾಗಿ, ಕುತಃ-ಯಾವಕಾರಣದಿಂದ, ನಬಿಭೇತಿ - ಭ
ಯಪಡುವುದಿಲ್ಲವು ?.

ತಾತ್ಪರ್ಯ ॥ ಬೇಡರಸೈನ್ಯವು ಜಯಿಸಿತೆಂಬ ಮಾತನ್ನು ಕೇಳಿ
ಗೊಲ್ಲರಹಳ್ಳಿಯೇ ನಡುಗಿದುದು. ಲೋಕದಲ್ಲಿ ಅವರವರ ಜೀವನೋಪಾ
ಯಕ್ಕೆ ಭಂಗವುಂಟಾದರೆ ಎಲ್ಲರೂ ಹೆದರುತ್ತಾರಲ್ಲವೆ? ॥ ೬೫ ॥

ಶ್ಲೋಕ ॥ ನಂದಗೋಪಸ್ತ್ವಯಃ ಕೋಪಿ
ತಜ್ಜಯಾರ್ಥಂ ವ್ಯಘೋಷಯತ್ ।

ಕಿಂ ಸ್ಯಾತ್ಕಿಂಕೃತ ಇತ್ಯೇವಂ
ಚಿನ್ತಯನ್ತಿ ಹಿ ಪೀಡಿತಾಃ ॥ ೬೬ ॥

ಟೀ ॥ ನಂದಗೋಪಾಖ್ಯಃ-ನಂದಗೋಪನೆಂಬ ಹೆಸರುಳ್ಳ, ಕೋಪಿ-ಒಬ್ಬನು, ತಜ್ಜಯಾರ್ಥಂ-ಆ ಬೇಡರ ಜಯಕ್ಕೋಸುಗ, ವ್ಯಚೀಚರತ್-ಆಲೋಚಿಸಿದನು., ಪೀಡಿತಾಃ-ದುಃಖಿತರು, ಕಿಂ-ಏನು, ಸ್ಯಾತ್-ಆದೀತೋ, ಕಿಂ- ಏನುನಿಮಿತ್ತವಾಗಿ, ಇತಿ. ಈ ಪ್ರಕಾರವು, [ಟಿ॥ಇತಿಹೇತುಪ್ರಕರಣಪ್ರಕಾರಾದಿಸಮಾಪ್ತಿಷು' ಪ್ರಕಾರವಿಶೇಷಣವಾಗಿ ಕೃತಃ ಎಂದು ಪುಲ್ಲಿಂಗನಿರ್ದೇಶವು.] ಕೃತಃ-ಮಾಡಲ್ಪಟ್ಟಿತೋ, ಏವಂ-ಈಪ್ರಕಾರ, ಚಿಂತಯಂತಿಹಿ-ಆಲೋಚಿಸುತ್ತಾರಲ್ಲವೆ?.

ತಾತ್ಪರ್ಯ ॥ ನಂದಗೋಪನೆಂಬ ಒಬ್ಬ ಗೋಪನು ಆ ಬೇಡರನ್ನು ಜಯಿಸುವುದಕ್ಕೋಸ್ಕರ ಆಲೋಚಿಸಿದನು. ಲೋಕದಲ್ಲಿ ಜನರು ಅಪಾಯಸಂಭವಿಸಿದಕಾಲದಲ್ಲಿ ಏನು ಆಗುವುದೋ, ಏತಕ್ಕೋಸುಗ ಈ ಪ್ರಕಾರವಾಡಲ್ಪಟ್ಟಿತೋ? ಯಾವ ಉಪಾಯುವನ್ನುಮಾಡಬೇಕು? ಎಂದು ಚಿಂತಿಸುತ್ತಾರಷ್ಟೆ.
ಈ ಅನ್ವಯವು (ಇತ್ಯೇವಂ) ಎಂಬ ಎರಡು ಪರ್ಯಾಯುಪದ ಪ್ರಯೋಗವು ವ್ಯರ್ಥವೆಂಬ ಭ್ರಾಂತಿ ನಿವಾರಕವಾಗಿಯೂ, ಸರಸಾರ್ಥವಾಗಿಯೂ ಇಧೆ. ಇದೇ ಯುಕ್ತವು. ॥೬೬॥

ಶ್ಲೋಕ॥ ಧನಾರ್ಜನಾದಪಿ ಕ್ಷೇಮೇ
ಕ್ಷೇಮಾದಪಿ ಚ ತತ್ಕ್ಷಯೇ ।
ಉತ್ತರೋತ್ತರವೃದ್ಧಾ ಹಿ
ಪೀಡಾ ನೄಣಾಮನಂತಶಃ ॥ ೬೭ ॥

ಟೀ ॥ ನೄಣಾಂ-ಮನುಷ್ಯರಿಗೆ, ಧನಾರ್ಜನಾದಪಿ-ಹಣವನ್ನು ಸಂಪಾದಿಸುವುದಕ್ಕಿಂತಲೂ, ಕ್ಷೇಮೆ-ಸಂರಕ್ಷಣೆಯಲ್ಲಿಯೂ, ಕ್ಷೇಮಾದಪಿಚ-ಸಂರಕ್ಷಣೆಗಿಂತಲೂ ಕೂಡ, ತತ್ಕ್ಷಯೇ-ಆ ದ್ರವ್ಯನಾಶದಲ್ಲಿಯೂ, ಪೀಡಾ-ದುಃಖವು, ಅನಂತಶಃ-ಅಪಾರವಾಗಿ, ಉತ್ತರೋತ್ತರವೃದ್ಧಾಹಿ - ಮೇಲೆಮೇಲೆ ಅಭಿವೃದ್ಧಿಯನ್ನು ಹೊಂದುತ್ತದಲ್ಲವೆ ?.

ತಾತ್ಪರ್ಯ ॥ ಮನುಷ್ಯರಿಗೆ ಹಣವನ್ನು ಸಂಪಾದಿಸೋಣದರಲ್ಲಿ ಬ

ರಾಯ-ಜಯಿಸಿದಶೂರನಿಗೋಸುಗ, ಸಮಸ್ತಕಲ್ಯಾಣಪ್ರತ್ರಿಯೇಳು ಸ್ವರ್ಣಪ್ರತ್ತ ಳಿಗಳೊಡನೆ, ಪುತ್ರೀ-ಮಗಳು, ದೇಯಾ-ಕೊಡತಕ್ಕಯೋಗ್ಯಳು., ಇತಿ-ಹೀಗೆಂದು, ಅಘೋಷಯತ್-ಡಂಗುರವಂ ಹೊಡಿಸಿದನು.

ತಾತ್ಪರ್ಯ॥ ಯಾವನು ಬೇಡರಸೈನ್ಯವನ್ನು ಜಯಿಸುವನೋ ಅಂಥಾವೀರ ನಿಗೋಸುಗವೆಳು ಸ್ವರ್ಣಪ್ರತಿಮೆಗಳಸಹಿತವಾಗಿ ನನ್ನ ಮಗಳನ್ನು ದಾನ ಮಾಡುತ್ತೇನೆಂದು ನಂದಗೋಪನು ಡಂಗುರವಂ ಹೊಡಿಸಿದನು. ॥೧೯॥

ಶ್ಲೋಕ॥ ಸಾತ್ಯಂಧರಿಸ್ತು ತಚ್ಛ್ರುತ್ವಾ
ತದ್ಘೋಷಣಮವಾರಯತ್ ।
ಉದಾತ್ತಾನಾಂ ಹಿ ಲೋಕೋಯ-
ಮಖಿಲೋಽಪಿ ಕುಟುಂಬಕಮ್ ॥ ೨೦ ॥

ಟೀ॥ ಸಾತ್ಯಂಧರಿಸ್ತು-ಸತ್ಯಂಧರಪುತ್ರನಾದ ಜೀವಂಧರಸ್ವಾಮಿಯಾದರೊ, ತತ್-ಆ ವೃತ್ತಾಂತವನ್ನು. ಶ್ರುತ್ವಾ-ಕೇಳಿ, ತದ್ಘೋಷಣಂ-ಆ ಘೋಷವನ್ನು, ಅವಾರಯತ್-ನಿಲ್ಲಿಸಿದನು., ಅಖಿಲೋಽಪಿ-ಸಮಸ್ತನಾದ, ಅಯಂಲೋಕಃ- ಈ ಜನವು, ಉದಾತ್ತಾನಾಂ-ಶೂರರಿಗೆ, ಕುಟುಂಬಕಂಹಿ-ಪತ್ನೀಪುತ್ರಾದಿಗಳಂತೆಪೋಷಣೆಗೆ ಯೋಗ್ಯವಲ್ಲವೆ?

ತಾತ್ಪರ್ಯ॥ ಸತ್ಯಂಧರಪುತ್ರನಾದ ಜೀವಂಧರಸ್ವಾಮಿಯು ಆ ವೃತ್ತಾಂತವನ್ನು ಕೇಳಿ ಆ ಘೋಷವನ್ನು ನಿಲ್ಲಿಸಿದನು. ಈ ಸಮಸ್ತಜನವೂ ಕೂಡ ಶೂರನಿಗೆ ಸ್ವಾಧೀನವಲ್ಲವೆ? ಅಂದರೆ ಶಕ್ತರಿಂದ ಅಶಕ್ತರು ಕನಿಕರದಿಂದ ಕುಟುಂಬದಂತೆ ಸುರಕ್ಷಣೀಯರೆಂದಭಿಪ್ರಾಯವು. ॥೨೦॥

ಶ್ಲೋಕ॥ ಜಿತ್ವಾಥ ಜೀವಕಸ್ವಾಮೀ
ಕಿರಾತಾನಾಹರತ್ಪಶೂನ್ ।
ತಮೋಹ್ಯಭೇದ್ಯಂ ಖದ್ಯೋತೈ-
ರ್ಭಾನುನಾ ತು ವಿಭಿದ್ಯತೇ ॥ ೨೧ ॥

ಟೀ॥ ಅಥ-ಅನಂತರದಲ್ಲಿ, ಜೀವಕಸ್ವಾಮೀ- ಜೀವಂಧರಸ್ವಾಮಿಯು, ಕಿರಾತಾನ್-ಬೇಡರುಗಳನ್ನು, ಜಿತ್ವಾ-ಜಯಿಸಿ, ಪಶೂನ್-ಪಶುಗಳನ್ನು, ಆಹರತ್-ತಂದನು., ಖದ್ಯೋತೈಃ-ಮಿಣುಕುಹುಳುಗಳಿಂದ, ಅಭೇದ್ಯಂ-ಹೋಗಲಾಡಿಸಲಶಕ್ಯವಾ

ದ, ತಮಃ-ಕತ್ತಲೆಯು, ಭಾನುನಾತು-ಸೂರ್ಯನಿಂದಲಾದರೋ, ವಿಭಿದ್ಯತೇಹಿ-
ಶೇಷವಾಗಿ ಭೇದಿಸಲ್ಪಡುತ್ತದಲ್ಲವೆ ?.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಸ್ವಾಮಿಯು ವ್ಯಾಧಸೈನ್
ವನ್ನು ಜಯಿಸಿ ಪಶುಗಳನ್ನು ಹಿಂದಿರುಗಿಸಿಕೊಂಡು ಬಂದನು. ಮಿಣಕ
ಹುಳುಗಳಿಂದ ಭೇದಿಸಲಶಕ್ಯವಾದ ಕತ್ತಲೆಯು ಸೂರ್ಯನಿಂದ ಭೇದಿಸಲ್
ಡುವುದಲ್ಲವೆ ?. ॥೨೦॥

ಶ್ಲೋಕ ॥ ನನಂದ ನಂದಗೋಪೋಪಿ
ಗೋಧನಸ್ಯೋಪಲಮ್ಭತಃ ।
* ಆಶಾವತಾಮಸುಭ್ಯೋಪಿ
ಗರೀಯೋ ಹಿ ಭೃಶಂ ಧನಮ್ ॥೨೧॥

ಟೀ ॥ ನಂದಗೋಪೋಪಿ - ನಂದಗೋಪನೂ ಕೂಡ, ಗೋಧನಸ್ಯ-ಗೋ
ರೂಪವಾದ ದ್ರವ್ಯದ, ಉಪಲಂಭತಃ-ಪ್ರಾಪ್ತಿಯದೆಸೆಯಿಂದ, ನನಂದ- ಸಂತೋ
ಷಿಸಿದನು., ಆಶಾವತಾಂ-ಆಶೆಯುಳ್ಳವರಿಗೆ, ಧನಂ-ಹಣವು, ಅಸುಭ್ಯೋಪಿ- ಪ್ರಾ
ಣಕ್ಕಿಂತಲೂ, ಭೃಶಂ-ಬಹಳವಾಗಿ, ಗರೀಯೋಹಿ-ಉತ್ಕೃಷ್ಟವಲ್ಲವೆ ?.

ತಾತ್ಪರ್ಯ ॥ ನಂದಗೋಪನೂಕೂಡ ಗೋಧನಪ್ರಾಪ್ತಿಯಿಂದ ಬ
ಳವಾಗಿ ಸಂತೋಷವಂ ಹೊಂದಿದನು. ಧನಾಶೆಯುಳ್ಳವರಿಗೆ ಧನವು ಪ್ರಾ
ಣಕ್ಕಿಂತಲೂ ಅತಿಶಯವಲ್ಲವೆ ?. ॥೨೧॥

ಶ್ಲೋಕ ॥ ಅಥಾನೀಯ ಸುತಾಂ ದಾತುಂ
ಸ್ವಾಮಿನೇವಾರ್ಯಪಾತಯತ್ ।
ಕೃತ್ಯಾಕೃತ್ಯವಿಮೂಢಾ ಹಿ
ಗಾಢಸ್ನೇಹಾನ್ಧಜಂತವಃ ॥ ೨೨ ॥

ಟೀ ॥ ಅಥ-ಅನಂತರದಲ್ಲಿ, ನಂದಗೋಪಃ-ನಂದಗೋಪನು, ಸುತಾಂ-ಪ
ಳನ್ನು, ಆನೀಯ-ಕರೆದುಕೊಂಡುಬಂದು, ದಾತುಂ-ಕೊಡಲೋಸುಗ, ವಾರಿ-

---

* ಪ್ರಾಣಿಸಾಮಾನ್ಯಕ್ಕೇನೇ ಧನಾಶೆಯು ಅಪ್ರಸಿದ್ಧವಾದುದರಿಂದ(ಆಶಾ
ತಾಂ)ಎಂಬಪಾಠವು ಸರಸವಾಗಿದೆ ಅಸುಮತಾಂ ಎಂದುಪಾಠಾಂತರವಿ

ವನ್ನು, ಅಪಾತಯತ್-ಬಿಟ್ಟನು., ಗಾಢಸ್ನೇಹಾಂಧಜಂತವಃ-ಅಧಿಕ ಪ್ರೀತಿಯಿಂದ ಮೂಢವಾದ ಪ್ರಾಣಿಗಳು, ಕೃತ್ಯಾಕೃತ್ಯವಿಮೂಢಾಹಿ - ಈ ಕಾರ್ಯವು ಮಾಡು ವುದಕ್ಕೆ ಯೋಗ್ಯವಾದದ್ದು, ಈ ಕಾರ್ಯವು ಮಾಡುವುದಕ್ಕೆ ಅಯೋಗ್ಯವಾದದ್ದು ಎಂಬ ಕೃತ್ಯಾಕೃತ್ಯವಿವೇಚನೆಯನ್ನು ತಿಳಿಯುವುದಿಲ್ಲವಷ್ಟೆ.

ತಾತ್ಪರ್ಯ ॥ ಅನಂತರದಲ್ಲಿ ನಂದಗೋಪನು ತನ್ನ ಮಗಳನ್ನು ಕರೆದುಕೊಂಡು ಬಂದು ಜೀವಂಧರನಿಗೋಸುಗ ಧಾರೆಯನ್ನೆರೆದನು. ಪ್ರಾಣಿಗಳಿಗೆ ಅಧಿಕವಾದ ಪ್ರೀತಿ ಇದ್ದಲ್ಲಿ ಆ ಪ್ರೇಮಾಸ್ಪದ ಸ್ಥಾನವಲ್ಲಿ ಇದು ಮಾಡತಕ್ಕ ಕೆಲಸವು, ಇದು ಮಾಡಬಾರದ ಕೆಲಸವು ಎಂದು ವಿವೇಕವಿರುವುದಿಲ್ಲವಷ್ಟೆ ?.॥೨೩॥

ಶ್ಲೋಕ ॥ ಜೀವಂಧರಸ್ತು ಜಗ್ರಾಹ
ವಾರ್ಧಾರಾಂತೇನಪಾತಿತಾಮ್ ।
ಪದ್ಮಾಸ್ಯೋ ಯೋಗ್ಯಇತ್ಯುಕ್ತ್ವಾ
ನ ಹ್ಯಯೋಗ್ಯೇ ಸ್ಪೃಹಾಸತಾಮ್ ॥ ೨೪ ॥

ಟೀ ॥ ಜೀವಂಧರಸ್ತು - ಜೀವಂಧರನಾದರೋ, ಪದ್ಮಾಸ್ಯಃ- ಪದ್ಮಾಸ್ಯನು, ಯೋಗ್ಯಃ-ಯೋಗ್ಯನು., ಇತಿ-ಈಪ್ರಕಾರ, ಉಕ್ತ್ವಾ-ಹೇಳಿ, ತೇನ-ಆನಂದಗೋಪನಿಂದ, ಪತಿತಾಂ-ಬಿಡಲ್ಪಟ್ಟ, ವಾರ್ಧಾರಾಂ-ಜಲಧಾರೆಯನ್ನು, ಜಗ್ರಾಹ- ಸ್ವೀಕರಿಸಿದನು., ಸತಾಂ-ಸತ್ಪುರುಷರಿಗೆ, ಅಯೋಗ್ಯೇ-ತಮಗೆ ಯೋಗ್ಯವಲ್ಲದವಸ್ತುವಿನಲ್ಲಿ, ಸ್ಪೃಹಾ-ಅಪೇಕ್ಷೆಯು, ನಹಿ-ಇಲ್ಲವಷ್ಟೆ?.

ತಾತ್ಪರ್ಯ ॥ ಜೀವಂಧರನಾದರೋ ಆ ನಂದಗೋಪನಿಂದ ಧಾರಾ ಪೂರ್ವಕವಾಗಿ ಕೊಡಲ್ಪಟ್ಟ ಕನ್ನಿಕೆಯನ್ನು ಪದ್ಮಾಸ್ಯನಿಗೆಂಬದಾಗಿ ಹೇಳಿ ಸ್ವೀಕರಿಸಿದನು. ಸತ್ಪುರುಷರಿಗೆ ತಮಗೆ ಯೋಗ್ಯವಲ್ಲದ ವಸ್ತುವಿನಲ್ಲಿ ಆಶೆಯುಂಟಾಗುವುದಿಲ್ಲವಷ್ಟೆ ?. ಸತ್ಪುರುಷರಿಗೆ ಪರೋಪಕಾರವೇ ಮುಖ್ಯವಲ್ಲವೆ ?.॥೨೪॥

ಶ್ಲೋಕ ॥ ಮಾಮ ಮಾಮೇವ ಪದ್ಮಾಸ್ಯಂ
ಪಶ್ಯೇತಿ ಪುನರಬ್ರವೀತ್ ।
ಗಾತ್ರಮಾತ್ರೇಣ ಭಿನ್ನಂ ಹಿ
ಮಿತ್ರತ್ವಂ ಮಿತ್ರತಾಭವೇತ್ ॥ ೨೫ ॥

ಟೀ ॥ ಹೇಮಾಭ-ಎಲೈ ಹೇಮಾಭನೆ!, ಪದ್ಮಾಸ್ಯಂ - ಪದ್ಮಾಸ್ಯನನ್ನು, ಮಾ
ಮೇವ-ನನ್ನನ್ನಾಗಿಯೇ, ಪಶ್ಯ-ನೋಡು, ಇತಿ-ಹೀಗೆಂದು, ಪುನಃ- ಮರಳಿಯೂ
ಅಬ್ರವೀತ್-ಹೇಳಿದನು, ಗಾತ್ರಮಾತ್ರೇಣ - ಶರೀರಮಾತ್ರದಿಂದ, ಭಿನ್ನಂ- ಬೇ
ಯಾದ, ಮಿತ್ರತ್ವಂ-ಸ್ನೇಹವು, ಮಿತ್ರತಾ(ಸತೀ)-ಸ್ನೇಹವೆನಿಸಿದ್ದಾಗಿ, ಭವೇದ್ಧಿ
ಆದೀತಲ್ಲವೆ?.

ತಾತ್ಪರ್ಯ ॥ ಪದ್ಮಾಸ್ಯನನ್ನು ನನ್ನನ್ನಾಗಿಯೇನೋಡು. ನವಿಬ್ಬ
ರ್ವರಿಗೂ ಶರೀರಮಾತ್ರವೇ ಭೇದವು. ಹೀಗೆಂದು ಆ ಜೀವಂಧರಕುಮಾ
ರನು ಮರಳಿಯೂ ಹೇಳಿದನು. ಶರೀರಮಾತ್ರದಿಂದ ಭೇದಿಸಲ್ಪಟ್ಟ
ತರ ಸಕಲವಿಷಯದಲ್ಲಿಯೂ ಭೇದವಿಲ್ಲದ ಸ್ನೇಹವಲ್ಲವೆ? ಸ್ನೇಹವು
ನಿಸುವುದು. ॥೨೬॥

ಶ್ಲೋಕ ॥ ಗೋದಾವರೀಸುತಾಂ ದತ್ತಾಂ
ನಂದಗೋಪೇ ನ ತುಷ್ಯತಾ ।
ಪರಿಣಿನ್ಯೇಽಥ ಗೋವಿಂದಾಂ
ಪದ್ಮಾಸ್ಯೋ ವಹ್ನಿಸಾಕ್ಷಿಕಮ್[6] ॥ ೨೭ ॥

ಟೀ ॥ ಅಥ-ಅನಂತರದಲ್ಲಿ, ತುಷ್ಯತಾ-ಸಂತೋಷಿಸುತ್ತಿರುವ, ನಂದಗೋಪೇ
ನ-ನಂದಗೋಪನಿಂದ, ದತ್ತಾಂ-ಕೊಡಲ್ಪಟ್ಟ, ಗೋದಾವರೀಸುತಾಂ- ಗೋದಾ
ವರೀಎಂಬುವವಳಿಗೆ ಮಗಳಾದ, ಗೋವಿಂದಾಂ-ಗೋವಿಂದೆಯನ್ನು, ಪದ್ಮಾಸ್ಯ
ಪದ್ಮಾಸ್ಯನು, ವಹ್ನಿಸಾಕ್ಷಿಕಂಯಥಾತಥಾ-ಅಗ್ನಿಸಾಕ್ಷಿಯಾಗಿರೋಣಹೇಗೋ ತ
ಗೆ, ಪರಿಣಿನ್ಯೇ-ವಿವಾಹಮಾಡಿಕೊಂಡನು.

ತಾತ್ಪರ್ಯ ॥ ಅನಂತರ ಪದ್ಮಾಸ್ಯನು ಸಂತುಷ್ಟನಾದ ನಂದಗೋ
ಪನಿಂದ ಕೊಡಲ್ಪಟ್ಟ ಗೋದಾವರೀ ಎಂಬುವವಳಗೆ ಮಗಳಾದ ಗೋವಿಂ
ದಾ ಎಂಬುವವಳನ್ನು ಅಗ್ನಿಸಾಕ್ಷಿಯಾಗಿ ವಿವಾಹಮಾಡಿಕೊಂಡನು.

ಇಂತು ಜೀವಂಧರವಿದ್ಯಾಸಮಾಪ್ತ್ಯನಂತರ ಗುರುಶಿಷ್ಯಲಕ್ಷಣ ಪ್ರ
ನಾದಿಪೂರ್ವಕವಾಗಿ ಆರ್ಯನಂದಿವರ್ಣಿತವಾದ ತನ್ನಿಬ್ಬರ ವಂಶಚರಿತ್ರವು
ಪಿತೃವೈರಿಕಾಷ್ಠಾಂಗಾರ ನಿಗ್ರಹೋದ್ಯುಕ್ತನಾದ ಜೀವಂಧರನಿಗೆ ಗು
ಕೃತ ಧರ್ಮೋಪದೇಶವೂ ಜೀವಂಧರಕೃತ ಗೋಧನಾಪಹಾರಿ ವ್ಯಾಧ
ನ್ಯವಿಜಯವೂ, ಪದ್ಮಾಸ್ಯಗೋವಿಂದಾ ವಿವಾಹವರ್ಣನವೂ ಎಂಬಿ
ದ್ವಿತೀಯಲಂಬವು ಸಮಾಪ್ತವಾದುದು.

---



ಶ್ರೀ.

ಓಂ ನಮಸ್ಸಿದ್ಧೇಭ್ಯಃ.

# ತೃತೀಯೋ ಲಂಬಃ.

ಶ್ಲೋಕ ॥ ಅಥೋಪಯಮ್ಯ ಗೋವಿಂದಾಂ
ಪದ್ಮಾಸ್ಯೋ ರಮಯತ್ಯಲಮ್ ।
ವೀರಶ್ರಿಯಂ ಕುಮಾರೇ ಚ
ತತ್ರ ಪ್ರಸ್ತುತಮುಚ್ಯತೇ ॥ ೧ ॥

ಟೀ ॥ ಅಥ-ಅನಂತರದಲ್ಲಿ, ಗೋವಿಂದಾಂ-ಗೋವಿಂದೆಯನ್ನು, ಉಪಯಮ್ಯ-ವಿವಾಹಮಾಡಿಕೊಂಡು, ಪದ್ಮಾಸ್ಯೇ-ಪದ್ಮಾಸ್ಯನು, ಅಲಂ- ಅಧಿಕವಾಗಿ, ರಮಯತಿ(ಸತಿ)-ಕ್ರೀಡಿಸುತ್ತಿರಲಾಗಿ, ಕುಮಾರೇಚ-ಜೀವಂಧರಕುಮಾರನೂಕೂಡ, ವೀರಶ್ರಿಯಂ-ವೀರಲಕ್ಷ್ಮಿಯನ್ನು, (ಉಪಯಮ್ಯ-ವಿವಾಹಮಾಡಿಕೊಂಡು, ಅಲಂ-ಅಧಿಕವಾಗಿ,ರಮಯತಿ(ಸತಿ - ಸಂತೋಷಿಸುತ್ತಿರಲಿಕ್ಕಾಗಿ,) ತತ್ರ-ಆ ಜೀವಂಧರನಲ್ಲಿ ಉಂಟಾದ, ಪ್ರಸ್ತುತಂ-ಪ್ರಕೃತಾರ್ಥವು, ಉಚ್ಯತೇ-ಹೇಳಲ್ಪಡುತ್ತದೆ.

ತಾತ್ಪರ್ಯ ॥ ಪದ್ಮಾಸ್ಯನು ಗೋವಿಂದೆಯನ್ನೂ, ಜೀವಂಧರನು ಜಯಲಕ್ಷ್ಮಿಯನ್ನೂ, ವಿವಾಹಮಾಡಿಕೊಂಡು ಸಂತೋಷವನ್ನನುಭವಿಸುತ್ತಿರಲಾಗಿ, ಅನಂತರ ಜೀವಂಧರನ ವೃತ್ತಾಂತವು ವರ್ಣಿಸಲ್ಪಡುತ್ತದೆ. (ಸತ್ಪುರುಷರಿಗೆಕೀರ್ತಿಯೇಸಂತೋಷಕಾರಣವೆಂದುಭಾವವು)॥೧॥

ಶ್ಲೋಕ ॥ ಅಸ್ತಿ ತತ್ಪುರವಾಸ್ತವ್ಯೋ
ವೈಶ್ಯಃ ಶ್ರೀದತ್ತನಾಮಕಃ ।
ವಿತ್ತಾಯಾಸ್ಪೃಹಯತ್ಸೋಯಂ
ಧನಾಶಾ ಕಸ್ಯ ನೋ ಭವೇತ್ ॥ ೨ ॥

ಟೀ ॥ ತತ್ಪುರವಾಸ್ತವ್ಯಃ ಆರಾಜಪುರಿ(ಪಟ್ಟಣದಲ್ಲಿ ವಾಸಮಾಡುವ, ಶ್ರೀದತ್ತನಾಮಕಃ-ಶ್ರೀದತ್ತನೆಂದು ನಾಮಧೇಯವುಳ್ಳ, ವೈಶ್ಯಃ-ವರ್ತಕನು, ಅಸ್ತಿ-

ಇದ್ದನು, ಸೋಯಂ-ಆ ಈ ಶ್ರೀದತ್ತನು, ವಿತ್ತಾಯ-ದ್ರವ್ಯಕ್ಕೋಸುಗ, ಅಸ್ಪೃಹಯತ್-ಆಶೆಪಟ್ಟನು, ಧನಾಶಾ-ದ್ರವ್ಯಾಶೆಯು, ಕಸ್ಯ-ಯಾರಿಗೆ, ನೋಭವೇತ್-ಉಂಟಾಗಲಾರದು?.

ತಾತ್ಪರ್ಯ ॥ ಆ ರಾಜಪುರಿಯಲ್ಲಿ ಶ್ರೀದತ್ತನೆಂಬ ಒಬ್ಬ ವೈಶ್ಯನಿದ್ದನು. ಆತನಿಗೆ ದ್ರವ್ಯಾರ್ಜನೆಯೊಳಾಶೆಯುಂಟಾಯಿತು. (ಧನಾಶೆಯು ಯಾರನ್ನು ತೊರೆದಿದೆ? (ಧನಾಶೆಯಂ ಬಿಡುವುದು ಬಹಳ ಕಷ್ಟವೆಂದಭಿಪ್ರಾಯವು.) ॥೨॥

ಶ್ಲೋಕ ॥ ಅರ್ಥಾರ್ಜನನಿದಾನಂ ಚ
ತತ್ಫಲಂ ಚಾಯಮೂಹತ ।
ನಿರಂಕುಶಂ ಹಿ ಜೀವಾನಾ-
ಮೈಹಿಕೋಪಾಯಚಿಂತನಮ್ ॥ ೩ ॥

ಟೀ ॥ ಅಯಂ-ಈ ಶ್ರೀದತ್ತನು, ಅರ್ಥಾರ್ಜನನಿದಾನಂಚ-ದ್ರವ್ಯಾರ್ಜನಕ್ಕೆ ಮೂಲಕಾರಣವನ್ನು, ತತ್ಫಲಂಚ-ಆ ದ್ರವ್ಯಫಲವನ್ನುಕೂಡ, ಊಹತ-ಊಹಿಸಿದನು, ಜೀವಾನಾಂ-ಪ್ರಾಣಿಗಳಿಗೆ, ಐಹಿಕೋಪಾಯಚಿಂತನಂ-ಇಹಲೋಕಸಂಬಂಧಿಪುರುಷಾರ್ಥದ ಉಪಾಯವನ್ನು ಚಿಂತಿಸೋಣವು, ನಿರಂಕುಶಂಹಿ-ತಡೆಯಿಲ್ಲದೆಉಂಟಾಗುವುದಲ್ಲವೆ?.

ತಾತ್ಪರ್ಯ ॥ ಈ ಶ್ರೀದತ್ತನು ದ್ರವ್ಯಸಂಪಾದನೆಗೆ ಮೂಲಕಾರಣವನ್ನೂ, ಅದರಫಲವನ್ನೂಕೂಡ ಚಿಂತಿಸಿದನು. ಪ್ರಾಣಿಗಳಿಗೆ ಈ ಲೋಕದೊಳನುಭವಿಸತಕ್ಕ ಪುರುಷಾರ್ಥಕ್ಕೆ ತಕ್ಕ ಉಪಾಯವನ್ನಾಲೋಚಿಸುವುದು ಸ್ವಭಾವಸಿದ್ಧವಷ್ಟೆ? ॥ ೩ ॥

ಶ್ಲೋಕ ॥ ಅಸ್ತು ಪೈತೃಕಮಸ್ತೋಕಂ
ವಸ್ತು ಕಿಂ ತೇನ ವಸ್ತುನಾ ।
ರೋಚತೇ ನ ಹಿ ಶೌಂಡಾಯ
ಪರಪಿಂಡಾದಿ ದೀನತಾ ॥ ೪ ॥

ಟೀ ॥ ಪೈತೃಕಂ-ತಂದೆಯು ಸಂಪಾದಿಸಿದ, ಅಸ್ತೋಕಂ-ಅಧಿಕವಾದ, ವಸ್ತು-ದ್ರವ್ಯವು, ಅಸ್ತು-ಇರಲಿ, ತೇನವಸ್ತುನಾ-ಆ ವಸ್ತುವಿನಿಂದ, ಕಿಂ-ಏನು?, ಶೌಂಡಾಯ-ಸಮರ್ಥನಿಗೋಸುಗ, ಪರಪಿಂಡಾದಿದೀನತಾ-ಪರಾನ್ನವೇ ಮೊದಲಾ

ದುದರಿಂದುಂಟಾದ ದೀನಭಾವವು, ನರೋಚತೇಹಿ-ರುಚಿಸುವದಿಲ್ಲವಷ್ಟೆ?.

ತಾತ್ಪರ್ಯ॥ದ್ರವ್ಯಾರ್ಜನಪ್ರಕಾರವಂ ಶ್ರೀವತ್ಸನು ಚಿಂತಿಸುತ್ತಾನೆ. ಏನೆಂದರೆ.—ತಂದೆಯು ಸಂಪಾದಿಸಿದ ದ್ರವ್ಯವು ವಿಶೇಷವಾಗಿರಲಿ; ಅದರಿಂದೇನು ? ಸಮರ್ಥನಿಗೆ ಪರಾನ್ನದಿಂದ ಜೀವಿಸೋಣವೇ ಮೊದಲಾದ ದೀನಭಾವವು ರುಚಿಸಲಾರದು. ॥ ೪ ॥

ಶ್ಲೋಕ ॥ ಸ್ವಾಪತೇಯಮನಾಯಂ ಚೇ-
ತ್ಸವ್ಯಯಂ ವ್ಯೇತಿ ಭೂರ್ಯಪಿ ।
ಸರ್ವದಾ ಭುಜ್ಯಮಾನೋ ಹಿ
ಪರ್ವತೋಽಪಿ ಪರಿಕ್ಷಯೀ ॥ ೫ ॥

ಟೀ॥ ಸ್ವಾಪತೇಯಂ-ಪಿತ್ರಾರ್ಜಿತದ್ರವ್ಯವು, ಭೂರ್ಯಪಿ - ಬಹಳವಾಗಿದ್ದಾಗ್ಯೂ, ಅನಾಯಂಚೇತ್-ಆದಾಯವಿಲ್ಲದೇ ಹೋದರೆ, ಸವ್ಯಯಂ-ವ್ಯಯವನ್ನು ಹೊಂದುವುದಾಗಿ, ವ್ಯೇತಿ-ತೀರಿಹೋಗುತ್ತದೆ., ಪರ್ವತೋಽಪಿ-ಪರ್ವತಸಮಾನವಾಗಿದ್ದಾಗ್ಯೂಕೂಡ, ಸರ್ವದಾ-ಯಾವಾಗಲೂ, ಭುಜ್ಯಮಾನಸ್ಸನ್-ಅನುಭವಿಸಲ್ಪಟ್ಟದ್ದಾಗಿ, ಪರಿಕ್ಷಯೀಹಿ-ನಿಶ್ಶೇಷವಾಗಿ ನಷ್ಟವಾಗುತ್ತದಲ್ಲವೆ?.

ತಾತ್ಪರ್ಯ ॥ ಪಿತ್ರಾರ್ಜಿತ ದ್ರವ್ಯವು ವಿಶೇಷವಾಗಿದ್ದಾಗ್ಯಾದರೂ ಆದಾಯವಿಲ್ಲದೆ ವ್ಯಯಪಡಿಸುತ್ತಾ ಇದ್ದಲ್ಲಿ ನಿಶ್ಶೇಷವಾಗಿ ತೀರಿಹೋಗುತ್ತದೆ. ಹೇಗಂದರೆ.— ಸರ್ವದಾ ಅನುಭವಿಸುತ್ತಿದ್ದರೆ ಪರ್ವತವಾದರೂ ನಿಶ್ಶೇಷವಾಗಿ ಕ್ಷಯಿಸಿಹೋಗುವುದಲ್ಲವೆ?.॥ ೫ ॥

ಶ್ಲೋಕ॥ ದಾರಿದ್ರ್ಯಾದಪರಂ ನಾಸ್ತಿ
ಜಂತೂನಾಮಪ್ಯರುಂತುದಮ್ ॥
ಅತ್ಯಕ್ತಂ ಮರಣಂ ಪ್ರಾಣೈಃ
ಪ್ರಾಣಿನಾಂ ಹಿ ದರಿದ್ರತಾ ॥ ೬ ॥

ಟೀ॥ ಜಂತೂನಾಂ-ಪ್ರಾಣಿಗಳಿಗೆ, ದಾರಿದ್ರ್ಯಾತ್ - ದರಿದ್ರನಾಗಿರೋಣಕ್ಕಿಂತಲೂ, ಅಪರಂ-ಮತ್ತೊಂದು, ಅರುಂತುದಂ- ಮರ್ಮಸ್ಪರ್ಶಿಯಾದ ದುಃಖವು, ನಾಸ್ತಿ-ಇಲ್ಲವು., ಪ್ರಾಣಿನಾಂ-ಪ್ರಾಣಿಗಳಿಗೆ, ದರಿದ್ರತಾ-ದಾರಿದ್ರ್ಯವು, ಪ್ರಾಣೈಃ-ಪ್ರಾಣಗಳಿಂದ, ಅತ್ಯಕ್ತಂ-ಬಿಡಲ್ಪಡದೇ ಇರುವ, ಮರಣಂಹಿ-ಮರಣವಲ್ಲವೆ?.

ತಾತ್ಪರ್ಯ ॥ ಪ್ರಾಣಿಗಳಿಗೆ ದಾರಿದ್ರ್ಯಕ್ಕಿಂತಲೂ ಹೃದಯಕ್ಕೆ ಶಲ್ಯವಾದ ಮತ್ತೊಂದು ದುಃಖವಿಲ್ಲವು. ಪ್ರಾಣಿಗಳಿಗೆ ದಾರಿದ್ರ್ಯವೆಂಬುವುದು ಪ್ರಾಣಹೋಗದೇ ಇರುವ ಮರಣವು. ( ಅಂದರೆ ಬದುಕಿದ್ದರೂ ದರಿದ್ರನು ಶವಪ್ರಾಯನೆಂದು ಭಾವವು. ॥ ೬ ॥

ಶ್ಲೋಕ ॥ ರಿಕ್ತಸ್ಯ ಹಿ ನ ಜಾಗರ್ತಿ
ಕೀರ್ತನೀಯೋಽಖಿಲೋಗುಣಃ ।
ಹನ್ತ ಕಿಂ ತೇನ ವಿದ್ಯಾಪಿ
ವಿದ್ಯಮಾನಾ ನ ಶೋಭತೇ ॥ ೭ ॥

ಟೀ ॥ ಕೀರ್ತನೀಯಃ-ಶ್ಲಾಘ್ಯವಾದ, ಅಖಿಲಃ-ಸಮಸ್ತವಾದ, ಗುಣಃ- ಗುಣವು, ರಿಕ್ತಸ್ಯ-ದರಿದ್ರನಿಗೆ, ನಜಾಗರ್ತಿಹಿ-ಪ್ರಕಾಶಿಸುವುದಿಲ್ಲವಷ್ಟೆ ?, ಹನ್ತ-ಆಶ್ಚರ್ಯವು!., ತೇನ-ಅದರಿಂದ, ಕಿಂ-ಏನು?, ವಿದ್ಯಮಾನಾ-ಇರುತ್ತಿರುವ, ವಿದ್ಯಾಪಿ-ವಿದ್ಯೆಯೂಕೂಡ, ನಶೋಭತೇ-ಪ್ರಕಾಶಿಸುವುದಿಲ್ಲವು.

ತಾತ್ಪರ್ಯ ॥ ದರಿದ್ರನಿಗೆ ಯಾವಗುಣಗಳಿದ್ದರೂ ಪ್ರಕಾಶಿಸುವುದಿಲ್ಲವು. ಆಶ್ಚರ್ಯವು!! ಅದಿರಲಿ; ಇರುತ್ತಿರುವ ವಿದ್ಯೆಯೂಕೂಡ ಪ್ರಕಾಶಿಸುವುದಿಲ್ಲವು. ॥ ೭ ॥

ಶ್ಲೋಕ ॥ ಸ್ಯಾದಕಿಂಚಿತ್ಕರಸ್ಸೋಽಯ-
ಮಾಕಿಂಚನ್ಯೇನ ವಂಚಿತಃ ।
ಅಲಮನ್ಯೈರಸ್ಸಸಾಕೂತಂ
ಧನ್ಯವಕ್ತ್ರಂ ಚ ಪಶ್ಯತಿ ॥ ೮ ॥

ಟೀ ॥ ಆಕಿಂಚನ್ಯೇನ-ದಾರಿದ್ರ್ಯದಿಂದ, ವಂಚಿತಃ-ಮೋಸಗೊಳಿಸಲ್ಪಟ್ಟ, ಸೋಽಯಂ-ಆ ಈದರಿದ್ರನು, ಅಕಿಂಚಿತ್ಕರ(ಸ್ಸನ್)-ನಿಷ್ಪ್ರಯೋಜನನಾಗಿ, ಸ್ಯಾತ್-ಆಗಲಿ., ಅನ್ಯೈಃ-ಉಳಿದವುಗಳಿಂದ, ಅಲಂ-ಸಾಕು., ಸಃ-ಆ ದರಿದ್ರಪುರುಷನು, ಸಾಕೂತಂಯಥಾತಥಾ-ಅಭಿಪ್ರಾಯಗರ್ಭಿತವಾಗಿ ಕಾಣಬೇಕೋಹಾಗೆ, ಧನ್ಯವಕ್ತ್ರಂಚ-ಧನಿಕನಮುಖವನ್ನುಕೂಡ, ಪಶ್ಯತಿ-ನೋಡುತ್ತಾನೆ, (ಅನ್ಯವಕ್ತ್ರಂ ಚ ಎಂಬದಾಗಿಯೂ ಪಾಠವಿದೆ. ಆ ಪಕ್ಷದಲ್ಲಿ ಮತ್ತೊಬ್ಬನಮುಖವನ್ನೆಂದರ್ಥವು.)

ತಾತ್ಪರ್ಯ॥ ದರಿದ್ರನಾದ ಪುರುಷನು ದಾರಿದ್ರ್ಯವೆಂಬ ದುರವಸ್ಥೆಯಿಂದ ಯಾವಕೆಲಸಕ್ಕೂ ಉಪಯೋಗವಿಲ್ಲದವನಾಗಿಯೇ ಆಗುತ್ತಾನೆ. ಆಗಲಿ; ಉಳಿದಮಾತುಗಳಿಂದೇನು ಪ್ರಯೋಜನವು ? ತನ್ನ ಅಭಿಪ್ರಾಯವನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು ಕೇಳಲು ಅಂಜಿಕೊಂಡು ದೀನಭಾವದಿಂದಧನಿಕನ ಮುಖವನ್ನುನೋಡುವ ದುಃಖ ಬಂದುದಮಾತ್ರಸಾಲದೆ?॥೮॥

ಶ್ಲೋಕ॥ ಸಮ್ಪಲ್ಲಾಭಫಲಂ ಪುಂಸಾಂ
ಸಜ್ಜನಾನಾಂ ಹಿ ಪೋಷಣಮ್ ।
ಕಾಕಾರ್ಥಫಲನಿಂಬೋಽಪಿ
ಶ್ಲಾಘ್ಯತೇ ನ ಹಿ ಚೂತವತ್ ॥ ೯ ॥

ಟೀ॥ ಪುಂಸಾಂ-ಪುರುಷರಿಗೆ, ಸಂಪಲ್ಲಾಭಫಲಂ- ಐಶ್ವರ್ಯವಿರುವುದಕ್ಕೆ ಪ್ರಯೋಜನವು, ಸಜ್ಜನಾನಾಂ-ಸತ್ಪುರುಷರ, ಪೋಷಣಂಹಿ-ಸಂರಕ್ಷಣವಲ್ಲವೆ?, ಕಾಕಾರ್ಥಫಲನಿಂಬೋಽಪಿ-ಕಾಗೆಗಳಿಗೆ ಪ್ರಯೋಜನವಾದ ಹಣ್ಣುಗಳುಳ್ಳ ಬೇವಿನ ಮರವೂಕೂಡ, ಚೂತವತ್-ಮಾವಿನಮರದಂತೆ, ನಶ್ಲಾಘ್ಯತೇಹಿ- ಶ್ಲಾಘಿಸಲ್ಪಡುವುದಿಲ್ಲವಷ್ಟೆ ?.

ತಾತ್ಪರ್ಯ ॥ ಲೋಕದಲ್ಲಿ ಸಂಪತ್ತಿರುವುದಕ್ಕೆ ಪ್ರಯೋಜನವು ಸತ್ಪುರುಷಸಂರಕ್ಷಣೆಯು. ಕಾಗೆಗೆ ಪ್ರಯೋಜನವಾದ ಹಣ್ಣುಗಳುಳ್ಳ ಬೇವಿನಮರವು ಮಾವಿನಮರದಂತೆ ಶ್ಲಾಘಿಸಲ್ಪಡುವುದಿಲ್ಲವಷ್ಟೆ ? ಹಾಗೆ ದುರ್ಜನ ಸಂಪದವುದುರುಪಯೋಗವಾಗುವುದರಿಂದ ಶ್ಲಾಘ್ಯವಲ್ಲವು॥೯॥

ಶ್ಲೋಕ ॥ ಲೋಕದ್ವಯಹಿತಂ ಚಾಪಿ
ಸುಕರಂ ವಸ್ತುನಾ ಸತಾಮ್ ।
ಲವಣಾಬ್ಧಿಗತಂ ಹಿ ಸ್ಯಾ-
ನ್ನಾದೇಯಂಪಿಫಲಂ ಜಲಮ್ ॥ ೧೦ ॥

ಟೀ ॥ ಸತಾಂ-ಸಜ್ಜನರಿಗೆ, ವಸ್ತುನಾ-ದ್ರವ್ಯದಿಂದ, ಲೋಕದ್ವಯಹಿತಂ ಚಾಪಿ-ಈ ಲೋಕಪರಲೋಕಗಳೆರಡರಲ್ಲಿಯೂಹಿತವೂಕೂಡ, ಸುಕರಂ-ಸುಲಭವಾಗಿ ಉಂಟುಮಾಡಲು ಯೋಗ್ಯವು., ಲವಣಾಬ್ಧಿಗತಂ - ಉಪ್ಪು ಸಮುದ್ರವನ್ನು

ಹೊಂದಿದ, ನಾದೇಯಂ- ನದೀಸಂಬಂಧವಾದ, ಜಲಂ-ನೀರು, ವಿಫಲಂ(ಸ
ನಿಷ್ಫಲವಾಗಿ,ಸ್ಯಾದ್ಧಿ-ಆದೀತಲ್ಲವೆ ?.

ತಾತ್ಪರ್ಯ ॥ ಸತ್ಪುರುಷರಿಗೆ ವಸ್ತುವು ಇಹಪರ ಎರಡು ಲೋ
ಳಲ್ಲಿಯೂ ಕೂಡ ಹಿತವನ್ನುಂಟುಮಾಡಲು ಯೋಗ್ಯವಾಗುವದು.
ರ್ಜನಸಂಪದವು ಎರಡು ಲೋಕಗಳಲ್ಲಿಯೂ ಕೇಡನ್ನುಂಟುಮಾಡ
ದು ಹೇಗೆಂದರೆ.-ಲವಣ ಸಮುದ್ರದಲ್ಲಿ ಸೇರಿದ ಗಂಗಾದಿ ನದೀಜಲ
ನಿಷ್ಫಲವಲ್ಲವೆ ?.

ಶ್ಲೋಕ ॥ ಇತ್ಯೂಹಾನ್ನಾವಮಾರುಹ್ಯ
ಪ್ರತಸ್ಥೇ ಸ ವಣಿಕ್ಪತಿಃ ।
ವಾರ್ಧಿಮೇವ ಧನಾರ್ಥೀ ಕಿಂ
ಗಾಹತೇ ಪಾರ್ಥಿವಾನಪಿ ॥ ೧೧ ॥

ಟೀ ॥ ವಣಿಕ್ಪತಿಃ-ವರ್ತಕರಲ್ಲಿ ಶ್ರೇಷ್ಠನಾದ, ಸಃ-ಆ ಶ್ರೀದತ್ತನು, ಇತಿ-
ಪೂರ್ವೋಕ್ತಪ್ರಕಾರವಾಗಿ, ಊಹಾತ್-ಪರ್ಯಾಲೋಚನೆಯುದೆಸೆಯಿಂದ, ನಾವ
ಹಡಗನ್ನು,ಆರುಹ್ಯ-ಏರಿ, ಪ್ರತಸ್ಥೇ-ಹೊರಟನು., ಧನಾರ್ಥೀ-ದ್ರವ್ಯಾಪೇಕ್ಷೆಯು
ಮನುಷ್ಯನು, ವಾರ್ಧಿಮೇವ-ಸಮುದ್ರವನ್ನುಮಾತ್ರವೇ, ಗಾಹತೇ\|ಕಿಂ-ಪ್ರವೇಶಿ
ತ್ತಾನೆಯೆ ಏನು ?, ಪಾರ್ಥಿವಾನಪಿ-ರಾಜರನ್ನುಕೂಡ, ಗಾಹತೇ-ಪ್ರವೇಶಿಸುತ್ತಾ

ತಾತ್ಪರ್ಯ ॥ ಆ ವರ್ತಕಶ್ರೇಷ್ಠನಾದ ಶ್ರೀದತ್ತನು ಈ ಪೂರ್ವೋ
ಕ್ತಪ್ರಕಾರವಾಗಿ ಚಿಂತಿಸಿ ಹಡಗನ್ನು ಏರಿದವನಾಗಿ ದ್ವೀಪಾಂತರಕ್ಕೆ ಪ್ರ
ಯಾಣಮಾಡಿದನು. ಧನಾಶಾಗ್ರಸ್ತರು ಸಮುದ್ರವನ್ನುಮಾತ್ರವೇ ಪ್ರವೇ
ದುವದಿಲ್ಲವು, ರಾಜರನ್ನುಕೂಡ ಪ್ರವೇಶಿಸುವರು. ॥ ೧೧ ॥

ಶ್ಲೋಕ ॥ ದ್ವೀಪಾಂತರಾನ್ನ್ಯವರ್ತಿಷ್ಟ
ಪುಷ್ಟಸ್ಸಾಂಯಾತ್ರಿಕೋ ಧನೈಃ ।
ಅತರ್ಕ್ಯಂ ಖಲು ಜೀವಾನಾ-
ಮರ್ಥಸಂಪಾದಕಾರಣಮ್ ॥ ೧೨ ॥

ಟೀ ॥ ಸಾಂಯಾತ್ರಿಕಃ-ಹಡಗಿನ ವರ್ತಕನಾದ ಶ್ರೀದತ್ತನು, ಧನೈಃ-ದ್ರವ್ಯ
ಗಳಿಂ, ಪುಷ್ಟ(ಸ್ಸನ್)-ಸಂಪೂರ್ಣನಾಗಿ, ದ್ವೀಪಾಂತರಾತ್- ದ್ವೀಪಾಂತರದ

ಬಿಂದ, ನ್ಯವರ್ತಿಷ್ಟ-ಹಿಂದಿರಿಗಿದನು. ಜೀವಾನಾಂ-ಪ್ರಾಣಿಗಳಿಗೆ, ಅರ್ಥಸಂಚಯಕಾರಣಂ-ಧನಾರ್ಜನೆಗೆ ಕಾರಣವು, ಅತರ್ಕ್ಯಂಖಲು-ಊಹಿಸಲಶಕ್ಯತಲ್ಲವೆ ?.

ತಾತ್ಪರ್ಯ ॥ ಹಡಗಿನ ವ್ಯಾಪಾರಿಯಾದ ಶ್ರೀದತ್ತನು ಬಹಳ ದ್ರವ್ಯವನ್ನು ಸಂಪಾದಿಸಿಕೊಂಡು ಹಿಂದಿರಿಗಿ ಬಂದನು. ಪ್ರಾಣಿಗಳಿಗೆ ಹಣವು ಸೇರುವದಕ್ಕೆ ಕಾರಣವು ಊಹಿಸಲಶಕ್ಯವಲ್ಲವೆ ? ॥ ೧೨ ॥

ಶ್ಲೋಕ ॥ ಅಪಾರಾಂತಮಥ ಪ್ರಾಪತ್
ಪಾರಾವಾರಸ್ಯ ನಾವಿಕಃ ।
ಚುಕ್ಷುಭೇ ನೌರಿಹಾಸಾರಾ-
ನ್ನ ಹಿ ವೇದ್ಯೋ ವಿಪತ್ಕ್ಷಣಃ ॥ ೧೩ ॥

ಟೀ ॥ ಅಥ-ಅನಂತರದಲ್ಲಿ, ನಾವಿಕಃ-ಹಡಗು ನಡೆಸತಕ್ಕವನು, ಪಾರಾವಾರಸ್ಯ-ಸಮುದ್ರದ, ಅಪಾರಾಂತಂ-ಈಚೇ ದಡದಸಮೀಪವನ್ನು, ಪ್ರಾಪತ್-ಹೊಂದಿದನು., ನೌಃ-ಹಡಗು, ಆಸಾರಾತ್-ಬಿರುಗಾಳಿಯೊಡನೆಕೂಡಿದ ಮಳೆಯುಡೆಸೆಯಿಂದ, ಚುಕ್ಷುಭೇ-ನಡುಗಿದುದು , ಇಹ-ಈ ಲೋಕದಲ್ಲಿ, ವಿಪತ್ಕ್ಷಣಃ- ಆಪತ್ತುಬರುವಸಮಯವು, ನವೇದ್ಯೋಹಿ-ತಿಳಿಯಲಶಕ್ಯವಲ್ಲವೆ ?.

ತಾತ್ಪರ್ಯ ॥ ಅನಂತರದಲ್ಲಿ ಹಡಗು ನಡೆಸುವವನು ಸಮುದ್ರದಈಚೇದಡದ ಸಮೀಪವನ್ನು ಹೊಂದಿದನು. ಹಡಗು ಅಚಿಂತಿತವಾಗಿ ಉಂಟಾದ ಬಿರುಗಾಳಿಯೊಡಗೂಡಿದ ಮಳೆಯಿಂದ ನಡುಗಿದುದು, ಈ ಲೋಕದಲ್ಲಿ ಪ್ರಾಣಿಗಳಿಗೆ ಆಪತ್ಸಂಭವಿಸುವ ಸಮಯವು ತಿಳಿಯಲಶಕ್ಯವಲ್ಲವೆ ? ॥ ೧೩ ॥

ಶ್ಲೋಕ॥ ಪೂರ್ವಮೇವ ತು ನೌನಾಶಾ-
ಚ್ಛೋಕಾಬ್ಧಿಂ ಪ್ರೋತಗಾ ಗತಾಃ ।
. ಕಾಷ್ಠಾಗತಸ್ಯ ದುಃಖಸ್ಯ
ದೃಷ್ಟಾಂತಂ ತದ್ವಿಧಿ ನೌಕ್ಷಯೇ ॥ ೧೪ ॥

ಟೀ ॥ ಪ್ರೋತಗಾಃ-ಹಡಗಿನಲ್ಲಿರುವ ಜನರು, ನೌನಾಶಾತ್-ಹಡಗು ಮುಳುಗುವುದಕ್ಕಿಂತ, ಪೂರ್ವಮೇವ-ಮೊದಲೇನೇ, ಶೋಕಾಬ್ಧಿಂ-ದುಃಖವೆಂಬ ಸಮು

ದ್ರವನ್ನು, ಗತಾಃ-ಹೊಂದಿದರು., ನೌಕ್ಷಯೇ-ಹಡಗಿನ ನಾಶದೊಳುಂಟಾ
ತತ್-ಆ ದುಃಖವು, ಕಾಷ್ಠಾಗತಸ್ಯ-ಕೊನೆಯನ್ನು ಹೊಂದಿರುವ, ದುಃಖಸ್ಯ-
ಖಕ್ಕೆ, ದೃಷ್ಟಾಂತಃ ಹಿ-ಉದಾಹರಣೆಯಾಗುತ್ತದಲ್ಲವೆ ?.

ತಾತ್ಪರ್ಯ ॥ ಹಡಗಿನಲ್ಲಿದ್ದ ಸಮಸ್ತಜನರೂ ಹಡಗು ಮುಳು
ಹದಕ್ಕಿಂತಲೂ ಮೊದಲೇ ಶೋಕವೆಂಬ ಸಮುದ್ರದಲ್ಲಿ ಮುಳುಗಿದರ
ಹಡಗು ನಷ್ಟವಾದಲ್ಲಿ ಯಾವದುಃಖವುಂಟೋ ಅದು ದುಃಖಗಳಲ್ಲಿ ಕ
ನೇದುಃಖಕ್ಕೆ ಉದಾಹರಣವಾಗುವದಲ್ಲವೆ. ॥ ೧೪ ॥

ಶ್ಲೋಕ ॥ ಸಾಂಯಾತ್ರಿಕಸ್ತು ತತ್ತ್ವಜ್ಞೋ
ವಿಕಾರಂ ನೈವಜಗ್ಮಿವಾನ್ ।
ಅಜ್ಞಾತ್ ಪ್ರಾಜ್ಞಸ್ಯ ಕೋ ಭೇದೋ
ಹೇತೋಶ್ಚೇದ್ವಿಕೃತಿರ್ದ್ವಯೋಃ ॥ ೧೫ ॥

ಟೀ ॥ ತತ್ತ್ವಜ್ಞಃ-ವಸ್ತುಯಾಥಾತ್ಮ್ಯಜ್ಞಾನವುಳ್ಳ, ಸಾಂಯಾತ್ರಿಕಸ್ತು-
ಹಡಗಿನವ್ಯಾಪಾರಿಯಾದ ಶ್ರೀದತ್ತನಾದರೋ, ವಿಕಾರಂ-ಶೋಕವಿಕಾರವನ್ನು, ನೈ
ವಜಗ್ಮಿವಾನ್-ಹೊಂದಲಿಲ್ಲವು., ಹೇತೋಃ-ವಿಕಾರಕಾರಣವಹಸೆಯಿಂದ, ವಿಕೃತಿಃ
ವಿಕಾರವು, ದ್ವಯೋಃ-ಮೂಢನೇನೂ, ನಿವೇಕಿಯೇನೂ ಇವರಿಬ್ಬರಿಗೂ, ಚೇತ್
ಉಂಟಾದದ್ದೇ ಆದರೆ, ಅಜ್ಞಾತ್-ಮೂಢನಿಗಿಂತಲೂ, ಪ್ರಾಜ್ಞಸ್ಯ-ಪ್ರಾಜ್ಞನಿಗೆ
ಭೇದಃ-ಭೇದವು, ಕಃ-ಯಾವುದು ?.

ತಾತ್ಪರ್ಯ ॥ ತತ್ವಜ್ಞನಾದ ಶ್ರೀದತ್ತನುಮಾತ್ರ ದುಃಖಪಡಲಿಲ್ಲವು
ಶೋಕಾದಿ ವಿಕಾರಕಾರಣದಿಂದ ಪಂಡಿತ ಪಾಮರರಿಬ್ಬರಿಗೂ ವಿಕಾರವು
ಟಾದರೆ ಪಾಮರನಿಗಿಂತಲೂ ಪಂಡಿತನಲ್ಲಿ ಏನು ವಿಶೇಷವು?. ಇಬ್ಬರೂ
ಸಮಾನರಾಗುತ್ತಾರೆ. ॥ ೧೫ ॥

ಶ್ಲೋಕ ॥ ಭಾವಿನ್ಯಾ ವಿಪದೋ ಯೂಯಂ
ವಿಪನ್ನಾಃ ಕಿಂ ಬುಧಾಶ್ಚ್ಯುತಾ ।
ಸ್ವಪ್ನಾಂತಾವಿಭೀತಾಃ ಕಿಂ
ಸರ್ಪಸ್ಯೋ ಕರವಾಸಿನಃ ॥ ೧೬ ॥

ಟೀ॥ ಹೇ ಬುಧಾಃ-ಎಲೈ ವಿವೇಕಿಗಳಿರಾ!!, ಯೂಯಂ-ನೀವು, ಭಾವಿನ್ಯಾಃ-ಉತ್ತರತ್ರಉಂಟಾಗತಕ್ಕ, ವಿಪದಃ-ಆಪತ್ತಿನ ದೆಸೆಯಿಂದ, ವಿಪನ್ನಾಃ-ದುಃಖಿಸುತ್ತೀರಿ., ಶುಚಾ-ದುಃಖದಿಂದ, ಕಿಂ-ಏನು ಪ್ರಯೋಜನವು?. ಸರ್ಪಶಂಕಾವಿಭೀತಾಃ-ಸರ್ಪವೆಂಬ ಸಂದೇಹದಿಂದ ಹೆದರಿದವರು, ಸರ್ಪಾಸ್ಯೇ-ಹಾವಿನ ಬಾಯಿಯಲ್ಲಿ, ಕರದಾಯಿನಃ ಕಿಂ?-ಕೈಯನ್ನಿಡುತ್ತಾರೆಯೋ ಏನು?.

ತಾತ್ಪರ್ಯ॥ ಎಲೈ ವಿವೇಕಿಗಳಿರಾ !! ಮುಂದೆ ಸಂಭವಿಸುವವಿಪತ್ತಿಗೆ ಈಗಲೇ ದುಃಖಿಸುತ್ತೀರಿ. ಶೋಕದಿಂದೇನು ಪ್ರಯೋಜನವು? ಸರ್ಪವೆಂಬ ಸಂದೇಹದಿಂದ ಭಯಪಟ್ಟಿರುವ ಜನಗಳು ಸರ್ಪದಬಾಯಿಯಲ್ಲಿಯೇ ಕೈಯನ್ನಿಡುವರೇ ಏನು? ಆಪತ್ತು ಬಂದೀತೆಂದು ಭಾವಿಸಿ ಶೋಕಿಸುವುದು ಈಪ್ರಕಾರ ಮೂರ್ಖತ್ವವು. ॥ ೧೨ ॥

ಶ್ಲೋಕ॥ ವಿಪದಸ್ತು ಪ್ರತೀಕಾರೋ
ನಿರ್ಭಯತ್ವಂ ನ ಶೋಚಿತಾ ।
ತಚ್ಚ ತತ್ತ್ವವಿದಾಮೇವ
ತತ್ತ್ವಜ್ಞಾಃ ಸ್ಯಾತ ತದ್ಬುಧಾಃ॥೧೩॥

ಟೀ॥ ವಿಪದಸ್ತು-ಆಪತ್ತಿಗಾದರೋ, ಪ್ರತೀಕಾರಃ-ಪ್ರತಿಕ್ರಿಯೆಯು, ನಿರ್ಭಯತ್ವಂ-ಭಯಪಡದೇಇರೋಣವು, ಶೋಚಿತಾ-ಶೋಕಪಡೋಣವೋ, ನ-ಅಲ್ಲವು., ತಚ್ಚ-ಆ ಧೈರ್ಯವೂಕೂಡ, ತತ್ತ್ವವಿದಾಮೇವ-ವಸ್ತುಯಾಥಾತ್ಮ್ಯವನ್ನು ತಿಳಿದವರಿಗೇಯೇ., ತತ್-ಆದಕಾರಣದದೆಸೆಯಿಂದ, ಹೇ ಬುಧಾಃ-ಎಲೈ ವಿವೇಕಿಗಳಿರಾ!!, ತತ್ತ್ವಜ್ಞಾಸ್ಸಂತಃ-ತತ್ತ್ವಜ್ಞಾನವುಳ್ಳವರಾಗಿ, ಸ್ಯಾತ-ಆಗಿರಿ.

ತಾತ್ಪರ್ಯ॥ ವಿಪತ್ತಿಗೆ ಪ್ರತಿಕ್ರಿಯೆಯು ಧೈರ್ಯವೇಅಲ್ಲದೆ ದುಃಖಿಸುವಿಕೆಯು ಪ್ರತಿಕ್ರಿಯೆಯಲ್ಲವು. ಆ ಧೈರ್ಯವೂಕೂಡ ತತ್ತ್ವಜ್ಞರಿಗೇ ಉಂಟಾಗುವದು. ಆದುದರಿಂದ ಎಲೈ ವಿವೇಕಿಗಳಿರಾ!! ತತ್ತ್ವವಿಚಾರಮಾಡಿರಿ. ಶೋಕಿಸಬೇಡಿರಿ. ॥ ೧೩ ॥

ಶ್ಲೋಕ॥ ಇತ್ಯಸ್ಯಬೋಧಯಂತ್ಯೋಯಂ
ಮಹಿಷ್ಯೋತಾಭಿತಾನ್ನೃಧೀಃ ।

ತತ್ತ್ವಜ್ಞಾನಂ ಹಿ ಜೀವಾನಾಂ
ಲೋಕದ್ವಯಸುಖಾವಹಮ್ ॥ ೧೮ ॥

ಟೀ ॥ ಸುಧೀಃ-ಒಳ್ಳೇ ಬುದ್ಧಿಯುಳ್ಳ, ಸೋಯಂ ವಣಿಕ್-ಆ ಈ ವರ್ತಕನಾದ ಶ್ರೀದತ್ತನು, ಪೋತಾಶ್ರಿತಾನ್- ಹಡಗನ್ನಾಶ್ರಯಿಸಿರುವವರನ್ನು, ಇತ್ಥಂ-ಈ ಪ್ರಕಾರಪೂರ್ವೋಕ್ತ, ಅಬೋಧಯತ್-ಬೋಧಿಸಿದನು., ಜೀವಾನಾಂ-ಪ್ರಾಣಿಗಳಿಗೆ ತತ್ತ್ವಜ್ಞಾನಂ-ವಸ್ತು ಯಾಥಾತ್ಮ್ಯಜ್ಞಾನವು, ಲೋಕದ್ವಯ ಸುಖಾವಹಂ ಹಿ- ಈ ಲೋಕಪರಲೋಕಗಳೆರಡರಲ್ಲಿಯೂ ಸುಖವನ್ನುಂಟು ಮಾಡುತ್ತದಲ್ಲವೆ?.

ತಾತ್ಪರ್ಯ ॥ ಆ ಶ್ರೀದತ್ತಶ್ರೇಷ್ಠಿಯು ಹಡಗಿನಲ್ಲಿರುವಜನರಿಗೆ ಪೂರ್ವೋಕ್ತಪ್ರಕಾರವಾಗಿ ತತ್ತ್ವವನ್ನು ಬೋಧಿಸಿದನು. ತತ್ತ್ವಜ್ಞಾನವು ಈಲೋಕ ಪರಲೋಕಗಳೆರಡರಲ್ಲಿಯೂ ಸುಖವನ್ನುಂಟುಮಾಡುವುದಲ್ಲವೆ ? ॥ ೧೮ ॥

ಶ್ಲೋಕ ॥ ತಾವತಾ ನಾವಿನಷ್ಟಾಯಾಂ
ದೃಷ್ಟೋಭೂತ್ಕಾಷ್ಠಖಂಡಕಃ ।
ಸತ್ಯಾಯುಷಿ ಹಿ ಜಾಯೇತ
ಪ್ರಾಣಿನಾಂ ಪ್ರಾಣರಕ್ಷಣಮ್ ॥ ೧೯ ॥

ಟೀ ॥ ತಾವತಾ-ಅಷ್ಟರಲ್ಲಿ, ನಾವಿ-ಹಡಗು, ನಷ್ಟಾಯಾಂ(ಸತ್ಯಾಂ)-ನಾಶವನ್ನು ಹೊಂದುತ್ತಿರಲಾಗಿ, ಕಾಷ್ಠಖಂಡಕಃ-ಒಂದುಮರದತುಂಡು, ದೃಷ್ಟ(ಸ್ಸನ್)-ಕಾಣಲ್ಪಟ್ಟದ್ದಾಗಿ, ಅಭೂತ್-ಆಯಿತು., ಆಯುಷಿ-ಆಯುಸ್ಸು, ಸತಿ-ಇರುತ್ತಿರಲಾಗಿ, ಪ್ರಾಣಿನಾಂ-ಪ್ರಾಣಿಗಳಿಗೆ, ಪ್ರಾಣರಕ್ಷಣಂ-ಪ್ರಾಣ ಸಂರಕ್ಷಣೆಯು, ಜಾಯೇತಹಿ-ಉಂಟಾಗುತ್ತದೆಯಷ್ಟೆ?.

ತಾತ್ಪರ್ಯ ॥ ಅಷ್ಟರಲ್ಲಿ ಹಡಗುಕಾಣದೇ ಹೋಗುತ್ತಿರಲಾಗಿ ಒಂದು ಮರದತುಂಡು ಕಾಣಲ್ಪಟ್ಟಿತು. ಪ್ರಾಣಿಗಳಿಗೆ ಆಯುಸ್ಸು ಇದ್ದುದಾದರೆ ಹೇಗಾದರೂ ಪ್ರಾಣಸಂರಕ್ಷಣೆಯಾಗುತ್ತದಲ್ಲವೆ? ॥ ೧೯ ॥

ಶ್ಲೋಕ ॥ ಶ್ರೀದತ್ತಸ್ತು ತಮಾರುಹ್ಯ
ಪ್ರಾಸದಬ್ಧಿ ಪ್ರದೇಶಸಂಸ್ಥಿತಃ ।

ರಾಜ್ಯಭ್ರಷ್ಟೋಽಪಿ ತುಷ್ಟಸ್ಸ್ಯಾ-
ಲ್ಲಬ್ಧಪ್ರಾಣೋ ಹಿ ಜಂತುಕಃ ॥ ೨೦ ॥

ಟೀ ॥ ಶ್ರೀದತ್ತಸ್ತು-ಶ್ರೀದತ್ತನಾದರೋ, ತಂ-ಆ ಮರದ ತುಂಡನ್ನು. ಆರುಹ್ಯ-ಏರಿ, ದ್ವೀಪಸಂಶ್ರಿತಸ್ಸನ್-ದ್ವೀಪವನ್ನಾಶ್ರಯಿಸಿದವನಾಗಿ, ಪ್ರಾಸದತ್-ಪ್ರಸನ್ನನಾದನು., ರಾಜ್ಯಭ್ರಷ್ಟೋಽಪಿ- ರಾಜ್ಯದಿಂದ ಚ್ಯುತನಾದಾಗ್ಯೂ, ಲಬ್ಧಪ್ರಾಣಃ-ಪಡೆಯಲ್ಪಟ್ಟ ಪ್ರಾಣವುಳ್ಳ, ಜಂತುಕಃ-ಪ್ರಾಣಿಯು, ತುಷ್ಟ(ಸ್ಸನ್)- ಸಂತುಷ್ಟನಾಗಿ, ಸ್ಯಾದ್ಧಿ-ಆಗುವನಲ್ಲವೆ?.

ತಾತ್ಪರ್ಯ ॥ ಶ್ರೀದತ್ತನೂಕೂಡ ಆ ಮರದ ತುಂಡನ್ನು ಹತ್ತಿ ಒಂದು ದ್ವೀಪವನ್ನಾಶ್ರಯಿಸಿ ಸಂತುಷ್ಟನಾದನು. ಲೋಕದಲ್ಲಿ ಪ್ರಾಣಿಯು ರಾಜ್ಯಹೋದಾಗ್ಯಾದರೂ ಪ್ರಾಣಮಾತ್ರ ಉಳಿದರೆ ಸಂತೋಷಿಸುತ್ತಾನಲ್ಲವೆ ? ॥ ೨೦ ॥

ಶ್ಲೋಕ ॥ ನಷ್ಟಶೇವಧಿರಪ್ಯೇಷ
ಮೃಷ್ಟಮೇವಮತರ್ಕಯತ್ ।
* ದುಃಖಾರ್ತೋಽಪಿ ಸುಖಾರ್ಥೋ ಹಿ
ತತ್ತ್ವಜ್ಞಾನಧನೇಸತಿ ॥ ೨೧ ॥

ಟೀ ॥ ನಷ್ಟಶೇವಧಿರಪಿ-ಹೋಗಿರುವ ದ್ರವ್ಯವುಳ್ಳವನಾದಾಗ್ಯೂ, ಏಷಃ- ಈ ಶ್ರೀದತ್ತನು, ಮೃಷ್ಟಂ(ಯಥಾತಥಾ)- ನಿರ್ದೋಷವಾಗಿರೋಣ ಹೇಗೋ ಹಾಗೆ ಏವಂ-ಈ ವಕ್ಷ್ಯಮಾಣಪ್ರಕಾರವಾಗಿ, ಅತರ್ಕಯತ್- ಆಲೋಚಿಸಿದನು., ದುಃಖಾರ್ತೋಽಪಿ-ದುಃಖವೇ ಫಲವಾಗಿಉಳ್ಳವನಾದಾಗ್ಯೂ,*ದುಃಖದಿಂದ ಪೀಡಿತನಾಗಿದ್ದಾಗ್ಯೂಕೂಡ, ತತ್ತ್ವಜ್ಞಾನಧನೇಸತಿ-ತತ್ತ್ವಜ್ಞಾನವೆಂಬ ದ್ರವ್ಯವು ಇರುತ್ತಿರಲಾಗಿ, ಸುಖಾರ್ಥೋಹಿ - ಸುಖವೇ ಪ್ರಯೋಜನವಾಗಿ ವುಳ್ಳವನಲ್ಲವೆ?.

ತಾತ್ಪರ್ಯ ॥ ಈ ಶ್ರೀದತ್ತಶ್ರೇಷ್ಠಿಯು ಧನವು ನಷ್ಟವಾದಾಗ್ಯೂ ಕೂಡ ದುಃಖರಹಿತನಾಗಿ ಒಳ್ಳೇ ಆಲೋಚನೆಯನ್ನೇ ಮಾಡಿದನು. ದುಃಖ ಪೀಡಿತನಾದಾಗ್ಯೂ ಲೋಕದಲ್ಲಿ ಮನುಷ್ಯನು ತತ್ತ್ವಜ್ಞಾನವಿದ್ದಲ್ಲಿ ಸುಖವು ಪ್ರಾಪ್ತವಾಯಿತೆಂದು ತಿಳಿಯುವನಲ್ಲವೆ ? ॥ ೨೧ ॥

---

* ದುಃಖಾರ್ತೋಽಪಿ ಎಂದು ಪಾಠಾಂತರವು.

ಶ್ಲೋಕ ॥ ತೃಷ್ಣಾಗ್ನಿದಹ್ಯಮಾನಸ್ತ್ವಂ
ಮೂಢಾತ್ಮನ್ ಕಿನ್ನು ಮುಹ್ಯಸಿ ।
ಲೋಕದ್ವಯಹಿತಧ್ವಂಸಿನ್ಯೋ-
ರ್ನಹಿತೃಷ್ಣಾರುಷೋರ್ಭಿದಾ ॥ ೨೨ ॥

ಟೀ ॥ ಹೇ ಆತ್ಮನ್-ಎಲೈ ಆತ್ಮನೇ !, ತ್ವಂ-ನೀನು, ತೃಷ್ಣಾಗ್ನಿ ದಹ್ಯಮಾ[illegible] (ಸ್ಸನ್)-ಆಶೆಯೆಂಬ ಬೆಂಕಿಯಿಂದ ದಹಿಸಲ್ಪಡುವವನಾಗಿ, ಕಿನ್ನು-ಯಾತಕ್ಕಾಗಿ (ಸ[illegible] ಗ.) ಮುಹ್ಯಸಿ-ಮೋಹಪಡುತ್ತೀಯೆ ?, ಲೋಕದ್ವಯಹಿತಧ್ವಂಸಿನ್ಯೋಃ- ಈ ಲೋ[illegible] ಕಪರಲೋಕಗಳೆರಡರಲ್ಲಿಯೂ ಸುಖವನ್ನು ನಾಶಮಾಡುತಲಿರುವ, ತೃಷ್ಣಾರುಷೋಃ ಆಶೆಯೇನು, ಕೋಪವೇನು ಇವುಗಳಿಗೆ, ಭಿದಾ-ಭೇದವು, ನಹಿ-ಇಲ್ಲವಷ್ಟೆ?.

ತಾತ್ಪರ್ಯ ॥ ಎಲೈ ಆತ್ಮನೇ ! ಆಶೆಯೆಂಬ ಬೆಂಕಿಯಿಂದ ದಹಿ[illegible] ಲ್ಪಟ್ಟ ನೀನು ಏತಕ್ಕೆ ಮೋಹಪಡುತ್ತೀಯೆ ? ಈಲೋಕ ಪರಲೋಕ[illegible] ಗಳೆರಡರಲ್ಲಿಯೂ ಹಾನಿಯನ್ನುಂಟುಮಾಡುವ ಆಶೆಗೂ, ಕೋಪಕ್ಕೂ [illegible] ಏನೂ ಫಲಭೇದವಿಲ್ಲವು. ॥ ೨೨ ॥

ಶ್ಲೋಕ ॥ ಲೋಕದ್ವಯಹಿತಾಯಾತ್ಮ-
ನ್ನೈರಾಶ್ಯನಿರತೋಭವ ।
ಧರ್ಮಸೌಖ್ಯಚ್ಛಿದಾಶಾ ತೇ
ತರುಚ್ಛೇದಃ ಫಲಾರ್ಥಿನಾಮ್ ॥ ೨೩ ॥

ಟೀ ॥ ಹೇ ಆತ್ಮನ್-ಎಲೈ ಆತ್ಮನೇ!, ಲೋಕದ್ವಯಹಿತಾಯ-ಎರಡು ಲೋ[illegible] ಕಗಳಲ್ಲಿಯೂ ಸುಖವುಂಟಾಗುವುದಕ್ಕೋಸುಗ, ನೈರಾಶ್ಯನಿರತಸ್ಸನ್- ವೈರಾಗ್ಯದ[illegible] ಲ್ಲಿ ಆಸಕ್ತನಾಗಿ, ಭವ-ಆಗು., ಧರ್ಮಸೌಖ್ಯಚ್ಛಿತ್-ಧರ್ಮದಿಂದುಂಟಾಗುವ ಸುಖವ[illegible] ನ್ನು ನಾಶಮಾಡುವ, ತೇ-ನಿನ್ನಯ, ಆಶಾ-ಆಶೆಯು, ಫಲಾರ್ಥಿನಾಂ- ಹಣ್ಣನ್ನು[illegible] ಅಪೇಕ್ಷಿಸುವವರಿಗೆ, ತರುಚ್ಛೇದಃ-ವೃಕ್ಷಛೇದನಸಮಾನವು.,

ತಾತ್ಪರ್ಯ ॥ ಎಲೈ ಆತ್ಮನೆ ! ಈಲೋಕ ಪರಲೋಕಗಳೆರಡರ[illegible] ಲ್ಲಿಯೂ ಸುಖಪಡಬೇಕಾದರೆ ಆಶೆಯನ್ನು ಬಿಡು. ಧರ್ಮದಿಂದುಂಟಾಗು[illegible] ವಸುಖವನ್ನು ನಾಶಮಾಡುವ ನಿನ್ನ ಆಶೆಯು ಹಣ್ಣನ್ನಪೇಕ್ಷಿಸಿರುವ ಪು[illegible] ರುಷನು ಮರವನ್ನು ಕಡಿದರೆ ಹೇಗೋ ಹಾಗಾಗುವುದು. ॥ ೨೩ ॥

ಶ್ಲೋಕ|| ಸಂಸಾರಾಸಾರಭಾವೋಽಯಂ-
ಮಹೋ ಸಾಕ್ಷಾತ್ಕೃತೋಽಧುನಾ ।
ಯಸ್ಮಾದನ್ಯದುಪಕ್ರಾಂತ-
ಮನ್ಯದಾಪತಿತಂ ಪುನಃ ॥ ೨೮ ॥

ಟೀ|| ಅಯಂ-ಈ ಪ್ರಸಿದ್ಧವಾದ, ಸಂಸಾರಾಸಾರಭಾವಃ-ಸಂಸಾರದಲ್ಲಿ ಸಾರವಿಲ್ಲದೇ ಇರುವಿಕೆಯು, ಮಯಾ-ನನ್ನಿಂದ, ಅಧುನಾ-ಈಗ, ಸಾಕ್ಷಾತ್ಕೃತಃ-ಪ್ರತ್ಯಕ್ಷವಾಗಿ ಅನುಭವಿಸಲ್ಪಟ್ಟಿತು., ಅಹೋ!-ಆಶ್ಚರ್ಯವು!!, ಯಸ್ಮಾತ್-ಯಾವಕಾರಣದೆಸೆಯಿಂದ, ಅನ್ಯತ್-ಮತ್ತೊಂದು ಕೆಲಸವು, ಉಪಕ್ರಾಂತಂ-ಆರಂಭಿಸಲ್ಪಟ್ಟಿತು?, ಅನ್ಯತ್ಪುನಃ-ಮತ್ತೊಂದು ಪ್ರಕಾರವಾಗಿಯಾವದೋ, ಆಪತಿತಂ-ಪ್ರಾಪ್ತವಾಯಿತು?.

ತಾ|| ಶ್ರೀದತ್ತನು ತನ್ನಲ್ಲಿ ತಾನೇ ಚಿಂತಿಸುತ್ತಾನೆ.—ನಾನು ಆರಂಭಿಸಿದ ಕೆಲಸವು ಒಂದುವಿಧವಾದದ್ದು; ಪರ್ಯವಸಾನದಲ್ಲಿ ಮತ್ತೊಂದು ಪ್ರಕಾರವಾಯಿತು. ಆದುದರಿಂದ ಸಂಸಾರದ ಅಸಾರತ್ವವನ್ನು ನಾನೇ ಪ್ರತ್ಯಕ್ಷವಾಗಿ ಅನುಭವಿಸಿದೆನಲ್ಲವೆ? (ಆಶೆಯು ಬಹಳ ಕೆಟ್ಟದ್ದು.)||೨೮

ಶ್ಲೋಕ|| ಅತಏವ ಹಿ ಯೋಗೀಂದ್ರಾ
ಅಪೀಂದ್ರತ್ವಾರ್ಹಸಂಪದಮ್ ।
ತ್ಯಕ್ತ್ವಾ ತಪಾಂಸಿ ತಪ್ಯಂತೇ
ಮುಕ್ತ್ಯೈ ತೇಭ್ಯೋ ನಮೋನಮಃ ॥ ೨೯ ॥

ಟೀ|| ಅತಏವಹಿ-ಆ ಕಾರಣದಿಂದಲ್ಲವೆ, ಯೋಗೀಂದ್ರಾಃ-ಯೋಗಿಶ್ರೇಷ್ಠರು, ಇಂದ್ರತ್ವಾರ್ಹಸಂಪದಮಪಿ-ಇಂದ್ರನಾಗೋಣಕ್ಕೆ ಯೋಗ್ಯವಾದ ಸಂಪದವನ್ನು ಕೂಡ, ತ್ಯಕ್ತ್ವಾ-ಬಿಟ್ಟು, ತಪಾಂಸಿ-ತಪಸ್ಸುಗಳು, ಮುಕ್ತ್ಯೈ-ಮೋಕ್ಷಕ್ಕೋಸುಗ, ತಪ್ಯಂತೇ-ಮಾಡುತ್ತಾರೆ., ತೇಭ್ಯಃ-ಆ ಯತಿಶ್ರೇಷ್ಠರಿಗೋಸುಗ, ನಮೋನಮಃ-ಅಡಿಗಡಿಗೂ ನಮಸ್ಕಾರವು.

ತಾ|| ಆದುದರಿಂದಲೇ ಯೋಗಿಶ್ರೇಷ್ಠರು ಇಂದ್ರೈಶ್ವರ್ಯಕ್ಕೆ ಸಮಾನವಾದ ಷಟ್ಖಂಡಾಧಿಪತ್ಯದ ಐಶ್ವರ್ಯವನ್ನೂ ಕೂಡಬಿಟ್ಟು ಮೋಕ್ಷಕ್ಕೋಸುಗ ತಪಸ್ಸನ್ನು ಮಾಡುತ್ತಾರೆ. ಅಂಥಾ ಮಹಾತ್ಮರಿಗೋಸುಗ ಬಾರಿಬಾರಿಗೂ

ನಮಸ್ಕಾರಮಾಡುವೆನು. ಎಂದೀಪ್ರಕಾರ ಶ್ರೀದತ್ತನುಭಾವಿಸಿದನು॥೨

ಶ್ಲೋಕ॥ ಇತ್ಯೂಹೋಽಪಿ ಸದೃಷ್ಟಸ್ಯ
ಕಸ್ಯಚಿತ್ಸ್ವಾರ್ತಿಮೂಚಿವಾನ್ ।
ಮಧ್ಯೇಮಧ್ಯೇ ಹಿ ಚಾಪಲ್ಯ-
ಮಾಮೋಹಾದಪಿ ಯೋಗಿನಾಮ್ ॥೨೬॥

ಟೀ॥ ಇತ್ಯೂಹೋಽಪಿ-ಈ ಪ್ರಕಾರ ಭಾವಿಸುವವನಾದಾಗ್ಯೂ, ಸಃ-ಆಶ್ರೀ
ದತ್ತನು, ದೃಷ್ಟಸ್ಯ-ನೋಡಲ್ಪಟ್ಟ, ಕಸ್ಯಚಿತ್-ಒಬ್ಬ ಪುರುಷನಿಗೋಸ್ಕರ, ಸ್ವಾ
ರ್ತಿಂ-ತನ್ನದುಃಖವನ್ನು, ಊಚಿವಾನ್-ಹೇಳಿದನು. ಯೋಗಿನಾಮಪಿ - ಯತಿಗ
ಗೂಕೂಡ, ಆಮೋಹಾತ್-ಅಜ್ಞಾನವಿರುವವರೆಗೂ, ಮಧ್ಯೇಮಧ್ಯೇ- ಅಡಿಗಡಿ
ಚಾಪಲ್ಯಂಹಿ-ಬುದ್ಧಿಚಾಂಚಲ್ಯವುಂಟಲ್ಲವೆ?.

ತಾತ್ಪರ್ಯ॥ ಶ್ರೀದತ್ತನು ಈಪ್ರಕಾರ ವೈರಾಗ್ಯ ಭಾವನೆಯು
ಮಾಡಿದಾಗ್ಯೂ ಆಬಳಿಯೊಳು ಒಬ್ಬ ಪುರುಷನನ್ನು ಕಂಡು ಅವನಿಗೆ
ನ್ನ ದುಃಖವನ್ನು ಹೇಳಿಕೊಂಡನು. ಮೋಹನೀಯಕರ್ಮ ವಿರುವವ
ಗೆ ಯತಿಗೂಕೂಡ ಆಗಾಗ್ಯೆ ವಿಷಯಚಾಪಲ್ಯವು ತಪ್ಪಲಾರದು. ॥೨೬

ಶ್ಲೋಕ॥ ಯಾದೃಚ್ಛಿಕಇವಾಯಾತ-
ಸ್ತತ್ಕೃಚ್ಛ್ರಂ ಸೋಽಪಿ ಶುಶ್ರುವಾನ್ ।
ಸಂಸೃತೌ ವ್ಯವಹಾರಸ್ತು
ನ ಹಿ ಮಾಯಾವಿವರ್ಜಿತಃ ॥೨೭॥

ಟೀ॥ ಯಾದೃಚ್ಛಿಕಇವ-ಸ್ವೇಚ್ಛೆಯಿಂದ ಬಂದವನೋಪಾದಿಯಲ್ಲಿ, ಆಯಾ
ತಃ-ಬಂದಿರುವಂಥಾ, ಸೋಽಪಿ-ಆಪುರುಷನೂಕೂಡ, ತತ್ಕೃಚ್ಛ್ರಂ-ಆ ಶ್ರೀದತ್ತಶ್ರೇ
ಷ್ಠಿಯದುಃಖವನ್ನು, ಶುಶ್ರುವಾನ್-ಕೇಳಿದನು., ಸಂಸೃತೌ-ಸಂಸಾರದಲ್ಲಿ, ವ್ಯ
ಹಾರಸ್ತು-ಮಾತನಾಡೋಣವಾದರೋ, ಮಾಯಾವಿವರ್ಜಿತಃ-ಕಪಟ ರಹಿತವಾಗಿ
ನಹಿ-ಇಲ್ಲವಷ್ಟೆ?.

ತಾತ್ಪರ್ಯ॥ ಆ ಪುರುಷನೂಕೂಡ ಸ್ವೇಚ್ಛೆಯಿಂದ ಬಂದವನ
ತೆ ಬಂದು ಈ ಶ್ರೀದತ್ತನ ದುಃಖವೃತ್ತಾಂತವು ಕೇಳಿದನು. ಸಂಸಾ
ಸಂಬಂಧವಾದ ನಡತೆಯು ವಂಚನೆ ಮಿಶ್ರವಾಗಿಯೇ ಇರುವದಷ್ಟೆ ?॥೨೭

ಶ್ಲೋಕ॥ ಶ್ರುತ್ವಾ ಮಿಷೇಣ ಕೇನಾಪಿ
ನೀತ್ವಾ ರಾಜತಭೂಧರಮ್ |
ಸ್ವಾಗತೇಃ ಕಾರಣಂ ಸರ್ವ-
ಮಭಾಣೀತ್ಸವಣಿಕ್ಪತೇಃ ॥ ೨೮ ॥

ಟೀ॥ ಸಃ-ಆಪ್ರುರುಷನು, ಶ್ರುತ್ವಾ ಕೇಳಿ, ಕೇನಾಪಿ-ಒಂದಾನೊಂದು, ಮಿಷೇಣ-ವ್ಯಾಜದಿಂದ, ರಾಜತಭೂಧರಂ-ವಿಜಯಾರ್ಧ ಪರ್ವತವನ್ನು, ನೀತ್ವಾ- ಹೊಂದಿಸಿ, ಸ್ವಾಗತೇಃ-ತನ್ನ ಆಗಮನಕ್ಕೆ, ಕಾರಣಂ-ಕಾರಣವಾದ, ಸರ್ವಂ-ಸಮಸ್ತವೃತ್ತಾಂತವನ್ನು, ವಣಿಕ್ಪತೇಃ-ವರ್ತಕಶ್ರೇಷ್ಠನಿಗೆ, ಅಭಾಣೀತ್-ಹೇಳಿದನು.

ತಾತ್ಪರ್ಯ ॥ ಆ ಪುರುಷನೂಕೂಡ ಶ್ರೀದತ್ತ ಶ್ರೇಷ್ಠಿಯ ವೃತ್ತಾಂತವನೆಲ್ಲಾ ಕೇಳಿದವನಾಗಿ ಬಾದುನೆಪದಿಂದ ವಿಜಯಾರ್ಧಪರ್ವತವನ್ನೈದಿಸಿ, ಈ ಶ್ರೀದತ್ತ ಶ್ರೇಷ್ಠಿಯ ಬಳಿಗೆ ತನ್ನ ಬರುವಿಕೆಗೆ ಹೇತುವಾದ ಸಮಸ್ತ ವೃತ್ತಾಂತವನ್ನೂ ಶ್ರೀದತ್ತನಿಗೆ ಹೇಳಿದನು.॥ ೨೮ ॥

ಶ್ಲೋಕ॥ ವಿಜಯಾರ್ಧಗಿರಾವಸ್ತಿ
ದಕ್ಷಿಣಶ್ರೇಣಿಮಣ್ಡನೇ |
ಗಾಂಧಾರವಿಷಯೇ ಖ್ಯಾತಾ
ನಿತ್ಯಾಲೋಕಾಹ್ವಯಾಪುರೀ ॥ ೨೯ ॥

ಟೀ॥ ವಿಜಯಾರ್ಧಗಿರೌ-ವಿಜಯಾರ್ಧಪರ್ವತದಲ್ಲಿ, ದಕ್ಷಿಣಶ್ರೇಣಿಮಂಡನೇ-ದಕ್ಷಿಣಶ್ರೇಣಿಗೆ ಅಲಂಕಾರಭೂತವಾದ, ಗಾಂಧಾರವಿಷಯೇ- ಗಾಂಧಾರ ದೇಶದಲ್ಲಿ, ಖ್ಯಾತಾ-ಪ್ರಸಿದ್ಧವಾದ, ನಿತ್ಯಾಲೋಕಾಹ್ವಯಾ- ನಿತ್ಯಾಲೋಕವೆಂಬ ನಾಮಧೇಯವುಳ್ಳ, ಪುರೀ-ಪಟ್ಟಣವು, ಅಸ್ತಿ-ಇರುತಲಿದೆ.

ಅವತರಣಿಕಾ ॥ ಕರೆದುಕೊಂಡು ಹೋದ ಪುರುಷನು ಶ್ರೀದತ್ತನಿಗೆ ಪ್ರಕೃತಕಾರ್ಯವಂ ತಿಳಿಸುತ್ತಾನೆ. ಏನೆಂದರೆ.—

ತಾತ್ಪರ್ಯ ॥ ವಿಜಯಾರ್ಧ ಪರ್ವತದಲ್ಲಿ ದಕ್ಷಿಣ ಶ್ರೇಣಿಗೆ ಅಲಂಕಾರವಾದ ಗಾಂಧಾರದೇಶದಲ್ಲಿ ನಿತ್ಯಾಲೋಕವೆಂದು ಪ್ರಸಿದ್ಧವಾದ ಒಂದು ಪಟ್ಟಣವು ಇರುತ್ತಿರುವುದು. ॥ ೨೯ ॥

ಶ್ಲೋಕ॥ ಗರುಡವೇಗನಾಮಾಸ್ಯಾಂ
ರಾಜಾ ರಾಜ್ಞೀ ತು ಧಾರಿಣೀ ।
ಪುತ್ರೀ ಗಂಧರ್ವದತ್ತಾಭೂ-
ದಭೂತ್ತಸ್ಯಾಪಿ ಯವೀಯಸೀ ॥೨೦॥

ಟೀ॥ ಗರುಡವೇಗನಾಮಾ-ಗರುಡವೇಗನೆಂದು ನಾಮಧೇಯವುಳ್ಳ, ರಾಜಾ-
ಧೊರೆಯು, ಅಸ್ಯಾಂ-ಈ ಪಟ್ಟಣದಲ್ಲಿ, ಅಭೂತ್-ಇರುವನು., ರಾಜ್ಞೀತು- ಪ
ಮಹಿಷಿಯಾದವಳೋ, ಧಾರಿಣೀ-ಧಾರಿಣೀದೇವಿಯೆಂಬದಾಗಿ, ಅಭೂತ್-ಆದಳು.,
ತ್ರೀ-ಮಗಳು, ಗಂಧರ್ವದತ್ತಾ-ಗಂಧರ್ವದತ್ತೆಯೆಂಬದಾಗಿ, ಅಭೂತ್- ಆದಳು.,
ಪಿ-ಆ ಗಂಧರ್ವದತ್ತೆಯುಕೂಡ, ಯವೀಯಸೀ-ಚಿಕ್ಕವಳಾಗಿ, ಅಭೂತ್-ಆದಳ

ತಾತ್ಪರ್ಯ॥ ಈಪಟ್ಟಣದಲ್ಲಿ ಗರುಡವೇಗನೆಂಬ ರಾಜನಿರುವನ-
ಆತನಿಗೆ ಧಾರಿಣೀಎಂಬ ಪಟ್ಟಮಹಿಷಿಯು ಇರುವಳು. ಆ ದಂಪತಿ
ಳಿಗೆ ಗಂಧರ್ವದತ್ತೆಯೆಂಬ ಪುತ್ರಿಯು ಇರುವಳು. ಅವಳೂಕೂಡ 
ಕ್ಕಮಗಳು. ॥ ೨೦ ॥

ಶ್ಲೋಕ॥ ವೀಣಾವಿಜಯಿನೋ ಭಾರ್ಯಾ
ರಾಜಪುರ್ಯಾಮಿಯಂ ಭವೇತ್ ।
ಭೂಮಾವಿತಿ ಮುಹೂರ್ತಜ್ಞಾ
ಜನ್ಮಲಗ್ನೇ ವ್ಯಜೀಗಣಕ್ ॥ ೨೧ ॥

ಟೀ॥ ಇಯಂ-ಈ ಗಂಧರ್ವದತ್ತೆಯು, ಭೂಮೌ - ಭೂಮಿಯಲ್ಲಿ, ರಾಜಪು
ರ್ಯಾಂ-ರಾಜಪುರೀಪಟ್ಟಣದೊಳು, ವೀಣಾವಿಜಯಿನಃ-ವೀಣಾವಿದ್ಯೆಯಲ್ಲಿ ಜಯಿಸು
ಪುರುಷನಿಗೆ, ಭಾರ್ಯಾ(ಸತೀ)-ಪತ್ನಿಯಾಗಿ, ಭವೇತ್-ಆಗುವಳು., ಇತಿ-ಈಪ್ರಕಾ
ಮುಹೂರ್ತಜ್ಞಾಃ-ಜ್ಯೋತಿಶ್ಶಾಸ್ತ್ರಜ್ಞರು, ಜನ್ಮಲಗ್ನೇ-ಜನನಕಾಲದಲ್ಲಿ, ವ್ಯಜೀ
ಗಣಕ್-ಎಣಿಸಿದರು.

ತಾತ್ಪರ್ಯ॥ ಈ ಗಂಧರ್ವದತ್ತೆಯು ಭೂಮಿಯಲ್ಲಿ ರಾಜಪುರಿ
ಪಟ್ಟಣದೊಳು ವೀಣಾವಿದ್ಯೆಯಿಂದ ಜಯಿಸುವ ಪುರುಷನಿಗೆ ಪತ್ನಿಯಾ
ಗುವಳೆಂದು ಜನ್ಮಲಗ್ನದ ಫಲವನ್ನು ಜ್ಯೋತಿಶ್ಶಾಸ್ತ್ರಜ್ಞರು ಎಣ
ಸಿದರು. ॥ ೨೧ ॥

ಶ್ಲೋಕ ॥ ತದರ್ಥಂ ಪಾರ್ಥಿವಸ್ಸಾರ್ಧ-
ಮೇಕಾಂತೇ ಕಾಂತಯಾ ತಯಾ ।
ಮಂತ್ರಯಿತ್ವಾ ತದಂತೇ ಮಾ-
ಮಮಂದಪ್ರೀತಿರಾದಿಶತ್ ॥೨೦॥

ಟೀ ॥ ಪಾರ್ಥಿವಃ-ಗರುಡವೇಗ ಮಹಾರಾಜನು, ಏಕಾನ್ತೇ-ರಹಸ್ಯದಲ್ಲಿ, ಕಾನ್ತಯಾ-ಪತ್ನಿಯಾದ, ತಯಾಸಾರ್ಧಂ-ಆ ಧಾರಿಣೀದೇವಿಯೊಡನೆಕೂಡ, ತದರ್ಥಂ-ಆ ಗಂಧರ್ವದತ್ತಾ ವಿವಾಹರೂಪವಾದ ಅರ್ಥವನ್ನು, ಮಂತ್ರಯಿತ್ವಾ-ಆಲೋಚಿಸಿ, ತದನ್ತೇ-ಆ ಆಲೋಚನೆಯ ಅನಂತರದಲ್ಲಿ, ಅಮಂದಪ್ರೀತಿಃ(ಸನ್)-ಅಧಿಕ ಸಂತೋಷವುಳ್ಳವನಾಗಿ, ಮಾಂ-ನನ್ನನ್ನು, ಆದಿಶತ್-ಆಜ್ಞಾಪಿಸಿದನು.

ತಾತ್ಪರ್ಯ ॥ ಗರುಡವೇಗ ಮಹಾರಾಜನು ರಹಸ್ಯದಲ್ಲಿ ಪತ್ನಿಯೊಡನೆಕೂಡ ಗಂಧರ್ವದತ್ತಾ ವಿವಾಹವನ್ನಾಲೋಚಿಸಿ ಅನಂತರದೊಳು ಬಹಳ ಸಂತುಷ್ಟನಾಗಿ ನನ್ನನ್ನು ಕುರಿತು ಆಜ್ಞಾಪಿಸಿದನು. ॥ ೨೦॥

ಶ್ಲೋಕ ॥ ಕುಲಕ್ರಮಾಗತಾ ಮೈತ್ರೀ
ಶ್ರೀದತ್ತೇ ನಾಸ್ತಿ ನಸ್ತತಃ ।
ಗತ್ವಾ ಸತ್ವರಮತ್ರೈವ
ಸೋಯಮಾನೀಯತಾಮಿತಿ ॥ ೨೧ ॥

ಟೀ ॥ ನಃ-ನಮಗೆ, ಶ್ರೀದತ್ತೇನ-ಶ್ರೀದತ್ತನೊಡನೆ, ಕುಲಕ್ರಮಾಗತಾ-ವಂಶಪಾರಂಪರ್ಯದಿಂದ ಬಂದಿರುವ, ಮೈತ್ರೀ-ಸ್ನೇಹವು, ಅಸ್ತಿ-ಇರುತ್ತಿದೆ., ಸೋಯಂ-ಆ ಈ ಶ್ರೀದತ್ತಶ್ರೇಷ್ಠಿಯು, ಸತ್ವರಂ(ಯಥಾತಥಾ)-ತ್ವರೆಯೊಡನೆಕೂಡಿರುವಿಕೆಯು ಹೇಗೋಹಾಗೆ, ಗತ್ವಾ-ಹೋಗಿ, ಅತ್ರೈವ-ಇಲ್ಲಿಗೇನೇ, ಆನೀಯತಾಂ-ಕರೆದುಕೊಂಡುಬರಲ್ಪಡಲಿ., ಇತಿ-ಹೀಗೆಂತೆಂದು, ಆದಿಶತ್-ಆಜ್ಞಾಪಿಸಿದನು.

ತಾತ್ಪರ್ಯ ॥ ನಮಗೆ ಶ್ರೀದತ್ತಶ್ರೇಷ್ಠಿಯೊಡನೆ ವಂಶಪರಂಪರೆಯಿಂದಲೂ ಸ್ನೇಹವಿರುತ್ತಲಿದೆ. ಶೀಘ್ರವಾಗಿಹೋಗಿ ಇಲ್ಲಿಗೇನೆ ಆತನನ್ನು ಕರೆದುಕೊಂಡು ಬಾರೆಂದು ಆಜ್ಞಾಪಿಸಿದನು. ॥ ೨೧ ॥

ಶ್ಲೋಕ ॥ ಭವಂತಂ ಪರತನ್ತ್ರೋಽಹಂ
ನೌಭ್ರಂಶಭ್ರಾಂತಿಮಾಪದಮ್ ।

* ಸೌಮ್ಯಾಪರಕೃತೇ ಭೂಮ್ನಾ
ಪುನರಾನೀತವಾನಿತಿ ॥ ೩೮ ॥

ಟೀ ॥ ಪರತಂತ್ರಃ-ಪರಾಧೀನನಾದ, ಅಹಂ-ನಾನು, ಸೌಭ್ರಂಶಭ್ರಾಂತಿ-ಹಡಗಿನ ನಾಶವಿಷಯಕವಾದ ಭ್ರಾಂತಿಯನ್ನು, ಆವರ್ಜ(ಸೃಜ)- ಉಂಟುಮಾಡು ವವನಾಗಿ, ಪರಕೃತೇ-ಗಂಧರ್ವದತ್ತಾ ಪರಸಂಪಾದನೆಗೋಸುಗ, ಭೂಮ್ನಾ- ಅ ಕವಾದ, ಸಾಮ್ನಾ-ಸಾಮೋಪಾಯದಿಂದ, ಪುನಃ-ಮರಳಿಯೂ, ಭವಂತಂ- ತಮ ನ್ನು, ಆನೀತವಾನ್- ಕರೆದುಕೊಂಡುಬಂದೆನು., ಇತಿ-ಹೀಗೆಂದು, ಅಬ್ರವೀತ್ ಹೇಳಿದನು.

ತಾತ್ಪರ್ಯ ॥ ಭೃತ್ಯನಾದ ನಾನು ಹಡಗು ನಷ್ಟವಾದಹಾಗೆ ನಿ ಗೆ ಭ್ರಾಂತಿಯನ್ನುಂಟುಮಾಡಿ ಕನ್ಯಾಪರಕ್ಕೋಸುಗ ಮಹತ್ತಾದ ಉ ಪಾಯದಿಂದ ಇಲ್ಲಿಗೆ ಕರೆದುಕೊಂಡು ಬಂದೆನೆಂದು ಗರುಡವೇಗಮಹಾರ ಜನ ಆ ಭೃತ್ಯನು ಹೇಳಿದನು.

* (ನಾಮ್ನಾಧರಃಕೃತೇರ್ಭೂಮ್ನಾ, ಎಂದು ಪಾಠಾಂತರವಿದೆಯಷ್ಟೆ? ಅದಾಗ್ಯೆ, [ ನಾಮ್ನಾ-ನಾಮಧೇಯದಿಂದ, ಧರಃ-ಧರನೆಂಬ, ಪರತಂತ್ರಃ-ಭೃತ್ಯನಾದ, ಅಹಂ-ನಾನು, ಕೃತೇಃ-ಮಾಯಾಸ್ವರೂಪವಾದಕೃತ್ಯ ದ, ಭೂಮ್ನಾ-ಮಹಿಮೆಯಿಂದ, ಸೌಭ್ರಂಶಭ್ರಾಂತಿಂ-ಹಡಗು ನಷ್ಟವಾ ದಹಾಗೆ ಭ್ರಮೆಯನ್ನು, ಆವರ್ಜಸರ್ಜ-ಮಾಡುವನಾಗಿ, ಭವಂತಂ-ತಮ್ಮ ನ್ನು, ಪುನಃ-ಮರಳಿ, ಆನೀತವಾನ್-ಕರೆದುಕೊಂಡು ಬಂದೆನು.]
ಈ ಪ್ರಕಾರವಾಗಿ ಅನ್ವಯಿಸಬೇಕು. ॥ ೩೮ ॥

ಶ್ಲೋಕ ॥ ಶ್ರೀದತ್ತೋಽಪಿ ತದಾಕರ್ಣ್ಯ
ತುತೋಷ ಸುತರಾಮಸೌ ।
ದುಃಖಸ್ಯಾನಂತರಂ ಸೌಖ್ಯ-
ಮತಿಮಾತ್ರಂ ಹಿ ದೇಹಿನಾಮ್ ॥ ೩೯ ॥

ಟೀ ॥ ಅಸೌಶ್ರೀದತ್ತೋಽಪಿ- ಈ ಶ್ರೀದತ್ತಶ್ರೇಷ್ಠಿಯೂಕೂಡ, ತತ್-ಆ ವ ತನ್ನು, ಆಕರ್ಣ್ಯ-ಕೇಳಿ, ಸುತರಾಂ-ಅಧಿಕವಾಗಿ, ತುತೋಷ - ಸಂತೋಷವನ್ನು ಹೊಂದಿದನು., ದೇಹಿನಾಂ-ಪ್ರಾಣಿಗಳಿಗೆ, ದುಃಖಸ್ಯ-ದುಃಖದ, ಅನಂತರಂ - ನಂತರದಲ್ಲಿ, ಸೌಖ್ಯಂ-ಸುಖವು, ಅತಿಮಾತ್ರಂ ಹಿ-ವಿಶೇಷವಲ್ಲವೆ?,

ತಾತ್ಪರ್ಯ ॥ ಶ್ರೀದತ್ತನೂಕೂಡ ಆ ಮಾತನ್ನು ಕೇಳಿ ಬಹಳವಾಗಿ ಸಂತೋಷಿಸಿದನು. ದುಃಖದ ಅನಂತರದಲ್ಲಿ ಉಂಟಾಗುವ ಸುಖವು ಪ್ರಾಣಿಗಳಿಗೆ ವಿಶೇಷವಾಗಿ ತೋರುತ್ತದಲ್ಲವೆ ? ॥ ೨೫ ॥

ಶ್ಲೋಕ ॥ ಅಸುಖಾಯತವೈಶ್ರೇಯೋಽಪಿ
ಖೇಚರೇಂದ್ರಾವಲೋಕನಾತ್ |
ಮಿತ್ರಂ ಧಾತ್ರೀಪತಿಂ ಲೋಕೇ
ಕೋ ಪರಃ ಪಶ್ಯತಸ್ಸುಖೀ ॥ ೨೬ ॥

ಟೀ ॥ ವೈಶ್ರೇಯೋಽಪಿ-ಶ್ರೀದತ್ತಶ್ರೇಷ್ಠನುಕೂಡ, ಖೇಚರೇಂದ್ರಾವಲೋಕನಾತ್-ಗರುಡವೇಗನೆಂಬವಿದ್ಯಾಧರಚಕ್ರವರ್ತಿಯ ದರ್ಶನದದೆಶೆಯಿಂದ, ಅಸುಖಾಯತ-ಸಂತೋಷಿಸಿದನು., ಲೋಕೇ-ಲೋಕದಲ್ಲಿ, ಮಿತ್ರಂ-ಸ್ನೇಹಿತನಾದ, ಧಾತ್ರೀಪತಿಂ-ರಾಜನನ್ನು, ಪಶ್ಯತಃ-ನೋಡುತಲಿರುವ ಪುರುಷನಿಗಿಂತಲೂ, ಅಪರಃ-ಬೇರೆ ಯಾವ, ಸುಖೀ-ಸುಖಿಸುವ ಪುರುಷನು, ಕಃ-ಯಾರು ?.

ತಾತ್ಪರ್ಯ ॥ ಶ್ರೀದತ್ತನೂಕೂಡ ವಿದ್ಯಾಧರರಾಜನಾದ ಗರುಡವೇಗಮಹಾರಾಜನನ್ನು ನೋಡಿ ಸಂತೋಷವನ್ನು ಪೊಂದಿದನು. ಮಿತ್ರನಾದರಾಜನ ದರ್ಶನಕ್ಕಿಂತಲೂ ಅತಿಶಯವಾದ ಮತ್ತೊಂದು ಸಂತೋಷಹೇತುವು ಲೋಕದಲ್ಲಿ ಉಂಟೇ ? ॥ ೨೬ ॥

ಶ್ಲೋಕ ॥ ನಭಶ್ಚರಾಧಿಪಃ ಪಶ್ಚಾ-
ತ್ತದಾಯತ್ತಾಂ ಸುತಾಂ ವ್ಯಧಾತ್ |
ಪ್ರಾಣೇಷ್ವಪಿ ಪ್ರಮಾಣಂಯ-
ತ್ತದ್ಧಿ ಮಿತ್ರತ್ವಮಿಷ್ಯತೇ ॥ ೨೭ ॥

ಟೀ ॥ ನಭಶ್ಚರಾಧಿಪಃ-ಖೇಚರೇಂದ್ರನು, ಪಶ್ಚಾತ್-ಅನಂತರದಲ್ಲಿ, ಸುತಾಂ-ಮಗಳನ್ನು, ತದಾಯತ್ತಾಂ-ಆ ಶ್ರೀದತ್ತನ ಸ್ವಾಧೀನವನ್ನಾಗಿ, ವ್ಯಧಾತ್- ಮಾಡಿದನು., ಪ್ರಾಣೇಷ್ವಪಿ-ಪ್ರಾಣಗಳ ವಿಷಯದಲ್ಲಿಯೂಕೂಡ, ಪ್ರಮಾಣಂ-ನಂಬತಕ್ಕದ್ದಾದ, ಯತ್-ಯಾವವಿಶ್ವಾಸವುಂಟೋ, ತತ್-ಅದು, ಮಿತ್ರತ್ವಂ(ಸತ್)-ಮಿತ್ರತ್ವವಾಗಿ, ಇಷ್ಯತೇಹಿ-ಪ್ರಾಜ್ಞರಿಂದ ತಿಳಿಯಲ್ಪಡುತ್ತದಷ್ಟೆ ?.

ತಾತ್ಪರ್ಯ ॥ ಗರುಡವೇಗ ಮಹಾರಾಜನು ಮಗಳಾದ ಗಂಧರ್ವದ

ತ್ತೆಯನ್ನು ಮಿತ್ರನಾದ ಶ್ರೀದತ್ತನ ಸ್ವಾಧೀನಳನ್ನಾಗಿ ಮಾಡಿದನ
ಪ್ರಾಣಿಗಳಲ್ಲಿಕೂಡ ಸಂಬಂಧಕ್ಕೆ ಸ್ನೇಹವೇ ಅಲ್ಲವೆ ಮಿತ್ರತ್ವವೆನ್ನಿ
ವುದು ?. ॥ ೨೩ ॥

ಶ್ಲೋಕ ॥ ಶ್ರೀದತ್ತಂ ಸತ್ವರಂ ತಸ್ಮಾ-
ತ್ಖೇಚರೇಶೋ ನ್ಯವರ್ತಯತ್ ।
ಅಂಗಜಾಯಾಂ ಹಿ ಸೂತ್ಯಾಯಾ-
ಮಯೋಗ್ಯಂ ಕಾಲಯಾಪನಮ್ ॥ ೨೪ ॥

ಟೀ ॥ ಖೇಚರೇಶಃ-ಗರುಡವೇಗ ಮಹಾರಾಜನು, ಶ್ರೀದತ್ತಂ-ಶ್ರೀದತ್ತನನ್ನು
ಸತ್ವರಂ(ಯಥಾತಥಾ)-ವೇಗವೊಡನೆ ಕೂಡಿರೋಣ ಹೇಗೋ ಹಾಗೆ, ತಸ್ಮಾತ್
ಆ ಪ್ರದೇಶವಹೆಸೆಯಿಂದ, ನ್ಯವರ್ತಯತ್-ಕಳುಹಿಸಿದನು., ಅಂಗಜಾಯಾಂ- ಕನ್ನಿ
ಕೆಯು. ಸೂತ್ಯಾಯಾಂ(ಸತ್ಯಾಂ)-ವಿವಾಹಯೋಗ್ಯವಾದ ವಯಸ್ಸುಳ್ಳವಳಾಗು
ರಲಾಗಿ, ಕಾಲಯಾಪನಂ-ಕಾಲವನ್ನು ಕಳೆಯೋಣವು, ಅಯೋಗ್ಯಂಹಿ - ಯುಕ್ತ
ವಲ್ಲವಷ್ಟೆ?.

ತಾತ್ಪರ್ಯ ॥ ಗರುಡವೇಗ ಮಹಾರಾಜನು ಶ್ರೀದತ್ತನನ್ನು ಆ ಸ್ಥ
ಲದಿಂದ ಶೀಘ್ರವಾಗಿ ಕಳುಹಿಸಿದನು. ಮಗಳಿಗೆ ವಿವಾಹಯೋಗ್ಯವಾದ
ವಯಸ್ಸು ಪ್ರಾಪ್ತವಾಗುತ್ತಿರಲಾಗಿ ಕಾಲವನ್ನು ಕಳೆಯುವುದು ಯು
ಕ್ತವಲ್ಲವಷ್ಟೆ ? ॥ ೨೪ ॥

ಶ್ಲೋಕ ॥ ಗೃಹಸ್ಥಾನಾಂ ಹಿ ತದ್ದೌಸ್ಥ್ಯ-
ಮತಿಮಾತ್ರಮರುಂತುದಮ್ ।
ಕನ್ಯಾನಾಮಪ್ರಮಾದೇನ
ರಕ್ಷಣಾದಿಸಮುದ್ಭವಮ್ ॥ ೨೫ ॥

ಟೀ ॥ ಕನ್ಯಾನಾಂ-ಕನ್ನಿಕೆಗಳ, ಅಪ್ರಮಾದೇನ-ಜಾಗರೂಕತ್ವದಿಂದ, ರಕ್ಷ
ಣಾದಿಸಮುದ್ಭವಂ-ಸಂರಕ್ಷಣ ಮಾಡೋಣವೇ ಮೊದಲಾದ ಕಾರ್ಯದಿಂದುಂಟಾದ
ತದ್ದೌಸ್ಥ್ಯಂ-ಆ ದುರವಸ್ಥೆಯು, ಗೃಹಸ್ಥಾನಾಂ-ಗೃಹಸ್ಥರಿಗೆ, ಅತಿಮಾತ್ರಂ-
ಹಳವಾಗಿ, ಅರುಂತುದಂಹಿ-ಮರ್ಮಸ್ಪರ್ಶಿಯಾದ ವ್ಯಥೆಯುಳ್ಳವೆ ?.

ತಾತ್ಪರ್ಯ ॥ ಕನ್ನಿಕೆಗಳನ್ನು ಬಹಳ ಜಾಗರೂಕತೆಯಿಂದ ರ

ಸೋಣವೇ ಮೊದಲಾದ ದುಸ್ಸ್ಥಿತಿಯು ಗೃಹಸ್ಥರಿಗೆ ವಿಶೇಷವಾಗಿ ಮರ್ಮಸ್ಪರ್ಶಿಯಾದ ವೇದನೆಯಲ್ಲವೆ ? ॥ ೩೯ ॥

ಶ್ಲೋಕ ॥ ತಯಾಮಾ ಸ್ವಪುರಂ ಪ್ರಾಪ್ಯ
ಶ್ರೀದತ್ತೋಽಪ್ಯಥ ತತ್ಕಥಾಮ್ ।
ಪತ್ನ್ಯೈಃ ಪ್ರಕಟಯಾಮಾಸ
ಸ್ತ್ರೀಣಾಮೇವ ಹಿ ದುರ್ಮತಿಃ ॥ ೪೦ ॥

ಟೀ ॥ ಶ್ರೀದತ್ತೋಽಪಿ-ಶ್ರೀದತ್ತನೂ ಕೂಡ, ತಯಾ-ಆ ಗಂಧರ್ವದತ್ತೆಯೊಡನೆ, ಆಮಾ-ಶೀಘ್ರವಾಗಿ, ಸ್ವಪುರಂ-ತನ್ನ ಪಟ್ಟಣವನ್ನು, ಪ್ರಾಪ್ಯ-ಹೊಂದಿ, ಅಥ-ಅನಂತರದಲ್ಲಿ, ತತ್ಕಥಾಂ- ಆ ಕನ್ನಿಕೆಯ ವೃತ್ತಾಂತವನ್ನು, ಪತ್ನ್ಯೈಃ - ಹೆಂಡತಿಗೋಸುಗ, ಪ್ರಕಟಯಾಮಾಸ-ಪ್ರಕಾಶಪಡಿಸಿದನು., ಸ್ತ್ರೀಣಾಮೇವ- ಸ್ತ್ರೀಯರಿಗೇನೇ, ದುರ್ಮತಿಃ-ದುಷ್ಟಬುದ್ಧಿಯಲ್ಲವೆ?.

ತಾತ್ಪರ್ಯ ॥ ಶ್ರೀದತ್ತನೂಕೂಡ ಗಂಧರ್ವದತ್ತೆಯೊಡನೆ ಶೀಘ್ರವಾಗಿ ತನ್ನ ಸ್ಥಾನವನ್ನು ಸೇರಿ ಆಕೆಯ ವೃತ್ತಾಂತವನ್ನು ತನ್ನಹೆಂಡತಿಗೆ ಹೇಳಿದನು. ಸ್ತ್ರೀಜಾತಿಗೇನೇ ದುರ್ಬುದ್ಧಿಯು ಸಹಜವಾದುದರಿಂದಪ್ರಕಾರಾಂತರವಾಗಿ ತಿಳಿದಾಳೆಂದು ಸರ್ವಸಂಗತಿಯನ್ನೂ ಹೇಳಿದನು. ॥೪೦॥

ಶ್ಲೋಕ॥ ವೀಣಾವಿಜಯಿನೋ ಯೋಗ್ಯಾ
ಭೋಗ್ಯಾ ಪುತ್ರೀ ಮಮೇತಿ ಸಃ ।
ಕಟಕೇ ಘೋಷಯಾಮಾಸ-
ರಾಜಾನುಮತಿಪೂರ್ವಕಮ್ ॥೪೧॥

ಟೀ ॥ ಸಃ- ಆ ಶ್ರೀದತ್ತಶ್ರೇಷ್ಠಿಯು, ಭೋಗ್ಯಾ-ಭೋಗಯೋಗ್ಯಳಾದ, ಮಮ-ನನ್ನ, ಪುತ್ರೀ-ಮಗಳು, ವೀಣಾವಿಜಯಿನಃ-ವೀಣಾವಿದ್ಯೆಯಿಂದ ಜಯಿಸುವ ಪುರುಷನಿಗೆ, ಯೋಗ್ಯಾ- ಯೋಗ್ಯವಾಗುತ್ತಾಳೆ., ಇತಿ-ಹೀಗೆಂದು, ರಾಜಾನುಮತಿಪೂರ್ವಕಂ-ದೊರೆಯುಸಮ್ಮತಿಯೇಮೊದಲಾಗಿರೋಣಕ್ಕೆಗೋಸ್ಕರ, ಕಟಕೇ-ದೇಶದಲ್ಲಿ, ಘೋಷಯಾಮಾಸ- ಡಂಗುರವಂ ಹೊಡೆಸಿದನು.

ತಾತ್ಪರ್ಯ ॥ ಭೋಗ ಯೋಗ್ಯಳಾದ ನನ್ನ ಪುತ್ರಿಯು ವೀಣಾವಿ

ದ್ಯೆಯಿಂದ ಜಯಿಸುವ ಪುರುಷನಿಗೆ ಪತ್ನಿಯಾಗುವಳು. ಎಂಬದ
ಆ ಶ್ರೀದತ್ತ ಶ್ರೇಷ್ಠಿಯು ರಾಜಾಜ್ಞೆಯಂ ಪಡೆದು ದೇಶದಲ್ಲಿ ಡಂಗು
ವನ್ನು ಹೊಡಿಸಿ ಸಾರಿಸಿದನು. ॥೪೦॥

ಶ್ಲೋಕ ॥ಅಕುತೋಭೀತಿತಾ ಭೂಮೇ-
ರ್ಭೂಪಾನಾಮಾಜ್ಞಯಾನ್ಯಥಾ ।
ಆಸ್ತಾಮನ್ಯತ್ಸುವೃತ್ತಾನಾಂ
ವೃತ್ತಂ ಚ ನ ಹಿ ಸುಸ್ಥಿತಮ್ ॥೪೧॥

ಟೀ ॥ ಭೂಮೇಃ-ಭೂಮಿಗೆ, ಅಕುತೋಭೀತಿತಾ-ಯಾತರಿಂದಲೂ ಭಯವಿಲ್ಲ
ಇರೋಣವು, ಭೂಪಾನಾಂ-ರಾಜರ, ಆಜ್ಞಯಾ-ಅಪ್ಪಣೆಯಿಂದ, ಅನ್ಯಥಾ - ಹಾ
ಲ್ಲದೇಇದ್ದರೆ, ಅನ್ಯತ್-ಇತರವಿಷಯವು, ಆಸ್ತಾಂ-ಇರಲಿ, ಸುವೃತ್ತಾನಾಂ-ಸುಚ
ರಿತ್ರವುಳ್ಳ ಸತ್ಪುರುಷರ, ವೃತ್ತಂಚ-ವ್ಯಾಪಾರವೂಕೂಡ, ನಹಿಸುಸ್ಥಿತಂ-ನಿರ್ವಿ
ವಾಗಿ ಇರುವುದಿಲ್ಲವಷ್ಟೆ?.

ತಾತ್ಪರ್ಯ ॥ಭೂಮಿಗೆ (ಅಂದರೆ, ಭೂಮಿಯಲ್ಲಿರುವ ಪ್ರಜೆಗಳಿಗೆ
ಯಾವ ಕಾರಣದಿಂದಲೂ ಭಯವಿಲ್ಲದೆ ಇರೋಣವು ರಾಜಾಜ್ಞೆ
ಲದಿಂದಲೇ. ಹಾಗಿಲ್ಲದಪಕ್ಷದಲ್ಲಿ ಸತ್ಪುರುಷರ ಸಚ್ಚರಿತ್ರವು ಕೂ
ಡ ನಿರ್ವಿಘ್ನವಾಗಿ ನಡೆಯದು. ॥೪೧॥

ಶ್ಲೋಕ ॥ ವೀಣಾಮಂಟಪಮಾಸೇದು-
ಸ್ತಾವತಾ ಧರಣೀಭುಜಃ ।
ಸ್ತ್ರೀರಾಗೇಣಾತ್ರ ಕೇನಾಮ
ಜಗತ್ಯಾಂ ನ ಪ್ರತಾರಿತಾಃ ॥೪೨॥

ಟೀ॥ ತಾವತಾ-ಅಷ್ಟರಲ್ಲಿ, ಧರಣೀಭುಜಃ-ರಾಜರು, ವೀಣಾಮಂಟಪಂ-ವೀಣಾ
ವಿದ್ಯೆಯಲ್ಲಿ ಜಯಾಪಜಯಂಗಳಿಂದಸ್ವಯಂವರನಡೆಯುತಕ್ಕ ಸಭಾಮಂಟಪವನ್ನು, ಆಸೇ
ದುಃ-ಹೊಂದಿದರು., ಅತ್ರ,ಜಗತ್ಯಾಂ-ಈ ಲೋಕದಲ್ಲಿ, ಸ್ತ್ರೀರಾಗೇಣ-ಸ್ತ್ರೀವಿ
ಷದಿಂದ, ಕೇನಾಮ-ಯಾರುತಾನೆ, ನಪ್ರತಾರಿತಾಃ-ವಂಚಿಸಲ್ಪಡಲಿಲ್ಲವು?.

ತಾತ್ಪರ್ಯ ॥ ಅಷ್ಟರಲ್ಲಿ ರಾಜರು ವೀಣಾಪರೀಕ್ಷಾ ಸ್ಥಾನವಾ

ಸ್ವಯಂವರಮಂಟಪವನ್ನು ಹೊಂದಿದರು. ಈ ಲೋಕದಲ್ಲಿ ಸ್ತ್ರೀ ವಿಷಯವಾದ ಮೋಹದಿಂದ ಯಾರುತಾನೇ ವಂಚಿಸಲ್ಪಡಲಿಲ್ಲವು? ॥೪೩॥

ಶ್ಲೋಕ ॥ ಕನ್ಯಾಯಾಃ ಪರಿವಾದಿನ್ಯಾಂ
ಪರಾಜೇಷತ ಪಾರ್ಥಿವಾಃ ।
ಅಪ್ರಸ್ಕಲಾ ಹಿ ವಿದ್ಯಾಸ್ಯಾ-
ದವಜ್ಞೈಕಫಲಾ ಕ್ವಚಿತ್ ॥೪೪॥

ಟೀ ॥ ಪಾರ್ಥಿವಾಃ-ರಾಜರು, ಕನ್ಯಾಯಾಃ- ವಿದ್ಯಾಧರಕನ್ನಿಕೆಯಾದ ಗಂಧರ್ವದತ್ತೆಯ, ಪರಿವಾದಿನ್ಯಾಂ-ವೀಣೆಯುವಿದ್ಯೆಯಲ್ಲಿ, ಪರಾಜೇಷತ- ಪರಾಜಯವನ್ನು ಹೊಂದಿದರು., ಅಪ್ರಸ್ಕಲಾ-ಸಂಪೂರ್ಣವಲ್ಲದ, ವಿದ್ಯಾ-ವಿದ್ಯೆಯು, ಕ್ವಚಿತ್-ಒಂದುಕಡೆಯಲ್ಲಿ, ಅವಜ್ಞೈಕಫಲಾ-ತಿರಸ್ಕಾರವೇ ಫಲವಾಗಿ ಉಳ್ಳದ್ದಾಗಿ, ಸ್ಯಾದ್ಧಿ-ಆದೀತಲ್ಲವೆ?.

ತಾತ್ಪರ್ಯ ॥ ಗಂಧರ್ವದತ್ತೆಯಿಂದ ವೀಣಾವಾದನದಲ್ಲಿ ಬಂದಿದ್ದ ಸಮಸ್ತರಾಜರೂ ಅಪಜಯವನ್ನು ಹೊಂದಿದರು. ಪರಿಪೂರ್ಣವಲ್ಲದವಿದ್ಯೆಯು ಎಲ್ಲಿಯಾದರೂ ಒಂದು ಸ್ಥಳದಲ್ಲಿ ಅಪಜಯವನ್ನೇ ಕೊಡುತ್ತದಲ್ಲವೆ? ॥

ಶ್ಲೋಕ ॥ ಜೀವಂಧರಕುಮಾರಸ್ತು
ಘೋಷವತ್ಯಾಂ ಜಿಗಾಯತಾಮ್ ।
ಅನವದ್ಯಾ ಹಿ ವಿದ್ಯಾಸ್ಯಾ-
ಲ್ಲೋಕದ್ವಯಫಲಾವಹಾ ॥೪೫॥

ಟೀ ॥ ಜೀವಂಧರಕುಮಾರಸ್ತು-ಜೀವಂಧರಕುಮಾರನಾದರೊ, ತಾಂ-ಆ ಗಂಧರ್ವದತ್ತೆಯನ್ನು, ಘೋಷವತ್ಯಾಂ-ವೀಣೆಯಲ್ಲಿ, ಜಿಗಾಯ-ಜಯಿಸಿದನು., ಅನವದ್ಯಾ ನಿರ್ದೋಷವಾದ, ವಿದ್ಯಾ-ವಿದ್ಯೆಯು, ಲೋಕದ್ವಯಫಲಾವಹಾ(ಸತೀ)-ಇಹಪರ ಎರಡುಲೋಕಗಳಲ್ಲಿಯೂ ಫಲವನ್ನು ಕೊಡುವುದಾಗಿ, ಸ್ಯಾದ್ಧಿ-ಆದೀತಲ್ಲವೆ?.

ತಾತ್ಪರ್ಯ ॥ ಜೀವಂಧರ ಕುಮಾರನು ವೀಣಾವಾದನದಲ್ಲಿ ಗಂಧರ್ವದತ್ತೆಯನ್ನು ಜಯಿಸಿದನು. ನಿರ್ದೋಷವಾದ ವಿದ್ಯೆಯು ಇಹಲೋಕ ಪರಲೋಕಗಳೆರಡರಲ್ಲಿಯೂ ಫಲವನ್ನು ಕೊಡುತ್ತದಲ್ಲವೆ? ದೋಷವಿ

ಶಿಷ್ಟವಾದರೆ ಎರಡು ಲೋಕಗಳಲ್ಲಿಯೂ ನಿಷ್ಫಲವು. ॥೪೫॥

ಶ್ಲೋಕ॥ ಪರಾಜಯಂ ಜಯಾಚ್ಛ್ಲಾಘ್ಯಂ
ಮತ್ವಾ ಸಾಪಿ ತಮಾಸದತ್ ।
ಅನ್ತಿಕಂ ಕೃತಪುಣ್ಯಾನಾಂ
ಶ್ರೀರನ್ವಿಷ್ಯ ಹಿ ಗಚ್ಛತಿ ॥೪೬॥

ಟೀ॥ ಸಾಪಿ-ಆ ಗಂಧರ್ವದತ್ತೆಯೂಕೂಡ, ಪರಾಜಯಂ- ಅಪಜಯವನ್ನು, ಜಯಾತ್-ಜಯಕ್ಕಿಂತಲೂ, ಶ್ಲಾಘ್ಯಂ(ಸನ್ತಂ)-ಶ್ಲಾಘಿಸುವದಕ್ಕೆ ಯೋಗ್ಯವನ್ನಾ- ಮತ್ವಾ-ತಿಳಿದು, ತಂ-ಆ ಜೀವಂಧರಕುಮಾರನನ್ನು, ಆಸದತ್-ಹೊಂದಿದಳು., ಕೃತಪುಣ್ಯಾನಾಂ-ಮಾಡಲ್ಪಟ್ಟ ಸುಕೃತವುಳ್ಳವರ, ಅನ್ತಿಕಂ-ಸಮೀಪವನ್ನು, ಶ್ರೀ ಲಕ್ಷ್ಮಿಯು, ಅನ್ವಿಷ್ಯ-ಹುಡುಕಿ, ಗಚ್ಛತಿಹಿ-ಹೊಂದುತ್ತಾಳಲ್ಲವೆ?.

ತಾತ್ಪರ್ಯ ॥ ಆ ಗಂಧರ್ವದತ್ತೆಯೂ ಕೂಡ ಜೀವಂಧರ ಕುಮಾ- ನಿಂದುಂಟಾದ ಅಪಜಯವನ್ನು ಜಯಕ್ಕಿಂತಲೂ ಶ್ಲಾಘ್ಯವನ್ನಾಗಿ ತಿ- ದು ಆ ಕುಮಾರನನ್ನು ಹೊಂದಿದಳು. ಪುಣ್ಯಶಾಲಿಗಳ ಸಮೀಪ- ನ್ನು ಲಕ್ಷ್ಮಿಯು ತಾನೇ ಹುಡುಕಿ ಹೊಂದುವಳಲ್ಲವೆ ? ॥೪೬॥

ಶ್ಲೋಕ ॥ ಆಮುಮೋಚಾಥ ಮೋಚೋರುಃ
ಸ್ರಜಂ ಜೀವಕವಕ್ಷಸಿ ।
ಕುರ್ವಂತು ತಪ ಇತ್ಯೇವಂ
ಸರ್ವೇಭ್ಯೋ ಬ್ರುವತೀವ ಸಾ ॥೪೭॥

ಟೀ ॥ ಅಥ-ಅನಂತರದಲ್ಲಿ, ಮೋಚೋರುಃ- ಬಾಳೆಯಕಂಭದೋಪಾದಿ- ತೊಡೆಗಳುಳ್ಳ, ಸಾ-ಗಂಧರ್ವದತ್ತೆಯು, ಇತಿ-ಈಪ್ರಕಾರ, ತಪಃ- ತಪಸ್ಸನ್ನು, ರ್ವಂತು- ಮಾಡಿರಿ , ಏವಂ-ಹೀಗೆಂತೆಂದು, ಸರ್ವೇಭ್ಯಃ-ಸಮಸ್ತಜನಗಳಿಗೋಸ- ಬ್ರುವತೀವ-ಹೇಳುವವಳೋಪಾದಿಯಲ್ಲಿ, ಜೀವಕವಕ್ಷಸಿ-ಜೀವಂಧರಕುಮಾರನ ಸ್ಥಲದಲ್ಲಿ, ಸ್ರಜಂ-ಪುಷ್ಪಮಾಲಿಕೆಯನ್ನು, ಆಮುಮೋಚ-ಹಾಕಿದಳು.

ತಾತ್ಪರ್ಯ ॥ ಎಲೌ ಸ್ತ್ರೀಯರಿರಾ!! ನನ್ನಂತೆ ತಪಸ್ಸನ್ನು ಮಾ- ದಿದವರಿಗೆ ಈ ಜೀವಂಧರಕುಮಾರನು ದೊರಕುವನು. ಭವಾಂತರ

ಹಾಸುಕೃತವಿಲ್ಲದೆ ಈ ಪ್ರಣ್ಯಪುರುಷನು ಎಂದಿಗೂ ದೊರಕತಕ್ಕವನಲ್ಲ ವೆಂತಲೂ, ಎಲೌ ವ್ಯರ್ಥವಾದ ಅಭಿಲಾಷೆಯುಳ್ಳ ರಾಜಪುಗಳಿರಾ!! ಜೀ ವಂಧರಕುಮಾರನಂತೆಯೇ ನೀವೂ ತಪಸ್ಸನ್ನುಮಾಡಿದ್ದರೆ ಈ ಸಕಲಕ ಲಾ ಪಾಂಡಿತ್ಯವೂ, ಯಶಸ್ಸೂಪ್ರಾಪ್ತವಾಗುತ್ತಲಿತ್ತೇ ಹೊರತುಸುಮ್ಮನೆ ಅಪೇಕ್ಷಿಸಿದರೆ ಲಭ್ಯವಾಗುವುದೇ? ಎಂತಲೂ ಸಮಸ್ತರಿಗೂ ಹೇಳುತ್ತಾ ಳೆಯೋ ಎಂಬಹಾಗೆ ಗಂಧರ್ವದತ್ತೆಯು ಜೀವಂಧರಕುಮಾರನ ಕಂಠದಲ್ಲಿ ಸ್ವಯಂವರ ಮಾಲಿಕೆಯನ್ನು ಹಾಕಿದಳು(ಅತ್ಯಂತಬಹುಮಾನದಿಂದಲೂ, ಪ್ರೇಮಾತಿಶಯದಿಂದಲೂ ಒಡಗೂಡಿದವಳಾಗಿಮಾಲಿಕೆಯನ್ನುಹಾಕಿದಳೆಂ ದುಭಾವವು. ಮತ್ತುಜೀವಂಧರ ಕುಮಾರನಲ್ಲಿ ಭಾವಾನುಬಂಧದಿಂದ ನೋ ಡುತ್ತಿರುವ ಸ್ತ್ರೀಯರಿಗೆ ಇವಳು ಯಾವಮಹಾತಪಸ್ಸನ್ನು ಮಾಡಿರುವ ಳೋ?ಅಭಾಗ್ಯರಾದ ನಮಿಗಿಂಥಾ ಪತಿಯು ಹೇಗೆ ದೊರಕುವನೆಂಬ ಚಿತ್ತ ವಿಕಾರವೂ ಉಂಟಾಯಿತೆಂದು ಭಾವವು.) ॥೪೩॥

ಶ್ಲೋಕ ॥ ಕಾಷ್ಠಾಂಗಾರಸ್ತು ತದ್ವೀಕ್ಷ್ಯ
ಕ್ಷಿತಿಪಾನ್ಸಮಧುಕ್ಷಯತ್ ।
ಅನ್ಯಾಭ್ಯುದಯಖಿನ್ನತ್ವಂ
ತದ್ಧಿ ದೌರ್ಜನ್ಯಲಕ್ಷಣಮ್ ॥೪೪॥

ಟೀ ॥ ಕಾಷ್ಠಾಂಗಾರಸ್ತು-ಕಾಷ್ಠಾಂಗಾರನಾದರೊ, ತತ್-ಆ ಸ್ವಯಂವರ ವನ್ನು, ವೀಕ್ಷ್ಯ-ನೋಡಿ, ಕ್ಷಿತಿಪಾನ್-ದೊರೆಗಳನ್ನು, ಸಮಧುಕ್ಷಯತ್-ಕೋಪಾ ವಿಷ್ಟರಾಗುವಂತೆ ಬೋಧಿಸಿದನು., ಅನ್ಯಾಭ್ಯುದಯಖಿನ್ನತ್ವಂ-ಇತರರ ಶ್ರೇಯಸ್ಸಿ ನಲ್ಲಿ (ಅನ್ಯರ ಅಭ್ಯುದಯವನ್ನುನೋಡಿ) ದುಃಖಿಸೋಣವು, ಯತ್-ಯಾವದೊಂ ದುಂಟೋ, ತತ್-ಅದು, ದೌರ್ಜನ್ಯಲಕ್ಷಣಂಹಿ-ದುರ್ಜನರಸ್ವಭಾವವಲ್ಲವೆ?

ತಾತ್ಪರ್ಯ ॥ ಕಾಷ್ಠಾಂಗಾರನಾದರೋ ಆ ಜೀವಂಧರನಿಗೆ ಸ್ವ ಯಂವರಮಾಲಾ ಸಮರ್ಪಣವನ್ನುನೋಡಿ ರಾಜರಿಗೆ ದುರ್ಬೋಧೆ ಯಂ ಮಾಡಿದನು. ಪರರಶ್ರೇಯಸ್ಸನ್ನು ನೋಡಿ ಸಹಿಸಲಾರದೆ ದುಃಖಿ ಸೋಣವೇ ದುರ್ಜನರ ಲಕ್ಷಣವಲ್ಲವೆ? ॥೪೪॥

ಶ್ಲೋಕ॥ ಕ್ರಯವಿಕ್ರಯಯೋರ್ಯೋಗ್ಯಃ
ಕುಪ್ಯಾನಾಂ ವೈಶ್ಯಸೂನುಕಃ।
ಕಥಂ ಲಭೇತ ಸ್ತ್ರೀರತ್ನಂ
ಶಸ್ತಂ ವಸ್ತು ಹಿ ಭೂಭುಜಾಮ್ ॥೪೯॥

ಟೀ॥ ಕುಪ್ಯಾನಾಂ- ಮಾರತಕ್ಕ ವಸ್ತುಗಳ, ಕ್ರಯವಿಕ್ರಯಯೋಃ-
ಯೋಣವೇನೂ, ಮಾರೋಣವೇನೂ ಇವುಗಳಿಗೆ, ಯೋಗ್ಯಃ-ಯೋಗ್ಯನಾದ
ಶ್ಯಸೂನುಕಃ- ವರ್ತಕನಮಗನು, ಸ್ತ್ರೀರತ್ನಂ- ಸ್ತ್ರೀಯರಲ್ಲಿ ಶ್ರೇಷ್ಠವಸ್ತು
ಈಕನ್ನಿಕೆಯನ್ನು, ಕಥಂ-ಹೇಗೆ, ಲಭೇತ-ಪಡೆವನು? ಶಸ್ತಂ-ಶ್ರೇಷ್ಠವಾದ
ಸ್ತು-ವಸ್ತುವು, ಭೂಭುಜಾಂಹಿ-ರಾಜರಿಗಲ್ಲವೆ?.

ತಾತ್ಪರ್ಯ॥ಮಾರತಕ್ಕ ವಸ್ತುಗಳನ್ನು ತೆಗೆದುಕೊಳ್ಳುವಿಕೆ ಕೊಡು
ಇವುಗಳಿಗೆ ಯೋಗ್ಯನಾದ ವರ್ತಕನ ಮಗನು ಈ ಸ್ತ್ರೀರತ್ನವನ್ನು
ಗೆಪಡೆಯುವನು? ಶ್ರೇಷ್ಠವಸ್ತುವು ರಾಜರಿಗೆಯೋಗ್ಯವಾದುದಲ್ಲವೆ?॥

ಶ್ಲೋಕ॥ ಇತಿ ಸಂಧುಕ್ಷಿತಾಶ್ಚಕ್ರುಃ
ಸ್ವಾಮಿನಾ ತೇಽಪಿ ಸಂಯುಗಮ್।
ಪ್ರಕೃತ್ಯಾ ಸ್ಯಾದಕೃತ್ಯೇ ಧೀ-
ರ್ದುಶ್ಶಿಕ್ಷಾಯಾಸ್ತು ಕಿಂ ಪುನಃ ॥೫೦॥

ಟೀ॥ ಇತಿ-ಈಪ್ರಕಾರ, ಸಂಧುಕ್ಷಿತಾಃ-ಬೋಧಿಸಲ್ಪಟ್ಟ, ತೇಽಪಿ-ಆರಾಜ
ಕೂಡ, ಸ್ವಾಮಿನಾ-ಜೀವಂಧರಸ್ವಾಮಿಯೊಡನೆ, ಸಂಯುಗಂ-ಯುದ್ಧವನ್ನು,
ಚಕ್ರುಃ-ಮಾಡಿದರು., ಪ್ರಕೃತ್ಯಾ-ಸ್ವಭಾವದಿಂದ, ಅಕೃತ್ಯೆ-ಕೆಟ್ಟಕೆಲಸದಲ್ಲಿ, ಧೀಃ-
ದ್ಧಿಯು, ಸ್ಯಾತ್-ಉಂಟಾದೀತು, ದುಶ್ಶಿಕ್ಷಾಯಾಸ್ತು- ದುರ್ಬೋಧೆಯುದೆಸೆಯಿ
ದಲಾದರೋ, ಕಿಂಪುನಃ-ಹೇಳತಕ್ಕದ್ದೇನು?.

ತಾತ್ಪರ್ಯ॥ ಈ ಪ್ರಕಾರ ಬೋಧಿಸಲ್ಪಟ್ಟ ಆ ರಾಜರೂ ಕೂ
ಜೀವಂಧರಸ್ವಾಮಿಯೊಡನೆ ಯುದ್ಧವನ್ನು ಮಾಡಿದರು. ಸ್ವಭಾವದಿಂ
ಅಕಾರ್ಯದಲ್ಲಿ ಬುದ್ಧಿಯು ಪ್ರವರ್ತಿಸುತ್ತದೆ. ದುರ್ಬೋಧೆಯುದೆಸೆಯಿ
ದಲಾದರೋ ಹೇಳತಕ್ಕದ್ದೇನು ? ॥೫೦॥

ಶ್ಲೋಕ ॥ ಪರಾಜೇಷತ ಭೂಪಾಸ್ತೇ
ಧನ್ವಿನಾಂ ಚಕ್ರವರ್ತಿನಾ ।
ಅಲಂ ಕಾಕಸಹಸ್ರೇಭ್ಯ
ಏಕೈವ ಹಿ ದೃಷದ್ಭವೇತ್ ॥೫೧॥

ಟೀ ॥ ತೇ ಭೂಪಾಃ-ಆ ರಾಜರು, ಧನ್ವಿನಾಂ-ಧನುರ್ಧರರಿಗೆ, ಚಕ್ರವರ್ತಿನಾ-ಚಕ್ರವರ್ತಿಯಾದ ಜೀವಂಧರಸ್ವಾಮಿಯಿಂದ, ಪರಾಜೇಷತ-ಅಪಜಯವನ್ನು ಹೊಂದಿದರು. ಕಾಕಸಹಸ್ರೇಭ್ಯಃ-ಕಾಗೆಗಳ ಅನೇಕ ಸಾವಿರಗಳಿಗೋಸ್ಕರ, ಏಕಾ-ಒಂದಾದ, ದೃಷದೇವ-ಕಲ್ಲೇ, ಅಲಂಭವೇದ್ಧಿ-ಸಾಕಾದೀತಲ್ಲವೆ,

ತಾತ್ಪರ್ಯ ॥ ಆ ಯುದ್ಧವನ್ನು ಮಾಡುತಲಿರುವ ರಾಜರು ಧನುರ್ಧರರಿಗೆ ಚಕ್ರವರ್ತಿಯೆನಿಸಿದ ಜೀವಂಧರಸ್ವಾಮಿಯಿಂದ ಅಪಜಯವನ್ನು ಹೊಂದಿದರು. ಅನೇಕ ಸಾವಿರ ಕಾಗೆಗಳಿಗೆ ಒಂದೇ ಕಲ್ಲು ಸಾಕಲ್ಲವೆ ? ॥ ೫೧ ॥

ಶ್ಲೋಕ ॥ ಸ್ಥಾನೇ ಕನ್ಯಾಮನಸ್ಸಕ್ತ-
ಮಿತ್ಯೂಚುಸ್ಸಜ್ಜನಾ ಮುದಾ ।
ಸುಧಾಸೂತೇಸ್ಸುಧೋತ್ಪತ್ತಿ-
ರಪಿಲೋಕೇ ಕಿಮದ್ಭುತಮ್ ॥೫೨॥

ಟೀ ॥ ಸಜ್ಜನಾಃ-ಸತ್ಪುರುಷರು, ಸ್ಥಾನೇ-ಯೋಗ್ಯಸ್ಥಾನದಲ್ಲಿ, ಕನ್ಯಾಮನಃ-ಕನ್ನಿಕೆಯ ಮನಸ್ಸು, ಸಕ್ತಂ-ಸಂಬಂಧಿಸಿತು. ಇತಿ-ಈಪ್ರಕಾರ, ಮುದಾ-ಸಂತೋಷದಿಂದ, ಊಚುಃ-ಹೇಳಿದರು. ಸುಧಾಸೂತೇಃ-ಚಂದ್ರನದೆಸೆಯಿಂದ, ಸುಧೋತ್ಪತ್ತಿರಪಿ-ಅಮೃತದ ಉತ್ಪತ್ತಿಯೂ ಕೂಡ, ಲೋಕೇ-ಲೋಕದಲ್ಲಿ, ಅದ್ಭುತಂ ಕಿಂ-ಆಶ್ಚರ್ಯವೇನು ?

ತಾತ್ಪರ್ಯ॥ ಯೋಗ್ಯನಾದ ವರನಲ್ಲಿ ಕನ್ನಿಕೆಯ ಮನಸ್ಸು ಸಂಬಂಧಿಸಿತು. ಚಂದ್ರನ ದೆಸೆಯಿಂದ ಅಮೃತ ಹುಟ್ಟುವುದು ಆಶ್ಚರ್ಯವಲ್ಲವಷ್ಟೆ ? ಎಂಬದಾಗಿ ಸತ್ಪುರುಷರು ಸಂತೋಷದಿಂದ ಹೇಳಿದರು. ॥ ೫೨ ॥

ಶ್ಲೋಕ॥ ಅಥ ಗಂಧರ್ವದತ್ತಾಂ ತಾಂ
ಶ್ರೀದತ್ತೇನಾಗ್ನಿಸಾಕ್ಷಿಕಮ್ ।
ದತ್ತಾಂ ಸಜೀವಕಸ್ವಾಮೀ
ಪರ್ಯಣೈಷ್ಟ ಯಥಾವಿಧಿ ॥೫೩॥

ಟೀ ॥ ಅಥ-ಅನಂತರದಲ್ಲಿ, ಜೀವಕಸ್ವಾಮಿ-ಜೀವಂಧರಸ್ವಾಮಿಯು, ಶ್ರೀದ
ತ್ತೇನ-ಶ್ರೀದತ್ತಶ್ರೇಷ್ಠಿಯಿಂದ, ದತ್ತಾಂ-ಕೊಡಲ್ಪಟ್ಟ, ತಾಂ ಗಂಧರ್ವದತ್ತಾಂ
ಗಂಧರ್ವದತ್ತೆಯನ್ನು, ಅಗ್ನಿಸಾಕ್ಷಿಕಂಯಥಾತಥಾ-ಅಗ್ನಿಸಾಕ್ಷಿಯಾಗಿರೋಣ
ಗೋಹಾಗೆ, ಯಥಾವಿಧಿ- ಶಾಸ್ತ್ರೋಕ್ತ ಪ್ರಕಾರವಾಗಿ, ಪರ್ಯಣೈಷ್ಟ- ವಿವ
ಮಾಡಿಕೊಂಡನು.

ತಾತ್ಪರ್ಯ ॥ ಅನಂತರದಲ್ಲಿ ಆ ಜೀವಂಧರಸ್ವಾಮಿಯು
ದತ್ತಶ್ರೇಷ್ಠಿಯಿಂದ ಕೊಡಲ್ಪಟ್ಟ ಆ ಗಂಧರ್ವದತ್ತೆಯನ್ನು ಅಗ್ನಿಸಾ
ಯಾಗಿರೋಣಹೇಗೋಹಾಗೆಶಾಸ್ತ್ರೋಕ್ತಪ್ರಕಾರವಾಗಿ ವಿವಾಹವ
ಕೊಂಡನು ॥೫೩॥

ಗರುಡವೇಗನೆಂಬ ಖೇಚರೇಂದ್ರನು ತನ್ನ ಪುತ್ರಿಯಾದ ಗಂಧ
ದತ್ತೆಯನ್ನು ರಾಜಪುರೀ ಪಟ್ಟಣವಾಸಿಯಾದ ವ್ಯಾಪಾರಿಯಾಗಿ
ಪಾಂತರವನ್ನೈದಿ ಬರುತ್ತಿರುವ ಶ್ರೀದತ್ತ ಶ್ರೇಷ್ಠಿಯೆಂಬ ಮಿತ್ರನೆ
ನೆ ಕಳುಹಿಸಿ ವೀಣಾವಿದ್ಯೆಯಲ್ಲಿ ಅವಳು ಜಯಿಸಿದ ಜೀವಂಧರಕು
ರನಿಗೆ ಸ್ವಯಂವರ ಮಾಡಿಸಿದ ವೃತ್ತಾಂತ ಮೆಂಬಿಲ್ಲಿಗೆ,

ಮೂರನೆಯ ಲಂಬವು ಮುಗಿದುದು.







ಶ್ರೀ.

॥ ಓಂ ನಮಸ್ಸಿದ್ಧೇಭ್ಯಃ ॥

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ,

# ಚತುರ್ಥೋಲಂಬಃ

ಶ್ಲೋಕ ॥ ಅಥ ಜೀವಂಧರಸ್ವಾಮೀ
ರೇಮೇ ರಾಮಾಸಮನ್ವಿತಃ ।
ಸಂಸಾರೇಪಿ ಯಥಾಯೋಗ್ಯಾ-
ದ್ಭೋಗ್ಯಾನ್ನನು ಸುಖೀ ಜನಃ ॥ ೧ ॥

ಟೀ॥ ಅಥ-ಅನಂತರದಲ್ಲಿ, ಜೀವಂಧರಸ್ವಾಮೀ-ಜೀವಂಧರಸ್ವಾಮಿಯು, ರಾಮಾಸಮನ್ವಿತ(ಸ್ಸನ್)-ಪತ್ನಿಯಾದ ಗಂಧರ್ವದತ್ತೆಯೊಡಗೂಡಿದವನಾಗಿ, ರೇಮೇ-ಕ್ರೀಡಿಸಿದನು., ಸಂಸಾರೇಪಿ-ಸಂಸಾರದಲ್ಲಿಯೂ ಕೂಡ, ಯಥಾಯೋಗ್ಯಾತ್-ಯೋಗ್ಯತೆಗೆ ಅನುರೂಪವಾದ, ಭೋಗ್ಯಾತ್-ಭೋಗಯೋಗ್ಯವಾದ ಸ್ತ್ರೀಯೇ ಮೊದಲಾದ ವಸ್ತುವಿನದೆಸೆಯಿಂದ, ಜನಃ-ಜನವು, ಸುಖೀನನು-ಸುಖಿಸುತ್ತದೆಯಲ್ಲವೆ ?.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಸ್ವಾಮಿಯು ಗಂಧರ್ವದತ್ತೆಯೊಡನೆಕೂಡಿ ಸುಖವನ್ನನುಭವಿಸಿದನು. ಸಂಸಾರದಲ್ಲಿಯೂ ಯೋಗ್ಯವಾದ ಭೋಗಯೋಗ್ಯವಸ್ತುವಿನ ದೆಸೆಯಿಂದಜನಗಳುಸುಖಿಯಲ್ಲವೆ?॥

ಶ್ಲೋಕ॥ ಮಾಧವೋಥ ಜಲಕ್ರೀಡಾಂ
ಪೌರಾಣಾಮುದಪಾದಯತ್ ।
ರಾಗಾಂಧಾನಾಂ ವಸಂತೋ ಹಿ
ಬಂಧುರಗ್ನೇರಿವಾನಿಲಃ ॥ ೨ ॥

ಟೀ॥ಅಥ-ಅನಂತರದಲ್ಲಿ, ಮಾಧವಃ-ವಸಂತಋತುವು, ಪೌರಾಣಾಂ-ಪಟ್ಟಣ

ವಾಸಿಗಳಿಗೆ, ಜಲಕ್ರೀಡಾಂ-ಜಲಕ್ರೀಡೆಯನ್ನು, ಉದಪಾದಯತ್ - ಉಂಟು
ತು., ರಾಗಾಂಧಾನಾಂ-ಸ್ತ್ರೀಮೋಹದಿಂದ ಮುಂದುಗಾಣದವರಿಗೆ, ವಸ
ವಸಂತಋತುವು, ಅಗ್ನೇಃ-ಬೆಂಕಿಗೆ, ಅನಿಲಇವ-ಗಾಳಿಯೋಪಾದಿಯಲ್ಲಿ, ಬಂ
ಸಹಾಯವಲ್ಲವೆ?.

ತಾತ್ಪರ್ಯ ॥ ಅನಂತರದಲ್ಲಿ ವಸಂತಋತುವು ಪಟ್ಟಣವಾಸಿ
ಗಳಿಗೆಜಲಕ್ರೀಡೆಯಲ್ಲಿ ಇಚ್ಛೆಯನ್ನುಂಟುಮಾಡಿತು. ಸ್ತ್ರೀಮೋ
ರಿಗೆ ವಸಂತಋತುವು ‹ ಬೆಂಕಿಗೆ ಗಾಳಿಯಂತೆ, ಸಹಾಯವು. (
ಮವನ್ನು ಹೆಚ್ಚಿಸುವುದರಿಂದ ವಸಂತಋತುವು ಸಹಾಯ ಭ
ವಾದುದೆಂದು ಭಾವವು). ॥ ೨ ॥

ಶ್ಲೋಕ ॥ ಜೀವಂಧರಕುಮಾರೋಪಿ
ಮಿತ್ರೈರ್ದ್ರಷ್ಟುಮಯಾದಮೂಮ್ ।
ನವಾಪಗಾ ಜಲಕ್ರೀಡಾಂ
ಲೋಕೋ ಹ್ಯಭಿನವಪ್ರಿಯಃ ॥ ೩ ॥

ಟೀ॥ ಜೀವಂಧರಕುಮಾರೋಪಿ-ಜೀವಂಧರಕುಮಾರನೂಕೂಡ, ಮಿತ್ರೈ
ಸ್ನೇಹಿತರೊಡನೆ, ಅಮೂಂ-ಈ ಪ್ರಕೃತವಾದ, ನವಾಪಗಾಜಲಕ್ರೀಡಾಂ-ನೂ
ವಾದ ನದಿಯಲ್ಲಿ ಮಾಡತಕ್ಕ ಜಲಕ್ರೀಡೆಯನ್ನು, ದ್ರಷ್ಟುಂ- ನೋಡಲೋಸುಗ
ಯಾತ್-ಹೊರಟನು., ಲೋಕಃ-ಜನಗಳು, ಅಭಿನವಪ್ರಿಯೋಹಿ- ನೂತನವ್ಯಾ
ದಲ್ಲಿ ಪ್ರೀತಿಯುಳ್ಳವರಲ್ಲವೆ?.

ತಾತ್ಪರ್ಯ ॥ ಜೀವಂಧರ ಕುಮಾರನೂಕೂಡ ಸ್ನೇಹಿತರೊ
ಈ ಪ್ರಕೃತವಾದ ಜಲಕ್ರೀಡೆಯನ್ನು ನೋಡಲೋಸುಗ ಹೊರಟ
ಜನಗಳು ನೂತನವಿಷಯದಲ್ಲಿ ಪ್ರೀತಿಪಡುತ್ತಾರಲ್ಲವೆ? ॥ ೩ ॥

ಶ್ಲೋಕ ॥ ಅವಧಿಷುರ್ದ್ವಿಜಾಸ್ತತ್ರ
ಹವಿರ್ದೂಷಿತಭಾಷಣಮ್ ।
ಕ್ರೂರಾಃ ಕಿಂ ಕಿಂ ನ ಕುರ್ವಂತಿ
ಕರ್ಮಧರ್ಮಪರಾಙ್ಮುಖಾಃ ॥ ೪ ॥

ಟೀ ॥ ತತ್ರ-ಆ ನದೀತೀರದಲ್ಲಿ, ದ್ವಿಜಾಃ-ಬ್ರಾಹ್ಮಣರು, ಹವಿರ್ದೂಷಿತಭಾಷಣಂ-ಹವಿಸ್ಸನ್ನು ಮುಟ್ಟಿದ ನಾಯಿಯನ್ನು ಅವಧಿಷುಃ-ಕೊಂದರು., ಕರ್ಮ ಧರ್ಮ ಪರಾಙ್ಮುಖಾಃ-ಧರ್ಮದಲ್ಲಿ ವಿಮುಖರಾದ, ಕ್ರೂರಾಃ-ಕ್ರೂರಜನರು, ಕಿಂಕಿಂ-ಯಾವಯಾವ ಪಾಪಕೃತ್ಯವನ್ನು, ನಕುರ್ವಂತಿ-ಮಾಡುವುದಿಲ್ಲವು.

ತಾತ್ಪರ್ಯ ॥ ಆ ನದೀತೀರದಲ್ಲಿ ಬ್ರಾಹ್ಮಣರು ದೇವತಾರ್ಥವಾಗಿ ಮಾಡಿದ್ದ ಹವಿಸ್ಸನ್ನು ಒಂದು ನಾಯಿಮುಟ್ಟಿತು. ಅದನ್ನು ನೋಡಿದ ಬ್ರಾಹ್ಮಣರು ಕೋಪದಿಂದ ಆ ನಾಯಿಯನ್ನು ಹೊಡೆದು ಕೊಂದುಹಾಕಿದರು. ಧರ್ಮದಲ್ಲಿವಿಮುಖರಾದ ಜನಗಳು ಯಾವಪಾಪಕ್ಕೂ ಅಂಜುವುದಿಲ್ಲವಷ್ಟೆ ? ॥ ೪ ॥

ಶ್ಲೋಕ ॥ ನಿರ್ನಿಮಿತ್ತಮಪಿ ಘ್ನಂತಿ
ಹಂತ ಜಂತೂನಧಾರ್ಮಿಕಾಃ ।
ಕಿಂ ಪುನಃ ಕಾರಣಾಭಾಸೇ
ನೋಚೇದತ್ರ ನಿವಾರಕಃ ॥ ೫ ॥

ಟೀ ಅಧಾರ್ಮಿಕಾಃ-ಧರ್ಮವಿಮುಖರು, ನಿರ್ನಿಮಿತ್ತಮಪಿ-ನಿಷ್ಕಾರಣವಾಗಿಯೇ, ಜಂತೂನ್-ಪ್ರಾಣಿಗಳನ್ನು, ಘ್ನಂತಿ-ಕೊಲ್ಲುತ್ತಾರೆ., ಕಾರಣಾಭಾಸೇಸತಿ-ಭ್ರಾಂತಪುರುಷನಿಂದ ಕಲ್ಪಿತವಾದ ಆಭಾಸಕಾರಣವೂ ಇರುತ್ತಿರಲಾಗಿ, ಅತ್ರ-ಈ ಲೋಕದಲ್ಲಿ, ನಿವಾರಕಃ-ತಡೆಯತಕ್ಕವನು, ನೋಚೇತ್-ಇಲ್ಲದೇಇದ್ದಲ್ಲಿ, ಕಿಂಪುನಃ-ಹೇಳತಕ್ಕದ್ದೇನು?.

ತಾತ್ಪರ್ಯ ॥ ಈಲೋಕದಲ್ಲಿ ಧರ್ಮವಿಮುಖರಾದ ಜನಗಳು ನಿಷ್ಕಾರಣವಾಗಿಯೇ ಪ್ರಾಣಿಗಳನ್ನು ಕೊಲ್ಲುತ್ತಾರೆ. ಹೀಗಿರುವಲ್ಲಿ ಯಾವನೋಬ್ಬ ಭ್ರಾಂತಪುರುಷನಿಂದ ಕಲ್ಪಿಸಲ್ಪಟ್ಟ ಯಜ್ಞವೇಮೊದಲಾದ ಕಾರಣವೂ ಇದ್ದಲ್ಲಿ, ಈ ಪ್ರಾಣಿಹಿಂಸೆಯನ್ನು ತಡೆಯತಕ್ಕ ಧರ್ಮಜ್ಞನಾದ ಪ್ರಭುವೂ ಇಲ್ಲದೇಹೋದರೆ ಏನುಹೇಳತಕ್ಕದ್ದು. ॥೫॥

ಶ್ಲೋಕ ॥ ತದ್ವ್ಯಥಾಂ ವೀಕ್ಷಮಾಣೋಽಯಂ
ಕುಮಾರೋ ವಿಷಸಾದ ಸಃ ।

ತದ್ಧಿ ಕಾರುಣ್ಯಮನ್ಯೇಷಾಂ
ಸ್ವಸ್ಯೇವ ವ್ಯಸನೇ ವ್ಯಥಾ ॥ ೬ ॥

ಟೀ ॥ ತದ್ವ್ಯಥಾಂ-ಆ ನಾಯಿಯ ಹಿಂಸೆಯನ್ನು, ವೀಕ್ಷಮಾಣಃ- ನೋ
ತಲಿರುವ, ಅಯಂ ಸಕುಮಾರಃ-ಆ ಈ ಜೀವಂಧರಕುಮಾರನೂಕೂಡ, ವಿಷ
ದುಃಖಿಸಿದನು., ಅನ್ಯೇಷಾಂ-ಇತರರ, ವ್ಯಸನೇ-ದುಃಖದಲ್ಲಿ, ಸ್ವಸ್ಯೇವ-ತನಗೊ
ದಿಯಲ್ಲಿ, ವ್ಯಥಾ-ದುಃಖವು, ಯತ್-ಯಾವದೊಂದುಂಟೋ, ತತ್-ಅದು, ಕಾ
ಣ್ಯಂಹಿ-ದಯೆಯೆಂಬಗುಣವಲ್ಲವೆ?.

ತಾತ್ಪರ್ಯ॥ಆ ನಾಯಿಯ ಹಿಂಸೆಯನ್ನು ನೋಡಿ ಜೀವಂಧರಸ್ವಾ
ಯು ಬಹಳವಾಗಿ ದುಃಖಪಟ್ಟನು. ಪರರದುಃಖವನ್ನುನೋಡಿ ತನಗೆ
ಸಂಭವಿಸಿದಂತೆ ಭಾವಿಸಿದುಃಖಿಸೋಣವೇಕರುಣೆಯೆಂಬಗುಣವಲ್ಲವೆ?॥

ಶ್ಲೋಕ॥ ಪ್ರತ್ಯುಜ್ಜೀವಯಿತುಂ ಶ್ವಾನಂ
ಯತ್ನೇನಾಪ್ಯಥನಾಶಕತ್ ।
ನ ಹ್ಯಕಾಲಕೃತೋಯತ್ನೋ
ಭೂಯಾನಪಿ ಫಲಪ್ರದಃ ॥ ೭ ॥

ಟೀ ॥ ಅಥ-ಅನಂತರದಲ್ಲಿ, ಶ್ವಾನಂ-ನಾಯಿಯನ್ನು, ಪ್ರತ್ಯುಜ್ಜೀವಯಿತು
ಸಲೋಸುಗ, ಯತ್ನೇನಾಪಿ-ಪ್ರಯತ್ನದಿಂದಲೂಕೂಡ, ನಾಶಕತ್- ಸ
ಗಲಿಲ್ಲವು., ಅಕಾಲಕೃತಃ-ಕಾಲವಲ್ಲದಕಾಲದಲ್ಲಿ ಮಾಡಲ್ಪಟ್ಟ, ಯತ್ನಃ-
ವು, ಭೂಯಾನಪಿ-ಪ್ರಬಲವಾದಾಗ್ಯೂ, ಫಲಪ್ರದೋನಹಿ-ಫಲವನ್ನು
ವುದಿಲ್ಲವಷ್ಟೆ?.

ತಾತ್ಪರ್ಯ ॥ ಜೀವಂಧರಸ್ವಾಮಿಯು ಪ್ರಯತ್ನದಿಂದಲೂಕೂ
ನಾಯಿಯನ್ನು ಬದುಕಿಸಲಶಕ್ತನಾದನು. ಅಕಾಲದಲ್ಲಿಮಾಡಿದ ಪ್ರ
ತ್ನವು ಫಲಿಸುವುದಿಲ್ಲವಷ್ಟೆ? ॥ ೭ ॥

ಶ್ಲೋಕ॥ ಪರಲೋಕಾರ್ಥಮಸ್ಯಾಯಂ
ಪಂಚಮಂತ್ರಮುಪಾದಿಶತ್ ।

ನಿರ್ವಾಣಪಥಪಾನ್ಥಾನಾಂ
ಪಾಥೇಯಂ ತದ್ಧಿ ಕಿಂ ಪರೈಃ ‖ ೪ ‖

ಟೀ‖ಅಯಂ-ಈ ಜೀವಂಧರಸ್ವಾಮಿಯು, ಅಸ್ಯ-ಈ ನಾಯಿಗೆ, ಪರಲೋಕಾರ್ಥಂ-ಪರಲೋಕಸಿದ್ಧಿಗೋಸುಗ, ಪಂಚಮಂತ್ರಂ - ಐದಾದ ಪರಮೇಷ್ಠಿಮಂತ್ರವನ್ನು, ಉಪಾದಿಶತ್-ಉಪದೇಶಿಸಿದನು., ತದ್ಧಿ- ಆ ಪಂಚಪರಮೇಷ್ಠಿಮಂತ್ರವಾದರೋ, ನಿರ್ವಾಣಪಥಪಾಂಥಾನಾಂ-ಮೋಕ್ಷಮಾರ್ಗಪ್ರವಿಷ್ಟರಿಗೆ, ಪಾಥೇಯಂ-ಬುತ್ತಿಯು., ಪರೈಃ-ಉಳಿದವುಗಳಿಂದ, ಕಿಂ-ಏನು ಪ್ರಯೋಜನವು ?.

ತಾತ್ಪರ್ಯ ‖ ಈ ಕರುಣಾಳುವಾದ ಜೀವಂಧರಸ್ವಾಮಿಯು ಈ ನಾಯಿಗೆ ಪರಲೋಕ ಸಿದ್ಧಿಗೋಸುಗ ಮರಣಸಮಯದಲ್ಲಿ ಅರ್ಹಂತರ, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸರ್ವಸಾಧುಗಳೆಂಬ ಪಂಚಪರಮೇಷ್ಠಿಗಳ ಮಂತ್ರಗಳನ್ನುಪದೇಶಿಸಿದನು. ಆ ಪಂಚಮಂತ್ರವಾದರೋ ಮೋಕ್ಷಮಾರ್ಗ ಪ್ರವಿಷ್ಟರಿಗೆ ಬುತ್ತಿಯಾದದ್ದು. (ಅಂದರೆ)ಮೋಕ್ಷವನ್ನೈದಿಸತಕ್ಕ ಮಹಾ ಮಹಿಮೆಯುಳ್ಳದ್ದು. ಉಳಿದವುಗಳಿಂದೇನುಫಲವು ? ‖ ೪ ‖

ಶ್ಲೋಕ ‖ ಯಕ್ಷೇಂದ್ರೋ ಜನಿ ಯಕ್ಷೋಯ-
ಮಹೋ ಮಂತ್ರಸ್ಯಶಕ್ತಿತಃ |
ಕಾಲಾಯಸಂ ಹಿ ಕಲ್ಯಾಣಂ
ಕಲ್ಪತೇ ರಸಯೋಗತಃ ‖ ೯ ‖

ಟೀ ‖ ಯಕ್ಷಃ-ಯಕ್ಷನಾದ, ಅಯಂ-ಇವನು, ಮನ್ತ್ರಸ್ಯ-ಪಂಚಪರಮೇಷ್ಠಿಮಂತ್ರದ, ಶಕ್ತಿತಃ-ಸಾಮರ್ಥ್ಯದದೆಸೆಯಿಂದ, ಯಕ್ಷೇಂದ್ರ(ಸ್ಸನ್)-ಯಕ್ಷರಾಜನಾಗಿ, ಅಜನಿ-ಆದನು., ಅಹೋ-ಆಶ್ಚರ್ಯವು !!, ಕಾಲಾಯಸಂ-ಉಕ್ಕು, ರಸಯೋಗತಃ-ಸಿದ್ಧರಸಸಂಬಂಧದದೆಸೆಯಿಂದ, ಕಲ್ಯಾಣಂಸತ್-ಚಿನ್ನವಾಗಿ, ಕಲ್ಪತೇಹಿ- ಆಗುತ್ತಿಲ್ಲವೆ ?.

ತಾತ್ಪರ್ಯ ‖ ನಾಯಿಯಾಗಿದ್ದ ಇವನು ಪಂಚಮಂತ್ರ ಪ್ರಭಾವದಿಂದ ಯಕ್ಷರಾಜನಾಗಿ ಆದನು. ಇದು ಆಶ್ಚರ್ಯವಲ್ಲವು. ಸಿದ್ಧರಸವನ್ನು ಉಕ್ಕಿಗೆ ಸೇರಿಸಿದರೆ ಚಿನ್ನವಾಗುತ್ತಿಲ್ಲವೆ ? ಅದರಂತೆಯೆ ಮಂತ್ರವೈಭವವೆಂದಭಿಪ್ರಾಯವು. ‖೯‖

ಶ್ಲೋಕ॥ ಮರಣಕ್ಷಣಲಬ್ಧೇನ
ಯೇನ ಶ್ವಾ ದೇವತಾ ಜನಿ ।
ಪಂಚಮಂತ್ರಪದಂ ಜಪ್ಯ-
ಮಿದಂ ಕೇನ ನ ಧೀಮತಾ ॥ ೧೦ ॥

ಟೀ ॥ ಮರಣಕ್ಷಣಲಬ್ಧೇನ-ಮರಣಕಾಲದಲ್ಲಿ, ಪಡೆಯಲ್ಪಟ್ಟ, ಯೇನ-
ವಪಂಚಮಂತ್ರದಿಂದ, ಶ್ವಾ-ನಾಯಿಯು, ದೇವತಾ(ಸ್ಸ)-ದೇವತೆಯಾಗಿ, ಅ
ಆಯಿತೋ, ಇದಂ ಪಂಚಮಂತ್ರಪದಂ-ಈ ಪಂಚಮಂತ್ರವು, ಧೀಮತಾ - ಬ
ಶಾಲಿಯಾದ, ಕೇನ-ಯಾವಪುರುಷನಿಂದ, ನಜಪ್ಯಂ-ಜಪಿಸುವುದಕ್ಕೆ ಯೋಗ್ಯವಲ್ಲ

ತಾತ್ಪರ್ಯ ॥ ಮರಣದವೇಳೆಯಲ್ಲಿ ಪಡೆಯಲ್ಪಟ್ಟ ಈ ಪಂಚಮ-
ತ್ರಪ್ರಭಾವದಿಂದ ನಾಯಿಯಾಗಿದ್ದವನು ದೇವನಾದನೋ ಇಂಥಾ ಪಂ
ಮಂತ್ರವು ಬುದ್ಧಿಶಾಲಿಯಾದ ಯಾವಪುರುಷನಿಂದ ಜಪಿಸಲ್ಕೆ ಯೋಗ
ವಲ್ಲವು? (ಸರ್ವರಿಂದಲೂ ಜಪಿಸಲು ಯೋಗ್ಯವೆಂದರ್ಥವು. ಜಪಿಸ
ವನು ಅಜ್ಞಾನಿಯೆಂದು ಭಾವವು.) ॥೧೦॥

ಶ್ಲೋಕ॥ ಸಕೃತಜ್ಞಚರೋ ದೇವಃ
ಕೃತಜ್ಞತ್ವಾತ್ತದಾಗಮತ್ ।
ಅಂತರ್ಮುಹೂರ್ತತಃ ಪೂರ್ತಿ-
ರ್ದಿವ್ಯಾಯಾ ಹಿ ತನೋರ್ಭವೇತ್ ॥ ೧೧ ॥

ಟೀ ॥ ಕೃತಜ್ಞಚರಃ-ಪೂರ್ವೋಪಕಾರಸ್ಮರಣೆಯುಳ್ಳ, ಸಃ-ಆ ದೇವನ
ಕೃತಜ್ಞತ್ವಾತ್-ಉಪಕಾರವನ್ನು ತಿಳಿದಿರೋಣದರವೆಸೆಯಿಂದ, ತದಾ-ಆಗ, ಆ
ಮತ್-ಬಂದನು,, ಅಂತರ್ಮುಹೂರ್ತತಃ-ಒಂದು ಅಂತರ್ಮುಹೂರ್ತವದೆಸೆಯಿಂ
ದಿವ್ಯಾಯಾಃ-ದೇವಸಂಬಂಧವಾದ, ತನೋಃ-ಶರೀರದ, ಪೂರ್ತಿಃ- ತುಂಬಿಕೊಳ
ವಿಕೆಯು, ಭವೇದ್ಧಿ-ಆದೀತಲ್ಲವೆ ?.

ತಾತ್ಪರ್ಯ ॥ ಪೂರ್ವೋಪಕಾರ ಸ್ಮರಣೆಯುಳ್ಳ ಯಕ್ಷರಾಜನು ಕ
ತಜ್ಞತೆಯೆಂಬ ಗುಣವಿರೋಣದರ ದೆಸೆಯಿಂದ ಆ ಕಾಲದಲ್ಲಿ ಬಂದನ
ಬಂದು. ಅಂತರ್ಮುಹೂರ್ತ ಕಾಲದಲ್ಲಿ ದೇವಶರೀರ ಪರ್ಯಾಪ್ತಿಯುಂ
ಗುತ್ತದಲ್ಲವೆ ? ॥ ೧೧ ॥

ಶ್ಲೋಕ ॥ ಕುಮಾರಮಮರೋ ದೃಷ್ಟ್ವಾ
ಹೃಷ್ಟಸ್ತುಷ್ಟಾವಮೃಷ್ಟವಾಕ್ ।
ಉಪಕಾರಸ್ಮೃತಿಃ ಕಸ್ಯ
ನ ಸ್ಯಾನ್ನೋಚೇದಚೇತನಃ ॥ ೧೨ ॥

ಟೀ॥ ಅಮರಃ-ದೇವನು, ಕುಮಾರಂ-ಜೀವಂಧರಕುಮಾರನನ್ನು, ದೃಷ್ಟ್ವಾ-ನೋಡಿ, ಹೃಷ್ಟ(ಸ್ಸನ್)-ಸಂತುಷ್ಟನಾಗಿ, ಮೃಷ್ಟವಾಕ್ (ಸನ್)-ನಿರ್ದೋಷವಚನವುಳ್ಳವನಾಗಿ, ತುಷ್ಟಾವ-ಸ್ತೋತ್ರವನ್ನುಮಾಡಿದನು., ಅಚೇತನಃ- ಜ್ಞಾನರಹಿತವಸ್ತುವಾಗಿ, ನೋಚೇತ್-ಆಗದೇ ಇದ್ದಲ್ಲಿ, ಉಪಕಾರಸ್ಮೃತಿಃ-ಉಪಕಾರಸ್ಮರಣವು, ಕಸ್ಯ-ಯಾರಿಗೆ, ನಸ್ಯಾತ್-ಆಗಲಾರದು?

ತಾತ್ಪರ್ಯ ॥ ದೇವನು ಜೀವಂಧರಕುಮಾರನನ್ನು ನೋಡಿ ಸಂತುಷ್ಟನಾಗಿ, ನಿರ್ದೋಷವಾದ ವಾಕ್ಯುಳ್ಳವನಾಗಿ ಸ್ತೋತ್ರಮಾಡಿದನು. ಜ್ಞಾನವಸ್ತುವಾದಲ್ಲಿ ಯಾರಿಗೆತಾನೇ ಉಪಕಾರ ಸ್ಮರಣವಾಗಲಾರದು. ಉಪಕಾರಸ್ಮರಣೆಇಲ್ಲದವನು ಅಚೇತನವಸ್ತುವು. (ಪಾಷಾಣಾದಿಪ್ರಾಯವೆಂದು ಭಾವವು.) ॥ ೧೨ ॥

ಶ್ಲೋಕ ॥ ವ್ಯಸ್ಮೇಷ್ಟ ತೇನ ನ ಸ್ವಾಮೀ
ಮಂತ್ರಮಾಹಾತ್ಮ್ಯನಿರ್ಣಯಾತ್ ।
ಮುಕ್ತಿಪ್ರದೇನ ಮಂತ್ರೇಣ
ದೇವತ್ವಂ ನ ಹಿ ದುರ್ಲಭಮ್ ॥ ೧೩ ॥

ಟೀ ॥ ಸ್ವಾಮೀ-ಜೀವಂಧರಸ್ವಾಮಿಯು, ಮಂತ್ರಮಾಹಾತ್ಮ್ಯನಿರ್ಣಯಾತ್ ಮಂತ್ರದಮಹಿಮೆಯನ್ನು ನಿಶ್ಚಯಿಸಿರುವುದರದೆಸೆಯಿಂದ, ತೇನ-ಆ ದೇವತ್ವಪ್ರಾಪ್ತಿಯಿಂದ, ನವ್ಯಸ್ಮೇಷ್ಟ- ಆಶ್ಚರ್ಯಪಡಲಿಲ್ಲವು., ಮುಕ್ತಿಪ್ರದೇನ - ಮೋಕ್ಷವನ್ನು ಕೊಡತಕ್ಕುದಾದ, ಮಂತ್ರೇಣ-ಮಂತ್ರದಿಂದ, ದೇವತ್ವಂ-ದೇವಭಾವವು, ನದುರ್ಲಭಂ ಹಿ-ಸುಲಭವಷ್ಟೆ ?.

ತಾತ್ಪರ್ಯ॥ ಜೀವಂಧರಸ್ವಾಮಿಯುಮಂತ್ರದಮಾಹಾತ್ಮ್ಯವನ್ನುನಿರ್ಣಯಿಸಿರೋಣದರ ದೆಸೆಯಿಂದ ಆ ನಾಯಿಯಾಗಿದ್ದವನು ಮಂತ್ರವೈಭವದಿಂದ ದೇವನಾದುದಕ್ಕಾಗಿ ಆಶ್ಚರ್ಯಪಡಲಿಲ್ಲವು. ಮೋಕ್ಷವನ್ನೀಯತಕ್ಕ

ಕ್ಕ ಮಂತ್ರದಿಂದ ದೇವಶರೀರಪ್ರಾಪ್ತಿಯು ಸುಲಭವಷ್ಟೆ ? ಮಹಾಲಾಭ ಹೇತುವಾದುದರಿಂದ ಅಲ್ಪಲಾಭವು ಆಶ್ಚರ್ಯವಲ್ಲವೆಂದುಭಾವವು. ॥೧೩॥

ಶ್ಲೋಕ॥ ಸ್ಮರ್ತವ್ಯೋಽಸ್ಮಿ ಮಹಾಭಾಗೇ-
ತ್ಯುಕ್ತ್ವಾ ದೇವಸ್ತಿರೋಽಭವತ್ ।
ಪ್ರತಿಕರ್ತುಂ ಕಥಂ ನೇಚ್ಛೇ-
ದುಪಕರ್ತುಸ್ಸಚೇತನಃ ॥ ೧೪ ॥

ಟೀ ॥ ಹೇ ಮಹಾಭಾಗ-ಎಲೈ ಮಹಾಭಾಗ್ಯಶಾಲಿಯೇ!, ಸ್ಮರ್ತವ್ಯ(ಸ್ಸ್ವಃ)-ಸ್ಮರಿಸಲಿಕ್ಕೋಸುಗ ಯೋಗ್ಯನಾಗಿ, ಅಸ್ಮಿ-ಆಗುವೆನು., ಇತಿ-ಹೀಗೆಂದು, ಉಕ್ತ್ವಾ-ಹೇಳಿ, ದೇವಃ-ದೇವನು, ತಿರೋಭವತ್-ಅಂತರ್ಹಿತನಾದನು., ಸಚೇತನಃ- ಜ್ಞಾನವಿಶಿಷ್ಟನಾದವನು, ಉಪಕರ್ತುಃ-ಉಪಕಾರಮಾಡಿದವನಿಗೆ, ಪ್ರತಿಕರ್ತುಂ- ಪ್ರತೀಕಾರಮಾಡಲಿಕ್ಕೋಸುಗ, ಕಥಂ-ಹೇಗೆ, ನೇಚ್ಛೇತ್-ಇಚ್ಛಿಸಲಾರನು.

ತಾತ್ಪರ್ಯ ॥ ಎಲೈ ಮಹಾನುಭಾವನೇ ! ನಿನಗೆ ನನ್ನಿಂದ ಆಗತಕ್ಕ ಕಾರ್ಯವಿದ್ದಲ್ಲಿ ತಕ್ಷಣ ನನ್ನನ್ನು ಸ್ಮರಿಸುವವನಾಗು. ಎಂದು ಹೇಳಿ ಯಕ್ಷನುಹೊರಟುಹೋದನು. ಉಪಕಾರಿಗೆ ಪ್ರತ್ಯುಪಕಾರ ಮಾಡಲಿಚ್ಛಿಸದೇಇದ್ದಲ್ಲಿ ಅಚೇತನಕ್ಕೂ ಚೇತನನಿಗೂ ಏನುಭೇದವು ? ॥ ೧೪ ॥

ಶ್ಲೋಕ॥ ಸಾರಮೇಯಚರೇ ದೇವೇ
ತಮಾಶ್ಲಿಷ್ಯ ಮುಹುರ್ಮುಹುಃ ।
ಆಪೃಚ್ಛ್ಯ ಚ ಗತೇ ತಸ್ಮಿ-
ನ್ನತ್ರ ಪ್ರಸ್ತುತಮುಚ್ಯತೆ ॥ ೧೫ ॥

ಟೀ ॥ ಸಾರಮೇಯಚರೇ-ಪೂರ್ವದಲ್ಲಿ ನಾಯಿಯಾಗಿದ್ದ, ತಸ್ಮಿನ್‌ದೇವೇ-ಆ ದೇವನು, ಮುಹುರ್ಮುಹುಃ-ಬಾರಿಬಾರಿಗೂ, ತಂ-ಜೀವಂಧರಕುಮಾರನನ್ನು, ಆಶ್ಲಿಷ್ಯ-ಆಲಿಂಗಿಸಿ, ಆಪೃಚ್ಛ್ಯ-ಕೇಳಿಕೊಂಡು, ಗತೇಚ(ಸತಿ)-ಹೊರಟುಹೋಗುತ್ತಲೂ ಇರುತಲಿರಲಾಗಿ, ಅತ್ರ-ಈಜೀವಂಧರಕುಮಾರನ ವಿಷಯದಲ್ಲಿ, ಪ್ರಸ್ತುತಂ-ಪ್ರಕೃತಾರ್ಥವು, ಉಚ್ಯತೇ-ಹೇಳಲ್ಪಡುತ್ತಲಿದೆ.

ತಾತ್ಪರ್ಯ ॥ ಪೂರ್ವದಲ್ಲಿ ಶ್ವಾನವಾಗಿದ್ದು ಜೀವಂಧರಮಂತ್ರ ಮಾಹಾತ್ಮ್ಯದಿಂದ ದೇವನಾದ ಆ ಯಕ್ಷನು ಬಾರಿಬಾರಿಗೂ ಆಜೀವಂಧರ

ಕುಮಾರನನ್ನು ಆಲಿಂಗಿಸಿ ಪ್ರಶ್ನೆಮಾಡಿ ಹೊರಟುಹೋಗುತ್ತಿರಲಿಕ್ಕಾಗಿ ಈ ಜೀವಂಧರನ ವಿಷಯದಲ್ಲಿ ಪ್ರಕೃತಾರ್ಥವು ಹೇಳಲ್ಪಡುತ್ತದೆ.॥೧೫॥

ಶ್ಲೋಕ॥ ಚೂರ್ಣಾರ್ಥಂ ಸುರಮಂಜರ್ಯಾ-
ಸ್ಸ್ಪರ್ಧಾಭೂದ್ಗುಣಮಾಲಯಾ ॥
ಏಕಾರ್ಥಸ್ಪೃಹಯಾ ಸ್ಪರ್ಧಾ
ನವರ್ಧೇತಾತ್ರ ಕಸ್ಯ ವಾ ॥ ೧೬॥

ಟೀ॥ ಸುರಮಂಜರ್ಯಾಃ-ಸುರಮಂಜರಿಗೆ, ಚೂರ್ಣಾರ್ಥಂ - ಗಂಧಪುಡಿಯನಿಮಿತ್ತವಾಗಿ, ಗುಣಮಾಲಯಾ-ಗುಣಮಾಲೆಯೊಡನೆ, ಸ್ಪರ್ಧಾ- ನನ್ನ ಚೂರ್ಣವುಶ್ರೇಷ್ಠವು, ನನ್ನ ಚೂರ್ಣವುಶ್ರೇಷ್ಠವು ಎಂಬ ವಿವಾದವು, ಅಭೂತ್-ಉಂಟಾಯಿತು., ಏಕಾರ್ಥಸ್ಪೃಹಯಾ - ಒಂದುವಸ್ತುವಿನಲ್ಲಿ ಇಚ್ಛೆಯಿಂದ, ಸ್ಪರ್ಧಾ-ಅನ್ಯೋನ್ಯವಿವಾದವು, ಕಸ್ಯವಾ-ಯಾರಿಗೆ ತಾನೇ, ಅತ್ರ-ಈ ಲೋಕದಲ್ಲಿ, ನವರ್ಧೇತ-ವೃದ್ಧಿಹೊಂದುವುದಿಲ್ಲವು?.

ತಾತ್ಪರ್ಯ ॥ ಗುಣಮಾಲೆಯೊಡನೆಕೂಡ ಸುರಮಂಜರಿಗೆ ಗಂಧದ ಪುಡಿಯವಿಷಯದಲ್ಲಿ ನನ್ನದು ಹೆಚ್ಚು, ತನ್ನದು ಹೆಚ್ಚು ಎಂಬದಾಗಿ ವಿವಾದವುಂಟಾಯಿತು. ಇಬ್ಬರಿಗೆ ಒಂದು ವಿಷಯದಲ್ಲಿ ಇಚ್ಛೆಯುಂಟಾದರೆ ಪರಸ್ಪರ ಹಠವು ವೃದ್ಧಿಹೊಂದುತ್ತದಲ್ಲವೆ?. (ಪರರ ಉತ್ಕರ್ಷವಂ ಸಹಿಸದೇ ಇರುವುದರಿಂದಲೇ ಪರಸ್ಪರ ಜಯೇಚ್ಛೆಯುಂಟಾಗುವುದೆಂಬ ಭಾವವು.) ॥೧೬॥

ಶ್ಲೋಕ॥ ಮಾಭೂತ್ಪರಾಜಿತಾ ಸ್ನಾತಾ
ನಾದೇಯೇ ವಾರಿಣೀತಿ ವೈ ।
ಸಂಗಿರೇತೇಸ್ಮ ತೇ ಸಖ್ಯೌ
ಮಾತ್ಸರ್ಯಾತ್ಕಿಂ ನ ಪಶ್ಯತಿ ॥ ೧೭ ॥

ಟೀ॥ ಪರಾಜಿತಾ-ಅಪಜಯವನ್ನು ಹೊಂದಿಸಲ್ಪಟ್ಟವಳು, ನಾದೇಯೇ- ನದೀಸಂಬಂಧಿಯಾದ, ವಾರಿಣಿ-ನೀರಿನಲ್ಲಿ, ಸ್ನಾತಾ(ಸತೀ)-ಸ್ನಾನಮಾಡಿದವಳಾಗಿ, ಮಾಭೂತ್-ಆಗಕೂಡದು., ಇತಿವೈ-ಈ ಪ್ರಕಾರವಾಗಿಯಲ್ಲವೆ?, ಸಖ್ಯೌ- ಸ್ನೇಹಿತೆಯರಾದ, ತೇ-ಆ ಸುರಮಂಜರೀ ಗುಣಮಾಲೆಯರೀರ್ವರೂ, ಸಂಗಿರೇತೇಸ್ಮ ಪ್ರತಿ

ಜ್ಞೆಯನ್ನು ಮಾಡಿಕೊಂಡರು., ಮಾತ್ಸರ್ಯಾತ್-ಇತರರ ಶ್ರೇಯಸ್ಸನ್ನು ಸಹಿಸದೇಇ ರುವಿಕೆಯೆಂಬ ದುರ್ಗುಣವದೆಸೆಯಿಂದ, ಕಿಂ- ಯಾವ ಅಕೃತ್ಯವನ್ನು, ನಪಶ್ಯತಿ- ನೋಡುವುದಿಲ್ಲವು?.

ತಾತ್ಪರ್ಯ॥ ಸ್ನೇಹಿತೆಯರಾದ ಆ ಸುರಮಂಜರೀ ಗುಣಮಾಲೆಯ ರಿಬ್ಬರೂ ನಮ್ಮಿಬ್ಬರಲ್ಲಿ ಯಾವಳ ಗಂಧದಪುಡಿಯು ಪರೀಕ್ಷಕರಲ್ಲಿ ಪರೀ ಕ್ಷಿಸಲ್ಪಟ್ಟದ್ದಾಗಲು ನಿಕೃಷ್ಟವಾಗುವುದೋ ಅವಳು ಸೋತವಳಾದಕಾ ರಣ ಆ ಸೋತವಳು ಈ ನದಿಯಲ್ಲಿ ಸ್ನಾನಮಾಡದೇ ಹೊರಟುಹೋಗ ಬೇಕೆಂದು ಪ್ರತಿಜ್ಞೆಯಂಮಾಡಿಕೊಂಡರು. ಲೋಕದಲ್ಲಿ ಮಾತ್ಸರ್ಯವು ಳ್ಳವರು ಯಾವ ಅಪ್ರಿಯಕೆಲಸವಂಮಾಡುವುದಿಲ್ಲವು?. (ಸರ್ವ ಅಪ್ರಿಯ ವನ್ನೂ ಮಾಡುವರೆಂದಭಿಪ್ರಾಯವು.) ॥೧೭॥

ಶ್ಲೋಕ॥ ಕನ್ಯೇ ಪ್ರಾಹಿಣು ತಾಂ ಪಶ್ಚಾ-
ಚ್ಚೇಟ್ಯೌ ಸ್ವೇ ನಿಕಟೇ ಸತಾಮ್ ।
ಕುತ್ಸಿತಂಕರ್ಮ ಕಿಂ ಕಿಂ ವಾ
ಮತ್ಸರಿಭ್ಯೋ ನ ರೋಚತೇ ॥ ೧೮ ॥

ಟೀ॥ ಕನ್ಯೆ - ಸುರಮಂಜರೀ ಗುಣಮಾಲೆಯರಾದಾಕನ್ನಿಕೆಗಳೀರ್ವರೂ, ಪ ಶ್ಚಾತ್-ಅನಂತರದಲ್ಲಿ, ಸ್ವೇ-ತಮ್ಮತಮ್ಮ, ಚೇಟ್ಯೌ-ಇಬ್ಬರುಪರಿಚಾರಿಕೆಯರನ್ನು, ಸತಾಂ-ಗುಣೈಕಪಕ್ಷಪಾತಿಗಳಾದ ಸತ್ಪುರುಷರ, ನಿಕಟೇ-ಸಮೀಪದಲ್ಲಿ, ಪ್ರಾಹಿಣು ತಾಂ-ಕಳುಹಿಸಿದರು., ಕುತ್ಸಿತಂ-ಕೆಟ್ಟದ್ದಾದ, ಕಿಂಕಿಂವಾಕರ್ಮ-ಯಾವಯಾವ ಕೆಲ ಸವಾದರೋ, ಮತ್ಸರಿಭ್ಯಃ-ಇತರರ ಶ್ರೇಯಸ್ಸಿನಲ್ಲಿ ದ್ವೇಷಪಡುವ ಜನಗಳಿಗೋಸು ಗ, ನರೋಚತೇ-ರುಚಿಸುವುದಿಲ್ಲವು.

ತಾತ್ಪರ್ಯ ॥ ಈ ಸುರಮಂಜರೀ ಗುಣಮಾಲೆಯರಾದ ಕನ್ನಿಕೆಗ ಳೀರ್ವರೂ ತಮ್ಮತಮ್ಮಪರಿಚಾರಿಕೆಯರಿಬ್ಬರನ್ನು ಗುಣೈಕಪಕ್ಷಪಾತಿಗಳಾ ದ ಸತ್ಪುರುಷರ ಸಮೀಪವನ್ನು ಕುರಿತು ಗಂಧದಪುಡಿಯ ಗುಣದೋಷ ಪರೀಕ್ಷಾರ್ಥವಾಗಿ ಕಳುಹಿಸಿದರು. ಲೋಕದಲ್ಲಿ ಇತರರ ಶ್ರೇಯಸ್ಸನ್ನು ನೋಡಿ ಸಹಿಸಲಾರದಜನಗಳಿಗೆ ಯಾವಯಾವ ನೀಚಕೃತ್ಯಗಳು ಇಷ್ಟ

ವಾಗುವುದಿಲ್ಲವು?. (ಅಂದರೆ.-ಸಮಸ್ತ ಅಯೋಗ್ಯ ಕೆಲಸಗಳೂ ಇಷ್ಟ ವಾಗಿಯೇ ತೋರುವುದೆಂದು ಅಭಿಪ್ರಾಯವು.) ॥೧೮॥

ಶ್ಲೋಕ॥ ಅಸ್ಥಿಷಾತಾಮಥಾಗತ್ಯ
ಚೇಟ್ಯೌ ಜೀವಕಕೋವಿದೇ ।
ಅನವದ್ಯಾಸತೀ ವಿದ್ಯಾ
ಲೋಕೇ ಕಿಂ ನ ಪ್ರಕಾಶತೇ ॥ ೧೯ ॥

ಟೀ ॥ ಚೇಟ್ಯೌ-ಈ ಇಬ್ಬರು ಪರಿಚಾರಿಕೆಯರು, ಅಥ-ಅನಂತರದಲ್ಲಿ, ಜೀವ ಕಕೋವಿದೇ- ಜೀವಂಧರಸ್ವಾಮಿಯೆಂಬ ಪಂಡಿತನಲ್ಲಿ, ಆಗತ್ಯ-ಬಂದು, ಅಸ್ಥಿಷಾ ತಾಂ-ನಿಂತರು., ಅನವದ್ಯಾ-ನಿರ್ದೋಷವಾದ, ಸತೀ-ಶ್ರೇಷ್ಠವಾದ, ವಿದ್ಯಾ- ವಿದ್ಯೆ ಯು, ಲೋಕೇ-ಲೋಕದಲ್ಲಿ, ನಪ್ರಕಾಶತೇಕಿಂ-ಪ್ರಕಾಶಿಸುವುದಿಲ್ಲವೇ ಏನು ?.

ತಾತ್ಪರ್ಯ ॥ ಈ ಕಳುಹಿಸಲ್ಪಟ್ಟ ಇಬ್ಬರು ಪರಿಚಾರಿಕೆಯರೂ ಮಹಾ ಪಂಡಿತನಾದ ಜೀವಂಧರ ಕುಮಾರನ ಸಮೀಪದಲ್ಲಿಬಂದು ನಿಂತು ಕೊಂಡರು. ನಿರ್ದೋಷವಾಗಿರುವ ಶ್ರೇಷ್ಠವಾದ ವಿದ್ಯೆಯು ಲೋಕ ದಲ್ಲಿ ಪ್ರಕಾಶವನ್ನು ಹೊಂದಲೇಹೊಂದುವುದಲ್ಲವೆ? ( ಜೀವಂಧರಕುಮಾ ರನು ಸಕಲಕಲಾ ಪಂಡಿತನಾದುದರಿಂದ ಇವನ ವಿದ್ಯೆಯು ಪ್ರಕಾಶಿಸಲು ಯೋಗ್ಯವಾದುದೆಂದಭಿಪ್ರಾಯವು.॥೧೯॥

ಶ್ಲೋಕ॥ ಗುಣವದ್ಗುಣಮಾಲಾಯಾ-
ಶ್ಚೂರ್ಣಂ ನಿರ್ವರ್ಣ್ಯ ಸೋಭ್ಯಧಾತ್ ।
ಪಾಂಡಿತ್ಯಂ ಹಿ ಪದಾರ್ಥಾನಾಂ
ಗುಣದೋಷ ವಿನಿಶ್ಚಯಃ ॥ ೨೦ ॥

ಟೀ॥ ಸಃ-ಆ ಜೀವಂಧರಕುಮಾರನು, ಗುಣಮಾಲಾಯಾಃ-ಗುಣಮಾಲೆಯ, ಚೂರ್ಣಂ-ಚೂರ್ಣವನ್ನು, ನಿರ್ವರ್ಣ್ಯ-ಚೆನ್ನಾಗಿ ನೋಡಿ, ಗುಣವತ್(ಸತ್)-ಪ್ರ ಶಸ್ತಗುಣವುಳ್ಳದ್ದೆಂದು, ಅಭ್ಯಧಾತ್-ಹೇಳಿದನು., ಪದಾರ್ಥಾನಾಂ- ಪದಾರ್ಥಗ ಳ, ಗುಣದೋಷವಿನಿಶ್ಚಯಃ—ಗುಣ-ಗುಣಗಳೂ, ದೋಷ-ದೋಷಗಳೂಇವುಗಳ, ವಿನಿಶ್ಚಯಃ-ನಿರ್ಣಯವು, ಪಾಂಡಿತ್ಯಂಹಿ-ಪಾಂಡಿತ್ಯವೆನಿಸುವುದಲ್ಲವೆ?.

ತಾತ್ಪರ್ಯ॥ ಆ ಜೀವಂಧರ ಸ್ವಾಮಿಯು ಸುರಮಂಜರೀ ಗುಣಮಾಲೆಯರಿಬ್ಬರ ಚೂರ್ಣಗಳನ್ನೂ ಚೆನ್ನಾಗಿ ನೋಡಿ, ಗುಣಮಾಲೆಯ ಚೂರ್ಣವು ಉತ್ಕೃಷ್ಟವೆಂದು ಹೇಳಿದನು. ಪದಾರ್ಥಗಳ ಗುಣವನ್ನೂ, ದೋಷವನ್ನೂ ಪರೀಕ್ಷಿಸಿ ನಿರ್ಣಯಿಸೋಣವು ಪಾಂಡಿತ್ಯವೆನಿಸುವುದಲ್ಲವೆ?. ॥ ೨೦ ॥

ಶ್ಲೋಕ॥ ಚೇಟೀ ತು ಸುರಮಂಜರ್ಯಾ-
ಸ್ತಚ್ಛ್ರುತ್ವಾ ರೋಷಣಾಬ್ರವೀತ್ ।
ಅನ್ಯೈರಪ್ಯುಕ್ತಮುಕ್ತಂ ತ್ವೈಃ
ಕಿಮಧ್ಯೈಷ್ಟ ಭವಾನಿತಿ ॥ ೨೧ ॥

ಟೀ ॥ ಸುರಮಂಜರ್ಯಾಃ-ಸುರಮಂಜರಿಯು, ಜೇಟೀತು- ಪರಿಚಾರಕಳಾವರೋ, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ರೋಷಣಾ(ಸತೀ)-ಕೋಪಗೊಂಡವಳಾಗಿ, ತ್ವಯಾ-ನಿನ್ನಿಂದ, ಉಕ್ತಂ-ಹೇಳಲ್ಪಟ್ಟದ್ದು, ತ್ವೈರನ್ಯೈರಪಿ-ಆ ಇತರಜನಗಳಿಂದಲೂಕೂಡ, ಉಕ್ತಂ- ಹೇಳಲ್ಪಟ್ಟಿತು., ಭವಾಙ್-ತಾವು, ಕಿಂ-ಏನನ್ನು, ಅಧ್ಯೈಷ್ಟ-ಓದಿರುವಿರಿ., ಇತಿ-ಹೀಗೆಂದು, ಅಬ್ರವೀತ್-ಹೇಳಿದಳು.
( ಭವಾಙ್-ನೀವು, ತ್ವೈಃ-ಆ ಇತರರೊಡನೆ, ಅಧ್ಯೈಷ್ಟಕಿಂ-ಸಹಪಾಠಿಯೋ ಏನು?. )

ತಾತ್ಪರ್ಯ ॥ ಸುರಮಂಜರಿಯ ಪರಿಚಾರಿಕೆಯು ಆ ಮಾತನ್ನುಕೇಳಿ ಕೋಪಗೊಂಡವಳಾಗಿ ಇತರ ಜನಗಳು ಹೇಳಿದಹಾಗೆಯೇ ನೀವೂಹೇಳಿದಿರಿ. ಇದರಿಂದ ನೀವು ವಿಶೇಷಜ್ಞರೆಂಬದು ಹೇಗೆ? ಮೂಢರು ನಂಬುವಂತೆ ವಸ್ತುಸ್ಥಿತಿಯಂ ಪ್ರತ್ಯಕ್ಷವಾಗಿ ತೋರಿಸಿದರಲ್ಲವೆ? ನೀವು ಪಂಡಿತರು, ವಿಶೇಷಜ್ಞರೆಂದು ನಾವು ತಿಳಿಯುವೆವು. ಎಲ್ಲರೂ ಹೇಳಿದಂತೆಯೇ ತಾವೂ ಹೇಳಿದರೆ ಹೇಗೆ ನಂಬತಕ್ಕದ್ದೆಂದು ಆಕ್ಷೇಪ ಗರ್ಭಿತವಾಗಿ ಹೇಳಿದಳು. ॥ ೨೧ ॥

ಶ್ಲೋಕ॥ ಚೂರ್ಣಯೋರಳಭಿಸ್ಸ್ವಾಮಿ
ಗುಣದೋಷಾವಸಾಧಯತ್ ।
ನಿರ್ವಿವಾದನಿಧಿರ್ನೋಚೇ-
ನ್ನೈಪುಣ್ಯಂನಾಮ ಕಿಂ ಭವೇತ್ ॥ ೨೨ ॥

ಟೀ ॥ ಸ್ವಾಮೀ-ಜೀವಂಧರಸ್ವಾಮಿಯು, ಚೂರ್ಣಯೋಃ-ಈ ಇಬ್ಬರಗಂಧ ದಪುಡಿಗಳಲ್ಲಿಯೂ, ಅಳಿಭಿಃ-ಭ್ರಮರಗಳಿಂದ, ಗುಣದೋಷೌ- ಗುಣದೋಷಗಳ ನ್ನು, ಅಸಾಧಯತ್-ಸಾಧಿಸಿದನು., ನಿರ್ವಿವಾದವಿಧಿಃ—ನಿರ್ವಿವಾದ-ಕಲಹವನ್ನಡಗಿಸ ತಕ್ಕ, ವಿಧಿಃ-ಕೆಲಸವು, ನೋಚೇತ್-ಇಲ್ಲದೇಹೋದರೆ, ನೈಪುಣ್ಯಂನಾಮ-ಸಾಮ ರ್ಥ್ಯವಾದರೋ, ಭವೇತ್ಕಿಂ-ಉಂಟಾದೀತೇ ಏನು?.

ತಾತ್ಪರ್ಯ ॥ ಜೀವಂಧರಸ್ವಾಮಿಯು ಈ ಸುರಮಂಜರೀ ಗುಣ ಮಾಲೆಯರಿಬ್ಬರ ಚೂರ್ಣಗಳಲ್ಲಿ ಯಾವ ಚೂರ್ಣದ ಪರಿಮಳಕ್ಕೆದುಂ ಬಿಗಳು ಮುತ್ತಿಕೊಂಡವೋ ಅದು ಉತ್ಕೃಷ್ಟವೆಂಬದನ್ನು ಅವರಪ್ರ ತ್ಯಕ್ಷವಾಗಿ ಪರೀಕ್ಷೆಮಾಡಿ ತೋರಿಸಿದನು. ಲೋಕದಲ್ಲಿ ಇಬ್ಬರಿಗೆವಿವಾ ದಉಂಟಾದರೆ ಆ ವಿವಾದವನ್ನಡಗಿಸತಕ್ಕ ಕೆಲಸವಂಮಾಡಿ ತೋರಿಸದೆ ಇದ್ದಲ್ಲಿ ಅವನು ಸಮರ್ಥನೆಂಬ ಹೆಸರು ಹೇಗೆವುಂಟಾದೀತು ? ಆದುದರಿಂ ದ ಜೀವಂಧರಸ್ವಾಮಿಯು ವಿವಾದಸಮಾಧಾನ ಹೇತುವಾದ ಕೆಲಸದಿಂದ ಲೇ ಅವಳನ್ನೊಪ್ಪಿಸಿದನೆಂಬಭಿಪ್ರಾಯವು. ( ಇದು ಮಹಾಬುದ್ಧಿ ಶಾಲಿಗಳ ಉಪಾಯವು. ಎಷ್ಟುಚತುರವಾದ ಮಾತುಗಳಿಂದಲೂ ಒಪ್ಪದವರುಕೂಡ ಪ್ರತ್ಯಕ್ಷವಾಗಿ ಹೇಳಿದಹಾಗೆ ತೋರಿಸಿದರೆ ಒಪ್ಪು ವರಷ್ಟೆ?) ॥ ೨೨ ॥

ಶ್ಲೋಕ ॥ ಅಕಾಲಿಕತಯಾ ದುಷ್ಟಂ
ಚೂರ್ಣಮನ್ಯದವರ್ಣಯತ್ ।
ನಹ್ಯಕಾಲಕೃತಂಕರ್ಮ
ಕಾರ್ಯ ನಿಷ್ಪಾದನಕ್ಷಮಮ್ ॥ ೨೩ ॥

ಟೀ ॥ ಅನ್ಯತ್-ಬೇರೆಯಾದ, ಚೂರ್ಣಂ-ಸುರಮಂಜರಿಯ ಚೂರ್ಣವನ್ನು, ಅಕಾಲಿಕತಯಾ-ಕಾಲವಲ್ಲದಕಾಲದಲ್ಲಿ ಮಾಡಲ್ಪಟ್ಟಿರುವುದರಿಂದ, ದುಷ್ಟಂ(ಸತ್)- ದೋಷವಿಶಿಷ್ಟವನ್ನಾಗಿ, ಅವರ್ಣಯತ್-ಹೇಳಿದನು., ಅಕಾಲಕೃತಂ- ಕಾಲವಲ್ಲದ ಕಾಲದಲ್ಲಿಮಾಡಲ್ಪಟ್ಟ, ಕರ್ಮ-ಕೆಲಸವು, ಕಾರ್ಯನಿಷ್ಪಾದನಕ್ಷಮಂ(ಸತ್)—ಕಾರ್ಯ-ಪ್ರ ಯೋಜನದ, ನಿಷ್ಪಾದನ-ಉಂಟುಮಾಡೋಣದಲ್ಲಿ, ಕ್ಷಮಂಸತ್ - ಸಮರ್ಥವಾದು ದಾಗಿ, ನಹಿ-ಆಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ಜೀವಂಧರಸ್ವಾಮಿಯು ಸುರಮಂಜರಿಯ ಚೂರ್ಣ

ವನ್ನು ಅಕಾಲದವಸ್ತುಗಳಂ ಮಾಡಲ್ಪಟ್ಟರೋಣದರಿಂದ ದೋಷದಿಂ ದೊಡಗೂಡಿದುದೆಂಬದಾಗಿ ಹೇಳಿದನು. ಕಾಲವಲ್ಲದ ಕಾಲದಲ್ಲಿ ಮಾಡ ಲ್ಪಟ್ಟ ಕೆಲಸವು ಪ್ರಯೋಜನಕರವಾಗುವುದಿಲ್ಲವಷ್ಟೆ? ॥ ೨೭॥

ಶ್ಲೋಕ॥ ಕುಮಾರಾದಥ ಕುಟ್ಟನ್ಯೌ
ನುತ್ವಾ ನತ್ವಾ ಚ ನಿರ್ಗತೇ ।
ನಿರ್ವಿವಾದಂ ವಿತನ್ವಾನಾ
ನ ಸ್ತುತ್ಯಾಃ ಕೇ ನ ಭೂತಲೇ ॥ ೨೮ ॥

ಟೀ ॥ ಅಥ-ಅನಂತರವಲ್ಲಿ, ಕುಟ್ಟನ್ಯೌ-ದೂತಿಯರಿಬ್ಬರೂ, ನುತ್ವಾ-ಸ್ತೋತ್ರಮಾಡಿಯೂ, ನತ್ವಾಚ-ನಮಸ್ಕರಿಸಿಯೂ, ಕುಮಾರಾತ್- ಜೀವಂಧರಕುಮಾರನದೆಸೆಯಿಂದ, ನಿರ್ಗತೇ-ಹೊರಟುಹೋದರು., ನಿರ್ವಿವಾದಂ- ವಿವಾದ ಪರಿಹಾರವನ್ನು, ವಿತನ್ವಾನಾಃ-ಉಂಟುಮಾಡುತಲಿರುವ, ಕೇ-ಯಾರು, ಭೂತಲೇ- ಭೂಮಿಯಲ್ಲಿ, ನಸ್ತುತ್ಯಾಃ-ಸ್ತೋತ್ರಕ್ಕೆ ಯೋಗ್ಯರಾಗುವುದಿಲ್ಲವು?

ತಾತ್ಪರ್ಯ ॥ ಅನಂತರದಲ್ಲಿ ಸುರಮಂಜರೀ ಗುಣಮಾಲೆಯರಿಬ್ಬರ ದಾದಿಯರು ಜೀವಂಧರಸ್ವಾಮಿಯನ್ನು ನಮಸ್ಕರಿಸಿ ಸ್ತೋತ್ರಮಾಡಿ ಹೊರಟುಹೋದರು. ಲೋಕದಲ್ಲಿ ಕಲಹ ಶಮನವನ್ನುಂಟುಮಾಡುವರು ಯಾರಾದಾಗ್ಯೂ ಸ್ತೋತ್ರಾರ್ಹರಾಗಿಯೇ ಆಗುತ್ತಾರೆಯಷ್ಟೆ; (ವಿವಾದವಂ ಪರಿಹರಿಸುವವರು ನಮಸ್ಕಾರಕ್ಕೂ, ಸ್ತೋತ್ರಕ್ಕೂ ಯೋಗ್ಯರೆಂದಭಿಪ್ರಾಯವು. ಸತ್ಪುರುಷರ ಬುದ್ಧಿಯು ಕಲಹಸಮಾಧಾನದಲ್ಲಿ ಪ್ರವರ್ತಿಸುವುದು.) ॥೨೮॥

ಶ್ಲೋಕ॥ ತಚ್ಚಾಸೀತ್ಸುರಮಂಜರ್ಯಾ
ವಿರಾಗಸ್ಯೈವ ಕಾರಣಮ್ ।
ನಹ್ಯತ್ರ ರೋಚತೇ ನ್ಯಾಯ್ಯ-
ವಿವಾಸ್ಯಾರ್ದೂಷಿತಚೇತಸೇ ॥ ೨೯ ॥

ಟೀ ॥ ತಚ್ಚ- ಆ ಜೀವಂಧರಸ್ವಾಮಿಯಿಂದ ಹೇಳಲ್ಪಟ್ಟ ವಾಸ್ತವವಾದವಾತೊಕಕೂಡ, ಸುರಮಂಜರ್ಯಾಃ-ಸುರಮಂಜರಿಗೆ, ವಿರಾಗಸ್ಯೈವ-ದ್ವೇಷಕ್ಕೇನೇ, ಕಾರ

ಣಾ(ಸತ್),-ಕಾರಣವಾದಂಥಾದ್ದಾಗಿ, ಆಸೀತ್-ಆಯಿತು., ಅತ್ರ-ಈ ಲೋಕದಲ್ಲಿ, ನ್ಯಾಯ್ಯಂ-ನ್ಯಾಯದಿಂದೊಡಗೂಡಿದ ವಾಕ್ಯವು, ಈರ್ಷ್ಯಾದೂಷಿತಚೇತಸೇ - ಈರ್ಷ್ಯಾ-ಅಸೂಯೆಯಿಂದ, ದೂಷಿತ-ದೂಷಿಸಲ್ಪಟ್ಟ, ಚೇತಸೇ- ಮನಸ್ಸುಳ್ಳಜನಗಳಿಗೋಸುಗ, ನರೋಚತೇಹಿ-ಇಷ್ಟವಾಗುವದಿಲ್ಲವಷ್ಟೆ?.

ತಾತ್ಪರ್ಯ ॥ ಆ ಜೀವಂಧರಸ್ವಾಮಿಯು ಹೇಳಿದನ್ಯಾಯ ಯುಕ್ತವಾದ ವಾಕ್ಯವುಕೂಡ ಸುರಮಂಜರಿಗೆ ದ್ವೇಷಕ್ಕೇನೇ ಕಾರಣವಾಯಿತೇಹೊರತು ಪ್ರೀತಿಸುವುದಕ್ಕೆ ಕಾರಣವಾಗಲಿಲ್ಲವು. ಈ ಲೋಕದಲ್ಲಿ ನ್ಯಾಯಯುಕ್ತವಾದ ಮಾತು ಮತ್ತೊಬ್ಬರಿಗೆ ಒಳ್ಳೇದಾದರೆ ಸಹಿಸದೆ ಇರುವ ಜನಗಳ ಮನಸ್ಸಿಗೆ ರುಚಿಸುವುದಿಲ್ಲವಷ್ಟೆ? (ನ್ಯಾಯವಚನಕ್ಕೆ ವಶ್ಯನಾಗುವ ಪುರುಷನು ಅಸೂಯಾರಹಿತನೆಂದಭಿಪ್ರಾಯವು. ॥೨೫॥

ಶ್ಲೋಕ॥ ಪ್ರಾರ್ಥಿತಾಪ್ಯಕೃತಸ್ನಾನಾ
ಸತ್ವರಂ ಸುರಮಂಜರೀ ।
ನ್ಯವರ್ತಿಷ್ಟ ಮಹಾರೋಷಾ-
ದೀರ್ಷ್ಯಾ ಹಿ ಸ್ತ್ರೀಸಮುದ್ಭವಾ ॥ ೨೬ ॥

ಟೀ ॥ ಸುರಮಂಜರೀ-ಸುರಮಂಜರಿಯು, ಪ್ರಾರ್ಥಿತಾಪಿ- ಪ್ರಾರ್ಥಿಸಲ್ಪಟ್ಟವಳಾದಾಗ್ಯೂ, ಅಕೃತಸ್ನಾನಾ(ಸತೀ)–ಅಕೃತ-ಮಾಡಲ್ಪಡದೇಇರುವ, ಸ್ನಾನಾ(ಸತೀ)-ಸ್ನಾನವುಳ್ಳವಳಾಗಿ, ಸತ್ವರಂ(ಯಥಾತಥಾ)- ತ್ವರೆಯಿಂದೊಡಗೂಡಿರೋಣಹೇಗೊಹಾಗೆ, ಮಹಾರೋಷಾತ್- ಅತ್ಯಂತಕೋಪದದೆಸೆಯಿಂದ, ನ್ಯವರ್ತಿಷ್ಟ-ಹಿಂದಿರಿಗಿಹೊರಟುಹೋದಳು., ಈರ್ಷ್ಯಾ-ಅಸೂಯೆಯು, ಸ್ತ್ರೀಸಮುದ್ಭವಾಹಿ-ಹೆಂಗಸುಜಾತಿಯಲ್ಲಿ ಉತ್ಪನ್ನವಾದುದಲ್ಲವೆ?.

ತಾತ್ಪರ್ಯ ॥ ಸುರಮಂಜರಿಯು ಬಹಳವಾಗಿ ಪ್ರಾರ್ಥಿಸಲ್ಪಟ್ಟವಳಾದಾಗ್ಯೂ ಅತ್ಯಂತ ರೋಷದಿಂದ ಬಹು ತ್ವರೆಯುಳ್ಳವಳಾಗಿ ಹಿಂದಿರಿಗಿ ಮನೆಗೆ ಹೊರಟುಹೋದಳು. ಅಸೂಯೆಯೆಂಬ ದುರ್ಗುಣವು ಸ್ತ್ರೀಜಾತಿಯಲ್ಲಿಯೇ ಹುಟ್ಟಿದುದಲ್ಲವೆ? (ಹೆಂಗಸಾಗಿಹುಟ್ಟಿ ಅಸೂಯೆಯಿಲ್ಲದೇ ಇರುವದು ಬಹಳ ಆಶ್ಚರ್ಯವೆಂದಭಿಪ್ರಾಯವು) ॥ ೨೬ ॥

ಶ್ಲೋಕ॥ ಜೀವಕಾದಪರಾನ್ನೇಕ್ಷೇ
ಪುರುಷಾನಿತಿ ಸಂಪಿದಾ ।

ಕನ್ಯಾಗೃಹಮಥ ಪ್ರಾಪ-
ನ್ನ ಹಿ ಭೇದ್ಯಂ ಮನಸ್ಸ್ತ್ರಿಯಾಃ ॥ ೨೭ ॥

ಟೀ ॥ ಅಥ-ಅನಂತರದಲ್ಲಿ, ಕನ್ಯಾ-ಕನ್ನಿಕೆಯಾದ ಸುರಮಂಜರಿಯು, ಜೀವಕಾತ್-ಜೀವಂಧರಸ್ವಾಮಿಗಿಂತಲೂ, ಅಪರಾನ್-ಬೇರೆಯಾದ, ಪುರುಷಾನ್- ಪುರುಷರನ್ನು, ನೇಕ್ಷೇ-ನೋಡುವುದಿಲ್ಲವು., ಇತಿ-ಹೀಗೆಂಬ, ಸಂವಿದಾ-ಪ್ರತಿಜ್ಞೆಯಿಂದ, ಗೃಹಂ- ಮನೆಯನ್ನು, (ಕನ್ಯಾಗೃಹಂ)-ಪುರುಷಪ್ರವೇಶಾರ್ಹವಲ್ಲದಕನ್ಯಾಂತಃಪುರವನ್ನು,ಪ್ರಾಪತ್-ಹೊಂದಿದಳು., ಸ್ತ್ರಿಯಾಃ-ಹೆಂಗಸಿನ, ಮನಃ-ಮನಸ್ಸು, ನಭೇದ್ಯಂಹಿ-ಭೇದಿಸಲಶಕ್ಯವಷ್ಟೆ?.

ತಾತ್ಪರ್ಯ ॥ ನದೀಸ್ನಾನಪಂಮಾಡದೆ ಸುರಮಂಜರಿಯು ಮನೆಗೆ ಹೋಗುವಕಾಲದಲ್ಲಿ ನಾನುಜೀವಂಧರಸ್ವಾಮಿಯು ಹೊರತು ಇತರಪುರುಷರನ್ನು ನೋಡುವದಿಲ್ಲವೆಂದು ಪ್ರತಿಜ್ಞೆಯಂಪಾಡಿ ಹೊರಟುಹೋಗಿ ಆನಂತರ ಪುರುಷಪ್ರವೇಶಾರ್ಹವಲ್ಲದ ಕನ್ಯಾಂತಃಪುರವನ್ನು ಸೇರಿದಳು. ಹೆಂಗಸರಮನಸ್ಸು ಬಹುಕಠಿನವು. ಅತ್ಯಂತ ಮೂರ್ಖತೆಯುಳ್ಳದ್ದು. ಆದುದರಿಂದಲೇ ಭೇದಿಸಲಸಾಧ್ಯವಲ್ಲವೆ? ॥ ೨೭ ॥

ಶ್ಲೋಕ॥ ಸಖ್ಯಾಂ ತಥೈವ ಯಾತಾಯಾಂ
ಗುಣಮಾಲಾ ಶುಶೋಚತಾಮ್ ।
ನಹ್ಯನಿಷ್ಟೇಷ್ಟಸಂಯೋಗ
ವಿಯೋಗಾಭಮರುಂತುದಮ್ ॥ ೨೮ ॥

ಟೀ॥ ಸಖ್ಯಾಂ-ಸಖಿಯಾದ ಸುರಮಂಜರಿಯು, ತಥೈವ-ಸ್ನಾನಮಾಡದೆಯೇ, ಯಾತಾಯಾಂ(ಸತ್ಯಾಂ)-ಹೊರಟುಹೋಗುತ್ತಿರಲಾಗಿ, ಗುಣಮಾಲಾ-ಗುಣಮಾಲೆಯು, ತಾಂ-ಆ ಸುರಮಂಜರಿಯನ್ನುದ್ದೇಶಿಸಿ, ಶುಶೋಚ-ದುಃಖಿಸಿದಳು., ಅನಿಷ್ಟೇಷ್ಟಸಂಯೋಗವಿಯೋಗಾಭಂ—ಅನಿಷ್ಟ-ಅಪ್ರಿಯವೂ, ಇಷ್ಟ - ಪ್ರಿಯವೂಆದವುಗಳ, ಸಂಯೋಗ-ಸೇರೋಣವೇನು, ವಿಯೋಗ-ಅಗಲಿಕೆಯೇನುಇವುಗಳಿಗೆ, ಆಭಂ-ಸಮಾನವಾದ, ಅರುಂತುದಂ-ಮರ್ಮಸ್ಪರ್ಶಿಯಾದ ವೇದನೆಯು, ನಹಿ-ಇಲ್ಲವಷ್ಟೆ?.

ತಾತ್ಪರ್ಯ ॥ ಸಖಿಯಾದ ಸುರಮಂಜರಿಯು ಅವಮಾನಪ್ರಯುಕ್ತವಾದ ಮಹಾರೋಷದಿಂದ ಸ್ನಾನಮಾಡದೇ ಹಾಗೆಯೇ ಹೊರಟು

ಹೋಗುತ್ತಿರಲಾಗಿ ಗುಣಮಾಲೆಯು ಆ ಸುರಮಂಜರಿಯನ್ನು ಕುರಿತು ವ್ಯಸನಪಟ್ಟಳು. ಲೋಕದಲ್ಲಿ ಪ್ರಾಣಿಗಳಿಗೆ ಕೆಟ್ಟದ್ದು ಬಂದು ಸೇರುವುದೂ, ಪ್ರಿಯವಾದ ವಸ್ತುವು ಅಗಲಿಹೋಗುವುದೂ ಆದ ಇದಕ್ಕಿಂತಲೂ ಮರ್ಮಸ್ಪರ್ಶಿಯಾದ ವೇದನೆಯು ಮತ್ತೊಂದಿಲ್ಲವಷ್ಟೆ? (ಪ್ರಿಯಸಖಿಯಾದ ಸುರಮಂಜರಿಯ ಪ್ರೀತಿಭಂಗವೇ ಗುಣಮಾಲೆಗೆ ಮರ್ಮಸ್ಪರ್ಶಿಯಾದ ದುಃಖಕ್ಕೆ ಕಾರಣವೆಂದಭಿಪ್ರಾಯವು.) ॥ ೨೮ ॥

ಶ್ಲೋಕ॥ ಗಂಧಸಿಂಧುರತೋಭೀತಿ-
ರಾಸೀದಥ ಪುರೌಕಸಾಮ್ ।
ವಿಪದೋಪಿ ಹಿ ತದ್ಭೀತಿ-
ರ್ಮೂಢಾನಾಂ ಹನ್ತ ಬಾಧಿಕಾ ॥ ೨೯ ॥

ಟೀ ॥ ಅಥ-ಅನಂತರದಲ್ಲಿ, ಪುರೌಕಸಾಂ-ಪಟ್ಟಣವಾಸಿಗಳಾದ ಪ್ರಜೆಗಳಿಗೆ, ಗಂಧಸಿಂಧುರತಃ-ಮದಿಸಿದ ಆನೆಯದೆಸೆಯಿಂದ, ಭೀತಿಃ ಭಯವು, ಆಸೀತ್- ಉಂಟಾಯಿತು., ವಿಪದೋಪಿ-ವಿಪತ್ತಿನದೆಸೆಯಿಂದಲೂಕೂಡ, ತದ್ಭೀತಿಃ- ಆ ಭಯವು, ಮೂಢಾನಾಂ- ಮೂಢರಿಗೆ, ಬಾಧಿಕಾಹಿ-ಬಾಧಿಸತಕ್ಕದ್ದಲ್ಲವೆ?. ಹನ್ತ!-ಆಶ್ಚರ್ಯ!

ತಾತ್ಪರ್ಯ ॥ ಅನಂತರದಲ್ಲಿ ಪಟ್ಟಣವಾಸಿಗಳಾದ ಜನಗಳಿಗೆ ಮದಿಸಿದ ಒಂದು ಪಟ್ಟದ ಆನೆಯ ದೆಸೆಯಿಂದ ಭಯವು ಸಂಭವಿಸಿದುದು. ಈಲೋಕದಲ್ಲಿ ವಿಪತ್ತಿನದೆಸೆಯಿಂದ ಉಂಟಾಗುವ ಆ ಭೀತಿಯು ಮೂಢರಿಗೆ ಬಾಧಕವಲ್ಲವೆ? ದೇಹಾತ್ಮ ವಿವೇಕಿಗಳಾದ ತತ್ವಜ್ಞಾನಿಗಳಾದರೋ ಮರಣವನ್ನು ಇಷ್ಟವನ್ನಾಗಿ ತಿಳಿಯುವರು. (ಆತ್ಮತತ್ವವಿಚಾರರಹಿತರಾಗಿ ದೇಹದಲ್ಲಿ ಅತ್ಯಂತ ಮಮತೆಯುಳ್ಳ ಮೂಢಾತ್ಮರು ದೇಹವನ್ನೇ ಆತ್ಮನೆಂದು ಭ್ರಾಂತರಾದುದರಿಂದ ವಿಪತ್ತಿಗೆಹೆದರುವರೆಂದುಭಾವವು.) ೨೯

ಶ್ಲೋಕ॥ ಪರಿಜನಸ್ತು ತಂ ಪಶ್ಯ-
ನ್ಗುಣಮಾಲಾಮಥಾತ್ಯಜತ್ ।
ನ ಹಿ ಸಂತೀಹ ಜಂತೂನಾ-
ಮಪಾಯೇಸತಿ ಬಾಂಧವಾಃ ॥ ೩೦ ॥

ಟೀ ॥ ಪರಿಜನಸ್ತು-ಪರಿವಾರಜನವಾದರೋ, ತಂ-ಆ ಆನೆಯನ್ನು, ವೀಕ್ಷ್ಯ (ಸ್ಥ)-ನೋಡುವಂಥಾವರಾಗಿ, ಅಥ-ಅನಂತರದಲ್ಲಿ, ಗುಣಮಾಲಾಂ - ಗುಣ ಮಾಲೆಯನ್ನು, ಅತ್ಯಜತ್-ಪರಿತ್ಯಜಿಸಿತು., ಇಹ-ಈ ಲೋಕದಲ್ಲಿ, ಜಂತೂನಾಂ-ಪ್ರಾಣಿಗಳಿಗೆ, ಅಪಾಯೇ(ಸತಿ)-ಅಪಾಯವುಂಟಾಗುತ್ತಿರಲಾಗಿ, ಬಾಂಧವಾಃ-ಬಂಧುಜನಗಳು, ನಸಂತಿಹಿ-ಇರುವುದಿಲ್ಲವಷ್ಟೆ?.

ತಾತ್ಪರ್ಯ ॥ ಗುಣಮಾಲೆಯ ಪರಿವಾರಜನವಾದರೋ ಆ ಮದಿಸಿದ ಆನೆಯಂ ನೋಡಿ ತಮ್ಮ ತಮ್ಮ ಪ್ರಾಣರಕ್ಷಣಾರ್ಥವಾಗಿ ಆ ಗುಣ ಮಾಲೆಯಂ ಬಿಟ್ಟು ಹೊರಟು ಹೋದರು. ಈ ಲೋಕದಲ್ಲಿ ಪ್ರಾಣಿಗಳಿಗೆ ಅಪಾಯವು ಸಂಭವಿಸುತ್ತಿರಲಾಗಿ, ಬಂಧುಗಳು ರಕ್ಷಿಸುವುದಿಲ್ಲವಷ್ಟೆ? (ತಮ್ಮ ತಮ್ಮ ಪ್ರಾಣರಕ್ಷಣೆಯಲ್ಲಿ ಆಸಕ್ತರಾಗುವರೇ ಹೊರತು ಯಾರನ್ನು ಯಾರೂ ರಕ್ಷಿಸರೆಂದಭಿಪ್ರಾಯವು.) ॥೩೦॥

ಶ್ಲೋಕ ॥ ಕೃತ್ವಾ ತಾಂ ಪೃಷ್ಠತೋ ಧಾತ್ರೀ
ಕಾಚಿದಸ್ಥಾದ್ದಯಾವಹಮ್ ।
ಹತಾಯಾಂ ಮಯ್ಯತಃ ಪೂರ್ವಂ
ಕನ್ಯೇಯಂ ಹನ್ಯತಾಮಿತಿ ॥ ೩೧ ॥

ಟೀ ॥ ಕಾಚಿತ್- ಒಬ್ಬಾಳೊಬ್ಬ, ಧಾತ್ರೀ- ಸಾಕಿದ ತಾಯಿಯಾದ ದಾದಿಯು, ತಾಂ-ಆ ಗುಣಮಾಲೆಯನ್ನು, ಪೃಷ್ಠತಃ-ತನ್ನ ಹಿಂದು ಗಡೆಯಲ್ಲಿ, ಕೃತ್ವಾ-ಮಾಡಿ, ದಯಾವಹಂ(ಯಥಾತಥಾ)-ದಯೆಯನ್ನು ವಹಿಸಿರೋಣ ಹೇಗೋ ಹಾಗೆ, ಅತಃ-ಈ ಗುಣಮಾಲೆಗಿಂತಲೂ, ಪೂರ್ವಂ-ಮೊದಲು, ಮಯಿ-ನಾನು, ಹತಾಯಾಂ (ಸತ್ಯಾಂ)-ಕೊಲ್ಲಲ್ಪಡುತಿರಲಾಗಿ, ಇಯಂಕನ್ಯಾ-ಈ ಕನ್ನಿಕೆಯಾದ ಗುಣಮಾಲೆಯು, ಹನ್ಯತಾಂ-ಕೊಲ್ಲಲ್ಪಡಲಿ., ಇತಿ-ಹೀಗೆಂದು ಮನದೊಳೆಣಿಸಿಕೊಂಡು, ಆಸ್ಥಾತ್-ಎದಿರಿಗೆ ನಿಂತಳು.

ತಾತ್ಪರ್ಯ ॥ ಪರಿಜನಗಳೆಲ್ಲರೂ ಬಿಟ್ಟು ಹೊರಟು ಹೋಗುತ್ತಿರಲಾಗಿ; ಒಬ್ಬಳು, ಗುಣಮಾಲೆಯನ್ನು ಸಲಹಿದ ದಾದಿಯು ಅತ್ಯಂತದಯೆಯಿಂದ ಈ ಆನೆಯು ನನ್ನನ್ನು ಕೊಂದ ನಂತರ ಇವಳಂ ಕೊಲ್ಲಲಿ. ಇವಳ ವಿಪತ್ತನ್ನು ನಾನು ನೋಡಲಾರೆನೆಂದು ಮನಸ್ಸಿನಲ್ಲಿ ಧೈರ್ಯವಂ ಮಾಡಿಕೊಂಡು ಆ ಗುಣಮಾಲೆಯಂ ತನ್ನ ಹಿಂದೆ ಇಟ್ಟುಕೊಂಡು

ತಾನು ಅವಳ ಮುಂಗಡೆಯಲ್ಲಿ ನಿಂತಳು॥೩೦॥

ಶ್ಲೋಕ॥ ಸಮದುಃಖ ಸುಖಾವಿವ
ಬಂಧವ್ರೋಽಪ್ಯತ್ರ ಬಾಂಧವಾಃ।
ದೂತಾವಿವಕೃತಾನ್ತಸ್ಯ
ದ್ವಂದ್ವಕಾಲೇ ಪರಾಙ್ಮುಖಾಃ॥ ೩೧॥

ಟೀ॥ ಅತ್ರ-ಈ ಲೋಕದಲ್ಲಿ, ಸಮದುಃಖಸುಖಾಃ–ಸಮ-ಸಮಾನವಾದ, ದುಃಖ-ದುಃಖವೂ, ಸುಖ-ಸುಖವೂ ಇವುಗಳುಳ್ಳ, ಬಂಧವಾವ-ಪ್ರೀತಿಶಾಲಿಗಳಾದ ಜನಗಳೇ, ಬಾಂಧವಾಃ-ಬಂಧುಗಳೆನಿಸುವರು., ದ್ವಂದ್ವಕಾಲೇ - ಸುಖದುಃಖಗಳು ಪ್ರಾಪ್ತವಾದಕಾಲದಲ್ಲಿ, ಪರಾಙ್ಮುಖಾಃ-ಅನಾದರಿಸುವಂಥಾವರು, ಕೃತಾಂತಸ್ಯ-ಯಮನ, ದೂತಾವಿವ-ದೂತರುಗಳೇ ಸರಿ.

ತಾತ್ಪರ್ಯ॥ ಈ ಲೋಕದಲ್ಲಿ ದುಃಖದೆಸೆಯಲ್ಲಿಯೂ, ಸುಖದೆಸೆಯಲ್ಲಿಯೂ ಸಮಾನರಾದ ಬಂಧುಗಳೇ ಬಂಧುಗಳೆನ್ನಲ್ಪಡುವರು. ಸುಖಕಾಲದಲ್ಲಿ ಮಾತ್ರ ಸಮಾನವಾಗಿ ಅನುಭವಿಸಿ, ದುಃಖಕಾಲದಲ್ಲಿ ಕೈಬಿಡುವವರು ಯಮನ ದೂತರೆಂತಲೇ ಹೇಳಬೇಕು॥೩೧॥

ಶ್ಲೋಕ॥ ಸ್ವಾಮೀ ಪರಿಣತಂ ವೀಕ್ಷ್ಯ
ಕರಿಣಂ ತಂ ನ್ಯವಾರಯತ್।
ಸ್ವಾಪದಂ ನ ಹಿ ಪಶ್ಯಂತಿ
ಸಂತಃ ಪಾರಾರ್ಥ್ಯತತ್ಪರಾಃ॥ ೩೨॥

ಟೀ॥ ಸ್ವಾಮೀ-ಜೀವಂಧರಸ್ವಾಮಿಯು, ಪರಿಣತಂ- ಮದಿಸಿರುವ, ತಂ- ಆ ಪ್ರಸಿದ್ಧವಾದ, ಕರಿಣಂ-ಆನೆಯನ್ನು, ವೀಕ್ಷ್ಯ-ನೋಡಿ, ನ್ಯವಾರಯತ್-ತಡೆದನು. ಪಾರಾರ್ಥ್ಯತತ್ಪರಾಃ–ಪಾರಾರ್ಥ್ಯ-ಪರಪ್ರಯೋಜನದಲ್ಲಿಯೇ, ತತ್ಪರಾಃ- ಆಸಕ್ತರಾದ, ಸಂತಃ-ಸತ್ಪುರುಷರು, ಸ್ವಾಪದಂ–ಸ್ವ-ತನ್ನ, ಆಪದಂ-ವಿಪತ್ತನ್ನು, ನಪಶ್ಯಂತಿಹಿ-ನೋಡುವುದಿಲ್ಲವಷ್ಟೆ?.

ತಾತ್ಪರ್ಯ॥ ಜೀವಂಧರ ಸ್ವಾಮಿಯು ಮದಿಸಿರುವ ಆ ಆನೆಯನ್ನು ತಡೆದನು. ಪರಪ್ರಯೋಜನವೇ ತಮ್ಮಪ್ರಯೋಜನವೆಂದುತಿಳಿದಿರು

ವ ಸತ್ಪುರುಷರು ತಮಿಗೆವಿಪತ್ತುಂಟಾದಾಗ್ಯೂ ಪರೋಪಕಾರವಂ ಮಾ
ಡುವರಲ್ಲವೆ? (ಆದುವರಿಂದ ಸತ್ಪುರುಷಾಗ್ರೇಸರನಾದ ಜೀವಂಧರಸ್ವಾ
ಮಿಯು ತನ್ನ ವಿಪತ್ತನ್ನು ಅನಾದರಿಸಿ ಕೇವಲ ಪರೋಪಕಾರ ದೃಷ್ಟಿ
ಯಿಂದಲೇ ರಕ್ಷಿಸಿದನೇ ಹೊರತು ಕನ್ಯಾಕಾಮುಕನಾಗಿ ಪ್ರವರ್ತಿಸಲಿ
ಲ್ಲವೆಂದು ಮುಖ್ಯಾಭಿಪ್ರಾಯವು.)॥೩೫॥

ಶ್ಲೋಕ॥ ಯತ್ರ ಕ್ವಾಪೀಹ ಸಂತ್ಯೇವ
ಸಂತಸ್ಸಾರ್ವಗುಣೋದಯಾಃ ।
ಕ್ವಚಿತ್ಕಿಮಪಿ ಸೌಜನ್ಯಂ
ನೋಚೇಲ್ಲೋಕಃ ಕುತೋ ಭವೇತ್ ॥ ೩೬ ॥

ಟೀ ॥ ಇಹ-ಈ ಲೋಕದಲ್ಲಿ, ಯತ್ರ-ಎಲ್ಲಿಯಾದರೂ, ಕ್ವಾಪಿ - ಒಂದಾನೊಂ
ದು ಸ್ಥಲದಲ್ಲಿ, ಸಾರ್ವಗುಣೋದಯಾಃ-ಸಾರ್ವ-ಸರ್ವ ಪ್ರಾಣಿಗಳಿಗೂ ಹಿತಕರವಾದ,
ಗುಣ-ದಯಾದಿಗುಣಗಳ,ಉದಯಾಃ-ಆವಿರ್ಭಾವವುಳ್ಳ, ಸಂತಃ-ಸತ್ಪುರುಷರು,ಸಂ
ತ್ಯೇವ-ಇದ್ದೇಇರುವರು., ಕ್ವಚಿತ್-ಯಾರಾದರೂಒಬ್ಬರಲ್ಲಿ, ಕಿಮಪಿ-ಅನಿರ್ವಚನೀಯ
ವಾದ, ಸೌಜನ್ಯಂ-ಸುಜನತ್ವವು, ನೋಚೇತ್-ಇಲ್ಲದೇಹೋದರೆ, ಲೋಕಃ - ಜನ
ವು, ಕುತಃ-ಯಾವ ಕಾರಣವದೆಸೆಯಿಂದ, ಭವೇತ್-ಇದ್ದೀತು?.

ತಾತ್ಪರ್ಯ॥ ಈ ಲೋಕದಲ್ಲಿ ಎಲ್ಲರಿಗೂ ಹಿತವನ್ನಪೇಕ್ಷಿಸುವದ
ಯಾದಿ ಗುಣಶಾಲಿಗಳಾದ ಸತ್ಪುರುಷರು ಎಲ್ಲಿಯಾದರೂ ಒಂದುಸ್ಥಳದಲ್ಲಿ
ಇದ್ದೇಇರ್ಥಾರೆಯೇ ಹೊರತು ಎಲ್ಲರೂ ದುರ್ಜನರಲ್ಲವು. ಲೋಕದಲ್ಲಿ
ಎಲ್ಲಿಯಾದರೂ ಒಬ್ಬ ಪುರುಷನಲ್ಲಿ ಸೌಜನ್ಯ ಗುಣವಿಲ್ಲದಿದ್ದರೆ ಈ
ಲೋಕವು ಹೇಗೆ ಜೀವಿಸೀತು? (ಎಲ್ಲಿಯಾದರೂ ಜೀವಂಧರಕುಮಾರನಂ
ತೆ ಸತ್ಪುರುಷನು ಈ ಲೋಕದಲ್ಲಿ ಇದ್ದೇ ಇರುವನೆಂದು ಭಾವವು)॥೩೬

ಶ್ಲೋಕ॥ ಪರಿವಾರೋಪ್ಯಥಾಯಾಸೀ-
ದಹಂ ಪೂರ್ವಿಕಯಾ ಸ್ವಯಮ್ ।
ಸ್ವಾಸ್ಥ್ಯೇಹ್ಯದೃಷ್ಟ ಪೂರ್ವಾಶ್ಚ
ಕಲ್ಪಯಂತ್ಯೇವ ಬಂಧುತಾಮ್ ॥ ೩೭ ॥

ಟೀ॥ ಅಥ-ಅನಂತರದಲ್ಲಿ, ಪರಿವಾರೋಪಿ-ಪರಿಜನವುಕೂಡ, ಅಹಂಪೂರ್ವಿಕಯಾ-ನಾನು ಮುಂದು ತಾನು ಮುಂದು ಎಂಬ ವ್ಯಾಪಾರದಿಂದ, ಸ್ವಯಂ- ತಾನಾಗಿಯೇ, ಅಯಾಸೀತ್-ಬಂದಿತು., ಸ್ವಾಸ್ಥ್ಯೇ(ಸತಿ)-ಸ್ವಸ್ಥವಾಗಿರುತ್ತಿರಲು, ಅದೃಷ್ಟಪೂರ್ವಾಶ್ಚ-ಪೂರ್ವದಲ್ಲಿನೋಡಲ್ಪಡದ ಜನಗಳೂಕೂಡ, ಬಂಧುತಾಂ-ಬಂಧುತ್ವವನ್ನು, ಕಲ್ಪಯಂತ್ಯೇವ-ಕಲ್ಪಿಸುತ್ತಾರಲ್ಲವೆ?.

ತಾತ್ಪರ್ಯ॥ಜೀವಂಧರಸ್ವಾಮಿಯು ಮದ ಹಿಡಿದ ಪಟ್ಟದಾನೆಯಂ ನಿಗ್ರಹಿಸಿದ ನಂತರ ಓಡಿ ಹೋಗಿದ್ದ ಗುಣಮಾಲೆಯು ಪರಿವಾರಜನಗಳು ನಾನು ಮುಂದು ತಾನು ಮುಂದೆಂಬ ತ್ವರಾವಿಶೇಷದಿಂದ ತಾವಾಗಿಯೇ ಬಂದರು. ಲೋಕದಲ್ಲಿ ಜನಗಳು ಸಂಪತ್ತಿನಿಂದಲೂ, ಪುತ್ರಾದಿಭಾಗ್ಯ ಮುಂತಾದವುಗಳಿಂದಲೂ ಸುಖಿಗಳಾಗಿರುತ್ತಿದ್ದರೇನೆ ಯಾವಾಗಲೂ ನೋಡಲ್ಪಡದೆಯೂ, ಕೇಳಲ್ಪಡದೆಯೂ ಇರುವ ಜನಗಳುಕೂಡ ಬಂಧುತ್ವವನ್ನಾರೋಪಿಸಿಕೊಂಡು ಬರುವರು. (ಕಷ್ಟದಶೆಬಂದ ಕಾಲದಲ್ಲಿ ಬಂಧುಗಳುಕೂಡ ಅವನು ಯಾರೋ, ನಾವು ಯಾರೋ, ಅವನಿಗೂ ನಮಿಗೂ ಏನುಸಂಬಂಧವು? ಎಂದು ಹೇಳುವರು. ಅದುದರಿಂದ ಈ ಕೃತಘ್ನರಾದ ಆಭಾಸಬಂಧುಗಳು ಸುಖವನ್ನನುಭವಿಸುವುದಕ್ಕೋಸುಗ ಒದಗುವರೇ ಹೊರತು ವಿಪತ್ಕಾಲದಲ್ಲಿ ಸಹಾಯಪಡರು. ಇಂಥಾ ಬಂಧುಗಳು ಸ್ವಪ್ರಯೋಜನಪರರು. ನಿರ್ಹೇತುಕವಾಗಿ ಪರಮದಯೆಯಿಂದ ವಿಪತ್ಕಾಲದಲ್ಲಿ ಸಹಾಯ (ಅಂದರೆ.—ಪ್ರಾಣವನ್ನುಕೂಡ ಕೊಡುತ್ತಿರುವ ಪರೋಪಕಾರ) ಶೀಲರಾದ ಸತ್ಪುರುಷರೇಮುಖ್ಯ ಬಂಧುಗಳೆನಿಸುವರೆಂದಭಿಪ್ರಾಯವು) ॥೩೫॥

ಶ್ಲೋಕ॥ ಅನ್ಯೋನ್ಯದರ್ಶನಾದಾಸೀ-
ತ್ಕಾಮಃ ಕನ್ಯಾಕುಮಾರಯೋಃ ।
ದುಃಖಸ್ಯಾನಂತರಂ ಸೌಖ್ಯಂ-
ತತೋ ದುಃಖಂ ಹಿ ದೇಹಿನಾಮ್ ॥ ೩೬ ॥

ಟೀ॥ ಅನ್ಯೋನ್ಯದರ್ಶನಾತ್-ಅನ್ಯೋನ್ಯ-ಒಬ್ಬರಿಗೊಬ್ಬರು, ದರ್ಶನಾತ್-ನೋಡೋಣವರ ದೆಸೆಯಿಂದ, ಕನ್ಯಾಕುಮಾರಯೋಃ - ಕನ್ಯಾ-ಕನ್ನಿಕೆಯಾದ

ಗುಣಮಾಲೆಗೂ, ಕುಮಾರಯೋಃ-ಜೀವಂಧರಕುಮಾರನಿಗೂ, ಕಾಮಃ-ಭೋಗಾಭಿಲಾಷೆಯು, ಆಸೀತ್-ಉಂಟಾಯಿತು., ದೇಹಿನಾಂ-ಪ್ರಾಣಿಗಳಿಗೆ, ದುಃಖಸ್ಯ-ದುಃಖದ, ಅನಂತರಂ-ಅನಂತರದಲ್ಲಿ, ಸೌಖ್ಯಂ-ಸೌಖ್ಯವು, ತತಃ- ಆ ಬಳಿಕ, ದುಃಖಂಹಿ-ದುಃಖವೂ ಉಂಟಾಗುತ್ತದೆಯಲ್ಲವೆ ?.

ತಾತ್ಪರ್ಯ ॥ ಕನ್ನಿಕೆಯಾದ ಗುಣಮಾಲೆಗೂ ಜೀವಂಧರಕುಮಾರನಿಗೂ ಕೂಡ ಅನ್ಯೋನ್ಯ ದರ್ಶನಾನಂತರದಲ್ಲಿ ಕಾಮವಿಕಾರವು ಉಂಟಾಯಿತು. ಲೋಕದಲ್ಲಿ ಪ್ರಾಣಿಗಳಿಗೆ ದುಃಖದ ಅನಂತರದಲ್ಲಿ ಸೌಖ್ಯವೂ,ಸುಖಾನಂತರದಲ್ಲಿ ದುಃಖವೂಉಂಟಾಗುವುದು ಸಹಜವಷ್ಟೇ? ೩೬॥

ಶ್ಲೋಕ ॥ ಅಶಾಂತಸ್ವಾಂತ ಸಂತಾಪಾ
ನಿಶಾಂತಂ ಪ್ರಾಪ ಸಾ ಪುನಃ ।
ನೋಚೇದ್ವಿವೇಕ ನೀರೌಘೋ
ರಾಗಾಗ್ನಿಃ ಕೇನ ಶಾಮ್ಯತಿ ॥ ೩೭ ॥

ಟೀ ॥ ಸಾ ಪುನಃ-ಆ ಗುಣಮಾಲೆಯೋ ಅಂದರೆ.–, ಅಶಾಂತಸ್ವಾಂತ ಸಂತಾಪಾ(ಸತೀ)–ಅಶಾಂತ-ಅಡಗದೇಇರುವ(ಶಾಂತವಾಗದೇಇರುವ), ಸ್ವಾಂತ- ಮನಸ್ಸಿನ-ಸಂತಾಪಾ(ಸತೀ)-ಕಾಮಸಂತಾಪವುಳ್ಳವಳಾಗಿ, ನಿಶಾಂತಂ - ತನ್ನ ಗೃಹವನ್ನು,ಪ್ರಾಪ-ಹೊಂದಿದಳು , ವಿವೇಕನೀರೌಘಃ–ವಿವೇಕ-ತತ್ತ್ವಜ್ಞಾನವೆಂಬ,ನೀರ-ಜಲದ, ಓಘಃ-ಪ್ರವಾಹವು, ನೋಚೇತ್-ಇಲ್ಲದೇಹೋದರೆ, ರಾಗಾಗ್ನಿಃ–ರಾಗ-ಭೋಗೋಪಭೋಗೇಚ್ಛೆಯೆಂಬ, ಅಗ್ನಿಃ-ಬೆಂಕಿಯು, ಕೇನ-ಯಾತರಿಂದ, ಶಾಮ್ಯತಿ-ಅಡಗುತ್ತದೆ?.

ತಾತ್ಪರ್ಯ ॥ ಆ ಗುಣಮಾಲೆಯು ಅಡಗದೇ ಇರುವ ಕಾಮ ಸಂತಾಪವುಳ್ಳವಳಾಗಿಯೇ ತನ್ನ ಮನೆಯನ್ನು ಹೊಂದಿದಳು. (ಚಕ್ಷುಸ್ಸಂಗಮನಸ್ಸಂಗ ಸಂಕಲ್ಪ ಪ್ರಲಾಪ ಜಾಗರ ಕಾರ್ಶ್ಯ ಅರತಿ ಲಜ್ಜಾತ್ಯಾಗ ಸಂಜ್ವರ ಮೊದಲಾದ ಮನ್ಮಥಾವಸ್ಥೆಗಳಿಂ ಪೀಡಿತಳಾದಳೆಂದಭಿಪ್ರಾಯವು.) ತತ್ತ್ವಜ್ಞಾನವೆಂಬ ನೀರಿನಿಂದಲೇ ಸ್ತ್ರೀ ಮೊದಲಾದ ಭೋಗೋಪಭೋಗ ಪದಾರ್ಥಗಳ ಅಭಿಲಾಷೆಯೆಂಬ ಅಗ್ನಿಯು ಅಡಗುವುದೇ ಹೊರತು ಇನ್ನುಯಾವುದರಿಂದಲೂ ಸಂಸಾರ ಮೂಲಕಾರಣವಾದ ರಾಗವು ಅಡಗುವುದಿಲ್ಲವೆಂದಭಿಪ್ರಾಯವು. ॥೩೭॥

ಶ್ಲೋಕ ॥ ಕ್ರೀಡಾಶುಕಂ ಚ ಪ್ರಾಹೈಷೀ-
ತ್ಸವಿಧೇ ಸ್ವಾಮಿನಃ ಪುನಃ ।
ಯೋಗ್ಯಾಯೋಗ್ಯವಿಚಾರೋಽಯಂ
ರಾಗಾನ್ಧಾನಾಂ ಕುತೋ ಭವೇತ್ ॥ ೩೮ ॥

ಟೀ ॥ ಸಾ-ಆ ಗುಣಮಾಲೆಯು, ಪುನಃ-ಮರಳಿಯು, ಸ್ವಾಮಿನಃ- ಜೀವಂಧರಸ್ವಾಮಿಯ, ಸವಿಧೇ-ಸಮೀಪದಲ್ಲಿ, ಕ್ರೀಡಾಶುಕಂಚ- ಕ್ರೀಡಾ-ಲೀಲಾರ್ಥವಾದ, ಶುಕಂ ಚ-ಗಿಣಿಯನ್ನು ಕೂಡ, ಪ್ರಾಹೈಷೀತ್-ಕಳುಹಿಸಿದಳು., ಅಯಂ- ಈ ಪ್ರಸಿದ್ಧವಾದ, ಯೋಗ್ಯಾಯೋಗ್ಯವಿಚಾರಃ-ಯೋಗ್ಯ-ಯೋಗ್ಯವಾದ ಕೆಲಸವೆಂತಲೂ, ಅಯೋಗ್ಯ-ಅಯೋಗ್ಯವಾದ ಕೆಲಸವೆಂತಲೂ, ವಿಚಾರಃ- ಪರ್ಯಾಲೋಚನೆಯು, ರಾಗಾಂಧಾನಾಂ-ರಾಗ-ಕಾಮದಿಂದ, ಅಂಧಾನಾಂ-ಮೂಢರಾದವರಿಗೆ, ಕುತಃ-ಯಾವಕಾರಣದಿಸೆಯಿಂದ, ಭವೇತ್-ಉಂಟಾಗುವುದು?

ತಾತ್ಪರ್ಯ ॥ ಆ ಗುಣಮಾಲೆಯು ಆ ಜೀವಂಧರ ಕುಮಾರನ ವಿಷಯವಾಗಿ ಉಂಟಾದ ಕಾಮಬಾಧೆಯಂ ಸಹಿಸಲಾರದೆ ಸಂಘಟನೆಮಾಡಿಸುವ ದೂತಿಗೆ ಪ್ರತಿನಿಧಿಯಾಗಿ ಆ ಜೀವಂಧರಕುಮಾರನ ಸಮೀಪಕ್ಕೆ ತನ್ನ ಲೀಲಾರ್ಥವಾದ ಗಿಣಿಯಂ ಕಳುಹಿಸಿದಳು. ಮಹಾಚತುರೆಯಾದ ದೂತಿಯಿಂದಲೂ ಸಾಧಿಸಲು ಸಂದೇಹಾಸ್ಪದವಾದ ಈ ಕೆಲಸವನ್ನು ಸಾಮಾನ್ಯವಾದ ಈ ಗಿಣಿಯು ಹೇಗೆ ಸಾಧಿಸುವದೆಂದು ವಿಚಾರಮಾಡದೇ ಇರುವುದಕ್ಕೆ ಕಾರಣವೇನೆಂದರೆ.-ರಾಗದಿಂದ ಮೂಢರಾದ ಜನಗಳು ಯುಕ್ತಾಯುಕ್ತ ಪರಿಜ್ಞಾನರಹಿತವಾದವರಲ್ಲವೆ? (ಕಾಮುಕರು ಉನ್ಮತ್ತರಂತೆ ವಿವೇಕರಹಿತರೆಂದಭಿಪ್ರಾಯವು.) ॥೩೮॥

ಶ್ಲೋಕ ॥ ಚಾಟುಂ ಪ್ರಾಯುಙ್ಕ್ತ ಕೀರೋಽಪಿ
ತಂ ಪಶ್ಯನ್ ಸ್ವೇಷ್ಟಸಿದ್ಧಯೇ ।
ಪಿತ್ರಾದ್ಯೈರ್ನ ಲಿಂಗೇನ
ಪರಲೋಕೋಽಪಿ ಸಾಧ್ಯತೇ ॥ ೩೯ ॥

ಟೀ ॥ ಕೀರೋಽಪಿ-ಗಿಣಿಯೂಕೂಡ, ತಂ-ಆ ಜೀವಂಧರಸ್ವಾಮಿಯನ್ನು, ಪಶ್ಯನ್(ಸ್ಸನ್)-ನೋಡುವಂಥಾದ್ದಾಗಿ, ಸ್ವೇಷ್ಟಸಿದ್ಧಯೇ-ಸ್ವ-ತನ್ನ, ಇಷ್ಟ-ಇಷ್ಟಾರ್ಥ

ದ, ಸಿದ್ಧಯೇ-ಸಿದ್ಧಿಗೋಸುಗ, ಚಾಟುಂ-ಪ್ರಿಯವಾದ ಮಾತನ್ನು, ಪ್ರಾಯುಙ್ಕ್ತ-ಪ್ರಯೋಗಿಸಿತು., ಏತಾದೃಶೇನ-ಈ ಪ್ರಕಾರವಾದ, ಲಿಂಗೇನ-ಕಾರಣದಿಂದ, ಪರ ಲೋಕಃ-ಪರ-ಉತ್ಕೃಷ್ಟವಾದ, ಲೋಕಃ-ಜನವು, ಸಾಧ್ಯತೇ ಹಿ- ಸ್ವಾಧೀನಪಡಿಸಲ್ಪಡುತ್ತದೆಯಲ್ಲವೆ?.

ತಾತ್ಪರ್ಯ ॥ ಆ ಗಿಳಿಯೂ ಕೂಡ ಜೀವಂಧರ ಸ್ವಾಮಿಯನ್ನು ನೋಡಿ ತನ್ನಿಷ್ಟಸಿದ್ಧಿಗೋಸುಗ ಅತ್ಯಂತ ಪ್ರೀತಿಕರವಾದ ಮಾತನ್ನಾಡಿತು. ಈ ಪ್ರಕಾರವಾದ ಕಾರಣದಿಂದ ಶ್ರೇಷ್ಠವಾದ ಜನಗಳು ಸ್ವಾಧೀನಪಡಿಸಲ್ಪಡುತ್ತೆಯಲ್ಲವೆ? ಪ್ರಿಯವಚನದಿಂದ ಎಷ್ಟು ಉತ್ಕೃಷ್ಟರಾದವರನ್ನೂ ಸ್ವಾಧೀನ ಪಡಿಸಬಹುದೆಂಬಭಿಪ್ರಾಯವು.) ॥೩೯॥

ಶ್ಲೋಕ ॥ ವಿಷಯೇಷು ಸಮಸ್ತೇಷು
ಕಾಮಂ ಸಫಲಯನ್ಸದಾ ।
ಗುಣಮಾಲಾಂ ಜಗನ್ಮಾನ್ಯಾಂ
ಜೀವಯನ್ ಜೀವತಾಚ್ಚಿರಮ್ ॥ ೪೦ ॥

ಟೀ ॥ ಭವಾನ್-ನೀನು, ಸಮಸ್ತೇಷು-ಸಮಸ್ತವಾದ, ವಿಷಯೇಷು-ಭೋಗೋಪಭೋಗಪದಾರ್ಥಗಳಲ್ಲಿ ಉಂಟಾದ, ಕಾಮಂ- (ಅಭಿಲಾಷೆಯನ್ನು), ಸದಾ-ಯಾವಾಗಲೂ, ಸಫಲಯನ್ (ಸನ್)- ಸಫಲವನ್ನಾಗಿಮಾಡುವವನಾಗಿ, ಜಗನ್ಮಾನ್ಯಾಂ-ಜಗತ್-ಲೋಕದಲ್ಲಿ, ಮಾನ್ಯಾಂ-ಪೂಜ್ಯಳಾದ, ಗುಣಮಾಲಾಂ-ಗುಣಮಾಲೆಯನ್ನು, ಜೀವಯನ್ (ಸನ್) ಬದುಕಿಸುವವನಾಗಿ, ಚಿರಂ-ಬಹುಕಾಲದವರೆಗೂ, ಜೀವಿತಾತ್-ಜೀವಿಸು.

ತಾತ್ಪರ್ಯ ॥ ಗುಣಮಾಲೆಯ ಲೀಲಾ ಶುಕವು ಮಾತಿನ ಚಾತುರ್ಯದಿಂದಲೇ ಗುಣಮಾಲೆಯ ಅಭಿಪ್ರಾಯವಂ ಸೂಚಿಸುವಂತೆ ಆ ಜೀವಂಧರಕುಮಾರನಿಗೆ ಆಶೀರ್ವಾದವಚನವಂ ಹೇಳುತ್ತದೆ. ಏನೆಂದರೆ.- ನೀನು ಯಾವಾಗಲೂ ಸಮಸ್ತ ಭೋಗೋಪ ಭೋಗ ಪದಾರ್ಥಗಳಲ್ಲಿ ಕಾಮವನ್ನು ಸಫಲಪಡಿಸುವನಾಗಿಯೂ, ಲೋಕಪೂಜ್ಯೆಯಾದ ಗುಣಮಾಲೆಯನ್ನು ಜೀವಿಸುವಹಾಗೆ ಮಾಡುವವನಾಗಿಯೂ, ಬಹುಕಾಲ ಜೀವಿಸು. (ಅಂದರೆ ಈ ಲೋಕದಲ್ಲಿ ತ್ರಿಲೋಕವಿಜಯಿಯಾದ ಕಾಮನ

ಜಯೋಪಕರಣವೆನಿಸುವ ಸ್ತ್ರೀರತ್ನವಾದ ಗುಣಮಾಲೆಯೇ ಮೊದಲಾ
ದ ಭೋಗೋಪಭೋಗ ಪದಾರ್ಥಗಳಲ್ಲಿ ರಸಿಕಶಿಖಾಮಣಿಯಾದ ನಿನ್ನ
ಕಾಮನಗೆ ವಿಷಯವಲ್ಲದ ವಸ್ತುವೂ ನಿಷ್ಫಲವು. ಆ ಕಾಮನೂ ನಿಷ್ಫ
ಲನೆಂದಭಿಪ್ರಾಯವು. ಈ ಭಾವವು (ಕಾಮಂ ಸಫಲಯ) ಎಂಬ
ವಿಶೇಷಣಪರ್ಯಾಲೋಚನೆಯಿಂ ದಾಲಂಕಾರಿಕರಾದ ವ್ಯಂಗ್ಯಮರ್ಯಾದಾರ
ಸಿಕರಿಗೆ ತೋರುವುದು. (ಜೀವಯ) ಎಂಬ ವಿಶೇಷಣದಿಂದ ಗುಣ
ಮಾಲೆಗೆ ನಿನ್ನ ವಿಷಯವಾಗಿ ಉಂಟಾಗಿರುವ ಕಾಮವನ್ನು ನೀನು
ಸಫಲಪಡಿಸದ ಪಕ್ಷದಲ್ಲಿ ಮರಣವನ್ನೇ ಪಡೆಯುವಳು. ಪರಮದಯಾಳು
ವಾಗಿಯೂ, ಸತ್ಪುರುಷಾಗ್ರೇಸರನಾಗಿಯೂ ಇರುವ ನೀನು ಕೊಲ್ಲಲು
ಬಂದ ಮತ್ತಗಜವಂ ನಿಗ್ರಹಿಸಿದುದರಿಂದಲೇ ಗುಣಮಾಲೆಯ ಪ್ರಾಣವಂ
ರಕ್ಷಿಸಿದ ಹಾಗಾಗಲಿಲ್ಲವು. ಈಗ ನಿನ್ನ ವಿಷಯವಾದ ಅತ್ಯುತ್ಕಟ
ಕಾಮದಿಂ ಪೀಡಿತಳಾಗಿ ಮರಣಾಂತಾವಸ್ಥೆಯಂ ಪೊಂದಿರುವ ಗುಣಮಾ
ಲೆಯ ಕಾಮಬಾಧೆಯಂ ಪರಿಹರಿಸಿ ದೀನಜನರಕ್ಷಣಸುಕೃತವಂ ಪಡೆಯ
ಬೇಕೆಂಬ ಪ್ರಾರ್ಥನೆಯು ವ್ಯಂಗ್ಯಾರ್ಥವಾಗಿ ತೋರುವುದು. ಮತ್ತು,
(ಚಿರಂಜೀವತಾತ್) ಎಂಬುದರಿಂದ ಬಹುಕಾಲಭೋಗಯೋಗ್ಯವಾದ ಶಾ
ಸ್ತ್ರೋಕ್ತ ವಿವಾಹವನ್ನು ಮಾಡಿಕೊಳ್ಳಬೇಕೇ ಹೊರತು ಕೇವಲ ಕಾ
ಮಪೂರ್ತ್ಯರ್ಥವಾಗಿ ವಿಟನಂತೆ ಸಕೃತ್ಪರಿಗ್ರಹವು (ತಾತ್ಕಾಲಿಕೋಪ
ಶಮನವು) ಗುಣಮಾಲೆಗೆ ಅಭಿಮತವಲ್ಲವೆಂದು ತಾತ್ಪರ್ಯವು ಸೂಚಿಸ
ಲ್ಪಡುತ್ತದೆ. ಮತ್ತು (ಗುಣಮಾಲಾಂಜಗನ್ಮಾನ್ಯಾಂ) ಎಂಬ ವಿಶೇಷಣ
ಗಳಿಂದ ಗುಣಮಾಲೆಯು ಸೌಂದರ್ಯಾದಿಗುಣಗಣಾಕರಳಾಗಿಯೂ, ಅದ
ರಿಂದಲೇ ಲೋಕಪೂಜ್ಯಳಾದ್ದರಿಂದಲೂ ನಿನಗೇನೆ ಯೋಗ್ಯಳೆಂದಭಿಪ್ರಾ
ಯವು. ಮತ್ತು ನೀನು ಮಾಡಿದ ಮಹೋಪಕಾರಕ್ಕೆ ಗುಣಮಾಲೆಯು
ತನ್ನ ಪ್ರಾಣವನ್ನೇ ನಿನಗಧೀನವನ್ನಾಗಿ ಮಾಡಿರುವಳೆಂತಲೂ, ಶ್ಲೋಕದ
ತಾತ್ಪರ್ಯವು.॥೪೧॥

ಶ್ಲೋಕ॥ ಇತ್ಯಾಶಿಷಾ ಕುಮಾರೋಪಿ
ತತ್ಸಂದೇಶಾಚ್ಚ ಪಿಪ್ರಿಯೇ।

ಇಷ್ಟಸ್ಥಾನೇ ಸತೀ ವೃಷ್ಟಿ-
ಸ್ತುಷ್ಟಯೇ ಹಿ ವಿಶೇಷತಃ ॥ ೪೧ ॥

ಟೀ ॥ ಇತಿ-ಈ ಪ್ರಕಾರವಾದ, ಆಶಿಷಾ-ಆಶೀರ್ವಾದದಿಂದಲೂ, ತತ್ಸಂದೇಶಾಚ್ಚ-ತತ್-ಆ ಗುಣಮಾಲೆಯು, ಸಂದೇಶಾಚ್ಚ-ಹೇಳಿ ಕಳುಹಿಸಿದ ಮಾತಿನಿಂದಲೂ, ಕುಮಾರೋಽಪಿ-ಜೀವಂಧರ ಕುಮಾರನೂಕೂಡ, ಪಿಪ್ರಿಯೇ-ಪ್ರೀತಿಪಟ್ಟನು., ಇಷ್ಟಸ್ಥಾನೇ-ಇಷ್ಟ-ಅಭಿಮತವಾದ, ಸ್ಥಾನೇ-ಸ್ಥಾನದಲ್ಲಿ, ಸತೀ-ಉಂಟಾದ, ವೃಷ್ಟಿಃ-ಮಳೆಯು, ವಿಶೇಷತಃ-ಬಹಳವಾಗಿ, ತುಷ್ಟಯೇ ಹಿ-ಸಂತೋಷಕ್ಕೋಸುಗವಾಗುವುದಲ್ಲವೆ?.

ತಾತ್ಪರ್ಯ ॥ ಜೀವಂಧರಕುಮಾರನುಕೂಡ ಗಿಣಿಯ ಈ ಪ್ರಕಾರವಾದ ಆಶೀರ್ವಾದದಿಂದಲೂ, ಆ ಗುಣಮಾಲೆಯು ಹೇಳಿಕಳುಹಿಸಿರುವ ಮಾತಿನಿಂದಲೂ ಬಹುಪ್ರೀತಿಪಟ್ಟನು. ಲೋಕದಲ್ಲಿ ತನಗಿಷ್ಟವಾದ ಸ್ಥಾನದಲ್ಲಿ ಮಳೆಸುರಿದರೆ ವಿಶೇಷವಾಗಿ ಪ್ರೀತಿಪಡುವರಲ್ಲವೆ? ಹಾಗೆ ಜೀವಂಧರಕುಮಾರನಿಗೂ ಗುಣಮಾಲೆಯಲ್ಲಿ ಪ್ರೀತಿಯುಂಟಾಗಿದ್ದುದರಿಂ ತನ್ನಿಷ್ಟಪ್ರಕಾರವೇ ಗುಣಮಾಲೆಯು ತಾನೇ ಹೇಳಿಕಳುಹಿಸಿರುವುದರಿಂದ ಬಹಳ ಸಂತೋಷವುಂಟಾಯಿತೆಂದಭಿಪ್ರಾಯವು. ಮತ್ತು ಇಷ್ಟವಾದ ಸ್ಥಾನದಲ್ಲಿ ಉಂಟಾದ ಮಳೆಯು ಹೇಗೆ ಸಫಲವೋ ಹಾಗೆ ಗುಣಮಾಲೆಯು ಹೇಳಿಕಳುಹಿಸಿದ ಮಾತು ಸಫಲವಾಯಿತೆಂದಭಿಪ್ರಾಯವು.

ಶ್ಲೋಕ॥ ಪ್ರತಿಸಂದೇಶಮಪ್ಯೇಷ
ಕೀರಾಯ ಪ್ರತ್ಯಪಾದಯತ್ ।
ಪ್ರೇಕ್ಷಾವಂತೋ ವಿತನ್ವಂತಿ
ನ ಹ್ಯುಪೇಕ್ಷಾಮಪೇಕ್ಷತೇ ॥ ೪೨ ॥

ಟೀ ॥ ಏಷಃ-ಈ ಜೀವಂಧರಕುಮಾರನು, ಕೀರಾಯ-ಗಿಣಿಗೋಸುಗ, ಪ್ರತಿಸಂದೇಶಮಪಿ-ಪ್ರತಿಯಾಗಿ ಹೇಳಿಕಳುಹಿಸೋಣವನ್ನು (ಪ್ರತ್ಯುತ್ತರವನ್ನು), ಪ್ರತ್ಯಪಾದಯತ್-ಕೊಟ್ಟನು., ಪ್ರೇಕ್ಷಾವಂತಃ-ಬುದ್ಧಿಶಾಲಿಗಳು, ಅಪೇಕ್ಷತೇ-ಅಪೇಕ್ಷಿಸುವವರಿಗೋಸುಗ, ಉಪೇಕ್ಷಾಂ-ಅನಾದರವನ್ನು, ನವಿತನ್ವಂತಿಹಿ-ಮಾಡುವುದಿಲ್ಲವಷ್ಟೆ?.

ತಾತ್ಪರ್ಯ ॥ ಈ ಜೀವಂಧರಸ್ವಾಮಿಯು ಗಿಳಿಗೆ ಪ್ರತ್ಯುತ್ತರವನ್ನುಕೂಡ ಹೇಳಿ ಕಳುಹಿಸಿದನು. ಬುದ್ಧಿಶಾಲಿಗಳು ತಮ್ಮಲ್ಲಿ ಪ್ರೀತಿಯುಳ್ಳವರಾಗಿ ಪ್ರಾರ್ಥಿಸುವರನ್ನು ಅನಾದರಿಸುವುದಿಲ್ಲವಷ್ಟೆ? (ತನ್ನನ್ನು ಅಪೇಕ್ಷಿಸುವ ಜನರನ್ನುಪೇಕ್ಷಿಸುವ ಮನುಜನು ಬುದ್ಧಿಹೀನನೆಂದು ಅಭಿಪ್ರಾಯವು.)॥೪೧॥

ಶ್ಲೋಕ॥ ಮುಮುದೇ ಗುಣಮಾಲಾಪಿ
ದೃಷ್ಟ್ವಾ ಪತ್ರೇಣ ಪತ್ರಿಣಮ್ ।
ಸ್ವಸ್ಯೈವ ಸಫಲೋ ಯತ್ನಃ
ಪ್ರೀತಯೇ ಹಿ ವಿಶೇಷತಃ ॥ ೪೨ ॥

ಟೀ ॥ ಗುಣಮಾಲಾಪಿ-ಗುಣಮಾಲೆಯೂಕೂಡ, ಪತ್ರೇಣ-ಪತ್ರದೊಡನೆ ಕೂಡಿರುವ, ಪತ್ರಿಣಂ-ಗಿಳಿಯನ್ನು, ದೃಷ್ಟ್ವಾ-ನೋಡಿ, ಮುಮುದೇ-ಸಂತೋಷಿಸಿದಳು., ಸ್ವಸ್ಯ-ತನ್ನಯ, ಯತ್ನಏವ-ಪ್ರಯತ್ನವೇ, ಸಫಲಶ್ಚೇತ್-ಸಿದ್ಧಿಯೊಡಗೂಡಿದ್ದೇ ಆದರೆ, ವಿಶೇಷತಃ-ಬಹಳವಾಗಿ, ಪ್ರೀತಯೇಹಿ - ಸಂತೋಷಕ್ಕೋಸುಗವಾಗುವುದಲ್ಲವೆ ?.

ತಾತ್ಪರ್ಯ ॥ ಗುಣಮಾಲೆಯೂಕೂಡ ಪತ್ರದಿಂದೊಡಗೂಡಿಬಂದ ಗಿಳಿಯಂ ನೋಡಿ ಸಂತೋಷಿಸಿದಳು. ಲೋಕದಲ್ಲಿ ಮತ್ತೊಬ್ಬರ ಸಹಾಯ್ಯವಿಲ್ಲದೆ ತನ್ನ ಪ್ರಯತ್ನದಿಂದಲೇ ಕಾರ್ಯಸಿದ್ಧಿಯಾದರೆ ವಿಶೇಷ ಪ್ರೀತಿಯುಂಟಾಗುವುದಲ್ಲವೆ? ॥೪೨॥

ಶ್ಲೋಕ॥ ಪಿತರಾವೇತದಾಕರ್ಣ್ಯ-
ಮುಮುದಾತೇ ಭೃಶಂ ಪುನಃ ॥
ದುರ್ಲಭೋ ಹಿ ವರೋ ಲೋಕೇ
ಯೋಗ್ಯೋ ಭಾಗ್ಯಸಮನ್ವಿತಃ ॥ ೪೩ ॥

ಟೀ ॥ ಪಿತರೌ-ಗುಣಮಾಲೆಯ ತಾಯಿತಂದೆಗಳು, ಏತತ್-ಈ ವೃತ್ತಾಂತವನ್ನು, ಆಕರ್ಣ್ಯ-ಕೇಳಿ, ಭೃಶಂಪುನಃ-ಬಹಳವಾಗಿ, ಮುಮುದಾತೇ-ಸಂತೋಷಿಸಿ

ವರು., ಲೋಕೇ-ಲೋಕದಲ್ಲಿ, ಯೋಗ್ಯಃ-ಯೋಗ್ಯನಾಗಿಯೂ, ಭಾಗ್ಯಸಮನ್ವಿತಃ-ಭಾಗ್ಯಶಾಲಿಯಾಗಿಯೂ ಇರುವ, ವರಃ-ವರನು, ದುರ್ಲಭೋಹಿ-ದೊರಕುವುದಿಲ್ಲವಷ್ಟೆ?.

ತಾತ್ಪರ್ಯ ॥ ಜೀವಂಧರಸ್ವಾಮಿಗೆ ಗುಣಮಾಲೆಯ ವಿಷಯವಾಗಿ ಇರುವ ಪ್ರೀತಿವಿಶೇಷವನ್ನು(ವಿವಾಹ ಸಮ್ಮತಿಯನ್ನು)ಕೇಳಿ, ಗುಣಮಾಲೆಯ ತಾಯಿತಂದೆಗಳು ಬಹಳವಾಗಿಸಂತೋಷಿಸಿದರು. ಲೋಕದಲ್ಲಿ ಯೋಗ್ಯನಾಗಿಯೂ, ಭಾಗ್ಯವಂತನಾಗಿಯೂ ಇರುವ ವರನು ದೊರಕುವುದು ಪ್ರಯಾಸವಷ್ಟೆ? ಮತ್ತು, ಗುಣಗಳಿಗೆ ಮಾಲೆಯಂತಿರುವ ಗುಣಮಾಲೆಗೆ ಅನುರೂಪನಾದ ವರನು ಅನಾಯಾಸದಿಂ ದೊರಕಿದುದರಿಂದ ಬಹಳವಾಗಿ ಸಂತೋಷಿಸಿದರೆಂದು ಭಾವವು.॥೪೪॥

ಶ್ಲೋಕ॥ ಅಥಾಮುಷ್ಯಾಯಣೌ ಕಾಚಿತ್
ನೀತೌ ಗಂಧೋತ್ಕಟಾನ್ತಿಕಮ್ ।
ನ ಹಿ ನೀಚಮನೋವೃತ್ತಿ-
ರೇಕರೂಪಾಸ್ಥಿತಾ ಭವೇತ್ ॥ ೪೫ ॥

ಟೀ ॥ ಅಥ-ಅನಂತರದಲ್ಲಿ, ಆಮುಷ್ಯಾಯಣೌ-ಈ ಗುಣಮಾಲೆಯ ಕುಲವೃದ್ಧರಾದ ಬಂಧುಗಳು, ಕಾಚಿತ್-ಇಬ್ಬರು, ಗಂಧೋತ್ಕಟಾಂತಿಕಂ – ಗಂಧೋತ್ಕಟ-ಗಂಧೋತ್ಕಟಶ್ರೇಷ್ಠಿಯ, ಅಂತಿಕಂ-ಸಮೀಪವನ್ನು ಕುರಿತು, ನೀತೌ-ಕಳುಹಿಸಲ್ಪಟ್ಟರು., ನೀಚಮನೋವೃತ್ತಿಃ–ನೀಚ-ರಾಗಮೂಲಕವಾದ ಕೆಲಸದಲ್ಲಿ, ಮನೋವೃತ್ತಿಃ-ಮನೋವ್ಯಾಪಾರವು,ಏಕರೂಪಾ(ಸತೀ)-ಒಂದೇರೀತಿಯಾಗಿ, ಸ್ಥಿತಾ(ಸತೀ)-ಇರುವಂಥಾದ್ದಾಗಿ, ನಹಿಭವೇತ್-ಆಗುವುದಿಲ್ಲವಷ್ಟೆ?.

ತಾತ್ಪರ್ಯ ॥ ಅನಂತರದಲ್ಲಿ ಈ ಗುಣಮಾಲೆಯ ತಾಯಿತಂದೆಗಳು ತಮ್ಮ ಕುಲವೃದ್ಧರಾದ ಇಬ್ಬರನ್ನು ಗಂಧೋತ್ಕಟಶ್ರೇಷ್ಠಿಯ ಸಮೀಪವಂ ಕುರಿತು ಕಳುಹಿಸಿದರು. ರಾಗಮೂಲಕವಾದ ಕೆಲಸದಲ್ಲಿ ಮನೋವ್ಯಾಪಾರವು ಒಂದೇಪ್ರಕಾರವಿರುವದಿಲ್ಲವಷ್ಟೆ? ರಾಗಾವಿಷ್ಟರು ತಮ್ಮ ಉಪಾಯದಲ್ಲಿ ಕಾರ್ಯಸಿದ್ಧಿಪರ್ಯಂತವೂ ಪ್ರವರ್ತಿಸುವರೇ ಹೊರ

ತು ಸುಮ್ಮನೆ ಇರುವುದಿಲ್ಲವೆಂದಭಿಪ್ರಾಯವು. ( ರಾಗವು ಪ್ರವೃತ್ತಿಹೇತುವು. ವೈರಾಗ್ಯವೇ ನಿವೃತ್ತಿಹೇತುವು.ಎಂದುಭಾವವು) ॥೪೫॥

ಶ್ಲೋಕ॥ ಅನುಮೇನೇ ತಯೋರ್ವಾಕ್ಯಂ

ಶ್ರುತ್ವಾ ಗಂಧೋತ್ಕಟೋಪಿ ಸಃ ।

ಅದೋಷೋಪಹತೋ ಹ್ಯರ್ಥಃ

ಪರೋಕ್ತ್ಯಾನೈವ ದೂಷ್ಯತೇ ॥೪೬॥

ಟೀ ॥ ಸಃ ಗಂಧೋತ್ಕಟೋಪಿ-ಆ ಗಂಧೋತ್ಕಟ ಶ್ರೇಷ್ಠಿಯೂಕೂಡ, ತಯೋಃ-ಆ ಗುಣಮಾಲೆಯ ಬಂಧುಗಳ, ವಾಕ್ಯಂ-ವಚನವನ್ನು, ಶ್ರುತ್ವಾ-ಕೇಳಿ, ಅನುಮೇನೇ-ಸಮ್ಮತಿಸಿದನು., ಅದೋಷೋಪಹತಃ-ದೋಷರಹಿತವಾದ, ಅರ್ಥಃ- ಅರ್ಥವು, ಪರೋಕ್ತ್ಯಾ-ಪರ-ಇತರರ, ಉಕ್ತ್ಯಾ-ಮಾತಿನಿಂದ, ನೈವದೂಷ್ಯತೇ ಹಿ-ದೂಷಿಸಲ್ಪಡುವುದಿಲ್ಲವಷ್ಟೆ?.

ತಾತ್ಪರ್ಯ ॥ ಆ ಗಂಧೋತ್ಕಟಶ್ರೇಷ್ಠಿಯೂಕೂಡ ಆ ಗುಣಮಾಲೆಯಬಂಧುಗಳು ಹೇಳಿದ ಪರನಿಶ್ಚಯಾರ್ಥವಾದ ಮಾತಂಕೇಳಿ, ಗುಣಮಾಲೆಯುಂ ಪುತ್ರನಿಗೆ ವಿವಾಹಮಾಡಿಕೊಳ್ಳುವುದಕ್ಕೋಸುಗ ಒಪ್ಪಿದನು. ನಿರ್ದೋಷವಾದ ಅರ್ಥವು ಇತರರ ಮಾತಿನಿಂದ ದೂಷಿಸಲ್ಪಡುವುದಿಲ್ಲವಷ್ಟೆ? ಉಚಿತವಾದ ಅರ್ಥವನ್ನು ಯಾರು ಹೇಳಿದರೂ ಅಂಗೀಕರಿಸುವುದೇ ನ್ಯಾಯವೆಂದಭಿಪ್ರಾಯವು. ॥೪೬॥

ಶ್ಲೋಕ॥ ಸುತಾಂ ವಿನಯಮಾಲಾಯಾ

ಗುಣಮಾಲಾಂ ಯಥಾವಿಧಿ ।

ದತ್ತಾಂ ಕುಬೇರಮಿತ್ರೇಣ

ಪರಿಣಿನ್ಯೇಥ ಜೀವಕಃ ॥ ೪೭ ॥

ಟೀ ॥ ಅಥ-ಅನಂತರದಲ್ಲಿ, ಜೀವಕಃ-ಜೀವಂಧರಸ್ವಾಮಿಯು, ವಿನಯಮಾಲಾಯಾಃ-ವಿನಯಮಾಲೆಯೆಂಬವಳಿಗೆ, ಸುತಾಂ-ಮಗಳಾದ, ಕುಬೇರಮಿತ್ರೇಣ- ತಂದೆಯಾದ ಕುಬೇರಮಿತ್ರನಿಂದ, ದತ್ತಾಂ-ಕೊಡಲ್ಪಟ್ಟ, ಗುಣಮಾಲಾಂ- ಗುಣಮಾಲೆ

ಯನ್ನು, ಯಥಾವಿಧಿ-ಶಾಸ್ತ್ರೋಕ್ತ ಪ್ರಕಾರವಾಗಿ, ಪರಿಣಿನ್ಯೇ- ವಿವಾಹ ಮಾಡಿ ಕೊಂಡನು.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಸ್ವಾಮಿಯು ವಿನಯ ಮಾಲೆಯೆಂಬುವಳಿಗೆ ಮಗಳಾಗಿಯೂ, ತಂದೆಯಾದ ಕುಬೇರಮಿತ್ರನಿಂದ ಕೊಡಲ್ಪಟ್ಟ ಗುಣಮಾಲೆಯನ್ನು ಶಾಸ್ತ್ರೋಕ್ತ ಪ್ರಕಾರವಾಗಿ ವಿವಾಹಮಾಡಿಕೊಂಡನು. ॥೪೭॥

ವಸಂತಋತುವಿನಲ್ಲಿ ಪಟ್ಟಣದಲ್ಲಿದ್ದ ಸಮಸ್ತಜನಗಳು ಜಲಕ್ರೀಡಾರ್ಥವಾಗಿ ನದೀತೀರದಲ್ಲಿ ಸೇರಿರಲು, ಪುತ್ರಮಂಡಲ ಸಮೇತನಾಗಿ ಜೀವಂಧರಕುಮಾರನೂ ಅಲ್ಲಿ ಸೇರಿರಲು, ಅಲ್ಲಿ ಬ್ರಾಹ್ಮಣರು ಯಜ್ಞಾರ್ಥವಾಗಿ ಹೋಮಮಾಡಲೋಸುಗ ಪಾಕಮಾಡಿ ಇಟ್ಟಿದ್ದ ಅನ್ನವನ್ನು ಒಂದು ನಾಯಿಮುಟ್ಟಲು ಆ ಬ್ರಾಹ್ಮಣರು ಕಲ್ಲಿನಿಂದ ಹೊಡೆದು ಆನಾಯಿಯನ್ನು ಕೊಲ್ಲಲು ಜೀವಂಧರ ಕುಮಾರನು ಪರಮದಯೆಯಿಂದ ಆ ನಾಯಿಗೆ ಮರಣಸಮಯದಲ್ಲಿ ಪಂಚಪರಮೇಷ್ಠಿಮಂತ್ರಗಳಂ ಕರ್ಣದಲ್ಲಿ ಜಪಿಸಲು, ಆನಾಯಿಯು ಮಂತ್ರವೈಭವದಿಂ ದೇವನಾದುದು. ಅನಂತರ ಸುರಮಂಜರಿ ಗುಣಮಾಲೆಯರೆಂಬೀರ್ವರು ಸಖಿಗಳೊತಮ್ಮಿಬ್ಬರ ಗಂಧಪುಡಿಗಳ ನಿಮಿತ್ತವಾದ ಸ್ಪರ್ಧೆಯಿಂದ ಪ್ರಾಜ್ಞರಲ್ಲಿ ಪರೀಕ್ಷಿಸಿ ನಿರ್ಣಯವಾಗದೇ ಇರುತ್ತಿರಲು ಕಡೆಗೆ ಜೀವಂಧರ ಕುಮಾರನು ಗುಣಮಾಲೆಯಚೂರ್ಣವೇ ಉತ್ಕೃಷ್ಟವೆಂದು ಸದೃಷ್ಟಾಂತವಾಗಿಬಪ್ಪಿಸಲು ಮತ್ತು ಕೊಲ್ಲಲುಬಂದ ಮದಿಸಿದಾನೆಯುಂನಿಗ್ರಹಿಸಿ ಗುಣಮಾಲೆಯಂ ರಕ್ಷಿಸಿದುದರಿಂ ಅತ್ಯಂತಾನುರಾಗವುಳ್ಳ ಗುಣಮಾಲೆಯು ಮಹಾಪ್ರಯತ್ನದಿಂ ತಾನಾಗಿ ಜೀವಂಧರಕುಮಾರನಂ ವಿವಾಹಮಾಡಿಕೊಂಡಳೆಂಬಲ್ಲಿಗೆ

ನಾಲ್ಕನೇಲಂಬನು ಸಮಾಪ್ತವಾದುದು.



ಶ್ರೀ.

॥ ಓಂ ನಮಸ್ಸಿದ್ಧೇಭ್ಯಃ ॥

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ,

# ಷಷ್ಠೋ ಲಂಬಃ

ಶ್ಲೋಕ॥ ಅಥವ್ಯೂಢಾಮಿಮಾಂ ಮನ್ಯೇ
ಸಕುಮಾರೋತಿದುರ್ಲಭಾಮ್ |
ಪ್ರಯತ್ನೇನ ಹಿ ಲಬ್ಧಂ ಸ್ಯಾ-
ತ್ಪ್ರಾಯಸ್ಸ್ನೇಹಸ್ಯ ಕಾರಣಮ್ ॥ ೧ ॥

ಟೀ ॥ ಅಥ-ಗುಣಮಾಲಾವಿವಾಹಾನಂತರದಲ್ಲಿ, ಸಃ-ಆ ಮಹಾ ಪುಣ್ಯಪುರುಷನೆಂದು ಪ್ರಸಿದ್ಧನಾದ, ಕುಮಾರಃ-ಜೀವಂಧರಕುಮಾರನು, ವ್ಯೂಢಾಂ - ಮದುವೆ ಮಾಡಿಕೊಳ್ಳಲ್ಪಟ್ಟ, ಇಮಾಂ-ಈ ಗುಣಮಾಲೆಯನ್ನು, ಅತಿದುರ್ಲಭಾಂ(ಸತೀಂ)-ಸಾಧಾರಣವಾಗಿ ದೊರಕತಕ್ಕವಳಲ್ಲವೆಂಬದಾಗಿ, ಮೇನೇ-ತಿಳಿದನು., ಪ್ರಯತ್ನೇನ-ಮಹಾಪ್ರಯಾಸಕರವಾದ ಸಾಹಸಪ್ರಯತ್ನದಿಂದ, ಲಬ್ಧಂ-ಪಡೆಯಲ್ಪಟ್ಟ ವಸ್ತುವು, ಪ್ರಾಯಃ-ಬಹಳವಾಗಿ, ಸ್ನೇಹಸ್ಯ-ಪ್ರೀತಿಗೆ, ಕಾರಣಂ-ಕಾರಣವಾಗಿ, ಸ್ಯಾದ್ಧಿ-ಆಗುತ್ತದೆಯಲ್ಲವೆ ?.

ತಾತ್ಪರ್ಯ ॥ ಆ ಗುಣಮಾಲೆಯನ್ನು ವಿವಾಹಮಾಡಿಕೊಂಡನಂತರ ಆ ಮಹಾಸಾಹಸಿಯಾಗಿ ಪೂರ್ವಭವದ ಪುಣ್ಯೋದಯದಿಂದ ಅಸಾಧ್ಯಕಾರ್ಯವನ್ನೂಕೂಡ ಸಾಧಿಸಬಲ್ಲವನಾದ ಜೀವಂಧರಕುಮಾರನು ನೂತನವಿವಾಹದಿಂದಲತಿಪ್ರಿಯಳಾದ ಈ ಗುಣಮಾಲೆಯನ್ನು ತನಗೆ ದೊರೆಯುದರತ್ನವು ದೊರೆತುದೆಂದು ಮನಸ್ಸಿನಲ್ಲಿಯೇ ಗೌರವಿಸಿ ಪರಮ ಸಂತುಷ್ಟನಾದನು. ಲೋಕದಲ್ಲಿ ಬಹುಪ್ರಯತ್ನದಿಂಪಡೆದ ವಸ್ತುವು ಅತಿಪ್ರೀತಿಗೆ ಕಾರಣವಾಗುವುದಷ್ಟೆ? ಜೀವಂಧರಕುಮಾರನೂಕೂಡ ಗುಣಮಾಲೆಯನ್ನು ಬಹುಸಾಹಸದಿಂ ಸಾಧಿಸಿದನು. ॥೧॥

ಶ್ಲೋಕ॥ ನಾದತ್ತ ಕಬಳಂ ದನ್ತೀ
ಸ್ವಾಮಿಕುಣ್ಡಲತಾಡಿತಃ ।
ನ ಹಿ ಸೋಢವ್ಯತಾಂ ಯಾತಿ
ತಿರಶ್ಚಾಂ ವಾ ತಿರಸ್ಕೃತಿಃ ॥ ೨ ॥

ಟೀ ॥ ಸ್ವಾಮಿಕುಂಡಲತಾಡಿತಃ-ಸ್ವಾಮಿ-ಜೀವಂಧರಕುಮಾರನಿಂದ, ಕುಂಡಲ-ತನ್ನಕರ್ಣಕುಂಡಲದಿಂದ, ತಾಡಿತಃ-ಹೊಡೆಯಲ್ಪಟ್ಟ, ದಂತೀ-ಆನೆಯು, ಕಬಳಂ-ಆಹಾರವನ್ನು, ನಾದತ್ತ-ಸ್ವೀಕರಿಸಲಿಲ್ಲವು., ತಿರಶ್ಚಾಂವಾ- ತಿರ್ಯಗ್ಜಂತುವಿಗೂ ಕೂಡ, ತಿರಸ್ಕೃತಿಃ-ಪರರಿಂದುಂಟಾದ ಅಪಮಾನವು, ಸೋಢವ್ಯತಾಂ-ಸಹಿಸುವುದಕ್ಕೆ ಯೋಗ್ಯವಾಗುವಿಕೆಯನ್ನು, ನಯಾತಿ ಹಿ-ಹೊಂದುವುದಿಲ್ಲವಷ್ಟೆ?.

ತಾತ್ಪರ್ಯ ॥ ಕಾಷ್ಠಾಂಗಾರನ ಪಟ್ಟದಾನೆಯು ಮದಿಸಿ, ನದೀತೀರದೊಳು ಗುಣಮಾಲೆಗಿದಿರಾಗಿ ಓಡಿಬರಲು, ತನ್ನ ಕರ್ಣಕುಂಡಲದಿಂದಲಾಆನೆಯನ್ನು ಗುಣಮಾಲೆಯಂ ರಕ್ಷಿಸಲೋಸುಗ ಹೊಡೆದು ಅದರೊಡನೆ ವಿಚಿತ್ರವಾಗಿ ಬಹಳ ಹೊತ್ತು ಯುದ್ಧವನ್ನುಮಾಡಿ ಸೋಲಿಸಲು, ಆ ಗಜರಾಜನು ತನಗೆ ಉಂಟಾದ ಅಪಮಾನದಿಂದ ಆ ಹಾರವಂಬಿಟ್ಟಿತು. ತಿರ್ಯಗ್ಜಂತುವಿಗೂಕೂಡ ಪರರಿಂದುಂಟಾದ ಅಪಮಾನವು ಸಹಿಸಲಶಕ್ಯವು. ಹೀಗಿರುವಲ್ಲಿ, ಮಾನಾಪಮಾನಸ್ವರೂಪವ ಬಲ್ಲವರಾದ ಮನುಷ್ಯರು ಹೇಗೆ ಸಹಿಸುವರು?॥ ೨॥

ಶ್ಲೋಕ ॥ ಕಾಷ್ಠಾಂಗಾರಸ್ತದಾಕರ್ಣ್ಯ
ಚುಕೋಪ ಸ್ವಾಮಿನೇ ಭೃಶಮ್ ।
ಸರ್ಪಿಷ್ಪಾತೇನ ಸಪ್ತಾರ್ಚಿ-
ರುದರ್ಚಿಸ್ಸುತರಾಂ ಭವೇತ್ ॥ ೩ ॥

ಟೀ ॥ ಕಾಷ್ಠಾಂಗಾರಃ-ಕಾಷ್ಠಾಂಗಾರನು, ತತ್-ಆ ವೃತ್ತಾಂತವನ್ನು, ಆಕರ್ಣ್ಯ-ಕೇಳಿ, ಸ್ವಾಮಿನೇ-ಜೀವಂಧರಸ್ವಾಮಿಗೋಸುಗ, ಭೃಶಂ-ಬಹಳವಾಗಿ, ಚುಕೋಪ-ಕೋಪಿಸಿಕೊಂಡನು., ಸಪ್ತಾರ್ಚಿಃ-ಬೆಂಕಿಯು, ಸರ್ಪಿಷ್ಪಾತೇನ-ಸರ್ಪಿಃ-ತುಪ್ಪದ, ಪಾತೇನ-ಬೀಳುವುದರಿಂದ, ಸುತರಾಂ-ಬಹಳವಾಗಿ, ಉದರ್ಚಿಸ್ಸನ್-ಉ

ತ್-ಮೇಲಕ್ಕೆ ಏಳುತ್ತಲಿರುವ, ಅರ್ಚಿಸ್ಸ್-ಜ್ವಾಲೆಯುಳ್ಳದ್ದಾಗಿ, ಭವೇದ್ಧಿ-ಆದೀತಲ್ಲವೆ ?.

ತಾತ್ಪರ್ಯ ॥ ಕಾಷ್ಠಾಂಗಾರನು ಈ ಪಟ್ಟದಾನೆಯು ಆಹಾರವನ್ನು ಬಿಟ್ಟಿತೆಂಬ ಮಾತನ್ನು ಕೇಳಿ ಜೀವಂಧರಕುಮಾರನೇ ಇದಕ್ಕೆ ನಿಮಿತ್ತವೆಂದು ತಿಳಿದು ಬಹಳವಾಗಿ ಕೋಪಿಸಿಕೊಂಡನು. ಲೋಕದೊಳು ಬೆಂಕಿಗೆ ತುಪ್ಪವುಬಿದ್ದಲ್ಲಿ ಉರಿಯುಹೆಚ್ಚುವುದು ಸ್ವಭಾವವಲ್ಲವೆ? ಹಾಗೆ ಕಾಷ್ಠಾಂಗಾರನ ಕೋಪವೆಂಬ ಬೆಂಕಿಗೆ ಜೀವಂಧರಕುಮಾರನ ಅಪರಾಧವೇ ಆಜ್ಯವುಬಿದ್ದಂತಾದುದು ? ॥ ೩ ॥

ಶ್ಲೋಕ ॥ ಸಙ್ಗಾದನಙ್ಗಮಾಲಾಯಾ
ವಿಜಯಾಚ್ಚ ವನೌಕಸಾಮ್ ।
ವೀಣಾವಿಜಯತಶ್ಚಾಸ್ಯ
ಕೋಪಾಗ್ನಿಸ್ಸ್ಥಾಪಿತೋ ಹೃದಿ ॥ ೪ ॥

ಟೀ ॥ ಅನಂಗಮಾಲಾಯಾಃ-ಅನಂಗಮಾಲೆಯೆಂಬ ಕಾಷ್ಠಾಂಗಾರನ ವೇಶ್ಯಾಸ್ತ್ರೀಯ, ಸಂಗಾತ್-ಸಂಬಂಧಪಡೆಸೆಯಿಂದಲೂ, (ಜೀವಂಧರನನ್ನು ಮೋಹಿಸಿದುದರಿಂದಲೂ ಎಂದರ್ಥವು), ವನೌಕಸಾಂ-ಬೇಡರ, ವಿಜಯಾಚ್ಚ-ಜಯಿಸಿದುವರಪೆಸೆಯಿಂದಲೂ, ವೀಣಾವಿಜಯತಶ್ಚ-ವೀಣಾ-ವೀಣಾವಿದ್ಯೆಯಲ್ಲಿ, ವಿಜಯತಶ್ಚ-ಮಹಾಪಂಡಿತಳಾದ ಗಂಧರ್ವದತ್ತೆಯನ್ನು ಜಯಿಸಿದುದರಿಂದಲೂ, ಅಸ್ಯ-ಈಕಾಷ್ಠಾಂಗಾರನ, ಹೃದಿ-ಮನಸ್ಸಿನಲ್ಲಿ, ಕೋಪಾಗ್ನಿಃ-ಕೋಪ-ಕೋಪವೆಂಬ, ಅಗ್ನಿಃ-ಬೆಂಕಿಯು, ಸ್ಥಾಪಿತಃ-ಸ್ಥಾಪಿಸಲ್ಪಟ್ಟಿತು.

ತಾತ್ಪರ್ಯ ॥ ಅನಂಗಮಾಲೆ ಯೆಂಬ ವೇಶ್ಯಾಸ್ತ್ರೀಗೆ ಜೀವಂಧರಸ್ವಾಮಿಯಲ್ಲಿ ಅತ್ಯಂತಅನುರಾಗ ವುಂಟಾದುದರಿಂದಲೂ, ಕಾಷ್ಠಾಂಗಾರನ ಸೈನ್ಯದಿಂದಲೂ ಜಯಿಸಲಶಕ್ಯರಾದ ನಂದಗೋಪನ ಗೋಧನವನೆಲ್ಲವನ್ನೂ ಅಪಹರಿಸಿಕೊಂಡುಹೋದ ಮಹಾಬಲಿಷ್ಠರಾದ ಬೇಡರನ್ನು ಜಯಿಸಿದುದರಿಂದಲೂ, ಗರುಡವೇಗನೆಂಬ ವಿದ್ಯಾಧರರಾಜನ ಪುತ್ರಿಯಾಗಿಯೂ, ವೀಣಾವಿದ್ಯದಲ್ಲಿ ಮಹಾಪಂಡಿತಳಾಗಿಯೂ ಇರುವ ಗಂಧರ್ವದತ್ತೆಯನ್ನು ಜಯಿಸಿ ಸ್ವಯಂವರ ಪತಿಯಾದುದರಿಂದಲೂ, ಈ ಜೀವಂಧರ

ಸ್ವಾಮಿಯಲ್ಲಿ ಅಸೂಯೆಯಿಂದ ಕಾಷ್ಠಾಂಗಾರನ ಹೃದಯದಲ್ಲಿ ಕೋಪ ವೆಂಬ ಬೆಂಕಿಯು ಸ್ಥಾಪಿಸಲ್ಪಟ್ಟಿತು. ॥ ೪ ॥

ಶ್ಲೋಕ ॥ ಗುಣಾಧಿಕ್ಯಂ ಚ ನೀಚಾನಾ-
ಮಾಧೇರೇವ ಹಿ ಕಾರಣಮ್ ।
ನೀಚತ್ವಂನಾಮ ಕಿನ್ನು ಸ್ಯಾ-
ದಸ್ತಿಚೇದ್ಗುಣರಾಗಿತಾ ॥ ೫ ॥

ಟೀ ॥ ಗುಣಾಧಿಕ್ಯಂ ಚ-ಗುಣ-ಗುಣಗಳ, ಆಧಿಕ್ಯಂ ಚ- ಹೆಚ್ಚಾಗಿರುವಿಕೆ ಯೂಕೂಡ, ನೀಚಾನಾಂ-ಗುಣಹೀನರಾದ ದುರ್ಜನರಿಗೆ, ಆಧೇರೇವ- ಹೊಟ್ಟೇಕಿಚ್ಚುಪಡುವುದಕ್ಕೇನೆ (ಮನೋವ್ಯಾಧಿಗೂ), ಕಾರಣಂಹಿ-ಕಾರಣವಾಗುತ್ತದಲ್ಲವೆ? ಗುಣರಾಗಿತಾ-ಗುಣ-ಪರರಗುಣದಲ್ಲಿ, ರಾಗಿತಾ-ಪ್ರೀತಿಯು, ಅಸ್ತಿಚೇತ್-ಇದ್ದದ್ದೇ ಆದರೆ, ನೀಚತ್ವಂನಾಮ - ನೀಚಮನುಷ್ಯನೆನಿಸುವಿಕೆಯು, ಸ್ಯಾತ್ಕಿನ್ನು- ಆಗುವುದೇ ಏನು ?.

ತಾತ್ಪರ್ಯ ॥ ಗುಣವಂತರಿಗೆ ಗುಣಗಳು ಹೆಚ್ಚಾಗಿರೋಣವೂಕೂಡ ದುರ್ಜನರ ಮನಸ್ಸಂಕಟಕ್ಕೋಸುಗವೇ(ಅಂದರೆ ಹೊಟ್ಟೆಕಿಚ್ಚಿಗೇನೆ ಕಾರಣವಾಗುತ್ತದೆ.) ಪರರಗುಣವನ್ನು ನೋಡಿ ಸಹಿಸದೇಯಿರುವುದಲ್ಲವೆ? ನೀಚಮನುಷ್ಯನೆನಿಸುವುದಕ್ಕೆ ಕಾರಣವಾದ ದುರ್ಗುಣವು? ಇತರರಗುಣವನ್ನು ನೋಡಿ ಸಂತೋಷಿಸುವ ಸ್ವಭಾವವುಳ್ಳ ಪುರುಷನು ಎಂದಿಗೂ ನೀಚನೆನಿಸಲಾರನು. ಪ್ರಕೃತದಲ್ಲಿ ಜೀವಂಧರಸ್ವಾಮಿಯ ಗುಣಗಳನ್ನು ಕಾಷ್ಠಾಂಗಾರನು ನೀಚನಾದುದರಿಂದಲ್ಲವೆ ಸಹಿಸಲಿಲ್ಲವು. ಗುಣವಂತರು ಗುಣಶಾಲಿಗಳಾಗಿರುವಮಾತ್ರವೇ ದುರ್ಜನರಿಗೆ ಮಹಾಪರಾಧವಾಗುವುದೇ ಹೊರತು, ಬೇರೆಯಾವ ಅಪರಾಧವನ್ನೂ ಮಾಡರು. (ಜೀವಂಧರನ ಪರಾಕ್ರಮಾದಿ ಗುಣಗಳೇ ಕಾಷ್ಠಾಂಗಾರನಿಗೆ ಅಪರಾಧವಾಯಿತೆಂದರ್ಥವು.) ॥ ೫ ॥

ಶ್ಲೋಕ ॥ ಉಪಕಾರೋಽಪಿ ನೀಚಾನಾ-
ಮಪಕಾರಾಯ ಕಲ್ಪತೇ ।

ಪನ್ನಗೇನ ಪಯಃ ಪೀತಂ
ವಿಷಸ್ಯೈವ ಹಿ ವರ್ಧನಮ್ ॥ ೬ ॥

ಟೀ ॥ ಉಪಕಾರೋಪಿ-ಉಪಕಾರವೂಕೂಡ, ನೀಚಾನಾಂ-ನೀಚರಿಗೆ, ಅಪಕಾರಾಯ-ಅಪಕಾರಕ್ಕೋಸುಗವೇ, ಕಲ್ಪತೇ-ಕಾರಣವಾಗುತ್ತದೆ., ಪನ್ನಗೇನ-ಸರ್ಪದಿಂದ, ಪೀತಂ-ಕುಡಿಯಲ್ಪಟ್ಟ, ಪಯಃ-ಹಾಲು, ವಿಷಸ್ಯೈವ-ವಿಷಕ್ಕೇನೆ, ವರ್ಧನಂಹಿ-ವೃದ್ಧಿಹೊಂದಿಸುವುದಕ್ಕೆ ಕಾರಣವಾಗುತ್ತದಲ್ಲವೆ?.

ತಾತ್ಪರ್ಯ॥ ನೀಚರಿಗೆ ಉಪಕಾರವನ್ನುಮಾಡಿದರೆ ಅಪಕಾರಕ್ಕೇನೆ ಕಾರಣವಾಗುತ್ತದೆ. (ಅಂದರೆ.—ನೀಚರು ಉಪಕಾರ ಮಾಡಿದವನಿಗೆ ಪ್ರತಿಯಾಗಿ ಅಪಕಾರವನ್ನೇಮಾಡುವರು. ) ಅದು ಹೇಗೆಂದರೆ.–ಸರ್ಪದಿಂದಕುಡಿಯಲ್ಪಟ್ಟ ಕ್ಷೀರವು ವಿಷಕ್ಕೇನೆ ಅಭಿವೃದ್ಧಿಕಾರಣವಾಗುವುದೇಹೊರತು ಒಳ್ಳೇದಾಗುವುದಿಲ್ಲವು. ಆದುದರಿಂದ ನೀಚರಿಗುಪಕಾರವಮಾಡಬಾರದು. ॥ ೬ ॥

ಶ್ಲೋಕ॥ ಹಸ್ತಗ್ರಾಹಂ ಗೃಹೀತುಂ ಸ–
ಕುಮಾರಂ ಪ್ರಾಹಿಣೋದ್ಬಲಮ್ ।
ಮೂಢಾನಾಂ ಹನ್ತ ಕೋಪಾಗ್ನಿ–
ರಸ್ಥಾನೇಪಿ ಹಿ ವರ್ಧತೇ ॥ ೭ ॥

ಟೀ॥ ಸಃ-ಆ ಕಾಷ್ಠಾಂಗಾರನು, ಕುಮಾರಂ-ಜೀವಂಧರ ಕುಮಾರನನ್ನು, ಹಸ್ತಗ್ರಾಹಂ-ಕೈಸೆರೆಯನ್ನುಹಿಡಿದು, ಗೃಹೀತುಂ-ತರುವುದಕ್ಕೋಸುಗ, ಬಲಂ-ಸೈನ್ಯವನ್ನು, ಪ್ರಾಹಿಣೋತ್-ಕಳುಹಿಸಿದನು., ಮೂಢಾನಾಂ-ಮೂಢರಿಗೆ, ಕೋಪಾಗ್ನಿಃ–ಕೋಪ-ಕೋಪವೆಂಬ, ಅಗ್ನಿಃ-ಬೆಂಕಿಯು, ಅಸ್ಥಾನೇಪಿ-ಕೋಪಮಾಡುವುದಕ್ಕೆ ಯೋಗ್ಯವಲ್ಲದ ಸ್ಥಾನದಲ್ಲಿಯೂಕೂಡ (ನಿಷ್ಕಾರಣವಾಗಿಯೂಕೂಡ), ವರ್ಧತೇಹಿ-ವೃದ್ಧಿಹೊಂದುತ್ತದಲ್ಲವೆ?, ಹಂತ-ಆಶ್ಚರ್ಯವು !!.

ತಾತ್ಪರ್ಯ॥ ಆ ಕಾಷ್ಠಾಂಗಾರನು ಜೀವಂಧರಕುಮಾರನನ್ನು ಕೈಸೆರೆಹಿಡಿದು ಕಟ್ಟಿ ತರಲೋಸುಗ ತನ್ನ ದಂಡನ್ನು ಕಳುಹಿಸಿದನು. ಮೂಢರಿಗೆ ನಿಷ್ಕಾರಣವಾಗಿ ಅಪರಾಧವಿಲ್ಲದವರಲ್ಲಿಯೂ ಕೂಡ ಕೋಪವೆಂಬ ಬೆಂಕಿಯು ವೃದ್ಧಿಹೊಂದುವುದಲ್ಲವೆ? ಇದು ಆಶ್ಚರ್ಯವು! ॥೭॥

ಶ್ಲೋಕ ॥ ಕುಮಾರಾವಸಥಂ ಪಶ್ಚಾ-
ತ್ತತ್ಸೈನ್ಯಂ ಪರ್ಯವಾರಯತ್ ।
ಮೃಗಾಃ ಕಿನ್ನಾಮ ಕುರ್ವನ್ತಿ
ಮೃಗೇಂದ್ರಂ ಪರಿತಸ್ಸ್ಥಿತಾಃ ॥ ೪ ॥

ಟೀ ॥ ಪಶ್ಚಾತ್-ಅನಂತರದಲ್ಲಿ, ತತ್ಸೈನ್ಯಂ—ತತ್-ಆ ಕಾಷ್ಠಾಂಗಾರನ, ಸೈನ್ಯಂ-ಸೈನ್ಯವು, ಕುಮಾರಾವಸಥಂ—ಕುಮಾರ-ಜೀವಂಧರ ಕುಮಾರನ, ಆವಸಥಂ-ಮನೆಯನ್ನು, ಪರ್ಯವಾರಯತ್-ಮುತ್ತಿಗೆ ಹಾಕಿಕೊಂಡಿತು., ಮೃಗೇಂದ್ರಃ-ಸಿಂಹವ, ಪರಿತಃ-ಸುತ್ತಲೂ, ಸ್ಥಿತಾಃ-ಇರುತ್ತಿರುವ, ಮೃಗಾಃ-ಮೃಗಗಳು, ಕಿಂನಾಮಕುರ್ವಂತಿ-ಏನನ್ನುತಾನೇ ಮಾಡುವುವು?.

ತಾತ್ಪರ್ಯ ॥ ಅನಂತರದಲ್ಲಿ ಕಾಷ್ಠಾಂಗಾರನ ಆಜ್ಞಾಪ್ರಕಾರವಾಗಿ ಸೈನ್ಯವು ಜೀವಂಧರಕುಮಾರನ ವಾಸಸ್ಥಾನವಾದ ಗಂಧೋತ್ಕಟಶ್ರೇಷ್ಠಿಯ ಮನೆಯಸುತ್ತಲೂ ಮುತ್ತಿಗೆಹಾಕಿಕೊಂಡಿತು. ಅದರೆ, ಏನು ಪ್ರಯೋಜನವು? ಸಿಂಹವನ್ನು ಹಿಡಿಯಬೇಕೆಂದು ಸುತ್ತಲೂ ಆಕ್ರಮಿಸಿಕೊಂಡ ಮೃಗಗಳು ಸಿಂಹವನ್ನು ಏನೂಮಾಡಲಾರದಲ್ಲವೆ? (ಆಪ್ರಕಾರ ಈ ದುರ್ಬಲಗಳಾದ ಸೈನ್ಯಗಳೆಷ್ಟುಸೇರಿದರೂ ಮಹಾವೀರನಾದ ಜೀವಂಧರ ಕುಮಾರನನ್ನೇನೂ ಮಾಡಲಾರವೆಂದರ್ಥವು.) ॥೪॥

ಶ್ಲೋಕ ॥ ಪ್ರಾರೇಭೇ ಸಕುಮಾರೋಪಿ
ಪ್ರಹರ್ತುಂ ರೋಷತಶ್ಚಮೂಮ್ ।
ತತ್ತ್ವಜ್ಞಾನಜಲಂ ನೋಚೇ-
ತ್ಕ್ರೋಧಾಗ್ನಿಃ ಕೇನ ಶಾಮ್ಯತಿ ॥ ೯ ॥

ಟೀ॥ ಸಕುಮಾರೋಪಿ-ಆ ಮಹಾಬಲಶಾಲಿಯಾದ, ಜೀವಂಧರ ಕುಮಾರನೂ ಕೂಡ, ರೋಷತಃ-ಮಹಾಕೋಪದಿಂದ, ಚಮೂಂ- ಸೈನ್ಯವನ್ನು, ಪ್ರಹರ್ತುಂ-ಕೊಲ್ಲಲೋಸುಗ, ಪ್ರಾರೇಭೇ-ಆರಂಭಿಸಿದನು., ತತ್ತ್ವಜ್ಞಾನಜಲಂ—ತತ್ತ್ವಜ್ಞಾನ-ಯುಕ್ತಾಯುಕ್ತಪರಿಜ್ಞಾನವೆಂಬ, ಜಲಂ-ನೀರು, ನೋಚೇತ್-ಇಲ್ಲದೇಹೋದರೆ, ಕ್ರೋಧಾಗ್ನಿಃ— ಕ್ರೋಧ- ಕೋಪವೆಂಬ, ಅಗ್ನಿಃ- ಬೆಂಕಿಯು, ಕೇನ-ಯಾವುದರಿಂದ, ಶಾಮ್ಯತಿ-ಅಡಗುವುದು?.

ತಾತ್ಪರ್ಯ॥ ಮಹಾವೀರನಾದ ಜೀವಂಧರಕುಮಾರನೊಡನೆ ರೋಷದಿಂದ ಆ ದಂಡನನ್ನು ಕೊಲ್ಲುವುದಕ್ಕೋಸುಗ ಪ್ರಯತ್ನಿಸಿದನು. ವಿವೇಕಜ್ಞಾನವೆಂಬ ನೀರಿಲ್ಲದಿದ್ದರೆ ಕೋಪವೆಂಬ ಬೆಂಕಿಯನ್ನು ಬೇರೆಯಾವುದರಿಂದ ಆರಿಸಲು ಶಕ್ಯವಾಗುವುದು? (ಕೋಪವನ್ನು ವಿವೇಕದಿಂದಲೇ ಅಡಗಿಸಬೇಕೆಂದರ್ಥವು.) ॥ ೯ ॥

ಶ್ಲೋಕ॥ ನ್ಯರೌತ್ಸೀತ್ತಸ್ಯ ಸನ್ನಾಹ-
ಮಥ ಗಂಧೋತ್ಕಟಶ್ಶನೈಃ।
ಅಲಂಘ್ಯಂ ಹಿ ಪಿತುರ್ವಾಕ್ಯ-
ಮಪತ್ಯೈಃ ಪಥ್ಯಕಾಂಕ್ಷಿಭಿಃ ॥ ೧೦ ॥

ಟೀ॥ ಅಥ-ಅನಂತರದಲ್ಲಿ, ಗಂಧೋತ್ಕಟಃ-ಗಂಧೋತ್ಕಟಶ್ರೇಷ್ಠಿಯು, ಶನೈಃ-ಮೆಲ್ಲನೆ ಉಪಾಯದಿಂದ, ತಸ್ಯ-ಆ ಜೀವಂಧರಕುಮಾರನ, ಸನ್ನಾಹಂ - ಯುದ್ಧಸನ್ನಾಹವನ್ನು, ನ್ಯರೌತ್ಸೀತ್-ತಡೆದನು., ಪಥ್ಯಕಾಂಕ್ಷಿಭಿಃ– ಪಥ್ಯ-ಶ್ರೇಯಸ್ಸನ್ನು, ಕಾಂಕ್ಷಿಭಿಃ-ಕೋರುವವರಾದ, ಅಪತ್ಯೈಃ-ಪುತ್ರರಿಂದ, ಪಿತುಃ-ತಂದೆಯ, ವಾಕ್ಯಂ-ಹಿತವಚನವು, ಅಲಂಘ್ಯಂಹಿ-ಅತಿಕ್ರಮಿಸಬಾರದಲ್ಲವೆ?.

ತಾತ್ಪರ್ಯ॥ ತಂದೆಯಾದ ಗಂಧೋತ್ಕಟಶ್ರೇಷ್ಠಿಯು ಆ ಜೀವಂಧರಕುಮಾರನ ಯುದ್ಧಸನ್ನಾಹವನ್ನು ಬಹಳ ಸಾಮೋಪಾಯದಿಂದ ಮೆಲ್ಲನೆ ತಡೆದನಲ್ಲವೆ? ತನಗೆ ಶ್ರೇಯಸ್ಸನ್ನಪೇಕ್ಷಿಸುವ ಪುತ್ರರು ಎಂದಿಗೂ ತಂದೆಯಮಾತನ್ನು ಮೀರಿ ನಡೆಯುವುದಿಲ್ಲವಲ್ಲವೆ? ॥ ೧೦ ॥

ಶ್ಲೋಕ॥ ಪಶ್ಚಾದ್ಬದ್ಧಮಮುಂ ಪಶ್ಚಾ-
ದಥ ಗಂಧೋತ್ಕಟೋ ವ್ಯಧಾತ್ ।
ನ ಹಿ ವಾರಯಿತುಂ ಶಕ್ಯಂ
ಪೌರುಷೇಣ ಪುರಾಕೃತಮ್ ॥ ೧೧ ॥

ಟೀ ॥ ಅಥ-ಅನಂತರದಲ್ಲಿ, ಗಂಧೋತ್ಕಟಃ-ಗಂಧೋತ್ಕಟಶ್ರೇಷ್ಠಿಯು, ಅಮುಂ-ಈ ಜೀವಂಧರಕುಮಾರನನ್ನು, ಪಶ್ಚಾತ್-ಹಿಂದುಗಡೆಯಲ್ಲಿ, ಬದ್ಧಂ(ಸನ್ತಂ)-ಕಟ್ಟಲ್ಪಟ್ಟವನನ್ನಾಗಿ, ಪಶ್ಚಾತ್-ತನ್ನ ಹಿಂದೆ ಬರುವನನನ್ನಾಗಿ, ವ್ಯಧಾತ್-ಮಾಡಿ

ದನು., ಪುರಾ-ಪೂರ್ವದಲ್ಲಿ, ಕೃತಂ-ಮಾಡಲ್ಪಟ್ಟಕರ್ಮವು, ಪೌರುಷೇಣ- ಪುರುಷಪ್ರಯತ್ನದಿಂದ, ವಾರಯಿತುಂ-ತಡೆಯುವುದಕ್ಕೆ, ನಶಕ್ಯಂಹಿ-ಸಾಧ್ಯವಾಗುವುದಿಲ್ಲವಷ್ಟೆ.

ತಾತ್ಪರ್ಯ ॥ ಅನಂತರ ಗಂಧೋತ್ಕಟಶ್ರೇಷ್ಠಿಯು ಮಗನಾದ ಜೀವಂಧರಕುಮಾರನನ್ನು ಹಿಂದುಗಡೆಯಲ್ಲಿಕಟ್ಟಿ, ತನ್ನ ಹಿಂದೆಯೇ ರಾಜಾಸ್ಥಾನಕ್ಕೆ ಕರೆದುಕೊಂಡು ಬಂದನು. ಪೂರ್ವಭವದಲ್ಲಿಮಾಡಿದ ಕರ್ಮವನ್ನು ಅನುಭವಿಸಿತೀರಿಸಬೇಕೇ ಹೊರತು ಪರಾಕ್ರಮದಿಂದ ತಪ್ಪಿಸಿಕೊಳ್ಳಲಶಕ್ಯವು. ॥ ೧೧ ॥

ಶ್ಲೋಕ॥ ದೃಷ್ಟ್ವಾಪಿ ತಂ ತಥಾಭೂತಂ
ಹನ್ತುಮಾಹ ಸದುರ್ಮತಿಃ ।
ಸತಾಂ ಹಿ ಪ್ರಹ್ವತಾ ಶಾಂತ್ಯೈ
ಖಲಾನಾಂ ದರ್ಪಕಾರಣಮ್ ॥ ೧೨ ॥

ಟೀ ॥ ದುರ್ಮತಿಃ-ದುರ್ಬುದ್ಧಿಯುಳ್ಳ (ಪಾಪಿಯಾದ), ಸಃ- ಆ ಕಾಷ್ಠಾಂಗಾರನು, ತಥಾಭೂತಂ- ಆ ಪ್ರಕಾರ ಕಟ್ಟಲ್ಪಟ್ಟಿರುವ, ತಂ- ಆ ಜೀವಂಧರಕುಮಾರನನ್ನು, ದೃಷ್ಟ್ವಾಪಿ-ನೋಡಿಯೂಕೂಡ, ಹಂತುಂ-ಕೊಲ್ಲಲೋಸುಗ, ಆಹ- ಹೇಳಿದನು (ಆಜ್ಞೆಮಾಡಿದನು)., ಸತಾಂ-ಸತ್ಪುರುಷರ, ಪ್ರಹ್ವತಾ-ನಮ್ರತೆಯು ( ವಿಧೇಯತ್ವವು), ಶಾಂತ್ಯೈ-ಶಾಂತಿಗೋಸುಗ, ಖಲಾನಾಂ-ನೀಚರಿಗೆ ( ದುರ್ಜನರಿಗೆ ), ದರ್ಪಕಾರಣಂಹಿ_ದರ್ಪ-ಅಹಂಕಾರಕ್ಕೆ, ಕಾರಣಂಹಿ-ಕಾರಣವಾಗುವುದಲ್ಲವೆ?.

ತಾತ್ಪರ್ಯ॥ ಆ ದುರ್ಬುದ್ಧಿಯುಳ್ಳ ಕಾಷ್ಠಾಂಗಾರನು, ಆ ಪ್ರಕಾರ ಕಟ್ಟಲ್ಪಟ್ಟು ವಿನೀತನಾಗಿಯೂ, ನಾಚಿಕೆಯುಳ್ಳವನಾಗಿಯೂ, ತನ್ನಸಮೀಪಕ್ಕೆ ಬಂದಿರುವ ಜೀವಂಧರಕುಮಾರನನ್ನು ಕೊಲ್ಲುವುದಕ್ಕೋಸುಗ ಆಜ್ಞೆಮಾಡಿದನು. ಸತ್ಪುರುಷರಿಗೆ ಸಹಜವಾಗಿರುವ ವಿನಯಗುಣವಂನೋಡಿ, ದುರ್ಜನರು ನಮ್ಮ ಪರಾಕ್ರಮಕ್ಕೆ ಇವನು ಹೆದರಿದನೆಂದು ತಿಳಿದು ಗರ್ವಪಡುವರು. (ಇದು ದುರ್ಜನರ ಲಕ್ಷಣವು. )॥ ೧೨ ॥

ಶ್ಲೋಕ॥ ಕಾಷ್ಠಾಂಗಾರಂ ಕುಮಾರೋಽಯಂ
ಗುರುವಾಕ್ಯೇನ ನಾವಧೀತ್ ।

ನ ಹಿ ಪ್ರಾಣವಿಯೋಗೇಽಪಿ

ಪ್ರಾಜ್ಞೈರ್ಲಂಘ್ಯಂ ಗುರೋರ್ವಚಃ ॥ ೧೩॥

ಟೀ॥ ಅಯಂ ಕುಮಾರಃ-ಈ ಜೀವಂಧರಕುಮಾರನು, ಕಾಷ್ಠಾಂಗಾರಂ-ಕಾಷ್ಠಾಂಗಾರನನ್ನು, ಗುರುವಾಕ್ಯೇನ-ಗುರು-ತಂದೆಯಾದ ಗಂಧೋತ್ಕಟಶ್ರೇಷ್ಠಿಯ, ವಾಕ್ಯೇನ-ವಚನದಿಂದ, ನಾವಧೀತ್-ಕೊಲ್ಲಲಿಲ್ಲವು, ಪ್ರಾಣವಿಯೋಗೇಽಪಿ-ಪ್ರಾಣಾಪಾಯವು ಪ್ರಾಪ್ತವಾದ ಕಾಲದಲ್ಲಿಯೂಕೂಡ, ಪ್ರಾಜ್ಞೈಃ-ಪ್ರಾಜ್ಞರಾದವರಿಂದ, ಗುರೋಃ-ಗುರುಜನದ, ವಾಕ್ಯಂ-ವಚನವು (ಮಾತು), ಅಲಂಘ್ಯಂಹಿ - ಅತಿಕ್ರಮಿಸಲು ಯೋಗ್ಯವಲ್ಲವಷ್ಟೆ?.

ತಾತ್ಪರ್ಯ॥ ಜೀವಂಧರಕುಮಾರನು, ತಂದೆಯಾದ ಗಂಧೋತ್ಕಟಶ್ರೇಷ್ಠಿಯ ಮಾತಿನ ಗೌರವದಿಂದ ಕಾಷ್ಠಾಂಗಾರನನ್ನು ಕೊಲ್ಲಲಿಲ್ಲವು. ಪ್ರಾಜ್ಞರಾದವರು ಪ್ರಾಣಾಪಾಯವು ಪ್ರಾಪ್ತವಾದರೂ ಗುರುಜನರಮಾತನ್ನು ಮೀರುವುದಿಲ್ಲವಷ್ಟೆ? ಆದುದರಿಂದ ಜೀವಂಧರನು ಸಾಮರ್ಥ್ಯವುಳ್ಳವನಾದರೂ ಸುಮ್ಮನೇಇದ್ದನು. ॥ ೧೩ ॥

ಶ್ಲೋಕ॥ ಯಕ್ಷೇಣ ತತ್ಕ್ಷಣೇ ಸ್ವಾಮೀ

ಸ್ಮೃತೇನಾದಾಯಿ ಕೃತ್ಯವಿತ್ ।

ಸಚೇತನಃ ಕಥನ್ನು ಸ್ಯಾ-

ದಕುರ್ವನ್ ಪ್ರತ್ಯುಪಕ್ರಿಯಾಮ್ ॥ ೧೪ ॥

ಟೀ॥ ಕೃತ್ಯವಿತ್-ಕಾಲೋಚಿತ ಕೆಲಸವನ್ನು ತಿಳಿದಿರುವ, ಸ್ವಾಮೀ-ಜೀವಂಧರಸ್ವಾಮಿಯು, ಸ್ಮೃತೇನ-ಸ್ಮರಿಸಲ್ಪಟ್ಟ, ಯಕ್ಷೇಣ-ಯಕ್ಷನಿಂದ, ತತ್ಕ್ಷಣೇ-ಆ ಕ್ಷಣದಲ್ಲಿಯೇ, ಆದಾಯಿ-ತೆಗೆದುಕೊಂಡುಹೋಗಲ್ಪಟ್ಟನು., ಪ್ರತ್ಯುಪಕ್ರಿಯಾಂ-ಉಪಕಾರಮಾಡಿದವನಿಗೆ ಪ್ರತ್ಯುಪಕಾರವನ್ನು, ಅಕುರ್ವನ್-ಮಾಡದೇಇರುವವನು, ಸಚೇತನಸ್ಸನ್-ಜ್ಞಾನದೊಡಗೂಡಿದ ಪ್ರಾಣಿಯೆನಿಸುವವನಾಗಿ, ಕಥಂನು - ಹೇಗೆ ತಾನೇ, ಸ್ಯಾತ್-ಆಗುವನು?.

ತಾತ್ಪರ್ಯ॥ ಜೀವಂಧರಸ್ವಾಮಿಯಿಂದ ಸ್ಮರಿಸಲ್ಪಟ್ಟ ಯಕ್ಷನು ತತ್ಕ್ಷಣದಲ್ಲಿಯೇ ಬಂದು ಜೀವಂಧರಕುಮಾರನನ್ನು ಎತ್ತಿಕೊಂಡುಹೋದನು. (ಪೂರ್ವದಲ್ಲಿ ನಾಯಿಯಾಗಿದ್ದ ಜೀವಂಧರಕುಮಾರನ ಮಂತ್ರ

ಪರಮೇಷ್ಠಿ ಮಂತ್ರಪ್ರಭಾವದಿಂದ ದೇವತ್ವವನ್ನು ಪಡೆದವನಾದಕಾರಣ, ಆ ಮಹೋಪಕಾರಕ್ಕೆ ಪ್ರತ್ಯುಪಕಾರವನ್ನಾಗಿ ಜೀವಂಧರ ಕುಮಾರನ ಪ್ರಾಣಾಪತ್ಸಮಯದಲ್ಲಿ ರಕ್ಷಿಸಿದನೆಂದರ್ಥವು. ಲೋಕದಲ್ಲಿ ಉಪಕಾರಮಾಡಿದವನಿಗೆ ಪ್ರತ್ಯುಪಕಾರವಂ ಮಾಡದಿದ್ದಲ್ಲಿ ಅಂಥಾಜನಗಳು ಹೇಗೆ ತಾನೇ ಜ್ಞಾನವಿರುವ ಪ್ರಾಣಿಯೆನ್ನಲ್ಪಡುವರು? (ಪ್ರತ್ಯುಪಕಾರ ಮಾಡದವನು ಪ್ರಾಣಿಯಾದರೂ ಅಚೇತನಕ್ಕೆ ಸಮಾನನೆಂದರ್ಥವು. ॥ ೧೮ ॥

ಶ್ಲೋಕ ॥ ಅತಿಮಾತ್ರಶುಚಾ ಲೋಕಃ
ಪುನರೇವಮಚಿಂತಯತ್ ।
ಗುಣಜ್ಞೋ ಲೋಕ ಇತ್ಯೇಷಾ
ಕಿಂ ವದಂತೀ ಹಿ ಸೂನೃತಮ್ ॥ ೧೫ ॥

ಟೀ ॥ ಲೋಕಃ-ಜನಗಳು, ಅತಿಮಾತ್ರಶುಚಾ-ಅತಿಮಾತ್ರ- ಅಪರಿಮಿತವಾದ, ಶುಚಾ-ದುಃಖದಿಂದ, ಪುನಃ-ಮರಳಿಯೂ, ಏವಂ-ಈ ಪ್ರಕಾರ, ಅಚಿಂತಯತ್-ಆಲೋಚಿಸಿದರು., ಲೋಕಃ-ಲೋಕವು, ಗುಣಜ್ಞಃ-ಗುಣ-ಸುಗುಣ ದುರ್ಗುಣಗಳನ್ನು, ಜ್ಞಃ-ತಿಳಿಯುವುದು., ಇತಿ-ಹೀಗೆಂಬ, ಏಷಾಕಿಂವದನ್ತೀ-ಈಜನನಳಹೇಳಿಕೆಯಮಾತು, ಸೂನೃತಂಹಿ-ಯಥಾರ್ಥವಾಗಿಯೂ, ಪ್ರೀತಿಕರವಾಗಿಯೂ ಇರುವುದಲ್ಲವೆ?.

ತಾತ್ಪರ್ಯ ॥ ಜನಗಳು ಜೀವಂಧರಕುಮಾರನ ವಿಪತ್ತನ್ನೂ, ಕಾಷ್ಠಾಂಗಾರನ ಪಾಪಬುದ್ಧಿಯನ್ನೂ ನೋಡಿ, ಬಹಳವ್ಯಸನದಿಂದ ಮುಂದೆ ಹೇಳುವ ಪ್ರಕಾರ ಆಲೋಚಿಸಿದರು. ಒಳ್ಳೇಗುಣವನ್ನೂ, ಕೆಟ್ಟಗುಣವನ್ನೂ ಈ ಲೋಕವು ತಿಳಿದು ಹೇಳುವುದೆಂಬ ವಾಕ್ಯವು ಯಥಾರ್ಥವಾದದ್ದು; ಮತ್ತು ಪ್ರೀತಿಕರವಾದದ್ದು; ಸುಳ್ಳಲ್ಲವು. ॥ ೧೫ ॥

ಶ್ಲೋಕ ॥ ಅತಿಲೋಕಮಿದಂ ಕಾರ್ಶ್ಯಂ
ಕಾಷ್ಠಾಂಗಾರಸ್ಯ ದುರ್ಮತೇಃ ।
ಏತಾವದೇವ ಕಿಂ ಕಾರ್ಶ್ಯಂ
ಸ್ವಾಮಿದ್ರೋಹಾದಬಿಭ್ಯತಃ ॥ ೧೬ ॥

ಟೀ ॥ ದುರ್ಮತೇಃ-ದುರ್ಬುದ್ಧಿಯುಳ್ಳ, ಕಾಷ್ಠಾಂಗಾರಸ್ಯ- ಕಾಷ್ಠಾಂಗಾರನ, ಇದಂ ಶಾಠ್ಯಂ-ಈ ಮೋಸವು, ಅತಿಲೋಕಂ-ಲೋಕವನ್ನತಿಕ್ರಮಿಸಿದಂಥಾದ್ದು., ಸ್ವಾಮಿದ್ರೋಹಾತ್-ಸ್ವಾಮಿ-ರಕ್ಷಕನಿಗೆ, ದ್ರೋಹಾತ್- ದ್ರೋಹಮಾಡುವುದರಿಂದ, ಅಬಿಭ್ಯತಃ-ಹೆದರದೇಇರುವ ಕಾಷ್ಠಾಂಗಾರನ, ಶಾಠ್ಯಂ -ವಂಚನೆಯು, ಏತಾವದೇವ ಕಿಂ-ಇಷ್ಟೇಯೋ ಏನು ?.

ತಾತ್ಪರ್ಯ ॥ ಜನಗಳು ಹೇಳಿಕೊಳ್ಳುತ್ತಾರೆ. ಏನೆಂದರೆ.— ದುರ್ಬುದ್ಧಿಯುಳ್ಳ ಕಾಷ್ಠಾಂಗಾರನ ಮೋಸವು ಲೋಕವನ್ನು ಮೀರಿಇದೆ. ತನ್ನನ್ನು ರಕ್ಷಿಸಿದಸ್ವಾಮಿಯಾದಸತ್ಯಂಧರಮಹಾರಾಜನನ್ನು ನಿರ್ದಯನಾಗಿ ಕೊಂದ ಪಾಪಿಯಾದ ಕಾಷ್ಠಾಂಗಾರನ ವಂಚನೆಯು ಇಷ್ಟೇಸರಿಯೋ ಏನು?. (ಇವನ ಮೋಸವು ಹೇಳಲಶಕ್ಯವೆಂದರ್ಥವು.) ॥ ೧೬ ॥

ಶ್ಲೋಕ॥ ಸಮವರ್ತ್ಯಪಿ ದುರ್ವೃತ್ತಿ-
ರಾಸೀದಣಕಭೂಪವತ್ ।
ನ ಹ್ಯಸಾರತಯಾ ಹನ್ತ
ಸೋಽಪಿ ಗೃಹ್ಣಾತಿ ದುರ್ಜನಾನ್ ॥ ೧೭ ॥

ಟೀ॥ ಸಮವರ್ತ್ಯಪಿ-ಎಲ್ಲರಲ್ಲಿಯೂ ಸಮಾನವಾದಮೃತ್ಯುವೂಕೂಡ, ಅಣಕಭೂಪವತ್-ಲೋಕನಿಂದಿತನಾದಕೆಟ್ಟದೊರೆಯೋಪಾದಿಯಲ್ಲಿ, ದುರ್ವೃತ್ತಿಃ(ಸನ್) -ದುರ್ವ್ಯಾಪಾರವುಳ್ಳದ್ದಾಗಿ, ಆಸೀತ್-ಆಯಿತು., ಸೋಽಪಿ-ಆ ಮೃತ್ಯುವೂಕೂಡ, ಅಸಾರತಯಾ-ಶ್ರೇಷ್ಠವಲ್ಲದೇಇರೋಣದರಿಂದ, ದುರ್ಜನಾನ್-ಪಾಪಿಗಳಾದ, ಕೆಟ್ಟಜನರನ್ನು, ನಗೃಹ್ಣಾತಿಹಿ-ಸ್ವೀಕರಿಸುವುದಿಲ್ಲವಷ್ಟೆ ?.

ತಾತ್ಪರ್ಯ ॥ ಮೃತ್ಯುವು ಎಲ್ಲರಿಗೂ ಸಮಾನವಾದರೂಕೂಡ ಕೆಟ್ಟದೊರೆಯಂತೆ, ಕೆಟ್ಟನಡತೆಯುಳ್ಳದ್ದಾಗಿಯೇ ಆಯಿತು. ಪರ್ಯಾಲೋಚಿಸಿದಲ್ಲಿ ಪಾಪಿಗಳಿಗೆ ಮೃತ್ಯುವೂಕೂಡ ಬಾರದೇಇರುವದು ನ್ಯಾಯವೇಸರಿ; ಅದು ಹೇಗೆಂದರೆ.- ಲೋಕದಲ್ಲಿಎಲ್ಲರೂ ಸಾರವಸ್ತುವನ್ನಲ್ಲವೆ ಆಶೆಪಟ್ಟು ತೆಗೆದುಕೊಂಡು ಹೋಗುವರು? ದುರ್ಜನರು ಕೆಟ್ಟವಸ್ತುವಾದುದರಿಂದ ಈ ಅಸಾರರಾದ ದುರ್ಜನರನ್ನುಮೃತ್ಯುವೂಕೂಡ ಅನಾದರಿಸಿತೆಂಬುವುದು ನ್ಯಾಯವೇಸರಿ. ॥ ೧೭ ॥

ಶ್ಲೋಕ॥ ವಾರಿ ಹಂಸಇವ ಕ್ಷೀರಂ
ಸಾರಂ ಗೃಹ್ಣಾತಿ ಸಜ್ಜನಃ ।
ಯಥಾ ಶ್ರುತಂ ಯಥಾ ರುಚ್ಯಂ
ಶೋಚ್ಯಾನಾಂ ಹಿ ಕೃತಿರ್ಮತಾ ॥೧೪॥

ಟೀ ॥ ವಾರಿ-ನೀರಿನಲ್ಲಿ, ಹಂಸಃ-ಹಂಸಪಕ್ಷಿಯು, ಕ್ಷೀರಮಿವ-ಹಾಲನ್ನೇಹಾ ದಿಯಲ್ಲಿ, ಸಜ್ಜನಃ-ಸತ್ಪುರುಷನು, ಸಾರಂ-ಒಳ್ಳೇದನ್ನು, ಗೃಹ್ಣಾತಿ-ತೆಗೆದುಕೊಳ್ಳು ತ್ತಾನೆ., ಶೋಚ್ಯಾನಾಂ-ಶೋಕಿಸುವುದಕ್ಕೆ ಯೋಗ್ಯರಾದವರ (ಅವಿವೇಕಿಗಳ), ಕೃತಿಃ-ಕೆಲಸವು, ಯಥಾಶ್ರುತಂ-ಹೇಗೆ ಕೇಳಿದರೋ ಹಾಗೆ, ಯಥಾರುಚ್ಯಂ-ಹೇ ಗೆ ತಮ್ಮ ಮನಸ್ಸಿಗೆಇಷ್ಟವೋಹಾಗೆ, ಮತಾಹಿ-ಸಮ್ಮತವಲ್ಲವೆ?.

ತಾತ್ಪರ್ಯ ॥ ಹಂಸಪಕ್ಷಿಯು ಹೇಗೆ ನೀರಿನಲ್ಲಿ ಬೆರಸಿದ ಹಾಲನ್ನು ಮಾತ್ರಪರಿಗ್ರಹಿಸುವುದೋ ಹಾಗೆ ಸತ್ಪುರುಷರು ಸಾರವನ್ನೇ ಗ್ರಹಿಸು ತ್ತಾರೆ. ದುಃಖಕ್ಕೇನೇ ಯೋಗ್ಯರಾದ ದುರ್ಜನರ ಕೆಲಸವು ಪರ್ಯಾ ಲೋಚನೆಯಿಲ್ಲದೆಯೂ, ತಮ್ಮ ಮನಸ್ಸಿಗೆ ಇಷ್ಟವಾದಂತೆಯೂ, ಮಾ ಡಲ್ಪಡುತ್ತದೆಂದು ದೊಡ್ಡವರಿಗೆ ಇಷ್ಟವಲ್ಲವೆ? ॥೧೪॥

ಶ್ಲೋಕ॥ ಹೇತ್ವಂತರಕೃತೋಪೇಕ್ಷೇ
ಗುಣದೋಷಪ್ರವರ್ತಿತೇ ।
ಸ್ಯಾತಾಮಾದಾನಹಾನೇ ಚೇ-
ತ್ತದ್ಧಿ ಸೌಜನ್ಯಲಕ್ಷಣಮ್॥೧೫॥

ಟೀ ॥ ಆದಾನಹಾನೇ—ಆದಾನ-ಸ್ವೀಕರಿಸುವಿಕೆಯೂ, ಹಾನೇ- ಪರಿತ್ಯಜಿಸು ವಿಕೆಯೂಆದ ಈ ಎರಡು ಕೆಲಸಗಳೂ, ಹೇತ್ವಂತರಕೃತೋಪೇಕ್ಷೇ— ಹೇತ್ವಂತರ- ಬೇರೆಯಾದ ಕಾರಣಗಳಲ್ಲಿ, ಕೃತ-ಮಾಡಲ್ಪಟ್ಟ, ಉಪೇಕ್ಷೇ-ಅನಾದರವುಳ್ಳವುಗಳಾ ಗಿಯೂ, ಗುಣದೋಷಪ್ರವರ್ತಿತೇ(ಸತೀ)—ಗುಣ-ಗುಣವೂ, ದೋಷ-ದೋಷವೂ ಇವುಗಳಿಂದ, ಪ್ರವರ್ತಿತೇ(ಸತೀ)-ಉಂಟುಮಾಡಲ್ಪಟ್ಟವುಗಳೇಆಗಿ, ಸ್ಯಾತಾಂಚೇ ತ್-ಆದದ್ದೇಆದರೆ, ತತ್-ಆ ಗುಣವು, ಸೌಜನ್ಯಲಕ್ಷಣಂಹಿ—ಸೌಜನ್ಯ-ಒಳ್ಳೇಮನು ಷ್ಯನೆನಿಸುವುದಕ್ಕೆ, ಲಕ್ಷಣಂಹಿ-ಗುರುತಲ್ಲವೆ?.

ತಾತ್ಪರ್ಯ॥ ಗುಣವಂತರಲ್ಲಿ ಮಾತ್ಸರ್ಯವಿಡದೆ, ಬೇರೆಯಾವಕಾರಣವನ್ನೂ ನೋಡದೆ ಸ್ವೀಕರಿಸುವುದೂ ದೋಷವಿದ್ದಲ್ಲಿ ಪರಿತ್ಯಜಿಸುವುದೂ, ಇದಲ್ಲವೆ ಸೌಜನ್ಯಗುಣವೆನಿಸುವದು? ಗುಣದಲ್ಲಿ ದ್ವೇಷಪಡುವುದು ದುರ್ಜನರಸ್ವಭಾವವು. ॥೧೯॥

ಶ್ಲೋಕ॥ ಯುಕ್ತಾಯುಕ್ತವಿತರ್ಕೇಪಿ
ತರ್ಕರೂಢವಿಧಾವಪಿ ।
ಪರಾಙ್ಮುಖಾತ್ಫಲಂ ಕಿಂ ವಾ
ವೈದುಷ್ಯಾದ್ವೈಭವಾದಪಿ ॥೨೦॥

ಟೀ ॥ ಯುಕ್ತಾಯುಕ್ತವಿತರ್ಕೇಪಿ- ಯುಕ್ತ-ಯುಕ್ತವಾದ ಕೆಲಸಗಳ, ಅಯುಕ್ತ-ಯುಕ್ತವಲ್ಲದ ಕೆಲಸಗಳ, ವಿತರ್ಕೇಪಿ-ವಿಚಾರದಲ್ಲಿಯೂಕೂಡ, ತರ್ಕರೂಢವಿಧಾವಪಿ—ತರ್ಕ-ವಿಚಾರದಿಂದ, ರೂಢ-ಸಿದ್ಧವಾಗಿರುವ, ವಿಧಾವಪಿ- ಕೆಲಸದಲ್ಲಿಯೂಕೂಡ, ಪರಾಙ್ಮುಖಾತ್-ಉಪಯೋಗಿಸಲ್ಪಡದೇ ಇರುವ, ವೈದುಷ್ಯಾತ್-ಪಾಂಡಿತ್ಯದದೆಸೆಯಿಂದಲೇಆಗಲೀ, ವೈಭವಾದಪಿ-ಮಾಹಾತ್ಮ್ಯದ ದೆಸೆಯಿಂದಲೇ ಆಗಲಿ, ಕಿಂವಾಫಲಂ-ಏನು ಪ್ರಯೋಜನವು?.

ತಾತ್ಪರ್ಯ॥ಮನುಷ್ಯನಿಗೆ ಇದು ಯುಕ್ತವಾದ ಕೆಲಸವು. ಇದು ಅಯುಕ್ತವಾದಕೆಲಸವು; ಎಂದು ಆಲೋಚಿಸುವುದಕ್ಕಾಗಲಿ, ಅಥವಾ ಬುದ್ಧಿಶಾಲಿಗಳಿಂದ ಆಲೋಚಿಸಿ ನಿರ್ಣಯಿಸಲ್ಪಟ್ಟಕೆಲಸದಲ್ಲಿಯೇಆಗಲಿ,ಉಪಯೋಗಿಸದೇಇರುವ ಪಾಂಡಿತ್ಯವೂ ಅಥವಾ ವೈಭವವೂ (ಮಾಹಾತ್ಮ್ಯವೂ) ಇವುಗಳು ಏನುಪ್ರಯೋಜನವು (ನಿಷ್ಫಲವೆಂದರ್ಥವು.) ॥೨೦॥

ಶ್ಲೋಕ॥ ಇತ್ಯೂಹಾದಾಧಿಮಾಪನ್ನೇ
ಲೋಕೇ ತೇಪಿ ಯುಯುತ್ಸವಃ ।
ಸಖಾಯಸ್ಸಾನುಜಾಸ್ಸರ್ವೇ
ಪಶ್ಚಾತ್ತಾಪಮುಪಾಗಮನ್ ॥೨೧॥

ಟೀ ॥ ಇತಿ-ಈ ಪ್ರಕಾರವಾದ, ಊಹಾತ್-ಪರ್ಯಾಲೋಚನೆಯ ದೆಸೆಯಿಂದ, ಲೋಕೇ-ಜನವು, ಆಧಿಂ-ಮನೋವ್ಯಥೆಯನ್ನು, ಆಪನ್ನೇಸತಿ- ಹೊಂದುತಿರಲಾಗಿ,

ಯುಯುತ್ಸವಃ - ಯುದ್ಧ ಮಾಡಲೋಸುಗ ಇಚ್ಛೆಯುಳ್ಳ, ಸಖಾಯಃ - ಜೀವಂಧರಸ್ವಾಮಿಯ ಸ್ನೇಹಿತರಾದ, ಸಾನುಜಾಃ-ತಮ್ಮನಾದ ನಂದಾಢ್ಯನೊಡನೆ ಕೂಡಿದ, ತೇಪಿಸರ್ವೇ-ಆ ಸಮಸ್ತರೂಕೂಡ, ಪಶ್ಚಾತ್ತಾಪಂ-ವ್ಯಸನವನ್ನು, ಉಪಾಗಮನ್-ಹೊಂದಿದರು.

ತಾತ್ಪರ್ಯ॥ ಈ ಪ್ರಕಾರ ಜನಗಳು ಆಲೋಚಿಸುತ್ತಿರಲಾಗಿ, ಯುದ್ಧಮಾಡಲೋಸುಗ ಇಚ್ಛೆಯುಳ್ಳವರಾದ ಜೀವಂಧರಕುಮಾರನಸ್ನೇಹಿತರು ತಮ್ಮನಾದ ನಂದಾಢ್ಯನೇ ಮೊದಲಾಗಿ ಸಕಲರೂ ಪಶ್ಚಾತ್ತಾಪವನ್ನುಹೊಂದಿದರು. ॥೨೧॥

ಶ್ಲೋಕ॥ ಸ್ಮರನ್ತೌ ಮುನಿವಾಕ್ಯಸ್ಯ
ಸಪ್ರಾಣೌ ಪಿತರೌ ಸ್ಥಿತೌ।
ವಿತಥೇ ಮುನಿವಾಕ್ಯೇ ಹಿ
ಪ್ರಾಮಾಣ್ಯಂ ವಚನೇ ಕುತಃ ॥೨೨॥

ಟೀ ॥ ಪಿತರೌ- ತಾಯಿತಂದೆಗಳಾದ ಸುನಂದಾದೇವಿ, ಗಂಧೋತ್ಕಟಶ್ರೇಷ್ಠಿ ಇವರೀರ್ವರೂ, ಮುನಿವಾಕ್ಯಸ್ಯ—ಮುನಿಯುವಚನವನ್ನು, ಸ್ಮರನ್ತೌ(ಸನ್ತೌ)-ಸ್ಮರಿಸುವವರಾಗಿ, ಸಪ್ರಾಣೌ-ಪ್ರಾಣದೊಡಗೂಡಿದವರಾಗಿ, ಸ್ಥಿತೌ-ಇದ್ದರು., ಮುನಿವಾಕ್ಯೇ-ಮುನಿಯುವಚನವು, ವಿತಥೇ(ಸತಿ )-ಸುಳ್ಳಾಗುತ್ತಿರಲಾಗಿ, ವಚನೇ-ವಾಕ್ಯದಲ್ಲಿ, ಪ್ರಾಮಾಣ್ಯಂ-ಯಥಾರ್ಥಭಾವವು, ಕುತಃ-ಎಲ್ಲಿಂದ ಬಂದೀತು?.

ತಾತ್ಪರ್ಯ ॥ ಜೀವಂಧರಕುಮಾರನ ತಾಯಿತಂದೆಗಳು ಜೀವಂಧರಕುಮಾರನಿಗೆ ಅಪಾಯುವಿಲ್ಲವೆಂಬದಾಗಿ ಮುನಿಯು ಹೇಳಿದ್ದ ವಾಕ್ಯವನ್ನು ನಂಬಿ ಬದುಕಿದ್ದರು. ಮುನಿಯ ಮಾತೇ ಸುಳ್ಳಾದರೆ ಮತ್ತ್ಯಾರ ಮಾತನ್ನು ನಂಬಬಹುದು?. ಮತ್ತು ಶಬ್ದಕ್ಕೆ ಪ್ರಾಮಾಣ್ಯವೇ ಇಲ್ಲದೆ ಹೋದೀತು?. ॥೨೨॥

ಶ್ಲೋಕ॥ ಸ್ವಾಮಿನೋ ನ ವಿಷಾದೋ ವಾ
ಪ್ರಸಾದೋ ವಾ ತದಾಭವತ್ ।
ಕಿಂ ತು ಪೂರ್ವಕೃತಂ ಕರ್ಮ
ಭೋಕ್ತವ್ಯಮಿತಿ ಮಾನಸಮ್ ॥೨೩॥

ಟೀ ॥ ತದಾ-ಆ ಕಾಲದಲ್ಲಿ, ಸ್ವಾಮಿನಃ-ಜೀವಂಧರಸ್ವಾಮಿಗೆ, ವಿಷಾದಃ- ವ್ಯಸನವು, ನ-ಉಂಟಾಗಲಿಲ್ಲವು., ಪ್ರಸಾದೋಪಿ-ಸಂತೋಷವೂಕೂಡ, ನಾಭವತ್-ಉಂಟಾಗಲಿಲ್ಲವು., ಕಿಂತು-ಮತ್ತೇನೆಂದರೆ, ಪೂರ್ವಕೃತಂ-ಪ್ರಾಕ್-ಪೂರ್ವಭವದಲ್ಲಿ, ಕೃತಂ-ಮಾಡಲ್ಪಟ್ಟ, ಕರ್ಮ-ಪುಣ್ಯಪಾಪರೂಪವಾದಕರ್ಮವು,ಭೋಕ್ತವ್ಯಂ-ಅನುಭವಿಸಬೇಕಪ್ಪದು., ಇತಿ-ಹೀಗೆಂದು, ಮಾನಸಂ-ಮನೋಭಿಪ್ರಾಯವು, ಅಭವತ್-ಉಂಟಾಯಿತು.

ತಾತ್ಪರ್ಯ॥ ಜೀವಂಧರಕುಮಾರನಿಗೆ ಆ ಕಾಷ್ಠಾಂಗಾರನಿಂದುಂಟಾದ ಪ್ರಾಣಾಪತ್ತುಮಯುದಲ್ಲಿಯೂ, ಯಕ್ಷನಿಂದ ರಕ್ಷಿಸಲ್ಪಟ್ಟಕಾಲದಲ್ಲಿಯೂ, ವ್ಯಸನವೂ, ಸಂತೋಷವೂ ಸಹ ಉಂಟಾಗಲಿಲ್ಲವು. ಮತ್ತೇನೆಂದರೆ.—ಪೂರ್ವಭವದಲ್ಲಿ ಮಾಡಿದ ಕರ್ಮವು ಅನುಭವಿಸಿದಲ್ಲದೆ ತೀರುವುದಿಲ್ಲವು ಎಂಬ ಬುದ್ಧಿಯುಮಾತ್ರ ಉಂಟಾದುದು. ॥೨೩॥

ಶ್ಲೋಕ॥ ಅಥ ಚಂದ್ರೋದಯಾಖ್ಯಾನ
ಪರ್ವತಸ್ಥಂ ಸ್ವಮಂದಿರಮ್ ॥
ಯಕ್ಷೇಂದ್ರಸ್ಸ್ವಾಮಿನಂ ನೀತ್ವಾ
ಕೃತವಾನಭಿಷೇಚನಮ್ ॥೨೪॥

ಟೀ ॥ ಅಥ-ಅನಂತರದಲ್ಲಿ, ಯಕ್ಷೇಂದ್ರಃ-ಯಕ್ಷರಾಜನು, ಚಂದ್ರೋದಯಾಖ್ಯಾನಪರ್ವತಸ್ಥಂ--ಚಂದ್ರೋದಯ-ಚಂದ್ರೋದಯವೆಂಬ, ಆಖ್ಯಾನ-ನಾಮಧೇಯವುಳ್ಳ, ಪರ್ವತ-ಬೆಟ್ಟದಮೇಲೆ, ಸ್ಥಂ-ಇರುತಲಿರುವ, ಸ್ವಮಂದಿರಂ—ಸ್ವ-ತನ್ನ, ಮನ್ದಿರಂ-ಗೃಹವನ್ನು, ಸ್ವಾಮಿನಂ- ಜೀವಂಧರ ಸ್ವಾಮಿಯನ್ನು, ನೀತ್ವಾ-ಹೊಂದಿಸಿ, ಅಭಿಷೇಚನಂ-ಅಭಿಷೇಕವನ್ನು, ಕೃತವಾನ್-ಮಾಡಿದನು.

ತಾತ್ಪರ್ಯ ॥ ಅನಂತರದಲ್ಲಿ ಯಕ್ಷೇಂದ್ರನು ಜೀವಂಧರಕುಮಾರನನ್ನು ಚಂದ್ರೋದಯವೆಂಬಪರ್ವತದೊಳಗಿರುವ ತನ್ನ ಮನೆಯನ್ನೈದಿಸಿ, ಅಭಿಷೇಕವನ್ನುಮಾಡಿದನು. ॥೨೪॥

ಶ್ಲೋಕ॥ ವಿಪಚ್ಚ ಸಂಪದೇಪುಣ್ಯಾ-
ತ್ರಿಮನ್ಯತ್ರ ಗಣ್ಯತೇ।

ಭಾನುರ್ಲೋಕಂ ತಪನ್ ಕುರ್ಯಾ-
ದ್ವಿಕಾಸಶ್ರಿಯಮಂಬುಜೇ ॥೨೫॥

ಟೀ ॥ ವಿಪತ್ತ-ಆಪತ್ತೂಕೂಡ, ಪುಣ್ಯಾತ್-ಪುಣ್ಯದಸೆಯಿಂದ, ಸಂಪತ್-ಸಂಪತ್ತಿಗೋಸುಗವೇ, ಸ್ಯಾದ್ಧಿ-ಆಗುವುದಲ್ಲವೆ?. ತತ್ರ- ಆ ಪೂರ್ವಪುಣ್ಯದ ವಿಷಯದಲ್ಲಿ, ಅನ್ಯತ್-ಇದಕ್ಕಿಂತಲೂಬೇರೆಯಾದ, ಕಿಂ-ಯಾವಮಹಿಮೆಯು, ಗಣ್ಯತೇ-ಎಣಿಸಲ್ಪಡುತ್ತದೆ?, ಭಾನುಃ-ಸೂರ್ಯನು, ಲೋಕಂ-ಲೋಕವನ್ನು, ತಪನ್-ಸಂತಾಪಗೊಳಿಸುವವನಾಗಿ, ಅಂಬುಜೇ-ಕಮಲದಲ್ಲಿ, ವಿಕಾಸಶ್ರಿಯಂ-ವಿಕಾಸ-ಅರಳಿಸುವುದರಿಂದುಂಟಾದ, ಶ್ರಿಯಂ-ಶೋಭೆಯನ್ನು, ಕುರ್ಯಾತ್-ಉಂಟುಮಾಡುವನು.

ತಾತ್ಪರ್ಯ ॥ ಪುಣ್ಯಶಾಲಿಗಳಿಗೆ ತಮ್ಮ ಪೂರ್ವಭವದ ಪುಣ್ಯದಿಂದ ವಿಪತ್ತುಕೂಡ ಸಂಪತ್ತಿಗೇನೆ ಕಾರಣವಾಗುವುದಲ್ಲವೆ? ಇದಕ್ಕೆ ಲೋಕದಲ್ಲಿ ದೃಷ್ಟಾಂತವು.-ಸೂರ್ಯನು ತಪಿಸುತಲಿದ್ದರೂ ತಾವರೆಗೆ ವಿಕಾಸವನ್ನುಂಟುಮಾಡುತ್ತಾನೆಯೇ ಹೊರತು ಬಾಡಿಸುವುದಿಲ್ಲವು. ಹಾಗೆ ಪುಣ್ಯಶಾಲಿಗಳಿಗೆ ವಿಪತ್ತುಕೂಡ ಸಂಪತ್ಕಾರಣವು. ಮಹಾ ಪುಣ್ಯಶಾಲಿಯಾದ ಜೀವಂಧರಕುಮಾರನೇ ಇದಕ್ಕೆ ದೃಷ್ಟಾಂತವು. ॥೨೫॥

ಶ್ಲೋಕ॥ ಪಯೋವಾರ್ಧಿ ಪಯಃಪೂರೈ-
ರಭಿಷಿಚ್ಯಾಯಮಬ್ರವೀತ್ ।
ಪವಿತ್ರೋಽಪಿ ಪವಿತ್ರಂ ಮಾಂ
ಶ್ವಾನಂ ಯತ್ಕೃತವಾನಸಿ ॥೨೬॥

ಟೀ॥ ಅಯಂ-ಈ ಉಪಕಾರಸ್ಮರಣೆಯುಳ್ಳಯಕ್ಷನು, ಪಯೋವಾರ್ಧಿಪಯಃಪೂರೈಃ-ಪಯೋವಾರ್ಧಿ-ಕ್ಷೀರಸಮುದ್ರದ, ಪಯಃ-ಕ್ಷೀರಗಳ, ಪೂರೈಃ-ಪ್ರವಾಹಗಳಿಂದ, ಅಭಿಷಿಚ್ಯ-ಅಭಿಷೇಕಮಾಡಿ, ತ್ವಂ-ನೀನು, ಪವಿತ್ರ(ಸ್ಸನ್)-ಪವಿತ್ರಕುಮಾರನೆಂಬ ನಾಮಧೇಯವುಳ್ಳವನಾಗಿ, ಅಸಿ-ಆಗುತ್ತೀಯೆ., ಯತ್- ಯಾವಕಾರಣದ ದೆಸೆಯಿಂದ, ಶ್ವಾನಂ-ಪೂರ್ವದಲ್ಲಿ ನಾಯಿಯಾಗಿದ್ದ, ಮಾಂ-ನನ್ನನ್ನು, ಪವಿತ್ರಂ(ಸನ್ತಂ)-ಪರಿಶುದ್ಧನನ್ನಾಗಿ, ಕೃತವಾನ್(ಸನ್)-ಮಾಡಿದವನಾಗಿ, ಅಸಿ-ಆಗುವೆಯೋ? ಇತಿ-ಹೀಗೆಂದು, ಅಬ್ರವೀತ್-ಹೇಳಿದನು.

ತಾತ್ಪರ್ಯ॥ ಈ ಯಕ್ಷನು ಜೀವಂಧರಕುಮಾರನನ್ನು ಕ್ಷೀರಸಮುದ್ರಜಲಗಳಿಂದ ಅಭಿಷೇಕಮಾಡಿ, ಜೀವಂಧರನನ್ನು ಕುರಿತು ನಾಯಿಯಾಗಿದ್ದ ನನ್ನನ್ನು ಯಾವಕಾರಣದದೆಸೆಯಿಂದ ಪೂರ್ವದಲ್ಲಿ ನನ್ನ ಮರಣಸಮಯದೊಳು ಪಂಚ ಪರಮೇಷ್ಠಿಮಂತ್ರಮಾಹಾತ್ಮ್ಯದಿಂದ ಪರಿಶುದ್ಧನನ್ನಾಗಿಮಾಡಿದೆಯೋ ಆ ಕಾರಣದದೆಸೆಯಿಂದ ನೀನು ಪವಿತ್ರಕುಮಾರನೆನಿಸುತ್ತೀಯೆ. ಎಂಬದಾಗಿ ಹೇಳಿದನು. ॥೨೬॥

ಶ್ಲೋಕ॥ ಕಾಮರೂಪವಿಧೌ ಗಾನೇ
ವಿಷಹಾನೇ ಚ ಶಕ್ತಿಮತ್ ।
ಯಕ್ಷೇಂದ್ರಸ್ಸ್ವಾಮಿನೇ ಪಶ್ಚಾ-
ನ್ಮನ್ತ್ರತ್ರಯಮುಪಾದಿಶತ್ ॥೨೭॥

ಟೀ ॥ ಯಕ್ಷೇಂದ್ರಃ-ಯಕ್ಷರಾಜನು, ಕಾಮರೂಪವಿಧೌ-ಕಾಮ-ಇಷ್ಟವಾದ, ರೂಪ-ಆಕಾರದ, ವಿಧೌ-ಮಾಡಿಕೊಳ್ಳುವುದರಲ್ಲಿಯೂ, ಗಾನೇ - ಸಂಗೀತದಲ್ಲಿಯೂ, ವಿಷಹಾನೇಚ-ವಿಷ-ವಿಷದ, ಹಾನೇಚ-ಹೋಗಲಾಡಿಸುವುದರಲ್ಲಿಯೂ, ಶಕ್ತಿಮತ್-ಸಾಮರ್ಥ್ಯವುಳ್ಳ, ಮಂತ್ರತ್ರಯಂ-ಮಂತ್ರ-ಮಂತ್ರಗಳ, ತ್ರಯಂ-ಮೂರನ್ನು, ಸ್ವಾಮಿನೇ-ಜೀವಂಧರಸ್ವಾಮಿಗೋಸ್ಕರ, ಪಶ್ಚಾತ್-ಅನಂತರದಲ್ಲಿ, ಉಪಾದಿಶತ್-ಉಪದೇಶಿಸಿದನು.

ತಾತ್ಪರ್ಯ॥ ಆ ಯಕ್ಷೇಂದ್ರನು ಮನಸ್ಸಿಗೆ ಇಷ್ಟವಾದ ರೂಪವನ್ನು ಸ್ವೀಕರಿಸೋಣದರಲ್ಲಿಯೂ, ಸಂಗೀತದಲ್ಲಿಯೂ, ವಿಷವನ್ನು ಪರಿಹರಿಸೋಣದರಲ್ಲಿಯೂ ಶಕ್ತಿಯುಳ್ಳ ಮೂರುಮಂತ್ರಗಳನ್ನು ಅನಂತರದಲ್ಲಿ ಜೀವಂಧರಸ್ವಾಮಿಗೆ ಉಪದೇಶಿಸಿದನು. ॥೨೭॥

ಶ್ಲೋಕ॥ ಏಕಹಾಯನಮಾತ್ರೇಣ
ಧುರಿ ರಾಜ್ಞಾಂ ಪ್ರವೇಕ್ಷ್ಯಸಿ ।
ಮೋಕ್ಷ್ಯಸ್ಯೇವ ಪವಿತ್ರ! ತ್ವಂ
ಪಶ್ಚಾದಿತಿ ಚ ಸೋಽವದತ್ ॥೨೮॥

ಟೀ ॥ ಹೇ ಪವಿತ್ರ-ಎಲೈ ಪವಿತ್ರಕುಮಾರನೇ!, ತ್ವಂ-ನೀನು, ಏಕಹಾಯನಮಾತ್ರೇಣ-ಒಂದುವರ್ಷವುಕಳೆದನಂತರವೇ, ರಾಜ್ಞಾಂ-ದೊರೆಗಳ, ಧುರಿ- ಪ್ರಜಾ

ಲಕ್ಷಣದಲ್ಲಿ, ಪ್ರವೇಕ್ಷ್ಯಸಿ-ಪ್ರವೇಶಿಸುತ್ತೀಯೆ, ಪಶ್ಚಾತ್-ಅನಂತರದಲ್ಲಿ, ಮೋಕ್ಷ್ಯ ಸ್ಯೇವ-ಮೋಕ್ಷವನ್ನೇ ಹೊಂದುತ್ತೀಯೆ., ಇತಿ-ಹೀಗೆಂದು, ಸಃ-ಆ ಯಕ್ಷೇಂದ್ರ ನು, ಅವದತ್-ಹೇಳಿದನು.

ತಾತ್ಪರ್ಯ ॥ ಎಲೈ ಪವಿತ್ರಕುಮಾರನೇ! ಒಂದುವರುಷವು ಕಳೆದ ಬಳಿಕ ನೀನು ಸಮಸ್ತ ರಾಜರನ್ನೂ ಪಾಲಿಸುವೆ. ಅನಂತರದಲ್ಲಿ ಮೋ ಕ್ಷವನ್ನೇ ಪಡೆಯುತ್ತೀಯೆ. ಎಂದೀಪ್ರಕಾರ ಜೀವಂಧರಕುಮಾರನನ್ನು ಕುರಿತು ಆ ಪೂರ್ವೋಪಕಾರಸ್ಮರಣೆಯುಳ್ಳ ಯಕ್ಷೇಂದ್ರನು ಹೇಳಿ ಈಗಲೇ ಯುದ್ಧಕ್ಕೆಹೋಗಬೇಡವೆಂಬದಾಗಿ ಜೀವಂಧರಕುಮಾರನನ್ನು ಸಮಾಧಾನಪಡಿಸಿದನು. ॥೨೮॥

ಶ್ಲೋಕ॥ ತಥಾ ಸಂಭಾವ್ಯಮಾನಸ್ಯ
ಸ್ವಾಮಿನಸ್ತೇನ ಸಂತತಮ್ ॥
ದೇಶಾನ್ತರದಿದೃಕ್ಷಾಭೂತ್
ಭಾವ್ಯಧೀನಂ ಹಿ ಮಾನಸಮ್ ॥೨೯॥

ಟೀ॥ ತೇನ-ಆ ಯಕ್ಷೇಂದ್ರನಿಂದ, ತಥಾ-ಆ ಪ್ರಕಾರ, ಸಂತತಂ- ಸರ್ವಕಾಲ ದಲ್ಲಿಯೂ, ಸಂಭಾವ್ಯಮಾನಸ್ಯ-ಸತ್ಕರಿಸಲ್ಪಟ್ಟ, ಸ್ವಾಮಿನಃ-ಜೀವಂಧರಸ್ವಾಮಿಗೆ, ದೇಶಾಂತರದಿದೃಕ್ಷಾ-ದೇಶಾಂತರ-ಅನ್ಯದೇಶಗಳ, ದಿದೃಕ್ಷಾ- ನೋಡಬೇಕೆಂಬ ಅಪೇ ಕ್ಷೆಯು, ಅಭೂತ್-ಉಂಟಾಯಿತು., ಮಾನಸಂ-ಮನಸ್ಸು, ಭಾವ್ಯಧೀನಂಹಿ—ಭಾ ವಿ-ಉತ್ತರತ್ರಉಂಟಾಗುವ ಫಲಕ್ಕೆ, ಅಧೀನಂಹಿ-ಅಧೀನವಾಗಿದೆಯಲ್ಲವೆ ?.

ತಾತ್ಪರ್ಯ ॥ ಆ ಯಕ್ಷೇಂದ್ರನಿಂದ ಸರ್ವಕಾಲದಲ್ಲಿಯೂ ಸತ್ಕರಿಸ ಲ್ಪಟ್ಟ ಜೀವಂಧರಕುಮಾರನಿಗೆ ದೇಶಾಂತರಸಂಚಾರಮಾಡಬೇಕೆಂಬ ಬು ದ್ಧಿಯುಂಟಾದುದು. ಉತ್ತರತ್ರ ಉಂಟಾಗುವ ಫಲಕ್ಕೆ ಅನುಗುಣವಾಗಿ ಯೇ ಮನುಷ್ಯರಿಗೆ ಪ್ರಯತ್ನವೂ, ಬುದ್ಧಿಯೂ ಉಂಟಾಗುವುದಲ್ಲವೆ ? ದೇಶಾಂತರಸಂಚಾರದಿಂದ ಜೀವಂಧರಕುಮಾರನಿಗೆ ಅನೇಕಫಲವಾಗತಕ್ಕ ಪೂರ್ವಭವದ ಕರ್ಮವಿರುವುರಿಂದ ಆ ಕರ್ಮಾನುಸಾರವಾಗಿ ಈ ಬುದ್ಧಿ ಯೂ ಉಂಟಾದುದೆಂದು ಭಾವವು. ॥೨೯॥

ಶ್ಲೋಕ॥ ಮನೀಷಿತಂ ಹಿತಾನ್ವೇಷೀ
ಜ್ಞಾತ್ವಾ ತಸ್ಯ ಮನೀಷಿಣಃ ।

ಅನುಮೇನೇ ಸದೇವೋಽಪಿ
ತ್ರಿಕಾಲಜ್ಞಾ ಹಿ ನಿರ್ಜರಾಃ ‖ ೩೦ ‖

ಟೀ ‖ ಮನೀಷಿಣಃ-ಬುದ್ಧಿಶಾಲಿಯಾದ, ತಸ್ಯ-ಆ ಜೀವಂಧರಕುಮಾರನ, ಮನೀಷಿತಂ-ಅಭಿಪ್ರಾಯವನ್ನು, ಜ್ಞಾತ್ವಾ-ತಿಳಿದು, ಹಿತಾನ್ವೇಷೀ-ಹಿತ- ಅನುಕೂಲವನ್ನು, ಅನ್ವೇಷೀ-ಚಿಂತಿಸುತಲಿರುವ, ಸಃ-ಆ ಪೂರ್ವೋಕ್ತವಾದ, ದೇವೋಽಪಿ- ಯಕ್ಷೇಂದ್ರನೂಕೂಡ, ಅನುಮೇನೇ-ಸಮ್ಮತಿಸಿದನು., ನಿರ್ಜರಾಃ=ದೇವತೆಗಳು, ತ್ರಿಕಾಲಜ್ಞಾಹಿ=ಭೂತಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲದವೃತ್ತಾಂತವನ್ನು ತಿಳಿದವರಲ್ಲವೆ?.

ತಾತ್ಪರ್ಯ ‖ ಪ್ರಶಸ್ತ ಬುದ್ಧಿಶಾಲಿಯಾದ ಆ ಜೀವಂಧರಕುಮಾರನ ಅಭಿಪ್ರಾಯವನ್ನು ತಿಳಿದು, ಹಿತಚಿಂತಕನಾದ ಆ ಯಕ್ಷದೇವನು ಸಮ್ಮತಿಸಿದನಲ್ಲವೆ ? ಯಕ್ಷನು ದೇವನಾದುದರಿಂದ ತನ್ನ ಜ್ಞಾನಬಲದಿಂ ಜೀವಂಧರಸ್ವಾಮಿಗೆ ಉತ್ತರತ್ರ ಉಂಟಾಗತಕ್ಕ ಫಲವನ್ನು ತಿಳಿದು ಪ್ರಯಾಣವಂ ಸಮ್ಮತಿಸಿದನು. ‖೩೦‖

ಶ್ಲೋಕ ‖ ಇದಂ ತಯಾ ಪಥೋದಂತ-
ಮುಪದಿಶ್ಯಾಥ ಸಮ್ಮತಃ ।
ಸುದರ್ಶನೇನ ಸೋಽಯಾಸೀ-
ದ್ಧಿತಕೃತ್ತ್ವಂ ಹಿ ಮಿತ್ರತಾ ‖೩೧‖

ಟೀ ‖ ಅಥ-ಅನಂತರದಲ್ಲಿ, ಇದಂತಯಾ-ಹೀಗೆಂಬುವುದರಿಂದ(ಇದುಹೀಗೆಂಬ), ಪಥಾ-ಮಾರ್ಗದಿಂದ, ಉದಂತಂ-ಸಮಸ್ತವೃತ್ತಾಂತವನ್ನು, ಉಪದಿಶ್ಯ-ಉಪದೇಶಮಾಡಿ, ಸುದರ್ಶನೇನ-ಸುದರ್ಶನಯಕ್ಷನಿಂದ, ಸಮ್ಮತಃ-ಸಮ್ಮತಿಸಲ್ಪಟ್ಟ, ಸಃ-ಆ ಜೀವಂಧರನು, ಅಯಾಸೀತ್-ಹೊರಟುಹೋದನು., ಹಿತಕೃತ್ತ್ವಂ—ಹಿತ-ಅನುಕೂಲವಾದಕೆಲಸವನ್ನು, ಕೃತ್ತ್ವಂ-ಮಾಡೋಣವೇ, ಮಿತ್ರತಾಹಿ-ಸ್ನೇಹಧರ್ಮವಲ್ಲವೆ?.

ತಾತ್ಪರ್ಯ ‖ ಆ ಯಕ್ಷನಾದ ಸುದರ್ಶನದೇವನು ಜೀವಂಧರನಿಗೆ ಮಾರ್ಗವನ್ನುತೋರಿಸಿ ಹೇಳತಕ್ಕ ಸಮಸ್ತ ವೃತ್ತಾಂತವನ್ನೂ ಹೇಳಿ ಸಮ್ಮತಿಸಿಕಳುಹಿಸಿದನು. ಅನುಕೂಲವನ್ನುಂಟುಮಾಡೋಣವಲ್ಲವೆ ಮಿತ್ರಧರ್ಮವು? ‖೩೧‖

ಶ್ಲೋಕ ॥ ಏಕಾಕೀ ವ್ಯಹರತ್ಸ್ವಾಮೀ
ನಿರ್ಭಯೋಽಯಮಿತಸ್ತತಃ ।
ನ ಹಿ ಸ್ವವೀರ್ಯಗುಪ್ತಾನಾಂ
ಭೀತಿಃ ಕೇಸರಿಣಾಮಿವ ॥೩೨॥

ಟೀ ॥ ಅಯಂ ಸ್ವಾಮೀ-ಈ ಜೀವಂಧರಸ್ವಾಮಿಯು, ಏಕಾಕೀ-ಸಹಾಯರಹಿತನಾಗಿ ಒಬ್ಬನೇ, ನಿರ್ಭಯ(ಸ್ಸನ್)-ಭಯವಿಲ್ಲದೇಇರುವವನಾಗಿ, ಇತಸ್ತತಃ-ಅತ್ತಿತ್ತಲಾಗಿ, ವ್ಯಹರತ್-ಸಂಚರಿಸಿದನು., ಸ್ವವೀರ್ಯಗುಪ್ತಾನಾಂ-ತನ್ನ ಪರಾಕ್ರಮದಿಂದ ರಕ್ಷಿಸಲ್ಪಟ್ಟವರಿಗೆ, ಕೇಸರಿಣಾಮಿವ-ಸಿಂಹಗಳಿಗೋಪಾದಿಯಲ್ಲಿ, ಭೀತಿಃ-ಭಯವು, ನಹಿ-ಇಲ್ಲವಷ್ಟೆ?.

ತಾತ್ಪರ್ಯ ॥ ಆ ಜೀವಂಧರಸ್ವಾಮಿಯು ಒಬ್ಬನೇಆದಾಗ್ಯೂ ಮಹಾರಣ್ಯಗಳಲ್ಲಿ ಅತ್ತಿತ್ತಲಾಗಿ ನಿರ್ಭಯದಿಂದ ಸಂಚಾರಮಾಡಿದನು. ತನ್ನ ಪರಾಕ್ರಮದಿಂದಲೇ ತನ್ನನ್ನೂ, ಪರರನ್ನೂ ರಕ್ಷಿಸುವ ಶೂರರು ಸಿಂಹಗಳಂತೆ ಯಾರಿಂದಲೂ ಭಯಪಡುವುದಿಲ್ಲವಷ್ಟೆ?॥೩೨॥

ಶ್ಲೋಕ ॥ ಏಕಾಕಿನೋಽಪಿ ನೋದ್ವೇಗೋ
ವಶಿನಸ್ತಸ್ಯ ಜಾತುಚಿತ್ ।
ವಿಕ್ರಿಯಾ ಹಿ ವಿಮೂಢಾನಾಂ
ಸಂಪದಾಪಲ್ಲವಾದಪಿ ॥೩೩॥

ಟೀ ॥ ಏಕಾಕಿನೋಽಪಿ-ಒಬ್ಬನೇ ಸಂಚರಿಸುತಲಿದ್ದರೂಕೂಡ, ವಶಿನಃ-ಜಿತೇಂದ್ರಿಯನಾದ, ತಸ್ಯ-ಆ ಜೀವಂಧರಸ್ವಾಮಿಗೆ, ಜಾತುಚಿತ್-ಒಂದು ಕಾಲದಲ್ಲಿಯೂ, ಉದ್ವೇಗಃ-ಭಯವು, ನ-ಉಂಟಾಗಲಿಲ್ಲವು., ಮೂಢಾನಾಂ-ಮೂಢರಿಗೆ, ಸಂಪದಾಪಲ್ಲವಾದಪಿ-ಸಂಪತ್-ಸಂಪದವೂ, ಆಪತ್-ವಿಪತ್ತೂ ಇವುಗಳ, ಲವಾದಪಿ- ಲೇಶದಿಂದಲೂಕೂಡ, ವಿಕ್ರಿಯಾಹಿ-ವಿಕಾರವುಂಟಾಗುವುದಲ್ಲವೆ ?.

ತಾತ್ಪರ್ಯ ॥ ಜಿತೇಂದ್ರಿಯನಾದ ಜೀವಂಧರಸ್ವಾಮಿಯು ಅರಣ್ಯದಲ್ಲಿ ಒಬ್ಬನೇ ಸಂಚರಿಸುತ್ತಿದ್ದಾಗ್ಯೂ ಭಯಪಡಲಿಲ್ಲವು ಜಿತೇಂದ್ರಿಯರಿಗೆ ಎಲ್ಲಿಯೂ ಭಯವಿಲ್ಲವು. ಅಲ್ಪೈಶ್ವರ್ಯದಿಂದ ಮದಿಸುವುದೂ, ಸ್ವಲ್ಪವಿಪತ್ತಿನಿಂದ ಅತಿದೀನರಾಗಿ ದುಃಖಪಡುವದೂಕೂಡ ಮೂಢರ ಸ್ವಭಾವವಲ್ಲವೆ?॥ ೩೩॥

ಶ್ಲೋಕ॥ ಅರಣ್ಯೇ ಕ್ವಚಿದಾಲೋಕ್ಯ
ವನದಾವೇನ ವಾರಿತಾನ್ ।
ದಹ್ಯಮಾನಾನಸೌ ಮಹ್ಯ
ಸ್ತ್ರಾತುಮೈಚ್ಛದನೇಕಪಾನ್ ॥೩೮॥

ಟೀ॥ ಮಹ್ಯಃ-ಮಹನೀಯನಾದ (ಪೂಜ್ಯನಾದ), ಅಸೌ-ಈ ಜೀವಂಧರಕು ಮಾರನು, ಅರಣ್ಯೇ-ಕಾಡಿನಲ್ಲಿ, ಕ್ವಚಿತ್-ಒಂದುಸ್ಥಳದೊಳು, ವನದಾವೇನ- ಕಾಡು ಗಿಚ್ಚಿನಿಂದ, ವಾರಿತಾನ್- ಸುತ್ತಲ್ಪಟ್ಟ, ದಹ್ಯಮಾನಾನ್- ದಹಿಸಲ್ಪಟ್ಟ, ಅನೇಕ ಪಾನ್-ಆನೆಗಳನ್ನು, ಆಲೋಕ್ಯ-ನೋಡಿ, ತ್ರಾತುಂ-ರಕ್ಷಿಸಲೋಸುಗ, ಐಚ್ಛತ್- ಅಪೇಕ್ಷಿಸಿದನು.

ತಾತ್ಪರ್ಯ॥ ಮಹಾಪುಣ್ಯಶಾಲಿಯಾದುದರಿಂದ ಪೂಜ್ಯನಾದ ಜೀವಂ ಧರಸ್ವಾಮಿಯು ಮಹಾರಣ್ಯದಲ್ಲಿ ಒಂದೆಡೆಯೊಳು ಕಾಡುಗಿಚ್ಚಿನಿಂದ ಆಕ್ರಮಿಸಲ್ಪಟ್ಟು ಬೆಂದು ಹೋಗುತ್ತಿರುವ ಆನೆಗಳನ್ನುನೋಡಿ ಪರ ಮದಯೆಯಿಂದ ರಕ್ಷಿಸಲಿಚ್ಛೈಸಿದನು ॥೩೮॥

ಶ್ಲೋಕ॥ ಧರ್ಮೋನಾಮ ಕೃಪಾಮೂಲಃ
ಸಾ ತು ಜೀವಾನುಕಂಪನಮ್ ।
ಅಶರಣ್ಯಶರಣ್ಯತ್ವ-
ಮದೋಧಾರ್ಮಿಕಲಕ್ಷಣಮ್ ॥೩೯॥

ಟೀ॥ ಧರ್ಮೋನಾಮ-ಧರ್ಮವೋ ಎಂದರೆ, ಕೃಪಾಮೂಲಃ-ಕೃಪಾ- ದಯೆ ಯೇ, ಮೂಲಃ- ಮೂಲಕಾರಣವಾಗುಳ್ಳದ್ದು, ಸಾ ತು-ಆ ಕೃಪಾಗುಣವಾದ ರೋ, ಜೀವಾನುಕಂಪನಂ-ಜೀವ-ಪ್ರಾಣಿಗಳ, ಅನುಕಂಪನಂ-ದುಃಖವನ್ನು ನೋ ಡಿ ಸಹಿಸದಿರುವಿಕೆಯು, ಅಶರಣ್ಯಶರಣ್ಯತ್ವಂ-ಅಶರಣ್ಯ-ಅನಾಥರಿಗೆ, ಶರಣ್ಯತ್ವಂ- ರಕ್ಷಕನಾಗಿರೋಣವೆಂಬ, ಅದಃ-ಈ ಧರ್ಮವು, ಧಾರ್ಮಿಕಲಕ್ಷಣಂ-ಧಾರ್ಮಿಕ-ಧರ್ಮಿಷ್ಠ ರಿಗೆ, ಲಕ್ಷಣಂ-ಸ್ವಭಾವವು.

ತಾತ್ಪರ್ಯ॥ ದಯಾಮೂಲಕವಾದ ಕೆಲಸವು ಧರ್ಮವೆನ್ನಲ್ಪಡುವು ದು. ಪ್ರಾಣಿಗಳ ದುಃಖವನ್ನು ನೋಡಿ ಸಹಿಸದೇ ಪ್ರಾಣಿಹಿಂಸೆಮಾಡ ದೇ ಇರೋಣವು ದಯೆಯೆನ್ನಲ್ಪಡುವುದು. ಅನಾಥರಾಗಿ ದುಃಖಪಡುವ

ಪ್ರಾಣಿಗಳಿಗೆ ಉಪಕಾರಮಾಡಿ ರಕ್ಷಿಸುವುದೆಂಬ ಈ ಗುಣವು ಧರ್ಮಿಷ್ಠರಾದವರ ಸ್ವಭಾವವು. ಆದುದರಿಂದಲೇ ಧರ್ಮಿಷ್ಠರಲ್ಲಿ ಅಗ್ರೇಸರನಾದ ಜೀವಂಧರನು ಕಾಡುಗಿಚ್ಚಿನೊಳ್ಬೇಯುವ ಆನೆಗಳಂ ರಕ್ಷಿಸಲಿಚ್ಛೈಸಿದನು. ॥೩೪॥

ಶ್ಲೋಕ ॥ ವವರ್ಷುರ್ವಾರಿದಾಸ್ತತ್ರ-
ತಾವತ್ಯೈವ ಸಗರ್ಜಿತಾಃ ।
ಸುಕೃತಿನಾಮಹೋವಾಂಛಾ
ಸಫಲೈವ ಹಿ ಜಾಯತೇ ॥ ೩೬ ॥

ಟೀ ॥ ತಾವತ್ಯೈವ-ಅಷ್ಟರಲ್ಲಿಯೇ, ವಾರಿದಾಃ-ಮೇಘಗಳು, ಸಗರ್ಜಿತಾ(ಸ್ಸಂತಃ)-ಗುಡುಗುವುವುಗಳಾಗಿ, ತತ್ರ-ಆಕಾಡುಗಿಚ್ಚುವ್ಯಾಪಿಸಿರುವಅರಣ್ಯದಲ್ಲಿ, ವವರ್ಷುಃ-ವರ್ಷಿಸಿದವು., ಸುಕೃತಿನಾಂ-ಮಹಾಪುಣ್ಯಶಾಲಿಗಳ, ವಾಂಛಾ- ಅಭಿಲಾಷೆಯು, ಸಫಲೈವ-ಪ್ರಯೋಜನವೊಡಗೂಡಿದುದಾಗಿಯೇ, ಜಾಯತೇಹಿ - ಆಗುವುದಲ್ಲವೆ?, ಅಹೋ!-ಆಶ್ಚರ್ಯವು !!.

ತಾತ್ಪರ್ಯ ॥ ಜೀವಂಧರಸ್ವಾಮಿಯು ಕಾಡುಗಿಚ್ಚಿನಿಂದ ಆಕ್ರಮಿಸಲ್ಪಟ್ಟುದಹಿಸಲ್ಪಡುವ ಆನೆಗಳವಿಷಯದಲ್ಲಿ ದಯಾಚಿತ್ತನಾಗಿ ರಕ್ಷಿಲೋಸುಗ ಆಲೋಚಿಸುತ್ತಿರುವಷ್ಟರಲ್ಲಿಯೇ ಎಲ್ಲಿಂದಲೋ ಹಠಾತ್ತಾಗಿ ಮೇಘಗಳು ಬಂದು ಗುಡುಗು ಮಿಂಚುಗಳೊಡಗೂಡಿ ವಿಶೇಷವಾಗಿ ಮಳೆಯಂ ಸುರಿಸಿದವು. ಪುಣ್ಯಶಾಲಿಗಳು ಮಾಡಿದ ಆಲೋಚನೆಯು ಸಫಲವಾಗುತ್ತದೆಯೇ ಹೊರತು ನಿಷ್ಫಲವಾಗುವುದಿಲ್ಲವು.॥೩೬॥

ಶ್ಲೋಕ ॥ ಅನೇಕಪಾನಸೌವೀಕ್ಷ್ಯ
ರಕ್ಷಿತಾನತೃಪತ್ತರಾಮ್ ।
ಸ್ವಯಂ ಚಾಸೀತ್ಸಮುಸ್ವಾಮೀ
ಸ್ವಸ್ಯ ಬಂಧವಿಮೋಕ್ಷಯೋಃ ॥೩೭ ॥

ಟೀ ॥ ಅಸೌ-ಈ ಜೀವಂಧರಸ್ವಾಮಿಯು, ರಕ್ಷಿತಾನ್-ಸಂರಕ್ಷಿಸಲ್ಪಟ್ಟ, ಅನೇಕಪಾನ್-ಆನೆಗಳನ್ನು, ವೀಕ್ಷ್ಯ-ನೋಡಿ, ಅತೃಪತ್ತರಾಂ-ವಿಶೇಷವಾಗಿ ತೃಪ್ತಿಹೊಂ

ದಿವನು., ಸ್ವಾಮೀ-ಜೀವಂಧರಸ್ವಾಮಿಯು, ಸ್ವಯಂಚ-ತಾನೂಕೂಡ, ಸ್ವಸ್ಯ-ತನ್ನ, ಬಂಧವಿಮೋಕ್ಷಯೋಃ- ಬಂಧ-ಬಂಧನವೂ, ವಿಮೋಕ್ಷಯೋಃ- ವಿಮೋಚನೆಯೂ ಇವುಗಳಲ್ಲಿ, ಸಮ(ಸ್ಸನ್)-ಸಮಾನವಾಗಿ, ಆಸೀತ್-ಆದನು.

ತಾತ್ಪರ್ಯ॥ ಈ ಜೀವಂಧರಸ್ವಾಮಿಯು ಮಳೆಯಿಂದ ಕಾಡುಗಿಚ್ಚು ಅಡಗಿ, ಮೊದಲು ಉರಿಯುಲ್ಲಿ ಸಿಕ್ಕಿದ್ದು ಈಗ ರಕ್ಷಿಸಲ್ಪಟ್ಟ ಆನೆಗಳನ್ನು ನೋಡಿ ಬಹಳವಾಗಿ ಸಂತೋಷಿಸಿದನು. ಮತ್ತು, ಉರಿಯಲ್ಲಿಸಿಕ್ಕಿ ದಹಿಸಲ್ಪಡುತ್ತಿದ್ದ ಆನೆಗಳನ್ನು ನೋಡಿದಕಾಲದಲ್ಲಿ ಪರಮದಯಾಳುವಾಗಿ ಧಾರ್ಮಿಕಾಗ್ರೇಸರನಾದ ಜೀವಂಧರಕುಮಾರನು ತಾನೇ ಕಾಡುಗಿಚ್ಚಿನಲ್ಲಿ ಬೇಯುತ್ತಿರುವಂತೆ ದುಃಖಿಸಿದವನಾಗಿಯೂ, ಆನೆಗಳು ದುಃಖವಿಮೋಚನೆಯಂ ಪೊಂದಿದನಂತರ ತಾನೇಸುಖಿತನಾದಂತೆಯೂ, ಪರಮಸಂತುಷ್ಟನಾದನು. ಹೀಗೆ ಮಹಾತ್ಮರು ಪರರಸುಖದುಃಖಗಳನ್ನುತನ್ನದಾಗಿಯೇ ಭಾವಿಸುವರು. ॥೩೭॥

ಶ್ಲೋ॥ಸಂಪದಾಪದ್ದ್ವಯೋಃ ಸ್ವೇಷಾಂ
ಸಮಭಾವಾ ಹಿ ಸಜ್ಜನಾಃ ।
ಪರೇಷಾನ್ತು ಪ್ರಸನ್ನಾಶ್ಚ
ವಿಪನ್ನಾಶ್ಚ ನಿಸರ್ಗತಃ ॥೩೮॥

ಟೀ॥ ಸಜ್ಜನಾಃ-ಸತ್ಪುರುಷರು, ಸ್ವೇಷಾಂ-ತಮ್ಮಗಳ, ಸಂಪದಾಪದ್ದ್ವಯೋಃ-ಸಂಪತ್-ಸಂಪದವೂ, ಆಪತ್-ವಿಪದವೂ (ವಿಪತ್ತೂ) ಇವುಗಳ, ದ್ವಯೋಃ-ಎರಡರಲ್ಲಿಯೂ, ಸಮಭಾವಾಹಿ-ಸಮ-ಸಮಾನವಾದ, ಭಾವಾಹಿ -ಮನೋಭಾವವುಳ್ಳವರಲ್ಲವೆ?, ಪರೇಷಾಂತು-ಇತರಪ್ರಾಣಿಗಳ ವಿಷಯದಲ್ಲಿಯೋಎಂದರೆ, ನಿಸರ್ಗತಃ-ಸ್ವಭಾವವಶದಿಂದಲೇ, ಪ್ರಸನ್ನಾಶ್ಚ-ಸಂಪತ್ತಿನ ವಿಷಯದಲ್ಲಿ ಸಂತೋಷವನ್ನೂ ಪಡುತ್ತಾರೆ., ವಿಪನ್ನಾಶ್ಚ-ವಿಪತ್ಸಂಭವಿಸಿದಲ್ಲಿ ವ್ಯಸನವನ್ನೂ ಪಡುತ್ತಾರೆ.

ತಾತ್ಪರ್ಯ॥ಸತ್ಪುರುಷರು ತಮಗೆ ಸಂಪತ್ತು ಬಂದರೂ ಸಂತೋಷಿಸುವದಿಲ್ಲವು. ತಮಗೆ ವಿಪತ್ತು ಬಂದರೂ ವ್ಯಸನವನ್ನೂ ಪಡುವದಿಲ್ಲವು. ಇತರರಿಗೆ ಒಳ್ಳೇದಾದರೋ ಸ್ವಾಭಾವಿಕವಾಗಿ ಸಂತೋಷಿಸುವರು. ಅಸೂಯೆಪಡರು. ಇತರರಿಗೆ ವಿಪತ್ತುಪ್ರಾಪ್ತವಾದರೆ ತಮಗೇನೇ ವಿಪತ್ತುಬಂತೆಂದು ಬಹಳ ದುಃಖಿಸುವರು. ಉಪೇಕ್ಷಿಸರು. ಆದುದರಿಂದ ಜೀ

ವಂಧರನು ಆನೆಗಳ ವಿಷಯದಲ್ಲಿ ಸಮಾನಾವಸ್ಥೆಯನ್ನು ಹೊಂದಿದನು. ಇದರಿಂದ ಜೀವಂಧರನ ಪ್ರಾಣಿದಯೆಯು ವ್ಯಕ್ತವಾಯಿತು ॥೩೮॥

ಶ್ಲೋಕ॥ ತತಸ್ತಸ್ಮಾದ್ವಿನಿರ್ಗತ್ಯ
ತೀರ್ಥಸ್ಥಾನಾನ್ಯಪೂಜಯತ್ ।
ಸದಸತ್ತ್ವಂ ಹಿ ವಸ್ತೂನಾಂ
ಸಂಸರ್ಗಾದೇವ ದೃಶ್ಯತೇ ॥೩೯॥

ಟೀ ॥ ತತಃ-ಅನಂತರದಲ್ಲಿ, ಸಃ-ಆ ಜೀವಂಧರಸ್ವಾಮಿಯು, ತಸ್ಮಾತ್-ಆ ಅರಣ್ಯದಡೆಸೆಯಿಂದ, ವಿನಿರ್ಗತ್ಯ-ಹೊರಟು, ತೀರ್ಥಸ್ಥಾನಾನಿ-ತೀರ್ಥ-ತೀರ್ಥಂಕರರ, ಸ್ಥಾನಾನಿ-ಪುಣ್ಯಕ್ಷೇತ್ರಗಳನ್ನು, ಅಪೂಜಯತ್-ಪೂಜಿಸಿದನು., ಸದಸತ್ತ್ವಂ-ಸತ್-ಶ್ರೇಷ್ಠತೆಯೂ, ಅಸತ್ತ್ವಂ-ಅಪಕೃಷ್ಟತೆಯೂ ಇವುಗಳು, ವಸ್ತೂನಾಂ-ವಸ್ತುಗಳಿಗೆ, ಸಂಸರ್ಗಾದೇವ-ಸಂಬಂಧದಡೆಸೆಯಿಂದಲೇ, ದೃಶ್ಯತೇಹಿ- ಕಾಣಲ್ಪಡುತದೆಯಲ್ಲವೆ?.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಕುಮಾರನು ಆ ಅರಣ್ಯವನ್ನು ಬಿಟ್ಟು ಹೊರಟು ತೀರ್ಥಂಕರರು ದಯಮಾಡಿಸಿದ್ದ ಪುಣ್ಯಕ್ಷೇತ್ರಗಳನ್ನು ಪೂಜಿಸಿದನು. ವಸ್ತುವು ಶ್ರೇಷ್ಠವೆನಿಸಬೇಕಾದರೆ ಉತ್ಕೃಷ್ಟವಸ್ತುವಿನ ಸಂಬಂಧದಿಂದಲಲ್ಲವೆ? ನಿಕೃಷ್ಟವೆನಿಸಬೇಕಾದರೂ ಅಪಕೃಷ್ಟವಸ್ತುವಿನ ಸಂಬಂಧದಿಂದಲ್ಲವೆ? ಮುಖ್ಯವಾಗಿ ತೀರ್ಥಂಕರರಂಗೀಕರಿಸಿದ ಸ್ಥಾನವಾದುದರಿಂದ ಆ ಸ್ಥಾನಗಳು ಪುಣ್ಯಕ್ಷೇತ್ರಗಳೆನಿಸಿದವೆಂದರ್ಥವು. ॥೩೯॥

ಶ್ಲೋಕ॥ ಅಥ ಸಂಭಾವಯಾಮಾಸ
ಯಕ್ಷೀ ಸಾ ಧರ್ಮರಕ್ಷಿಣೀ ।
ಧರ್ಮಮೂರ್ತಿಮಮುಂ ತತ್ರ
ಸಮ್ಯಕ್ಸ್ವಶಿವುದಾನತಃ ॥ ೪೦ ॥

ಟೀ॥ ಅಥ-ಅನಂತರದಲ್ಲಿ, ಧರ್ಮರಕ್ಷಿಣೀ-ಧರ್ಮ-ಧರ್ಮವನ್ನು, ರಕ್ಷಿಣೀ-ಕಾಪಾಡುತಲಿರುವ, ಸಾ-ಆ ಪ್ರಸಿದ್ಧಳಾದ, ಯಕ್ಷೀ-ಯಕ್ಷದೇವತೆಯು, ತತ್ರ-ಆ ತೀರ್ಥಸ್ಥಾನಗಳಲ್ಲಿ, ಧರ್ಮಮೂರ್ತಿಂ-ಧರ್ಮಸ್ವರೂಪನಾದ, ಅಮುಂ-ಈ ಜೀವಂಧರ ಕುಮಾರನ

ನ್ನು, ಸಮ್ಯಕ್-ಚೆನ್ನಾಗಿ, ಕಶಿಪುದಾನತಃ-ಕಶಿಪು-ಅನ್ನವಸ್ತ್ರಾದಿಗಳನ್ನು, ದಾನತಃ-ಕೊಡುವುದರಿಂದ, ಸಂಭಾವಯಾಮಾಸ-ಪೂಜಿಸಿದಳು.

ತಾತ್ಪರ್ಯ॥ಅನಂತರದಲ್ಲಿ ಆ ಪುಣ್ಯಕ್ಷೇತ್ರಗಳೊಳು ಧರ್ಮವನ್ನು ಸಂರಕ್ಷಿಸುತ್ತಿರುವ ಯಕ್ಷದೇವತೆಯು ಈ ಧರ್ಮಸ್ವರೂಪನಾದ ಜೀವಂಧರಸ್ವಾಮಿಗೆ ಇಷ್ಟವಾದ ಅನ್ನವಸ್ತ್ರಗಳನ್ನು ಕೊಟ್ಟು ರಕ್ಷಿಸಿದಳು. (ಸತ್ಕರಿಸಿದಳು) ಪುಣ್ಯವಿದ್ದಲ್ಲಿ ಸಕಲವೂ ಸಿದ್ಧಿಸುವುದು. ॥೪೦॥

ಶ್ಲೋಕ॥ ದೈವತೇನಾಪಿ ಪೂಜ್ಯಂತೇ
ಧಾರ್ಮಿಕಾಃ ಕಿಂ ಪುನರ್ನರೈಃ।
ಅತೋ ಧರ್ಮರತಾಸ್ಸಂತು
ಶರ್ಮಣೇಸ್ಪೃಹಯಾಳವಃ ॥೪೧॥

ಟೀ॥ ಧಾರ್ಮಿಕಾಃ-ಧರ್ಮಿಷ್ಠರಾದವರು, ದೈವತೇನಾಪಿ-ದೇವತೆಯಿಂದಲೂಕೂಡ, ಪೂಜ್ಯಂತೇ-ಪೂಜಿಸಲ್ಪಡುವರು., ನರೈಃ-ಮನುಜರಿಂದ, ಕಿಂ ಪುನಃ-ಹೇಳತಕ್ಕದ್ದೇನು ?, ಶರ್ಮಣೇ-ಸುಖಕ್ಕೋಸುಗ, ಸ್ಪೃಹಯಾಳವಃ-ಆಶೆಪಡುವವರು, ಅತಃ-ಆದಕಾರಣದದೆಸೆಯಿಂದ, ಧರ್ಮರತಾಸ್ಸಂತಃ-ಧರ್ಮ-ಧರ್ಮದಲ್ಲಿ, ರತಾ(ಸ್ಸಂತಃ)-ಆಸಕ್ತರಾಗಿ, ಸಂತು-ಆಗಲಿ (ಇರಲಿ).

ತಾತ್ಪರ್ಯ॥ ಧರ್ಮಿಷ್ಠರು ದೇವತೆಯಿಂದಲೂ ಕೂಡ ಪೂಜಿಸಲ್ಪಡುವರು. ಮನುಷ್ಯರಿಂದ ಪೂಜಿಸಲ್ಪಡುವ ವಿಷಯದಲ್ಲಿ ಹೇಳತಕ್ಕದ್ದೇನು? ದೇವತೆಯೇ ಪೂಜಿಸುವಲ್ಲಿ ಮನುಷ್ಯರು ಪೂಜಿಸುವದು ಅತಿಶಯವಲ್ಲವೆಂಬ ಭಾವವು.) ಆದುದರಿಂದ, ಎಲೈ ವಿವೇಕಿಗಳಾದ ಜನಗಳಿರಾ!! ಸರ್ವಲೋಕಪೂಜ್ಯತೆಗೂ,ಸುಖಗಳಿಗೂ ಕಾರಣವಾದಧರ್ಮದಲ್ಲಿ ಇಹಲೋಕಪರಲೋಕ ಸಕಲದರಲ್ಲಿಯೂ ಸುಖವನ್ನು ಬಯಸುವ ನೀವು ಧರ್ಮಾರ್ಜನದಲ್ಲಿ ಆಸಕ್ತರಾಗಿರಿ. ॥೪೧॥

ಶ್ಲೋಕ॥ ತತಃಪಲ್ಲವದೇಶಸ್ಥಾಂ
ಚಂದ್ರಾಭಾಖ್ಯಾಂಕನ್ಯಾಮಾತ್ಮಪುರೀಮ।
ಭೇಜೆ ಶುಭನಿಮಿತ್ತೇನ
ಸನಿಮಿತ್ತಾ ಹಿ ಭಾವಿನಃ ।೪೨॥

ಟೀ॥ ತತ್ರ-ಅನಂತರದಲ್ಲಿ, ಸಃ-ಆ ಜೀವಂಧರಕುಮಾರನು, ಪಲ್ಲವದೇಶಸ್ಥಾಂ-ಪಲ್ಲವ-ಪಲ್ಲವವೆಂಬ, ದೇಶ-ದೇಶದೊಳು, ಸ್ಥಾಂ-ಇರುತಲಿರುವ, ಚಂದ್ರಾಭಾಖ್ಯಾಂ-ಚಂದ್ರಾಭಾ-ಚಂದ್ರಾಭಾಎಂಬದಾಗಿ, ಆಖ್ಯಾಂ-ನಾಮಧೇಯವುಳ್ಳ, ಪುರೀಂ-ಪಟ್ಟಣವನ್ನು, ಕ್ರಮಾತ್-ಕ್ರಮವಾಗಿ(ಒಂದೊಂದಾಗಿಹೊಂದುವಕ್ರಮದಿಂದ), ಶುಭನಿಮಿತ್ತೇನ-ಶುಭ-ಒಳ್ಳೇಫಲವನ್ನು ಸೂಚಿಸುತಲಿರುವ, ನಿಮಿತ್ತೇನ-ಶಕುನದಿಂದ, ಭೇಜೇ-ಹೊಂದಿದನು., ಭಾವಿನಃ-ಮುಂದಕ್ಕೆ ಉಂಟಾಗತಕ್ಕ ಶುಭಾಶುಭಫಲಗಳು, ಸನಿಮಿತ್ತಾಹಿ-ಶಕುನಗಳೊಡಗೂಡಿದುದಲ್ಲವೆ?

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಕುಮಾರನು ಪಲ್ಲವದೇಶದಲ್ಲಿರುವ ಚಂದ್ರಾಭಾಯೆಂಬ ರಾಜಧಾನಿಯನ್ನು ತೀರ್ಥಯಾತ್ರಾ ಕ್ರಮದಿಂದ ಶುಭಶಕುನದೊಡನೆ ಕೂಡ ಹೊಂದಿದನು. ( ಪಟ್ಟಣಪ್ರವೇಶಕಾಲದಲ್ಲಿ ಮುಂದಕ್ಕೆ ಒಳ್ಳೇ ಫಲವನ್ನು ಸೂಚಿಸುವ ಶಕುನವುಂಟಾಯಿತೆಂದರ್ಥವು.) ಮುಂದಕ್ಕೆ ಉಂಟಾಗುವ ಫಲವನ್ನುಶಕುನಗಳು ಸೂಚಿಸುವುದಲ್ಲವೆ ? ಆದುದರಿಂದ ಜೀವಂಧರಕುಮಾರನಿಗೆ ಶುಭಸೂಚನೆಯಾದುದು ॥೪೨॥

ಶ್ಲೋಕ॥ ರಾಜ್ಞೋ ಧನಪತೇಃಪುತ್ರೀಂ
ಮಹಿದಷ್ಟಾಮಜೀವಯತ್ ।
ನಿರ್ಹೇತುಕಾನ್ಯರಕ್ಷಾ ಹಿ
ಸತಾಂನೈಸರ್ಗಿಕೋ ಗುಣಃ ॥೪೩॥

ಟೀ ॥ ಸಃ-ಆ ಜೀವಂಧರಕುಮಾರನು, ಅಹಿದಷ್ಟಾಂ- ಅಹಿ-ಸರ್ಪದಿಂದ, ದಷ್ಟಾಂ-ಕಚ್ಚಲ್ಪಟ್ಟ, ಧನಪತೇಃ-ಧನಪತಿಎಂಬ, ರಾಜ್ಞಃ-ಮಹಾರಾಜನ, ಪುತ್ರೀಂ-ಮಗಳನ್ನು, ಅಜೀವಯತ್-ಬದುಕಿಸಿದನು., ನಿರ್ಹೇತುಕಾನ್ಯರಕ್ಷಾ-ನಿರ್ಹೇತುಕ-ಪ್ರತ್ಯುಪಕಾರ ರಹಿತವಾಗಿ (ತನಗೊಂದುಪ್ರಯೋಜನದ ಅಪೇಕ್ಷೆಯಿಲ್ಲದೆ) ಅನ್ಯ-ಇತರರ, ರಕ್ಷಾ-ರಕ್ಷಿಸುವಿಕೆಯು, ಸತಾಂ-ಸತ್ಪುರುಷರಿಗೆ, ನೈಸರ್ಗಿಕಃ- ಸ್ವತಸ್ಸಿದ್ಧವಾದ, ಗುಣೋಹಿ-ಗುಣವಲ್ಲವೆ?.

ತಾತ್ಪರ್ಯ ॥ ಆ ಜೀವಂಧರಕುಮಾರನು ಆ ಚಂದ್ರಾಭಾಎಂಬ ಪಟ್ಟಣದ ಅರಸನಾದ ಧನಪತಿ ಮಹಾರಾಜನಮಗಳಾದ ಸರ್ಪದಿಂದ ಕಚ್ಚಲ್ಪಟ್ಟುಮೂರ್ಛಿತಳಾದ ಪದ್ಮಾದೇವಿಯನ್ನು ಯಕ್ಷನು ಉಪದೇಶಿಸಿದ್ದ

ಮಂತ್ರಶಕ್ತಿಯಿಂದ ಬದುಕಿಸಿದನು. ನಿಷ್ಕಾರಣವಾಗಿ ಪರಮದಯೆಯಿಂದ ಪರೋಪಕಾರವನ್ನು ಮಾಡುವುದು ಸತ್ಪುರುಷರಿಗೆ ಸ್ವಾಭಾವಿಕವಾದ ಸದ್ಗುಣವಲ್ಲವೆ ? ॥೪೩॥

ಶ್ಲೋಕ॥ ಲೋಕಪಾಲಸ್ತದಾಲೋಕ್ಯ
ತಜ್ಜ್ಯೇಷ್ಠಸ್ತಮಪೂಜಯತ್ ।
ಪ್ರಾಣಪ್ರದಾಯಿನಾಮನ್ಯಾ
ನಹ್ಯಸ್ತಿ ಪ್ರತ್ಯುಪಕ್ರಿಯಾ ॥೪೪॥

ಟೀ॥ ತಜ್ಜ್ಯೇಷ್ಠಃ-ತತ್-ಆ ಪದ್ಮಾದೇವಿಗೆ, ಜ್ಯೇಷ್ಠಃ-ಅಣ್ಣನಾದ, ಲೋಕಪಾಲಃ-ಲೋಕಪಾಲಮಹಾರಾಜನು, ತತ್-ಆ ಜೀವಂಧರಕುಮಾರನುಮಾಡಿದಮಹೋಪಕಾರವನ್ನು- ಆಲೋಕ್ಯ-ನೋಡಿ, ತಂ-ಆ ಜೀವಂಧರಕುಮಾರನನ್ನು, ಅಪೂಜಯತ್-ಪೂಜಿಸಿದನು., ಪ್ರಾಣಪ್ರದಾಯಿನಾಂ-ಪ್ರಾಣ-ಪ್ರಾಣವನ್ನು, ಪ್ರದಾಯಿನಾಂ-ಕೊಟ್ಟವರಿಗೆ, ಪ್ರತ್ಯುಪಕ್ರಿಯಾ-ಪ್ರತಿಯಾದಉಪಕಾರವು, ಅನ್ಯಾ- ಮತ್ತೆಯಾವುದೂ, ನಹ್ಯಸ್ತಿ-ಇಲ್ಲವಷ್ಟೆ?.

ತಾತ್ಪರ್ಯ ॥ ಆ ಧನಪತಿ ಮಹಾರಾಜನಮಗಳಾದ ಜೀವಂಧರಕುಮಾರನಿಂದ ಕೊಡಲ್ಪಟ್ಟ ಜೀವವುಳ್ಳವಳಾದ ಆ ಪದ್ಮಾದೇವಿಗೆ ಅಣ್ಣನಾದ ಲೋಕಪಾಲ ಮಹಾರಾಜನು ತಂಗಿಗೆ ಪ್ರಾಣದಾನಮಾಡಿದ ಆ ಮಹಾಪುಣ್ಯಪುರುಷನಾದ ಜೀವಂಧರಕುಮಾರನನ್ನು ಪೂಜಿಸಿದನು. ಪ್ರಾಣವನ್ನೀ ಕೊಟ್ಟವರಿಗೆ ಮತ್ತಾವ ಪ್ರತ್ಯುಪಕಾರವೂ ಇಲ್ಲವಷ್ಟೆ? ॥೪೪

ಶ್ಲೋಕ॥ ಪೂಜ್ಯಾ ಅಪಿ ಸ್ವಯಂ ಸನ್ತ-
ಸ್ಸಜ್ಜನಾನಾಂ ಹಿ ಪೂಜಕಾಃ ।
ಪೂಜ್ಯತ್ವಂನಾಮ ಕಿನ್ನು ಸ್ಯಾ-
ತ್ಪೂಜ್ಯಪೂಜಾ ವ್ಯತಿಕ್ರಮೇ ॥೪೫॥

ಟೀ ॥ ಸ್ವಯಂ-ತಾವೇ, ಪೂಜ್ಯಾಅಪಿ-ಪೂಜಾಯೋಗ್ಯರಾಗಿದ್ದರೂಕೂಡ, ಸಂತಃ-ಸತ್ಪುರುಷರು, ಸಜ್ಜನಾನಾಂ-ಸತ್ಪುರುಷರಿಗೆ, ಪೂಜಕಾಹಿ-ಪೂಜಿಸುವಂಥಾವರಲ್ಲವೆ ?. ಪೂಜ್ಯಪೂಜಾವ್ಯತಿಕ್ರಮೇ-ಪೂಜ್ಯ-ಪೂಜೆಗೆಯೋಗ್ಯರಾದವರ, ಪೂಜಾ-ಪೂಜೆಮಾಡೋಣವನ್ನು, ವ್ಯತಿಕ್ರಮೇಸತಿ - ಅತಿಕ್ರಮಿಸುತ್ತಿರಲಾಗಿ, ಪೂಜ್ಯತ್ವಂನಾಮ-ಪೂಜ್ಯತೆಯೆಂಬುದೋ, ಸ್ಯಾತ್ಕಿನ್ನು-ಉಂಟಾದೀತೇ ಏನು ?.

ತಾತ್ಪರ್ಯ ॥ ಸತ್ಪುರುಷರು ತಾವೇ ಪೂಜ್ಯರಾದಾಗ್ಯೂ ಕೂಡ ಸತ್ಪುರುಷರನ್ನು ಪೂಜಿಸುತ್ತಾರೆ. ಪೂಜ್ಯರನ್ನು ಪೂಜಿಸದೇ ಇದ್ದಲ್ಲಿ ಸತ್ಪುರುಷರಿಗೆ ಪೂಜ್ಯತೆಯು ಹೇಗೆ ಉಂಟಾದೀತು?॥೪೫॥

ಶ್ಲೋಕ॥ ಪ್ರಾಜ್ಞೇಷು ಪ್ರಹ್ವತಾ ವಶ್ಯ-
ಮಾತ್ಮವಶ್ಯೋಚಿತಾಮತಾ ।
ಪ್ರಹ್ವತಾ ಹಿ ಮನುಷ್ಯಾಣಾಂ* ಧನುಷ್ಕಾಣಾಂ
ಕಾರ್ಮುಕಸ್ಯೇವ ಕಾಮದಾ ॥೪೬॥

ಟೀ ॥ ಪ್ರಾಜ್ಞೇಷು-ಪ್ರಾಜ್ಞರಲ್ಲಿ, ಪ್ರಹ್ವತಾ-ವಿನಯದೊಡನೆಕೂಡಿರುವಿಕೆಯು, ಅವಶ್ಯಂ-ಅವಶ್ಯವಾಗಿ, ಆತ್ಮವಶ್ಯಾ(ಸತೀ)–ಆತ್ಮ-ತನಿಗೆ, ವಶ್ಯಾ(ಸತೀ)-ಅಧೀನವಾಗಿಯೂ, ಉಚಿತಾ(ಸತೀ)-ಯೋಗ್ಯವಾದುದಾಗಿಯೂ, ಮತಾ-ಸತ್ಪುರುಷರಿಗೆ ಸಮ್ಮತವಾದದ್ದು., ಮನುಷ್ಯಾಣಾಂ- ಮನುಷ್ಯರಿಗೆ, ( ಧನುಷ್ಕಾಣಾಂ ಎಂಬ ಪಾಠವು ಪ್ರಾಮಾದಿಕವಾಗಿ ತೋರುತಿದೆ.) ಪ್ರಹ್ವತಾ - ವಿನಯಗುಣವು, ಕಾರ್ಮುಕಸ್ಯ-ಧನುಸ್ಸಿನ, ಪ್ರಹ್ವತೇವ-ನಮ್ರತೆಯೋಪಾದಿಯಲ್ಲಿ, ಕಾಮದಾಹಿ–ಕಾಮ-ಇಷ್ಟಾರ್ಥವನ್ನು, ದಾಹಿ-ಕೊಡುವಂಥಾದ್ದಲ್ಲವೆ?.

ತಾತ್ಪರ್ಯ ॥ ಪ್ರಾಜ್ಞರಲ್ಲಿ ಗರ್ವವನ್ನು ಬಿಟ್ಟರೋಣವು ಆತ್ಮನಿಗೆ (ನಮಗೆ) ಸ್ವಾಧೀನವಾಗಿಯೇ ಇದೆ. ಯೋಗ್ಯವಾದ ಗುಣವಾಗಿಯೂ ಇದೆ. ಆದುದರಿಂದ ಪ್ರಾಜ್ಞರಲ್ಲಿ ವಿನಯವೇ ಉತ್ಕೃಷ್ಟಗುಣವೆಂದು ಸತ್ಪುರುಷರಿಗೆ ಸಮ್ಮತವು. ಬಿಲ್ಲಾದುದು ಬಗ್ಗಿಸಲ್ಪಟ್ಟು ನಮ್ರತೆಯನ್ನು ಹೊಂದಿಯೇ ಅಲ್ಲವೆ ಮನುಷ್ಯರಿಗೆ ಇಷ್ಟಾರ್ಥವನ್ನುಂಟುಮಾಡುತ್ತದೆ! ಬಗ್ಗದೇಇದ್ದಲ್ಲಿಎಂದಿಗೂ ಗುರಿಯನ್ನು ಭೇದಿಸಲಾರದು. (ಹಾಗೆ ಮನುಷ್ಯನು ಪ್ರಾಜ್ಞರಲ್ಲಿ ಗರ್ವಪಡದೆ ಇದ್ದರೆ ಕ್ಷೇಮವನ್ನು ಹೊಂದುವನೆಂದುಭಾವವು) ॥೪೬॥

ಶ್ಲೋಕ॥ ವಪುರ್ವೀಕ್ಷಣಮಾತ್ರೇಣ
ನಿರಣಾಯ್ಯಸ್ಯ ವೈಭವಮ್ ।
ವಪುರ್ವಕ್ತಿ ಹಿ ಮಾಹಾತ್ಮ್ಯಂ
ದೌರಾತ್ಮ್ಯಮಪಿ ತದ್ವಿದಾಮ್ ॥೪೭॥

ಟೀ ॥ ವಪುರ್ವೀಕ್ಷಣಮಾತ್ರೇಣ-ವಪುಃ-ಶರೀರವ, ವೀಕ್ಷಣಮಾತ್ರೇಣ-ನೋಡಿದಮಾತ್ರದಿಂದಲೇ, ಅಸ್ಯ-ಈ ಜೀವಂಧರಕುಮಾರನ, ವೈಭವಂ-ಮಹಿಮೆಯು, ನಿರಣಾಯಿ-ನಿರ್ಣಯಿಸಲ್ಪಟ್ಟಿತು., ವಪುಃ-ಶರೀರವು, ತದ್ವಿದಾಂ-ತತ್-ಆ ಶರೀರ ಲಕ್ಷಣವನ್ನು, ವಿದಾಂ-ತಿಳಿಯುವ ನಿಪುಣರಿಗೆ, ಮಾಹಾತ್ಮ್ಯಂ - ಮಹಾತ್ಮನಾಗಿರುವಿಕೆಯನ್ನೂ, ದೌರಾತ್ಮ್ಯಮಪಿ-ದುರಾತ್ಮನಾಗಿರುವಿಕೆಯನ್ನೂಕೂಡ, ವಕ್ತಿಹಿ-ಹೇಳುತ್ತದೆಯಲ್ಲವೆ ?.

ತಾತ್ಪರ್ಯ ॥ ಈ ಲೋಕಪಾಲ ಮಹಾರಾಜನು ಶರೀರವನ್ನುನೋಡಿದ ಮಾತ್ರದಿಂದಲೇ ಈ ಜೀವಂಧರಕುಮಾರನ ಮಾಹಾತ್ಮ್ಯವನ್ನು ನಿರ್ಣಯಿಸಿದನು. ಅಂಥಾ ಶರೀರಲಕ್ಷಣವನ್ನು ತಿಳಿದ ನಿಪುಣರಿಗೆ ಶರೀರವೇ ಮನುಷ್ಯನ ಮಾಹಾತ್ಮ್ಯವನ್ನೂ, ದುರಾತ್ಮನಾಗಿರುವಿಕೆಯನ್ನೂ, ಕೂಡ ತಿಳಿಯಪಡಿಸುವುದಲ್ಲವೆ! ಮನುಷ್ಯನ ಲಕ್ಷಣಗಳಿಂದಲೇ ಯೋಗ್ಯತೆಯು ತಿಳಿಯುವುದೆಂದು ಭಾವವು.) ಮಹಾಪುರುಷ ಲಕ್ಷಣಗಳಿಂದ ಜೀವಂಧರನಂ ಉತ್ತಮಪುರುಷನೆಂದು ತಿಳಿದನೆಂಬದಾಗಿ ಭಾವವು ॥೪೭॥

ಶ್ಲೋಕ॥ ಅರ್ಧರಾಜ್ಯಂ ಚ ಕನ್ಯಾಂ ಚ
ಪಾರ್ಥಿವಃ ಸ್ವಾಮಿನೇ ದದೌ ।
ಪಾತ್ರತಾಂ ನೀತಮಾತ್ಮಾನಂ
ಸ್ವಯಂ ಯಾಂತಿ ಹಿ ಸಂಪದಃ ॥೪೮॥

ಟೀ ॥ ಪಾರ್ಥಿವಃ-ಚಂದ್ರಾಭಪುರದ ಅರಸನು, ಅರ್ಧರಾಜ್ಯಂಚ - ಅರ್ಧರಾಜ್ಯವನ್ನೂ, ಕನ್ಯಾಂ ಚ-ಕನ್ನಿಕೆಯನ್ನೂಕೂಡ, ಸ್ವಾಮಿನೇ - ಜೀವಂಧರಸ್ವಾಮಿಗೋಸುಗ, ದದೌ-ಕೊಟ್ಟನು., ಪಾತ್ರತಾಂ-ಸತ್ಪಾತ್ರವಾಗಿರೋಣವನ್ನು, ನೀತಂ-ಹೊಂದಿರುವ, ಆತ್ಮಾನಂ-ಆತ್ಮನನ್ನು, ಸಂಪದಃ-ಸಂಪತ್ತುಗಳು, ಸ್ವಯಂ-ತಾವಾಗಿಯೇ, ಯಾನ್ತಿಹಿ-ಹೊಂದುತ್ತವೆಯಲ್ಲವೆ?.

ತಾತ್ಪರ್ಯ ॥ಚಂದ್ರಾಭಪುರೀರಾಜನು ಅರ್ಧರಾಜ್ಯವನ್ನೂ, ಕನ್ನಿಕೆಯನ್ನೂಕೂಡ ಜೀವಂಧರಸ್ವಾಮಿಗೋಸುಗ ಕೊಟ್ಟನು. ಯೋಗ್ಯನಾದ ಪುರುಷನನ್ನು ಸಂಪತ್ತುಗಳು ತಾವಾಗಿಯೇ ಹೊಂದುವುವಲ್ಲವೆ!(ಇವನಪ್ರಯತ್ನವೇ ಆವಶ್ಯಕವಿಲ್ಲವೆಂದು ಭಾವವು) ಪುಣ್ಯಹೀನರುಪ್ರಯತ್ನ ಮಾಡಿದರೂ ಲಭಿಸದು. ॥೪೮॥

ಶ್ಲೋಕ॥ ತಿಲೋತ್ತಮಾಸುತಾಂ ಪಶ್ಚಾ-
ಲ್ಲೋಕಪಾಲಸಮರ್ಪಿತಾಮ್ ।
ಪರ್ಯಣೈಷೀತ್ಪವಿತ್ರೋಯಂ
ಪದ್ಮಾಖ್ಯಾಂ ತಾಂ ಯವೀಯಸೀಮ್ ॥೪೯॥

ಟೀ ॥ ಅಯಂಪವಿತ್ರಃ- ಈ ಪವಿತ್ರಕುಮಾರನು, ಪಶ್ಚಾತ್- ಅನಂತರದಲ್ಲಿ, ಲೋಕಪಾಲಸಮರ್ಪಿತಾಂ-ಲೋಕಪಾಲ- ಲೋಕಪಾಲ ಮಹಾರಾಜನಿಂದ, ಸಮರ್ಪಿತಾಂ-ಕೊಡಲ್ಪಟ್ಟ, ತಿಲೋತ್ತಮಾಸುತಾಂ-ತಿಲೋತ್ತಮಾದೇವಿಗೆ ಮಗಳಾದ, ಯವೀಯಸೀಂ-ಲೋಕಪಾಲಮಹಾರಾಜನಿಗೆತಂಗಿಯಾದ, ತಾಂ-ಆ ಪ್ರಸಿದ್ಧಳಾದ, ಪದ್ಮಾಖ್ಯಾಂ-ಪದ್ಮಾ ಎಂದು ನಾಮಧೇಯವುಳ್ಳ ಕನ್ನಿಕೆಯನ್ನು, ಪರ್ಯಣೈಷೀತ್- ವಿವಾಹಮಾಡಿಕೊಂಡನು.

ತಾತ್ಪರ್ಯ ॥ ಕ್ಷೀರಸಮುದ್ರದ ತೀರ್ಥದಿಂದ ಅಭಿಷೇಕವಂಮಾಡಿ ಸುದರ್ಶನಯಕ್ಷನಿಂದ ನಾಯಿಯಾಗಿದ್ದ ತನ್ನನ್ನು ಪಂಚಪರಮೇಷ್ಠಿ ಮಹಾ ಮಂತ್ರಪ್ರಭವದಿಂ ದೇವನನ್ನಾಗಿ ಮಾಡಿದ ಪವಿತ್ರತೆಯು ಇರುವುದರಿಂದ, ಪವಿತ್ರನೆಂದು ಕರೆಯಲ್ಪಟ್ಟ ಜೀವಂಧರಸ್ವಾಮಿಯು ಲೋಕಪಾಲಮಹಾರಾಜನಿಂದ ಧಾರಾಪುರಸ್ಸರವಾಗಿ ಕೊಡಲ್ಪಟ್ಟ ತಿಲೋತ್ತಮಾದೇವಿಗೆಮಗಳಾದ, ಲೋಕಪಾಲಮಹಾರಾಜನಿಗೆ ತಂಗಿಯಾದ, ಪದ್ಮಾದೇವಿಯೆಂಬ ನಾಮಧೇಯವುಳ್ಳ ಆ ಕನ್ನಿಕೆಯನ್ನು ವಿವಾಹ ಮಾಡಿಕೊಂಡನು. ॥೪೯॥

ಇಂತು ಜೀವಂಧರಕುಮಾರನ ಶ್ರೇಯಃಪರಂಪರೆಗಳಂ ನೋಡಿ, ಸಹಿಸದ ಕಾಷ್ಠಾಂಗಾರನವನಂ ಬಂಧಿಸಿ ವಧಿಸಲುದ್ಯುಕ್ತನಾಗಲು, ಸ್ಮರಣಮಾತ್ರದಿಂ ಸುದರ್ಶನ ಯಕ್ಷನಾಜೀವಂಧರನಂ ಸ್ವಸ್ಥಾನವನ್ನೈದಿಸಿ, ಕ್ಷೀರಾಭಿಷೇಕಪೂರ್ವಕ ಪವಿತ್ರನೆಂಬ ನಾಮಧೇಯವನಿತ್ತು, ಗೌರವದಿಂ ಮುಪಚರಿಸಿ ಕಳುಹಿಸಿದನು. ಬಳಿಕ ಜೀವಂಧರನು ತೀರ್ಥಯಾತ್ರಾರ್ಥವಾಗಿ ಹೊರಟು ಮಧ್ಯಮಾರ್ಗ ಮಹಾರಣ್ಯದೊಳು ಕಾಡ್ಗಿಚ್ಚಿನಿಂ ಬೇಯುತಲಿರುವ ಆನೆಗಳಂ ಮಳೆಯಂ ಸುರಿಸಿ ರಕ್ಷಿಸಿ, ಅನಂತರ ಚಂದ್ರಾಭ ನಗರವಂ ಸೇರಿ, ಸರ್ಪದಿಂ ಕಚ್ಚಲ್ಪಟ್ಟ ಆ ಪುರದರಸು ಧನಪತಿರಾಜನ ಪುತ್ರಿಯಾದ ಪದ್ಮಾದೇವಿಯಂ ಬದುಕಿಸಿ, ಸಂತುಷ್ಟನಾದ ಯುವರಾಜ ಲೋಕಪಾಲನಿಂ ಅರ್ಧರಾಜ್ಯಪ್ರದಾನಪೂರ್ವಕ ಕೊಡಲ್ಪಟ್ಟ ಆ ಪದ್ಮೆಯಂ ವಿವಾಹಮಾಡಿಕೊಂಡನೆಂ ಬಲ್ಲಿಗೆ ಐದನೆಯ ಲಂಬವು ಸಮಾಪ್ತವಾದುದು.

---



ಶ್ರೀ.

॥ ಓಂ ನಮಸ್ಸಿದ್ಧೇಭ್ಯಃ. ॥

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ,

# ಷಷ್ಠೋ ಲಂಬಃ

ಶ್ಲೋ ॥ ಅಥೋಪಯಮ್ಯ ಪದ್ಮಾಂ ತಾಂ
ರಮಯನ್ನಪ್ಯಯಾತ್ತತಃ ।
ಅಶಕ್ತೋ ಹಿ ಸುಖಂ ಭುಂಕ್ತೇ
ಕೃತಾರ್ಥೋಽಪಿಜನಃಕೃತೀ ॥೧॥

ಟೀ ॥ ಅಥ-ಅನಂತರದಲ್ಲಿ, ಸಃ-ಆ ಜೀವಂಧರ ಕುಮಾರನು, ತಾಂ- ಆ ಉತ್ಕೃಷ್ಟಳಾದ, ಪದ್ಮಾಂ-ಪದ್ಮಾದೇವಿಯನ್ನು, ಉಪಯಮ್ಯ-ವಿವಾಹ ಮಾಡಿಕೊಂಡು, ರಮಯನ್ನಪಿ-ಕ್ರೀಡಾಸಂತೋಷವನ್ನನುಭವಿಸುತಿರುವವನಾದಾಗ್ಯೂ, ತತಃ-ಅವಳನ್ನು ಬಿಟ್ಟು, (ಆ ಪಟ್ಟಣದದೆಸೆಯಿಂದ) ಅಯಾತ್- ಹೊರಟುಹೋದನು., ಅಶಕ್ತೋಹಿ-ಕಷ್ಟಪಡುವುದಕ್ಕೆ ತಕ್ಕ ಸಾಮರ್ಥ್ಯವಿಲ್ಲದಜನಗಳಾದರೋ, ಸುಖಂ-ಸೌಖ್ಯವನ್ನು, ಭುಂಕ್ತೇ-ಅನುಭವಿಸುತ್ತಾರೆ., ಕೃತೀ-ಮಹಾ ಪುಣ್ಯಶಾಲಿಯಾಗಿ ಸಮರ್ಥನಾದ, ಜನಃ-ಮನುಷ್ಯನು, ಕೃತಾರ್ಥೋಽಪಿ-ಕೃತ-(ಸರ್ವತ್ರ) ಸಿದ್ಧವಾಗಿರುವ)ಸಾಧಿಸಲ್ಪಟ್ಟ, ಅರ್ಥೋಽಪಿ-ಪ್ರಯೋಜನವುಳ್ಳವರಾಗಿಯೂ ಇರುವನಲ್ಲವೆ?.

ತಾತ್ಪರ್ಯ ॥ ಪದ್ಮಾದೇವಿಯನ್ನು ವಿವಾಹಮಾಡಿಕೊಂಡು, ಜೀವಂಧರ ಕುಮಾರನು ಪತ್ನಿಯೊಡನೆ ಸಂತೋಷಿಸುತ್ತಿರುವನಾಗಿಯೇ, ಆ ನವೋಢಳಾದ ಪತ್ನಿಯುಂಬಿಟ್ಟು, ಆ ಚಂದ್ರಾಭಪುರದ ದೆಸೆಯಿಂದ ಹೊರಟು ಹೋದನು. ನೂತನವಾಗಿ ವಿವಾಹಮಾಡಿಕೊಂಡು ಅವಳೊಡನೆ ಸುಖಿಸುತ್ತಿದ್ದಾಗ್ಯೂ ಆ ಪ್ರಿಯಪತ್ನಿಯುಂ ಬಿಟ್ಟು ಹೋಗಲು ಹೇಗೆ ತಾನೇ ಮನಸ್ಸು ಉಂಟಾದುದೆಂದರೆ.—ಲೋಕದಲ್ಲಿ ಶಕ್ತಿಯಿಲ್ಲದ

ಜನಗಳು ಕಷ್ಟಪಡಲಾರರು. ಕಷ್ಟಪಡಲಾರದವನಿಗೆ ಸುಖವು ದೊರೆಯದು. (ನಸುಖಾಲ್ಲಭ್ಯತೇಸುಖಂ) ಎಂಬ ನ್ಯಾಯದಿಂದ, ಕ್ಲೇಶಪಟ್ಟು ಸಂಪಾದಿಸಲು ಶಕ್ತಿಯಿಲ್ಲದ ಜನಗಳಲ್ಲವೆ ದೊರಕಿದ ಸುಖವನ್ನತ್ಯಾದರದಿಂ ಬಿಡದೇ ಅನುಭವಿಸುವರು? ಶಕ್ತರಿಗಾದರೋ; ತಮ್ಮ ಶಕ್ತಿಯಿಂದಲೇ ಸುಖವು ಸುಲಭಸಾಧ್ಯವಾದುದರಿಂದ ಸಕಲ ಸುಖಗಳಿಗೂ ಸಾಧನವಾದ ಮಹಾಸುಕೃತಶಾಲಿಯಾಗಿ, ದುರ್ಲಭವಾದ ಸುಖಗಳಂ ಪಡೆಯುತಕ್ಕ ಶಕ್ತನಾದ ಜೀವಂಧರಕುಮಾರನು ಈ ಪ್ರಾಕೃತ ಸುಖದಲ್ಲಿ ಪಾಮರನಂತೆ ಪರವಶನಾಗದೆ ಅನಾದರಿಸಿದುದು ಯುಕ್ತವೇಸರಿ; (ಶಕ್ತರಿಗೆ ಸುಖವು ಹಸ್ತಗತವಲ್ಲವೆ?) ॥೧॥

ಶ್ಲೋಕ॥ ಪದ್ಮಾ ತು ತದ್ವಿಯೋಗೇನ
ದುಃಖಸಾಗಸಾದಭೂತ್ ।
ತತ್ತ್ವಜ್ಞಾನ ವಿಹೀನಾನಾಂ
ದುಃಖಮೇವ ಹಿ ಶಾಶ್ವತಮ್ ॥೨॥

ಟೀ ॥ ಪದ್ಮಾತು-ಪದ್ಮಾದೇವಿಯಾದರೋ, ತದ್ವಿಯೋಗೇನ- ತತ್- ಆ ಜೀವಂಧರಕುಮಾರನ, ವಿಯೋಗೇನ-(ಅಗಲಿಮದರಿಂದ)ವಿರಹದಿಂದ, ದುಃಖಸಾಗರಸಾತ್-ದುಃಖ-ದುಃಖವೆಂಬ, ಸಾಗರಸಾತ್-ಸಮುದ್ರದಲ್ಲಿಮುಳುಗಿಹೋದವಳಾಗಿ, ಅಭೂತ್-ಆದಳು., ತತ್ತ್ವಜ್ಞಾನವಿಹೀನಾನಾಂ-ವಿವೇಕರಹಿತರಾದವರಿಗೆ,ದುಃಖಮೇವ-ದುಃಖವೇ, ಶಾಶ್ವತಂಹಿ-ಸ್ಥಿರವಲ್ಲವೆ?.

ತಾತ್ಪರ್ಯ ॥ ಪದ್ಮಾದೇವಿಯಾದರೋ ಆ ಜೀವಂಧರಸ್ವಾಮಿಯ ವಿರಹದ ದೆಸೆಯಿಂದ ದುಃಖವೆಂಬ ಸಮುದ್ರದಲ್ಲಿ ಮುಳುಗಿದಳು. ತತ್ತ್ವಜ್ಞಾನವಿಲ್ಲದವರಿಗೆ ದುಃಖವೇಶಾಶ್ವತವು. (ದುಃಖನಿವೃತ್ತಿಗೆ ತತ್ತ್ವಜ್ಞಾನವೇ ಕಾರಣವು). ॥೨॥

ಶ್ಲೋಕ ॥ ಲೋಕಪಾಲಜನ್ಯೈರ್ನಾಯಂ
ರೋದ್ಧುಂ ಶೇಕೇ ಗವೇಷಿಭಿಃ।
ಪ್ರತಿಹನ್ತುಂ ನ ಹಿ ಪ್ರಾಜ್ಞೈಃ
ಪ್ರಾರಬ್ಧಂ ಪಾರ್ಯತೇ ಪರೈಃ॥೩॥

ಟೀ ॥ ಅಯಂ-ಈ ಜೀವಂಧರಕುಮಾರನು, ಗವೇಷಿಭಿಃ-ಹುಡುಕುತಲಿರುವ, ಲೋಕಪಾಲಜನ್ಯೈಃ--ಲೋಕಪಾಲ-ಲೋಕಪಾಲಮಹಾರಾಜನ, ಜನ್ಯೈಃ-ಜನಗಳಿಂದ, ರೋದ್ಧುಂ-ತಡೆಯಲೋಸುಗ, ನಶೇಕೇ-ಸಾಧ್ಯನಾಗಲಿಲ್ಲವು., ಪ್ರಾಜ್ಞೈಃ-ಮಹಾಬುದ್ಧಿಶಾಲಿಗಳಿಂದ, ಪ್ರಾರಬ್ಧಂ-ಪ್ರಯತ್ನಿಸಲ್ಪಟ್ಟ ಕೆಲಸವನ್ನು, ಪ್ರತಿಹಂತುಂ-ನಾಶಮಾಡಲೋಸುಗ, ಪಶ್ವೈಃ-ಮೂಢರಾದಇತರಜನರಿಂದ, ನಪಾರ್ಯತೇಹಿ-ಶಕ್ಯವಾಗುವುದಿಲ್ಲವಷ್ಟೆ.

ತಾತ್ಪರ್ಯ ॥ ಲೋಕಪಾಲ ಮಹಾರಾಜನಿಂದ ಕಳುಹಿಸಲ್ಪಟ್ಟ ಸೇವಕಜನರು ಹುಡುಕಿ, ಜೀವಂಧರ ಕುಮಾರನನ್ನು ತಡೆಯಲು ಶಕ್ತರಾಗಲಿಲ್ಲವು. ಪ್ರಾಜ್ಞರಾದವರು ಪ್ರಾರಂಭಿಸಿದ ಕೆಲಸವನ್ನು ಮೂಢರು ತಡೆಯಲು ಶಕ್ತರಾಗುವರೇ ? ॥೩॥

ಶ್ಲೋಕ ॥ ಸತ್ವರಂ ಗತ್ವರಸ್ಸ್ವಾಮೀ
ತೀರ್ಥಸ್ಥಾನಾನ್ಯಪೂಜಯತ್ |
ಪಾವನಾನಿ ಹಿ ಜಾಯನ್ತೇ
ಸ್ಥಾನಾನ್ಯಪಿ ಸದಾಶ್ರಯಾತ್ ॥೪॥

ಟೀ ॥ ಸ್ವಾಮೀ-ಜೀವಂಧರಸ್ವಾಮಿಯು, ಸತ್ವರಂ(ಯಥಾತಥಾ)-ತ್ವರೆಯೊಡನೆಕೂಡಿದರೀತಿಯಾಗುವಹಾಗೆ, ಗತ್ವರ(ಸ್ಸನ್)-ಹೋಗುವವನಾಗಿ, ತೀರ್ಥಸ್ಥಾನಾನಿ_ತೀರ್ಥ-ತೀರ್ಥಂಕರರ, ಸ್ಥಾನಾನಿ- ಸ್ಥಾನಗಳನ್ನು (ಪುಣ್ಯಕ್ಷೇತ್ರಗಳನ್ನು), ಅಪೂಜಯತ್-ಪೂಜಿಸಿದನು., ಸ್ಥಾನಾನ್ಯಪಿ-ಸ್ಥಾನಗಳುಕೂಡ, ಸದಾಶ್ರಯಾತ್_ಸತ್-ಸತ್ಪುರುಷರ, ಆಶ್ರಯಾತ್-ಆಶ್ರಯಿಸುವಿಕೆಯಿಂದ, ಪಾವನಾನಿ(ಸನ್ತಿ)-ಪರಿಶುದ್ಧಗಳಾಗಿ (ಶ್ರೇಷ್ಠಗಳಾಗಿ), ಜಾಯನ್ತೇಹಿ-ಆಗುವುದಿಲ್ಲವೆ ?.

ತಾತ್ಪರ್ಯ ॥ ಜೀವಂಧರಸ್ವಾಮಿಯು ಬಹು ತ್ವರೆಯಿಂದ ಹೋಗುವವನಾಗಿ, ತೀರ್ಥಂಕರರ ಸ್ಥಾನಗಳನ್ನು ಪೂಜಿಸಿದನು. ಸ್ಥಾನಗಳು ಕೂಡ ಸತ್ಪುರುಷರು ಅಂಗೀಕರಿಸಿದುದರಿಂದ ಪಾವನಗಳಾಗಿ ಪೂಜಾಯೋಗ್ಯಗಳಾಗುವುವಲ್ಲವೆ? ಆದುದರಿಂದ ತೀರ್ಥಂಕರರಸ್ಥಾನಗಳೂಕೂಡ ಪೂಜ್ಯವೇ ಆಗುತ್ತವೆ. ॥ ೪ ॥

ಶ್ಲೋಕ ॥ ಸದ್ಭಿರಧ್ಯಾಸಿತಾ ಧಾತ್ರೀ
ಸಂಪೂಜ್ಯೇತಿ ಕಿಮದ್ಭುತಮ್ ।

ಕಾಲಾಯಸಂ ಹಿ ಕಲ್ಯಾಣಂ
ಕಲ್ಪತೇ ರಸಯೋಗತಃ ॥೫॥

ಟೀ ॥ ಸದ್ಭಿಃ-ಸತ್ಪುರುಷರಿಂದ, ಅಧ್ಯುಷಿತಾ-ವಾಸಮಾಡಲ್ಪಟ್ಟ, ಧಾತ್ರೀ-ಭೂಮಿಯು, ಸಂಪೂಜ್ಯಾ-ಚೆನ್ನಾಗಿ ಪೂಜಿಸಲಿಕ್ಕೆ ಯೋಗ್ಯವು., ಇತಿ-ಇದು, ಕಿಮದ್ಭುತಂ-ಏನು ಆಶ್ಚರ್ಯವು!?. ಕಾಲಾಯಸಂ-ಉಕ್ಕು, ರಸಯೋಗತಃ-ರಸ-ಸಿದ್ಧರಸದ, ಯೋಗತಃ-ಸಂಬಂಧದೆಸೆಯಿಂದ, ಕಲ್ಯಾಣಂ(ಸತ್)- ಚಿನ್ನವಾಗಿ, ಕಲ್ಪತೇಹಿ-ಆಗುವುದಲ್ಲವೆ ?.

ತಾತ್ಪರ್ಯ ॥ ಸತ್ಪುರುಷರಾದ ತೀರ್ಥಂಕರರಿಂದ ವಾಸಮಾಡಲ್ಪಟ್ಟ ಭೂಮಿಯು ಪೂಜಿಸಲು ಯೋಗ್ಯವೆಂಬುದು ಏನು ಆಶ್ಚರ್ಯವು ? (ಇದಕ್ಕೆ ದೃಷ್ಟಾಂತವು.) ಉಕ್ಕು ಸಿದ್ಧರಸದ ಸಂಬಂಧದಿಂದ ಸುವರ್ಣವಾಗುವುದಲ್ಲವೆ ? ಆದುದರಿಂದ ಉತ್ಕೃಷ್ಟವಸ್ತುವಿನ ಸಂಬಂಧದಿಂದ ನಿಕೃಷ್ಟವಸ್ತುವಾದಾಗ್ಯೂ ಉತ್ಕೃಷ್ಟವೆನಿಸುವದು. ॥೫॥

ಶ್ಲೋಕ ॥ ಸದಸತ್ಸಂಗಮಾದೇವ
ಸದಸತ್ತ್ವಂ ನೃಣಾಮಪಿ।
ತಸ್ಮಾತ್ಸತ್ಸಂಗತಾಸ್ಸಂತು
ಸಂತೋ ದುರ್ಜನ ದೂರಗಾಃ ॥೬॥

ಟೀ ॥ ಸದಸತ್ಸಂಗಮಾದೇವ-ಸತ್-(ಸತ್ಪುರುಷರೂ) ಒಳ್ಳೇವಸ್ತುವೂ, ಅಸತ್-(ನೀಚರೂ) ಕೆಟ್ಟವಸ್ತುವೂ ಇವುಗಳ, ಸಂಗಮಾದೇವ-ಸಂಬಂಧದೆಸೆಯಿಂದಲೆಯೇ, ನೃಣಾಮಪಿ-ಮನುಷ್ಯರಿಗೂಕೂಡ, ಸದಸತ್ತ್ವಂ-ಉತ್ಕರ್ಷವೂ, ಅಪಕರ್ಷವೂ ಇವುಗಳು, ಭವತಿ-ಉಂಟಾಗುತ್ತಲಿದೆ., ತಸ್ಮಾತ್-ಆಕಾರಣದೆಸೆಯಿಂದ, ಸಂತಃ-ಸತ್ಪುರುಷರು, ದುರ್ಜನದೂರಗಾ (ಸ್ಸಂತಃ)- ದುರ್ಜನ-ದುಷ್ಟರಿಗೆ, ದೂರಗಾ(ಸ್ಸಂತಃ)-ದೂರವನ್ನು ಹೊಂದುವವರಾಗಿಯೂ, ಸಂತು-ಇರಲಿ.

ತಾತ್ಪರ್ಯ ॥ ಒಳ್ಳೇಮನುಷ್ಯನೂ, ಕೆಟ್ಟಮನುಷ್ಯನೂ ಇವರ ಸಹವಾಸದಿಂದಲೆಯೇ ಮನುಷ್ಯರಿಗೂ ಕೂಡ ಒಳ್ಳೇತನವು, ಕೆಟ್ಟತನವು, (ಗೌರವಲಾಘವಗಳು) ಉಂಟಾಗುವುವು. ಆದುದರಿಂದ ಸತ್ಪುರುಷರು ಸತ್ಪುರುಷರೊಡನೆ ಸೇರಿದವರಾಗಿಯೂ, ದುರ್ಜನರ ಸಹವಾಸಕ್ಕೆ ದೂರದಲ್ಲಿರತಕ್ಕವರಾಗಿಯೂ, ಇದ್ದಲ್ಲಿ ಸತ್ಪುರುಷರೆನಿಸುವರು. ॥೬॥

ಶ್ಲೋಕ॥ ಯಾಜಂಯಾಜಮಟನ್ನೇವ
ತೀರ್ಥಸ್ಥಾನಾನಿ ಜೀವಕಃ ।
ಕ್ರಮೇಣಾರಣ್ಯಮಧ್ಯಸ್ಥಂ
ತಾಪಸಾಶ್ರಮಮಾಶ್ರಯತ್ ॥೭॥

ಟೀ॥ ಜೀವಕಃ-ಜೀವಂಧರಸ್ವಾಮಿಯು, ತೀರ್ಥಸ್ಥಾನಾನಿ-ತೀರ್ಥಂಕರರು ದಯಮಾಡಿಸಿದ್ದ ಪುಣ್ಯಕ್ಷೇತ್ರಗಳನ್ನು, ಯಾಜಂಯಾಜಂ-ಪೂಜಿಸಿಪೂಜಿಸಿ, ಅಟನ್ನೇವ-ಸಂಚರಿಸುವವನಾಗಿಯೇ, ಕ್ರಮೇಣ-ಕ್ರಮದಿಂದ, ಅರಣ್ಯಮಧ್ಯಸ್ಥಂ-ಅರಣ್ಯ-ಒಂದು ಅರಣ್ಯದ, ಮಧ್ಯ-ಮಧ್ಯದಲ್ಲಿ, ಸ್ಥಂ-ಇರುತಲಿರುವ, ತಾಪಸಾಶ್ರಮಂ-ತಾಪಸ-ಮುನಿಗಳ, ಆಶ್ರಮಂ-ವಾಸಸ್ಥಾನವನ್ನು, ಆಶ್ರಯತ್-ಹೊಂದಿದನು.

ತಾತ್ಪರ್ಯ॥ ಜೀವಂಧರಸ್ವಾಮಿಯು ತೀರ್ಥಂಕರರ ಸ್ಥಾನಗಳನ್ನು ಪೂಜಿಸಿ ಪೂಜಿಸಿ ಸಂಚರಿಸುತ್ತಿರುವವನಾಗಿ, ಕ್ರಮದಿಂದೊಂದು ಅರಣ್ಯದ ಮಧ್ಯದಲ್ಲಿರುವ ಮುನಿಗಳ ಆಶ್ರಮವನ್ನು ಹೊಂದಿದನು. ॥೭॥

ಶ್ಲೋಕ॥ ಅಸತ್ತಪೋ ವಿಲೋಕ್ಯಾಸೀ-
ದನುಕಂಪೀ ತಪಸ್ವಿನಾಮ್ ।
ನಿರ್ವ್ಯಾಜಂ ಸಾನುಕಂಪಾ ಹಿ
ಸಾರ್ವಾಸ್ಸರ್ವೇಷು ಜಂತುಷು ॥೮॥

ಟೀ॥ ಸಃ-ಆಜೀವಂಧರಸ್ವಾಮಿಯು, ಅಸತ್-ಪಾಪಕ್ಕೆ ಕಾರಣವಾದ, ತಪಃ-ತಪಸ್ಸನ್ನು, ವಿಲೋಕ್ಯ-ನೋಡಿ, ತಪಸ್ವಿನಾಂ-ಆ ಮುನಿಗಳವಿಷಯದಲ್ಲಿ, ಅನುಕಂಪೀ(ಸನ್)-ದಯೆಯುಳ್ಳವನಾಗಿ, ಆಸೀತ್-ಆದನು., ಸಾರ್ವಾಃ-ಸರ್ವಪ್ರಾಣಿಗಳಿಗೂ ಹಿತವನ್ನುಂಟುಮಾಡತಕ್ಕ ಮಹಾತ್ಮರು., ಸರ್ವೇಷು-ಸಮಸ್ತವಾದ, ಜಂತುಷು-ಪ್ರಾಣಿಗಳೊಳು, ನಿರ್ವ್ಯಾಜಂ(ಯಥಾತಥಾ)-ನಿಷ್ಕಾರಣವಾಗಿರೋಣಸೇಗೋಹಾಗೆ, ಸಾನುಕಂಪಾಹಿ-ದಯೆಯೊಡನೆ ಕೂಡಿದವರಲ್ಲವೆ?.

ತಾತ್ಪರ್ಯ॥ ಆ ಆಶ್ರಮದಲ್ಲಿ ಜೀವಂಧರಸ್ವಾಮಿಯು ಭ್ರಾಂತರಾದ ಕೆಲವು ಮುನಿಗಳು ಮಾಡುತ್ತಿದ್ದ ಅಧರ್ಮಕ್ಕೇನೆ ಕಾರಣವಾದ ತಪಸ್ಸನ್ನು ನೋಡಿ ಆ ಮುನಿಗಳ ವಿಷಯದಲ್ಲಿ ದಯಾಚಿತ್ತನಾದನು. ಸರ್ವಪ್ರಾಣಿಗಳಿಗೂ ಹಿತವನ್ನುಂಟುಮಾಡುವ ಸತ್ಪುರುಷರು ಸಮಸ್ತ ಪ್ರಾಣಿ

ಗಳಲ್ಲಿಯೂ ನಿಷ್ಕಾರಣವಾಗಿ ದಯೆಯನ್ನು ವಹಿಸುತ್ತಾರಲ್ಲವೆ ? (ಇದು ದಯಾಶಾಲಿಗಳ ಸ್ವಭಾವವು.) ॥ ೮ ॥

ಶ್ಲೋಕ॥ ಅತತ್ತ್ವಜ್ಞೇಽಪಿ ತತ್ತ್ವಜ್ಞೈ-
ರ್ಭವಿತವ್ಯಂ ದಯಾಲುಭಿಃ ।
ಕೂಪೇ ಪಿಪತಿಷುರ್ಬಾಲೋ
ನ ಹಿ ಕೇನಾಪ್ಯುಪೇಕ್ಷ್ಯತೇ ॥೯॥

ಟೀ ॥ ಅತತ್ತ್ವಜ್ಞೇಽಪಿ-ತತ್ತ್ವವನ್ನು ತಿಳಿಯದೇ ಇರತಕ್ಕವರಲ್ಲಿಯೂ, ತತ್ತ್ವಜ್ಞೈಃ-ತತ್ತ್ವ-ವಸ್ತುವಿನ ಯಥಾಸ್ಥಿತಿಯನ್ನು, ಜ್ಞೈಃ-ತಿಳಿವವರಿಂದ, ದಯಾಳುಭಿಃ-ದಯಾಶಾಲಿಗಳಾಗಿ, ಭವಿತವ್ಯಂ-ಆಗತಕ್ಕದ್ದು (ಆಗಬೇಕು). ಕೂಪೇ- ಬಾವಿಯಲ್ಲಿ, ಪಿಪತಿಷುಃ-ಬೀಳಲೋಸುಗ ಇಚ್ಛೆಯುಳ್ಳ, ಬಾಲಃ-ಮೂಢನಾದಬಾಲಕನು, ಕೇನಾಪಿ-ಯಾರಿಂದಲೂ, ನೋಪೇಕ್ಷ್ಯತೇಹಿ-ಉಪೇಕ್ಷಿಸಲ್ಪಡುವುದಿಲ್ಲವಷ್ಟೆ ?.

ತಾತ್ಪರ್ಯ ॥ ತತ್ತ್ವವನ್ನು ತಿಳಿಯದ ಮೂಢರವಿಷಯದಲ್ಲಿಯೂ ತತ್ತ್ವವನ್ನು ತಿಳಿದಿರುವವರು ದಯಾಶಾಲಿಗಳಾಗಿರಬೇಕೇಹೊರತು ಉದಾಸೀನರಾಗಿರಬಾರದು. ಅದು ಹೇಗೆಂದರೆ.-ಬಾವಿಯಲ್ಲಿ ಬೀಳಲೋಸುಗ ಇಚ್ಛೆಯುಳ್ಳ ಬಾಲಕನನ್ನು ಯಾರುತಾನೇ ಉಪೇಕ್ಷಿಸುವರು ? ದಯಾಳುವಾದ ಯಾವನೂ ಅನಾದರಿಸುವುದಿಲ್ಲವಷ್ಟೆ ? ಹಾಗೆ ಉಪೇಕ್ಷಿಸುವವನು ದಯಾಶೂನ್ಯನೆಂದರ್ಥವು. ॥ ೯ ॥

ಶ್ಲೋಕ॥ ತಾನಪ್ಯಬೂಬುಧತ್ತತ್ತ್ವಂ
ತತ್ವಜ್ಞಃ ಸೋಽಯಮಾದರಾತ್ ।
ಭವ್ಯೋಽವಾಸ್ಯಾನ್ನವಾ ಶ್ರೋತಾ
ಪರಾರ್ಥಂ ಹಿ ಸತಾಂ ಮನಃ ॥೧೦॥

ಟೀ ॥ ತತ್ತ್ವಜ್ಞಃ-ತತ್ತ್ವವನ್ನುತಿಳಿದಿರುವ, ಸೋಽಯಂ- ಆ ಈ ಜೀವಂಧರಸ್ವಾಮಿಯು, ಆದರಾತ್-ಪ್ರೀತಿಯುದೆಸೆಯಿಂದ, ತಾನಪಿ-ಅವರನ್ನುಕೂಡ, ತತ್ತ್ವಂ-ತತ್ತ್ವವನ್ನು, ಅಬೂಬುಧತ್-ಬೋಧಿಸಿದನು., ಶ್ರೋತಾ- ಕೇಳತಕ್ಕವನು, ಭವ್ಯೋಽವಾ-ಭವ್ಯಪ್ರಾಣಿಯಾದರೂ, ಸ್ಯಾತ್-ಆಗಲಿ., ನವಾ- ಭವ್ಯಪ್ರಾಣಿಯಲ್ಲದೆ ಯಾದರೂಇರಲಿ, ಸತಾಂ-ಸತ್ಪುರುಷರ, ಮನಃ-ಮನಸ್ಸು, ಪರಾರ್ಥಂಹಿ-ಪರ ಪ್ರಯೋಜನವೇ ಮುಖ್ಯವಾಗುಳ್ಳದ್ದಲ್ಲವೆ ?.

ತಾತ್ಪರ್ಯ॥ ವಸ್ತುಗಳಗುಣದೋಷ ನಿಜಸ್ಥಿತಿಯನ್ನು ತಿಳಿದಿರುವ ಜೀವಂಧರಸ್ವಾಮಿಯು ಭ್ರಾಂತರಾಗಿರುವ ಆ ಮಿಥ್ಯಾದೃಷ್ಟಿಗಳಾದ ತಪಸ್ವಿಗಳಿಗೂಕೂಡ ತತ್ತ್ವವನ್ನು ಬೋಧಿಸಿದನು. ಕೇಳುವಂಥಾವನು ಭವ್ಯಾತ್ಮನಾದರೂ ಆಗಲಿ; ಅಭವ್ಯನಾಗಿಯಾದರೂ ಇರಲಿ; ಸತ್ಪುರುಷರ ಮನಸ್ಸು ಪರಪ್ರಯೋಜನದಲ್ಲಿಯೇ ಪ್ರವರ್ತಿಸುವುದಲ್ಲವೆ? ॥೧೦॥

ಶ್ಲೋಕ॥ ನ ಹಿಂಸ್ಯಾತ್ಸರ್ವಭೂತಾನೀ-
ತ್ಯಸ್ಮಿನ್ಪ್ರವಚನೇಸತಿ |
ತಪ್ಯಧ್ವಂ ಕಿಂ ಬುಧಾಯೂಯಂ
ಹಿಂಸಾಮಾತ್ರಫಲಂ ತಪಃ ॥ ೧೧ ॥

ಟೀ ॥ ಸರ್ವಭೂತಾನಿ- ಸರ್ವ-ಸಮಸ್ತವಾದ, ಭೂತಾನಿ - ಪ್ರಾಣಿಗಳನ್ನು, ನಹಿಂಸ್ಯಾತ್-ಹಿಂಸಿಸಕೂಡದು., ಇತಿ-ಹೀಗೆಂಬ, ಅಸ್ಮಿನ್-ಈ ಪ್ರಸಿದ್ಧವಾದ, ಪ್ರವಚನೇ-ಶಾಸ್ತ್ರವು, ಸತಿ-ಇರುತಲಿರಲಾಗಿ, ಹೇಬುಧಾಃ- ಎಲೈ ವಿದ್ವಾಂಸರಿರಾ!!, ಯೂಯಂ-ನೀವುಗಳು, ಹಿಂಸಾಮಾತ್ರಫಲಂ-ಹಿಂಸೆಯೇ ಫಲವಾಗಿವುಳ್ಳ, ತಪಃ- ತಪಸ್ಸನ್ನು, ಕಿಂ-ಯಾತಕ್ಕೋಸುಗ, ತಪ್ಯಧ್ವಂ-ಮಾಡುವಿರಿ?.

ತಾತ್ಪರ್ಯ॥ ಯಾವ ಪ್ರಾಣಿಯನ್ನೂ ಹಿಂಸಿಸಕೂಡದೆಂಬ ಸಾಮಾನ್ಯಶಾಸ್ತ್ರವು ಇರುತ್ತಿರಲಾಗಿ, ಎಲೈ ವಿದ್ವಾಂಸರುಗಳಿರಾ!! ನೀವು ಏತಕ್ಕೋಸುಗ ಹಿಂಸಾಕರವಾದ ತಪಸ್ಸನ್ನು ಮಾಡುತ್ತೀರಿ? (ನೀವು ವಿದ್ವಾಂಸರಲ್ಲವೆ? ತತ್ತ್ವಸ್ಥಿತಿಯನ್ನು ಆಲೋಚಿಸಿ ನೋಡಿರಿ! ಎಂದು ಭಾವವು) ॥೧೧॥

ಶ್ಲೋಕ॥ ಜಲಾವಗಾಹನೇ ಲಗ್ನಾ-
ನ್ಜಟಾಯಾಂ ಕಾಷ್ಠಗಾನಪಿ |
ನಶ್ಯತಃ ಪಶ್ಯತಾಂ ಜನ್ತೂ-
ನ್ಪಶ್ಯತಾಗ್ನೌ ಪುನಶ್ಚ್ಯುತಾನ್ ॥ ೧೨ ॥

ಟೀ॥ ಜಲಾವಗಾಹನೇ-ಜಲ-ನೀರಿನಲ್ಲಿ, ಅವಗಾಹನೇ-ಸ್ನಾನಮಾಡುವ ಕಾಲದೊಳು, ಜಟಾಯಾಂ-ಜಟೆಯಲ್ಲಿ, ಲಗ್ನಾನ್- ಸಂಬಂಧಿಸಿಕೊಂಡವುಗಳಾಗಿಯೂ, ಕಾಷ್ಠಗಾನಪಿ-ಸೌದೆಗಳನ್ನು ಹೊಂದಿದವುಗಳಾಗಿಯೂ, ಅಗ್ನೌ-ಅಗ್ನಿಯಲ್ಲಿ, ಪುನಃ- ತಿ

ರಿಗಿ, ಪತ್ಯತಾಂ-ಬೀಳುವಂಥಾವುಗಳಾಗಿ, ಪಶ್ಯತಾಂ- ನೋಡುತಲಿರುವನಮ್ಮಪ್ರತ್ಯಕ್ಷದಲ್ಲಿಯೇ, ನಶ್ಯತಃ-ನಾಶವನ್ನು ಹೊಂದುತಲಿರುವ, ಜಂತೂನ್ - ಪ್ರಾಣಿಗಳನ್ನು, ಪಶ್ಯತ-ನೋಡಿರಿ.

ತಾತ್ಪರ್ಯ॥ನೀರಿನೊಳು ಸ್ನಾನಮಾಡುವಕಾಲದಲ್ಲಿಜಟೆಗಳೊಳುಸೇರಿಕೊಳ್ಳುವಂಥಾದ್ದಾಗಿಯೂ, ಸೌದೆಗಳಲ್ಲಿಸೇರಿರುವುದಾಗಿಯೂ ಇರುವ ಅನೇಕ ಸೂಕ್ಷ್ಮಪ್ರಾಣಿಗಳು ಬೆಂಕಿಯಲ್ಲಿ ಬಿದ್ದು ಪ್ರಾಣಬಿಡುತ್ತಲಿರುವುದನ್ನು ನೀವೇ ಪ್ರತ್ಯಕ್ಷದಲ್ಲಿನೋಡಿರಿ; ಆದುದರಿಂದ ಈ ತಪಸ್ಸು ಪ್ರಾಣಿಹಿಂಸಾಹೇತುವಾದದ್ದು. ॥೧೦॥

ಶ್ಲೋಕ॥ ಪಂಚಾಗ್ನಿಮಧ್ಯಮಸ್ಥಾನಂ
ತತೋ ನೈವೋಚಿತಂ ತಪಃ ।
ಜಂತುಮಾರಣಹೇತುತ್ವಾ-
ದಾಜವಂಜವಕಾರಣಮ್ ॥ ೧೨ ॥

ಟೀ॥ ತತಃ-ಆ ಕಾರಣಾಪದೆಸೆಯಿಂದ, ಪಂಚಾಗ್ನಿಮಧ್ಯಮಸ್ಥಾನಂ-ಪಂಚ-ಐದಾದ, ಅಗ್ನಿ-ಅಗ್ನಿಗಳ, ಮಧ್ಯಮ-ಮಧ್ಯಮಪ್ರದೇಶವೇ,ಸ್ಥಾನಂ-ಸ್ಥಾನವಾಗಿವುಳ್ಳ, ತಪಃ-ತಪಸ್ಸು, ನೈವೋಚಿತಂ-ಯೋಗ್ಯವಲ್ಲವು., ಜಂತುಮಾರಣಹೇತುತ್ವಾತ್-ಜಂತು-ಪ್ರಾಣಿಗಳ, ಮಾರಣ-ಕೊಲೆಗೆ, ಹೇತುತ್ವಾತ್- ಕಾರಣವಾಗಿರೋಣವರದೆಸೆಯಿಂದ, ಆಜವಂಜವಕಾರಣಂ-ಆಜವಂಜವ-ಸಂಸಾರಕ್ಕೇನೆ, ಕಾರಣಂ- ಕಾರಣವಾದದ್ದು.

ತಾತ್ಪರ್ಯ ॥ ನಾಲ್ಕುದಿಕ್ಕುಗಳಲ್ಲಿಯೂ ನಾಲ್ಕು ಬೆಂಕಿಗಳಂ ಸ್ಥಾಪಿಸಿ, ಸೂರ್ಯನನ್ನೇ ಒಂದು ಬೆಂಕಿಯನ್ನಾಗಿಮಾಡಿಕೊಂಡು ಮಧ್ಯೇ ಕುಳಿತು ಮಾಡುವ ಪಂಚಾಗ್ನಿತಪಸ್ಸು ಯೋಗ್ಯವಾದ ತಪಸ್ಸೇಅಲ್ಲವು. ಮತ್ತು ಪೂರ್ವೋಕ್ತಕ್ರಮದಿಂದ ಪ್ರಾಣಿಗಳ ಕೊಲೆಗೆಕಾರಣವಾದುದರಿಂದ ಆತ್ಮನಿಗೆ ಮರಳಿ ಸಂಸಾರಕ್ಕೇನೆ ಕಾರಣವಾಗುವುದೇ ಹೊರತು ಸದ್ಗತಿಗೆ ಕಾರಣವಾಗುವುದೇಯಿಲ್ಲವು. ॥೧೨॥

ಶ್ಲೋಕ॥ ತತ್ರಸ್ತೋ ಯತ್ರ ಜಂತೂನಾಂ
ಸಂತಾಪೋನ್ನೈವ ಜಾತುಚಿತ್ ।

ತಚ್ಚಾರಂಭ ನಿವೃತ್ತೌ ಸ್ಯಾ-
ನ್ನಹ್ಯಾರಂಭೋವಿಹಿಂಸನಃ ‖ ೧೪ ‖

ಟೀ ‖ ಯತ್ರ-ಯಾವತಪಸ್ಸಿನಲ್ಲಿ, ಜಾತುಚಿತ್-ಯಾವಕಾಲದಲ್ಲಿಯೂ, ಜಂತೂನಾಂ-ಪ್ರಾಣಿಗಳಿಗೆ, ಸಂತಾಪಃ-ಹಿಂಸೆಯು, ನೈವ-ಇಲ್ಲವೇ ಇಲ್ಲವೋ, ತತ್-ಅದು, ತಪಃ-ತಪಸ್ಸು, (ತಪಸ್ಸೆಂದೆನಿಸುವುದು.) ತಚ್ಚ-ಆ ತಪಸ್ಸೂಕೂಡ, ಆರಂಭನಿವೃತ್ತೌ-(ಸರ್ವಪ್ರವೃತ್ತಿಕಾರ್ಯಗಳ) ಸಮಸ್ತಾರಂಭಗಳ, ನಿವೃತ್ತೌ(ಸತ್ಯಾಂ)-ಪರಿತ್ಯಾಗವುಂಟಾಗುತಿರಲಾಗಿ, ಸ್ಯಾತ್-ಉಂಟಾಗುವುದು., ವಿಹಿಂಸನಃ-ವಿಶೇಷವಾಗಿಪ್ರಾಣಿಹಿಂಸೆಗೆಆಸ್ಪದವಾದ ಕೆಲಸವು, ನಹಿ-ತಪಸ್ಸಾಗಿ ಆಗುವುದೇಇಲ್ಲವು?.

ತಾತ್ಪರ್ಯ ‖ ಯಾವತಪಸ್ಸಿನಲ್ಲಿ ಯಾವಾಗಲೂ ಪ್ರಾಣಿಹಿಂಸೆಯು ಸಂಭವಿಸುವುದಿಲ್ಲವ್ರೋ ಅದು ತಪಸ್ಸು. ಅಂಥಾ ಅಹಿಂಸಾಲಕ್ಷಣಪರಮತಪಸ್ಸು ಸಕಲ ಪರಿಗ್ರಹಪರಿತ್ಯಾಗದಿಂದಲೇ ಉಂಟಾಗುತ್ತದೆ. ವಿಶೇಷವಾಗಿ ಪ್ರಾಣಿಹಿಂಸಾಸ್ಪದವಾದ ಪಂಚಾಗ್ನಿ ಮಧ್ಯಸ್ಥಿತಿಯೇ ಮೊದಲಾದುದು ತಪಸ್ಸಲ್ಲವು. ‖೧೪‖

ಶ್ಲೋಕ‖ ಆರಂಭವಿನಿವೃತ್ತಿಶ್ಚ
ನಿರ್ಗ್ರಂಥೇಷ್ವೇವ ಯುಜ್ಯತೇ ।
ನ ಹಿ ಕಾರ್ಯಪರಾಧೀನೈ-
ರ್ಮೃಗ್ಯತೆ ಭುವಿಕಾರಣಮ್ ‖ ೧೫ ‖

ಟೀ ‖ ಆರಂಭವಿನಿವೃತ್ತಿಶ್ಚ—ಆರಂಭ-ಪರಿಗ್ರಹಗಳ, ವಿನಿವೃತ್ತಿಶ್ಚ- ಪರಿತ್ಯಾಗವೂಕೂಡ, ನಿರ್ಗ್ರಂಥೇಷ್ವೇವ-ರಾಗದ್ವೇಷಗಳನ್ನು, (ಕ್ರೋಧಲೋಭಮಾನಮಾಯಾರೂಪವಾದ ನಾಲ್ಕು ಕಷಾಯಗಳನ್ನು) ನಿಶ್ಶೇಷವಾಗಿಬಿಟ್ಟಿರುವವರಲ್ಲಿಯೇ, ಯುಜ್ಯತೇ-ಸಂಭವಿಸುತ್ತದೆ., ಕಾರ್ಯಪರಾಧೀನೈಃ—ಕಾರ್ಯ-ಫಲದಲ್ಲಿ, ಪರಾಧೀನೈಃ-ಇಚ್ಛೆಯುಳ್ಳ ಜನಗಳಿಂದ, ಭುವಿ-ಭೂಮಿಯಲ್ಲಿ, ಕಾರಣಂ-ಕಾರಣವು, ನಮೃಗ್ಯತೇಹಿ-ಹುಡುಕಲ್ಪಡುವುದಿಲ್ಲವಷ್ಟೆ?.

ತಾತ್ಪರ್ಯ ‖ ಸಕಲಪ್ರವೃತ್ತಿಕಾರ್ಯಗಳನ್ನೂ (ಸಕಲಪರಿಗ್ರಹಗಳನ್ನೂ) ಬಿಟ್ಟರೋಣವು ರಾಗದ್ವೇಷಗಳಡಗಿದ ಚಿತ್ತವುಳ್ಳವರಲ್ಲಿಯೇ ಸಂಭವಿಸುವುದು. ರಾಗದ್ವೇಷಗಳಿರುವವರೆಗೂ ಐಶ್ವರ್ಯ ಭೋಗೋಪಭೋಗಾದಿಕೆಲಸಗಳಲ್ಲಿ ಪ್ರವೃತ್ತಿಯುಂಟಾಗುವುದು. ಲೋಕದಲ್ಲಿ ಪ್ರ

ಯೋಜನಾಪೇಕ್ಷೆಯುಳ್ಳವರಲ್ಲವೆ ಕಾರ್ಯವನ್ನು ಸಾಧಿಸುವುದಕ್ಕೆ ತಕ್ಕ ಕಾರಣವನ್ನು ಹುಡುಕುವರು? ಪ್ರಯೋಜನಾಪೇಕ್ಷೆಯನ್ನೇ ತೊರೆದಿರುವವರು ಸಕಲಪ್ರಯತ್ನಗಳನ್ನೂ ಬಿಟ್ಟಿರುತ್ತಾರಷ್ಟೆ? ಲೋಕವ್ಯಾಪಾರವನ್ನೆಲ್ಲವನ್ನುಬಿಟ್ಟು ಮೋಕ್ಷಮಾತ್ರಾಪೇಕ್ಷೆಯುಳ್ಳವರೇ ನಿರ್ಗ್ರಂಥರೆನಿಸುವ ಮುನಿಗಳು. ॥೧೫॥

ಶ್ಲೋಕ॥ ನೈರ್ಗ್ರಂಥ್ಯಂ ಹಿ ತಪೋಽನ್ಯತ್ತು
ಸಂಸಾರಸ್ಯೈವ ಸಾಧನಮ್ ।
ಮುಮುಕ್ಷೂಣಾಂ ಹಿ ಕಾಯೋಽಪಿ
ಹೇಯಃ ಕಿಮಪರಂ ಪುನಃ ॥ ೧೬ ॥

ಟೀ॥ ನೈರ್ಗ್ರಂಥ್ಯಂಹಿ-ನಿರ್ಗ್ರಂಥನಾಗಿರೋಣವೇ(ಸರ್ವಸಂಗಪರಿತ್ಯಾಗವೆ), ತಪಃ-ತಪಸ್ಸೆನಿಸುವುದು., ಅನ್ಯತ್ತು-ಇತರತಪಸ್ಸಾದರೋ, ಸಂಸಾರಸ್ಯೈವ-ಸಂಸಾರಕ್ಕೇನೆ, ಸಾಧನಂ-ಕಾರಣವು., ಮುಮುಕ್ಷೂಣಾಂ-ಮೋಕ್ಷದಲ್ಲಿ, ಇಚ್ಛೆಯುಳ್ಳವನಿಗೆ, ಕಾಯೋಽಪಿ-ದೇಹವೂಕೂಡ, ಹೇಯೋಹಿ-ಪರಿತ್ಯಾಗಯೋಗ್ಯವಲ್ಲವೆ?, ಅಪರಂಪುನಃ-ಉಳಿವ ಸಮಸ್ತಪರಿಗ್ರಹವೂ, ಕಿಂ-ಪರಿತ್ಯಾಗಕ್ಕೇನೆ ಯೋಗ್ಯವೆಂಬ ವಿಷಯದಲ್ಲಿ ಹೇಳತಕ್ಕದ್ದೇನು?.

ತಾತ್ಪರ್ಯ॥ ನಿರ್ಗ್ರಂಥನಾಗಿರೋಣವೇ? (ಸರ್ವಸಂಗಪರಿತ್ಯಾಗಮಾಡಿರೋಣವೇ ತಪಸ್ಸಲ್ಲವೆ ಉಳಿವ ಯಾವತಪಸ್ಸಾದಾಗ್ಯೂ ಹಿಂಸಾಸ್ಪದವಾಗಿಯೂ, ರಾಗದ್ವೇಷಾದಿದೋಷಾಸ್ಪದವಾಗಿಯೂ ಇರುವುದರಿಂದಅಂಥಾ ಪಂಚಾಗ್ನಿಮಧ್ಯತಪಸ್ಸನ್ನುಮಾಡುವ ಆತ್ಮನಿಗೆ ನರಸುರತಿರ್ಯಙ್ನಾರಕಿ ದೇಹಗಳೆಂಬ ಚತುರ್ಗತಿಭ್ರಮಣರೂಪವಾದ ಸಂಸಾರಕ್ಕೇನೆ ಕಾರಣವಾಗುತ್ತೆಯಲ್ಲವೆ? ಮೋಕ್ಷದಲ್ಲಪೇಕ್ಷೆಯುಳ್ಳವನಿಗೆ ಶರೀರವೂಕೂಡ ತ್ಯಾಜ್ಯವಾಗುತ್ತದೆ. ಹೀಗಿರುವಲ್ಲಿ, ಉಳಿದ ಸಮಸ್ತ ಭೋಗೋಪಭೋಗಗಳೂ ಪರಿತ್ಯಾಜ್ಯವೆಂಬ ವಿಷಯದಲ್ಲಿ ಹೇಳತಕ್ಕದ್ದೇನಿದೆ? ॥೧೬॥

ಶ್ಲೋಕ॥ ಗ್ರಂಥಾನುಬಂಧೀ ಸಂಸಾರ-
ಸ್ತೇನೈವ ನ ಪರಿಕ್ಷಯಾ ।

ರಕ್ತೇನ ದೂಷಿತಂ ವಸ್ತ್ರಂ
ನ ಹಿ ರಕ್ತೇನ ಶುದ್ಧ್ಯತೇ ॥೧೭॥

ಟೀ ॥ ಗ್ರಂಥಾನುಬಂಧೀ–ಗ್ರಂಥ-ರಾಗದ್ವೇಷವೇ, ಅನುಬಂಧೀ-ಮೂಲಕಾರಣವಾಗಿವುಳ್ಳ, ಸಂಸಾರಃ-ಚತುರ್ಗತಿಭ್ರಮಣರೂಪವಾದಸಂಸಾರವು, ತೈಸ್ತೈಃ-ಆ ರಾಗದ್ವೇಷಾಸ್ಪದವಾದ ಕಾರ್ಯದಿಂದಲೇ, ನಪರಿಕ್ಷಯೀ-ನಾಶವನ್ನು ಹೊಂದುವುದಿಲ್ಲವು., ರಕ್ತೇನ-ರಕ್ತದಿಂದ (ಕೆಂಪು ಬಣ್ಣದಿಂದ), ದೂಷಿತಂ-ದೋಷವಿಶಿಷ್ಟವಾಗಿ ಮಾಡಲ್ಪಟ್ಟ, ವಸ್ತ್ರಂ-ವಸ್ತ್ರವು, ರಕ್ತೇನ-ರಕ್ತದಿಂದ (ಕೆಂಪುಬಣ್ಣದಿಂದಲೇ), ನಶುದ್ಧ್ಯತೇಹಿ-ಶುದ್ಧವಾಗಿ (ಬಿಳುಪಾಗಿ) ಮಾಡಲ್ಪಡುವುದಿಲ್ಲವಷ್ಟೆ ?.

ತಾತ್ಪರ್ಯ ॥ ರಾಗದ್ವೇಷಗಳೇ ಸಂಸಾರಕ್ಕೆ ಮೂಲಕಾರಣಗಳು. ಆದ ಕಾರಣದಿಂದಲೇ ಅಂಥಾ ರಾಗದ್ವೇಷಾಸ್ಪದವಾದ ಕೃತ್ಯದಿಂದಲೇ ಸಂಸಾರವು ನಿವರ್ತಿಸಲಶಕ್ಯವು ಹೇಗೆಂದರೆ. ಕೆಂಪುಬಣ್ಣದಿಂದ ವ್ಯಾಪ್ತವಾದ ವಸ್ತ್ರವನ್ನು ಕೆಂಪುಬಣ್ಣದಿಂದಲೇ ಬಿಳುಪುಮಾಡಲಶಕ್ಯವಷ್ಟೆ. ॥೧೭॥

ಶ್ಲೋಕ ॥ ತತ್ತ್ವಜ್ಞಾನವಿಹೀನಾನಾಂ
ನೈರ್ಗ್ರಂಥ್ಯಮಪಿ ನಿಷ್ಫಲಮ್ ।
ನ ಹಿ ಸ್ಥಾಲ್ಯಾದಿಭಿಸ್ಸಾಧ್ಯ-
ಮನ್ನಮನ್ಯೈರತಂಡುಲೈಃ ॥ ೧೮ ॥

ಟೀ ॥ ತತ್ತ್ವಜ್ಞಾನವಿಹೀನಾನಾಂ–ತತ್ತ್ವ-ಜೀವಾದಿಸಪ್ತತತ್ತ್ವಗಳ, ಜ್ಞಾನ-ಯಥಾರ್ಥಾತ್ಮ್ಯಜ್ಞಾನದಿಂದ, ವಿಹೀನಾನಾಂ-ಶೂನ್ಯರಾದವರಿಗೆ, ನೈರ್ಗ್ರಂಥ್ಯಮಪಿ-ನಿರ್ಗ್ರಂಥನಾಗಿರೋಣವೂಕೂಡ, ನಿಷ್ಫಲಂ- ನಿಷ್ಪ್ರಯೋಜನವು., ಅತಂಡುಲೈಃ-ಅಕ್ಕಿಯೊಂದಿಲ್ಲದೇ ಇರುವ, ಅನ್ಯೈಃ-ಬೇರೆಯಾದ, ಸ್ಥಾಲ್ಯಾದಿಭಿಃ–ಸ್ಥಾಲೀ-ಪಾತ್ರವೇ, ಆದಿಭಿಃ-ಮೊದಲಾಗಿವುಳ್ಳ ಉಪಕರಣಗಳಿಂದ, ಅನ್ನಂ-ಅನ್ನವು, ನಸಾಧ್ಯಂ ಹಿ-ಮಾಡಲಶಕ್ಯವಷ್ಟೆ ?.

ತಾತ್ಪರ್ಯ ॥ ಜೀವಾದಿ ತತ್ತ್ವಗಳ ಯಥಾರ್ಥಜ್ಞಾನವಿಲ್ಲದೆ ವೈರಾಗ್ಯವಿದ್ದರೂ ಪ್ರಯೋಜನವಿಲ್ಲವು. ಇದಕ್ಕೆ ಲೋಕದೃಷ್ಟಾಂತವು.— ಅಕ್ಕಿಯಿಲ್ಲದೆ ಪಾತ್ರೆಯೇ ಮೊದಲಾದ ಸಕಲೋಪಕರಣಗಳಿದ್ದಾಗ್ಯೂ ಅನ್ನವಾಗುವದಿಲ್ಲವಷ್ಟೆ ॥ ೧೮ ॥

ಶ್ಲೋಕ ॥ ತತ್ತ್ವಜ್ಞಾನಂ ಚ ಜೀವಾದಿ
ತತ್ತ್ವ ಯಾಥಾತ್ಮ್ಯನಿಶ್ಚಯಃ ।
ಅನ್ಯಥಾ ಧೀಸ್ತು ಲೋಕೇಪಿ
ಮಿಥ್ಯಾಜ್ಞಾನಂ ಹಿ ಕಥ್ಯತೇ ॥ ೧೯ ॥

ಟೀ ॥ ತತ್ತ್ವಜ್ಞಾನಂಚ- ತತ್ತ್ವಜ್ಞಾನವೂಕೂಡ, ಜೀವಾದಿತತ್ತ್ವ ಯಾಥಾತ್ಮ್ಯನಿಶ್ಚಯಃ-ಜೀವ-ಜೀವನೇ, ಆದಿ-ಮೊದಲಾದ, ತತ್ತ್ವ- ಏಳುತತ್ತ್ವಗಳ, ಯಾಥಾತ್ಮ್ಯ-ಯಥಾವಸ್ಥಿತಸ್ವರೂಪದ, ನಿಶ್ಚಯಃ- ನಿಶ್ಚಯವು, ಅನ್ಯಥಾ-ಪ್ರಕಾರಾಂತರವಾದ, ಧೀಸ್ತು-ಬುದ್ಧಿಯಾದರೋ, ಲೋಕೇಪಿ-ಲೋಕದಲ್ಲಿಯೂ ಕೂಡ, ಮಿಥ್ಯಾಜ್ಞಾನಂ-ಮಿಥ್ಯಾಜ್ಞಾನವೆಂದು ಕಥ್ಯತೇಹಿ-ಹೇಳಲ್ಪಡುತ್ತದಲ್ಲವೆ?

ತಾತ್ಪರ್ಯ॥ತತ್ತ್ವಜ್ಞಾನವೆಂದರೆ.—ಜೀವತತ್ತ್ವ, ಅಜೀವತತ್ತ್ವ, ಆಸ್ರವತತ್ತ್ವ, ಬಂಧತತ್ತ್ವ, ಸಂವರತತ್ತ್ವ, ನಿರ್ಜರತತ್ತ್ವ, ಮೋಕ್ಷತತ್ತ್ವಗಳಾದ, ಏಳುತತ್ತ್ವಗಳನ್ನು ಯಥಾವಸ್ಥಿತಸ್ವರೂಪದಿಂ ತಿಳಿಯುವಿಕೆಯು ಇದೇ ಸಮ್ಯಕ್ಜ್ಞಾನವೆನ್ನಲ್ಪಡುವುದು. ಬೇರೆವಿಧವಾಗಿ ತಿಳಿಯುವಿಕೆಯೋ ಎಂದರೆ, ಮಿಥ್ಯಾಜ್ಞಾನವೆಂದು ಹೇಳಲ್ಪಡುವುದಲ್ಲವೆ? ॥

ಶ್ಲೋಕ ॥ ಆಪ್ತಾಗಮಪದಾರ್ಥಾಖ್ಯ-
ತತ್ತ್ವವೇದನ ತದ್ರುಚೀ ।
ವೃತ್ತಂ ಚ ತದ್ದ್ವಯಸ್ಯಾತ್ಮ-
ನ್ಯಸ್ಖಲದ್ವೃತ್ತಿಧಾರಣಮ್ ॥ ೨೦ ॥

ಟೀ ॥ ಆಪ್ತಾಗಮಪದಾರ್ಥಾಖ್ಯತತ್ತ್ವವೇದನತದ್ರುಚೀ— ಆಪ್ತ-ಯಥಾರ್ಥವಾದಿಗಳಾದ ಅರ್ಹತ್ಪರಮೇಶ್ವರರಲ್ಲಿಯೂ, ಆಗಮ- ಆ ಅರ್ಹತ್ಪರಮೇಶ್ವರರ ವಚನಸ್ವರೂಪವಾದ ದ್ವಾದಶಾಂಗವೇದಶಾಸ್ತ್ರಗಳಲ್ಲಿಯೂ, ಪದಾರ್ಥ-ದ್ರವ್ಯಾದಿಪದಾರ್ಥಗಳೆಂದು, ಆಖ್ಯ-ಹೆಸರುಳ್ಳ, ತತ್ತ್ವ- ಈತತ್ವಗಳಲ್ಲಿಯು, ವೇದನ- ಯಾಥಾತ್ಮ್ಯಜ್ಞಾನವೆಂಬಸಮ್ಯಗ್ಜ್ಞಾನವೆಂತಲೂ, ತತ್- ಅವುಗಳಲ್ಲಿ, ಅಪರಿಹಾರ್ಯವಾದ, ರುಚಿಃ- ಅತ್ಯಾಸಕ್ತಿ ಎಂಬ ತತ್ವಾರ್ಥಶ್ರದ್ಧಾನರೂಪವಾದ ಸಮ್ಯಗ್ದರ್ಶನವೆಂತಲೂ, ತದ್ದ್ವಯಸ್ಯ—ಆ ಸಮ್ಯಕ್ಜ್ಞಾನದರ್ಶನಗಳೆರಡಕ್ಕೂ, ಆತ್ಮನಿ- ತನ್ನಲ್ಲಿ,

ಅಸ್ಖಲದ್ವೃತ್ತಿ ( ಯಥಾತಥಾ ) – ಅಸ್ಖಲತ್- ಸ್ಖಲನವಿಲ್ಲದೇಇರುವ, ವೃತ್ತಿ(ಯಥಾತಥಾ ) - ವ್ಯಾಪಾರವುಳ್ಳುದಾಗಿ ಹೇಗೋಹಾಗೆ, ಧಾರಣಂ - ಧರಿಸೋಣವು, ವೃತ್ತಂಚ- ಸಮ್ಯಕ್ಚಾರಿತ್ರವೆಂಬವಾಗಿಯೂ, ಕಥ್ಯತೇ-ಹೇಳಲ್ಪಡುವುದು.

ತಾತ್ಪರ್ಯ ॥ ಆಪ್ತರಾದ ಅರ್ಹತ್ಪರಮೇಶ್ವರರಲ್ಲಿಯೂ, ಅಂಥಾ ಪರಮಾಪ್ತರವಾಕ್ಯಾದ ವೇದಶಾಸ್ತ್ರಗಳಲ್ಲಿಯೂ ಆ ಶಾಸ್ತ್ರದಿಂದ ಪ್ರತಿಪಾದಿತವಾದ ತತ್ತ್ವಗಳಲ್ಲಿಯೂ ಯಾಥಾತ್ಮ್ಯಜ್ಞಾನವೇ ಸಮ್ಯಗ್ಜ್ಞಾನವೆನ್ನಲ್ಪಡುವುದು. ಮಹಾವಿಶ್ವಾಸರೂಪವಾದದ್ದು ತತ್ವಾರ್ಥಶ್ರದ್ಧಾನವೆಂಬ ಸಮ್ಯಗ್ದರ್ಶನವೆನ್ನಲ್ಪಡುವುದು. ಆ ಸಮ್ಯಗ್ಜ್ಞಾನಸಮ್ಯಗ್ದರ್ಶನಗಳಿಗೆ ಸ್ಖಾಲಿತ್ಯಬಾರದಂತೆ ಆತ್ಮನಲ್ಲಿ ಧರಿಸಿರೋಣವು ( ಆಚರಿಸೋಣವು) ಸಮ್ಯಕ್ಚಾರಿತ್ರವೆನ್ನಲ್ಪಡುವುದು. ॥೨೦॥

ಶ್ಲೋಕ ॥ ಇತಿ ತ್ರಯೀ ತು ಮಾರ್ಗಸ್ಸ್ಯಾ-
ದಪವರ್ಗಸ್ಯ ನಾಪರಮ್ ।
ಬಾಹ್ಯಮನ್ಯತ್ತಪಸ್ಸರ್ವಂ
ತತ್ತ್ರಯಸ್ಯೈವ ಸಾಧನಮ್ ॥ ೨೧ ॥

ಟೀ ॥ ಇತಿ- ಈ ಪೂರ್ವೋಕ್ತವಾದ ಸಮ್ಯಗ್ಜ್ಞಾನಸಮ್ಯಕ್ಚಾರಿತ್ರಗಳೆಂಬ, ತ್ರಯೀತು- ಮೂರುಕೂಡಿ, ಅಪವರ್ಗಸ್ಯ- ಮೋಕ್ಷಕ್ಕೆ, ಮಾರ್ಗ(ಸ್ಸತ್)- ಉಪಾಯವೆನಿಸುವುದಾಗಿ, ಸ್ಯಾತ್- ಆಗುವುದು., ಅಪರಂ- ಉಳಿದದ್ದು, ನ- ಅಲ್ಲವು., ಅನ್ಯತ್- ಬೇರೆಯಾದ, ಬಾಹ್ಯಂ- ಹೊರಗಿನ, ಸರ್ವಂ- ಸಮಸ್ತವಾದ, ತಪಃ- ಕಾಯಕ್ಲೇಶಕರವಾದವ್ಯಾಪಾರವು, ತತ್ತ್ರಯಸ್ಯೈವ- ಆ ರತ್ನತ್ರಯಕ್ಕೇನೆ, ಸಾಧನಂ- ಕಾರಣವಾದದ್ದು.

ತಾತ್ಪರ್ಯ ॥ ಪೂರ್ವೋಕ್ತವಾದ ಸಮ್ಯಗ್ದರ್ಶನ ಜ್ಞಾನಚಾರಿತ್ರಗಳೆಂಬ ರತ್ನತ್ರಯವು ಮೋಕ್ಷಕ್ಕೆ ಮಾರ್ಗವಾಗಿ (ಮುಖ್ಯ ಉಪಾಯವಾಗಿ) ಆಗುವುದು. ಉಳಿದ ಮತ್ತೆಯಾವುದೂ ಕಾರಣವಲ್ಲವು. ಹೊರಗಿನ ಸಮಸ್ತ ಕಾಯಕ್ಲೇಶಕರವಾದ ತಪಸ್ಸೂ ಈ ರತ್ನತ್ರಯಗಳೆನಿಸುವ ಸಮ್ಯಗ್ದರ್ಶನ ಜ್ಞಾನಚಾರಿತ್ರಗಳಿಗೇನೇ ಕಾರಣವಾಗುವದು.॥೨೧

ಶ್ಲೋಕ ॥ ನ ಚ ಬಾಹ್ಯತಪೋಹೀನ-
ಮಾಭ್ಯಂತರತಪೋ ಭವೇತ್ ।

ತಂಡುಲಸ್ಯೈವ ವಿಕ್ಲಿತ್ತಿ-
ರ್ನ ಹಿ ವಹ್ನ್ಯಾದಿಕಂ ವಿನಾ ॥ ೨೨ ॥

ಟೀ ॥ ಅಭ್ಯಂತರತಪಃ-ಅಭ್ಯಂತರ-ಮನೋವ್ಯಾಪಾರರೂಪವಾಗಿ ಸಿದ್ಧಪರಮೇಷ್ಠಿಸ್ವರೂಪಧ್ಯಾನವೆಂಬ, ತಪಃ-ತಪಸ್ಸು, ಬಾಹ್ಯತಪೋಹೀನಂ-(ಸತ್)-ಬಾಹ್ಯ-ಹೊರಗಿನದಾದ, ತಪಃ-ಕಾಯಕ್ಲೇಶರೂಪವ್ಯಾಪಾರದಿಂದ, ಹೀನಂ(ಸತ್)-ಶೂನ್ಯವಾಗಿ, ನಜಭವೇತ್-ಉಂಟಾಗುವುದಿಲ್ಲವು., ವಿಕ್ಲಿತ್ತಿಃ-ಪಾಕವು, ತಂಡುಲಸ್ಯೈವ-ಅಕ್ಕಿಗೇನೆ.,(ತಥಾಪಿ-ಹಾಗಾದರೂ,) ವಹ್ನ್ಯಾದಿಕಂವಿನಾ-ಬೆಂಕಿಯೇಮೊದಲಾದ ಹೊರಗಿನ ಉಪಕರಣವನ್ನು ಬಿಟ್ಟು, ನಹಿ-ಉಂಟಾಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ಒಳಗಿನ ತಪಸ್ಸಾದುದು ಹೊರಗಿನ ತಪಸ್ಸನ್ನು ಹೊರತು ಉಂಟಾಗುವುದಿಲ್ಲವು. (ಅಷ್ಟಕರ್ಮಕ್ಷಯವನ್ನು ಹೊಂದಿರುವ ಸ್ವಾಭಾವಿಕಾತ್ಮಸ್ವರೂಪವೆನಿಸುವ ಅನಂತ ಜ್ಞಾನಸುಖಾದಿಸಿದ್ಧಾಷ್ಟಗುಣಗಳೊಡಗೂಡಿದ ಸಿದ್ಧಪರಮೇಷ್ಠಿಸ್ವರೂಪನಾದ(ನೆಂಬ)ಪರಮಾತ್ಮಧ್ಯಾನಸಿದ್ಧಿಯು, ಹೊರಗಿನ ಕಾಯಕ್ಲೇಶರೂಪವಾದ ತಪಸ್ಸನ್ನು ಮಾಡದೇಇದ್ದಲ್ಲಿ ಉಂಟಾಗಲಾರದು.) ಅದು ಹೇಗೆಂದರೆ.—ಅಕ್ಕಿಯಲ್ಲಿಯೇ ಅವಯವಶೈಥಿಲ್ಯರೂಪವಾದ ಪಾಕವು ಉಂಟಾಗುವುದಾದರೂ, ಬೆಂಕಿ ನೀರು ಪಾತ್ರ ಮೊದಲಾದ ಹೊರಗಿನ ಉಪಕರಣಗಳನ್ನು ಬಿಟ್ಟು ಉಂಟಾಗಲಾರವಷ್ಟೆ ? ॥೨೨॥

ಶ್ಲೋಕ ॥ ತತ್ತ್ರಯಂ ಚ ನ ಮೋಕ್ಷಾರ್ಥ-
ಮಾಪ್ತಾಭಾಸಾದಿಗೋಚರಮ್ ।
ಧ್ಯಾತೋ ಗರುಡಬೋಧೇನ
ನ ಹಿ ಹಂತಿ ವಿಷಂ ಬಕಃ ॥ ೨೩ ॥

ಟೀ ॥ ತತ್ತ್ರಯಂಚ-ಆ ರತ್ನತ್ರಯವುಕೂಡ, ಆಪ್ತಾಭಾಸಾದಿಗೋಚರಂಚೇತ್-ಆಪ್ತಾಭಾಸ-ಆಪ್ತರಂತೆ ನಟಿಸುವವರಾಗಿ ವಸ್ತುತಃ ಆಪ್ತರಲ್ಲದವರೇ, ಆದಿ-ಮೊದಲಾದ ರಾಗದ್ವೇಷಾಕ್ರಾಂತರಾದ ಅನಾಪ್ತರಲ್ಲಿ, ಗೋಚರಂಚೇತ್-ಉಂಟಾದದ್ದೇಆದರೆ(ಗೋಚರಿಸಿದುದೇಆದರೆ), ಮೋಕ್ಷಾರ್ಥಂ-ಮೋಕ್ಷಕ್ಕೋಸುಗ, ನ-ಕಾರಣವಾಗುವುದಿಲ್ಲವು., ಗರುಡಬೋಧೇನ-ಗರುಡನೆಂಬ ಜ್ಞಾನದಿಂದ, ಧ್ಯಾತಃ-

ಧ್ಯಾನಿಸಲ್ಪಟ್ಟ, ಬಕಃ-ಕೊಕ್ಕರೆಯು, ವಿಷಂ-ವಿಷವನ್ನು, ನಹನ್ತಿಹಿ- ನಾಶಮಾಡು ವುದಿಲ್ಲವಷ್ಟೆ?.

ತಾತ್ಪರ್ಯ॥ ಅನಾಪ್ತರನ್ನು ಆಪ್ತರೆಂತಲೂ, ಮಿಥ್ಯಾಶಾಸ್ತ್ರಗಳಂ ಶಾಸ್ತ್ರವೆಂತಲೂ, ತತ್ತ್ವಗಳಲ್ಲದ್ದನ್ನು ತತ್ವಗಳೆಂತಲೂ ಭ್ರಮಿಸಿದವನಿಗೆ ಆ ರತ್ನತ್ರಯವೂ ಕೂಡ ಮೋಕ್ಷಕ್ಕೆ ಕಾರಣವಾಗಲಾರದು. ಗರುಡ ನೆಂದು ತಿಳಿದು, ಬಕಪಕ್ಷಿಯನ್ನು ಧ್ಯಾನಿಸಿದರೆ, ಸರ್ಪವಿಷವು ಇಳಿಯುವು ದೇ! ಹಾಗೆಯೇಅನಾಪ್ತಗೋಚರವಾದ ರತ್ನತ್ರಯವು ಮೋಕ್ಷಕಾರ ಣವಾಗಲಾರದೆಂವರ್ಥವು. ॥೭೩॥

ಶ್ಲೋಕ॥ ಸರ್ವದೋಷ ವಿನಿರ್ಮುಕ್ತಂ
ಸರ್ವಜ್ಞೋಪಜ್ಞಮಞ್ಜಸಾ ।
ತಪ್ಯಧ್ವಂ ತತ್ತಪೋ ಯೂಯಂ
ಕಿಂ ಮುಧಾ ತುಷಖಣ್ಡನೈಃ ॥ ೭೪ ॥

ಟೀ॥ ಯೂಯಂ-ನೀವು, ಸರ್ವದೋಷವಿನಿರ್ಮುಕ್ತಂ-ಸಮಸ್ತದೋಷಗಳಿಂ ದ ಬಿಡಲ್ಪಟ್ಟ, ಸರ್ವಜ್ಞೋಪಜ್ಞಂ-ಸರ್ವಜ್ಞನಾದ ಅರ್ಹತ್ಪರಮೇಶ್ವರನಿಂದ ಮೊ ದಲು ತಿಳಿಯಲ್ಪಟ್ಟ, ತತ್ತಪಃ-ಅಂಥಾತಪಸ್ಸನ್ನು, ಅಂಜಸಾ-ಶೀಘ್ರವಾಗಿ, ತಪ್ಯ ಧ್ವಂ-ಮಾಡಿರಿ., ಮುಧಾ-ನಿಷ್ಫಲವಾದ, ತುಷಖಂಡನೈಃ-ತುಷ-ನೆಲ್ಲುಸೊಟ್ಟಗೆಸಮ ವಾದ ಜಳ್ಳುಭತ್ತಗಳ, ಖಂಡನೈಃ-ಕುಟ್ಟುವುದಕ್ಕೆ ಸಮಾನವಾದ ನಿಷ್ಫಲ ತಪಸ್ಸು ಗಳಿಂದ, ಕಿಂ-ಏನು ಪ್ರಯೋಜನವು?.

ತಾತ್ಪರ್ಯ॥ ಎಲಾ ಪಂಚಾಗ್ನಿ ಮಧ್ಯತಪಸ್ಸನ್ನು ಮಾಡುವವರಾದ ಜನಗಳಿರಾ!! ನೀವು ಸಮಸ್ತ ದೋಷಗಳಿಂದಲೂ ಬಿಡಲ್ಪಟ್ಟು ಸರ್ವಜ್ಞ ರಾದ ಅರ್ಹತ್ಪರಮೇಷ್ಠಿಗಳಿಂದ ಮೊದಲು ತಿಳಿಯಲ್ಪಟ್ಟ ಸತ್ತಪಸ್ಸ ನ್ನು ಮಾಡಿರಿ. ಜಳ್ಳುಭತ್ತಗಳನ್ನು ಕುಟ್ಟುವಂತೆ ನಿಷ್ಫಲವಾದ ಈ ಅಸ ತ್ತಪಸ್ಸನ್ನು ಬಿಡಿರಿ ಇದರಿಂದೇನುಪ್ರಯೋಜನವು?॥೭೪॥

ಶ್ಲೋಕ॥ ರಾಗಾದಿದೋಷಸಂಯುಕ್ತಃ
ಪ್ರಾಣಿನಾಂ ನೈವ ತಾರಕಃ ।

ಪತನ್ತಸ್ಸ್ವಯಮನ್ಯೇಷಾಂ
ನ ಹಿ ಹಸ್ತಾವಲಮ್ಬನಮ್ ‖ ೨೫ ‖

ಟೀ ‖ ರಾಗಾದಿದೋಷಸಂಯುಕ್ತಃ-ರಾಗ-ರಾಗವೇ, ಆದಿ-ಮೊದಲಾಗಿ ಉಳ್ಳ, ದೋಷ-ದೋಷಗಳೊಡನೆ, ಸಂಯುಕ್ತಃ-ಕೂಡಿದವನು, ಪ್ರಾಣಿನಾಂ- ಪ್ರಾಣಿಗಳಿಗೆ, ನೈವತಾರಕಃ-ಸಂಸಾರಸಮುದ್ರವಂ ದಾಟಿಸತಕ್ಕವನಾಗಿ ಆಗುವುದಿಲ್ಲವು., ಸ್ವಯಂ-ತಾವೇ, ಪತನ್ತಃ-ಬೀಳುತ್ತಿರುವಜನಗಳು, ಅನ್ಯೇಷಾಂ - ಇತರರಿಗೆ, ಹಸ್ತಾವಲಂಬನಂ-ಕೈಹಿಡಿದುಎತ್ತುವವರಾಗಿ, ನಹಿ-ಆಗುವುದಿಲ್ಲವಷ್ಟೆ?.

ತಾತ್ಪರ್ಯ ‖ ರಾಗದ್ವೇಷಾದಿದೋಷಗಳೊಡಗೂಡಿದವನು ಸಂಸಾರ ಸಮುದ್ರದಲ್ಲಿ ನಾನಾದುಃಖಾಭನುವದೊಳರುವ ಪ್ರಾಣಿಗಳಿಗೆ ಸಂಸಾರಸ ಮುದ್ರಪಾರವನ್ನೈದಿಸಿ ಮೋಕ್ಷವನ್ನುಂಟುಮಾಡಲಾರನು. ವೀತರಾಗನೇ ಮೋಕ್ಷವನ್ನುಂಟುಮಾಡಲು ಶಕ್ತನೇ ಹೊರತು, ಇತರರು ಶಕ್ತರಲ್ಲವೆಂಬ ಭಾವವು. ತಾವೇ ಹಳ್ಳದಲ್ಲಿಬೀಳುವವರು ಹಳ್ಳದಲ್ಲಿಬಿದ್ದಿರುವಂಥಾ ಪುರುಷರಿಗೆ ಕೈಕೊಟ್ಟು ಉದ್ಧರಿಸಲು ಶಕ್ತರಲ್ಲವಷ್ಟೆ? ಹಾಗೆ ಸಂಸಾರರಹಿತನೇ ಮೋಕ್ಷಪ್ರದನೆಂದರ್ಥವು ‖೨೫‖

ಶ್ಲೋಕ‖ ನ ಚ ಕ್ರೀಡಾವಿಭೋಸ್ತಸ್ಯ
ಬಾಲಿಶೇಷ್ವೇವ ದರ್ಶನಾತ್ ।
ಅತೃಪ್ತಿಶ್ಚ ಭವೇತ್ತೃಪ್ತಿಂ
ಕ್ರೀಡಯಾ ಕರ್ತುಮುದ್ಯತಃ ‖ ೨೬ ‖

ಟೀ ‖ ವಿಭೋಃ-ಸ್ವಾಮಿಯಾದ (ಪ್ರಭುವಾದ), ತಸ್ಯ-ಆ ಈಶ್ವರನಿಗೆ (ಜಗದ್ರಕ್ಷಕನಾದ ಪರಮಾತ್ಮನಿಗೆ), ಕ್ರೀಡಾಚ-ಲೀಲೆಯೂಕೂಡ, ನ-ಇಲ್ಲವು., ಬಾಲಿಶೇಷ್ವೇವ-ಬಾಲಕರಲ್ಲಿಯೇ (ಮೂಢರಲ್ಲಿಯೇ), ದರ್ಶನಾತ್-ಕಾಣಲ್ಪಡುವುದರದೆಸೆಯಿಂದ, (ಕಿಂಚ-ಮತ್ತು,) ಕ್ರೀಡಯಾ-ಲೀಲೆಯಿಂದ, ತೃಪ್ತಿಂ-ತೃಪ್ತಿಯನ್ನು, ಕರ್ತುಂ-ಮಾಡಲೋಸುಗ, ಉದ್ಯತಃ-ಉದ್ಯುಕ್ತನಾದವನು, ಅತೃಪ್ತಿಶ್ಚ(ಅತೃಪ್ತಃ ಚ)-ತೃಪ್ತಿಯಿಲ್ಲದವನಾಗಿಯೂ, ಭವೇತ್-ಆಗುವನು.

ತಾತ್ಪರ್ಯ‖ ಸರ್ವಸ್ವಾಮಿಯಾಗಿ, ಸರ್ವಜ್ಞನಾಗಿ, ಸರ್ವಶಕ್ತನಾದ ಆ ಸರ್ವೇಶ್ವರನಿಗೆ ಜಗತ್ಸೃಷ್ಟ್ಯಾದಿಕೆಲಸಗಳು ಲೀಲೆಯಿಂದು ಹೇಳುವ

ರು. ಅದು ಬಾಲಕರಲ್ಲಿಯೇ ನೋಡಲ್ಪಟ್ಟಿರೋಣದರಿಂದ ಮೂಢಬಾಲಕನಂತೆ ಲೀಲೆಯು ಆ ಸರ್ವೇಶ್ವರನ ಸ್ವರೂಪಸ್ವಭಾವಗಳಿಗೆ ವಿರುದ್ಧಕೆಲಸವಲ್ಲವೆ? ಸರ್ವಪ್ರಯೋಜನಸಿದ್ಧಿಯುಳ್ಳ ಆ ಸರ್ವೇಶ್ವರನಿಗೆಲೀಲೆಯಿಂದ ತೃಪ್ತಿಯೇ ಪ್ರಯೋಜನವೆಂದು ಹೇಳುವಪಕ್ಷದಲ್ಲಿಯೂ ಲೀಲೆಯಿಂದುಂಟಾಗುವ ತೃಪ್ತಿಯೆಂಬ ಪ್ರಯೋಜನವೊಂದು ಕಡಮೆಯಾಗಿರುವುದರಿಂದ ಈಶ್ವರನು ಸರ್ವಪ್ರಯೋಜನಸಿದ್ಧಿಯಿಂದ ತೃಪ್ತನೆಂಬದು ಹೇಗೆ ಸಂಭವಿಸೀತು?

ಶ್ಲೋಕ॥ ಸ್ವೈರಾಚಾರಸ್ವಭಾವೋಽಪಿ
ನೇಶ್ವರಸ್ಯೈಶ್ವ್ಯಹಾನಿತಃ ।
ಅಪ್ಯಸ್ಮದಾದಿಭಿರ್ದ್ವೇಷ್ಯಂ
ಸರ್ವೋತ್ಕರ್ಷವತಃ ಕುತಃ ॥ ೨೩ ॥

ಟೀ॥ ಸ್ವೈರಾಚಾರಸ್ವಭಾವೋಽಪಿ–ಸ್ವೈರ-ಸ್ವೇಚ್ಛಾನುಗುಣವಾಗಿ, ಆಚಾರ-ಆಚರಿಸೋಣವೆಂಬ, ಸ್ವಭಾವೋಽಪಿ-ಸ್ವಭಾವವೂಕೂಡ, ಈಶ್ವರಸ್ಯ- ಈಶ್ವರನಿಗೆ, ಐಶ್ವಹಾನಿತಃ–ಐಶ್ವ-ಸರ್ವರಕ್ಷಕನಾಗಿರೋಣವೆಂಬ ಈಶ್ವರಭಾವಕ್ಕೆ, ಹಾನಿತಃ-ಹಾನಿಯುಂಟಾಗುವುದರದೆಸೆಯಿಂದ, ನ-ಸಂಭವಿಸುವುದಿಲ್ಲವು., ಅಸ್ಮದಾದಿಭಿರಪಿ-ನಾವುಗಳೇಮೊದಲಾದ ಜನರಿಂದ, ದ್ವೇಷ್ಯಂ-ದ್ವೇಷಿಸುವುದಕ್ಕೆ ಯೋಗ್ಯವಾದದ್ದು, ಸರ್ವೋತ್ಕರ್ಷವತಃ-ಎಲ್ಲರಿಗಿಂತಲೂ ಉತ್ಕೃಷ್ಟನಾದ ಸರ್ವೇಶ್ವರನಿಗೆ, ಕುತಃ- ಹೇಗೆ ಉಂಟಾದೀತು ?.

ತಾತ್ಪರ್ಯ ॥ ಈಶ್ವರನು ಸ್ವತಂತ್ರನಾದುದರಿಂದ ತನ್ನ ಇಚ್ಛಾನುಗುಣವಾಗಿ ನಡೆಯೋಣವೇ ಸ್ವಭಾವವಾಗಿ ವುಳ್ಳವನೆಂಬದು ಈಶ್ವರತ್ವಕ್ಕೆ ವಿರೋಧವಾದುದರಿಂದ ಸಂಭವಿಸಲಾರದು. ತನ್ನ ಮನಸ್ಸು ಬಂದಹಾಗೆನಡೆಯೋಣವು ನಮ್ಮಂಥಾವರಿಗೇನೆ ವಿರುದ್ಧವಾಗಿರುವಲ್ಲಿ, ಸರ್ವೋತ್ಕೃಷ್ಟನಾದ ಈಶ್ವರನಿಗೆ ಹೇಗೆ ಉಚಿತವಾದೀತು? ॥೨೩॥

ಶ್ಲೋಕ॥ ಅದೋಷಪಕ್ಷೇದಕೃತ್ಯಂ ಚ
ಕೃತಿನಃ ಕಿಮು ಕೃತ್ಯತಃ ।

ಸ್ವೈರಾಚಾರವಿಧಿರ್ದೃಷ್ಟೋ
ಮತ್ತಏವ ನಚೋತ್ತಮೇ ॥ ೨೮ ॥

ಟೀ ॥ ಅಕೃತ್ಯಂಚ-ಅಕಾರ್ಯವೂಕೂಡ, ತಸ್ಯ-ಆ ಈಶ್ವರನಿಗೆ, ಅದೋಷಶ್ಚೇತ್-ದೋಷವಾಗದೇಇರುವಪಕ್ಷದಲ್ಲಿ, ಕೃತಿನಃ-ಮಹಾಸಮರ್ಥನಾದ ಈಶ್ವರನಿಗೆ, ಕೃತ್ಯೈಃ-ಉಚಿತ ಕೆಲಸವದೆಸೆಯಿಂದ, ಕಿಮು-ಏನುಪ್ರಯೋಜನವು?, ಸ್ವೈರಾಚಾರವಿಧಿಃ- ಸ್ವೈರ - ಮನಸ್ಸುಬಂದಂತೆ, ಆಚಾರ-ಕೃತ್ಯಗಳನ್ನು, ವಿಧಿಃ-ಮಾಡುವಿಕೆಯು, ಮತ್ತಏವ-ಮದಿಸಿರುವ ಪುರುಷನಲ್ಲಿಯೇ, ದೃಷ್ಟಃ-ನೋಡಲ್ಪಟ್ಟಿದೆ., ಉತ್ತಮೇ- ಉತ್ತಮಪುರುಷನಲ್ಲಿ, ನಚದೃಷ್ಟಃ-ನೋಡಲ್ಪಟ್ಟೇ ಇಲ್ಲವು.,

ತಾತ್ಪರ್ಯ ॥ ಮಹಾಸಮರ್ಥನಾದ ಈಶ್ವರನಿಗೆ ಅಕಾರ್ಯವೂಕೂಡ ದೋಷವಲ್ಲವೆಂದು ಹೇಳುವಲ್ಲಿ ಅಂಥಾ ಸಮರ್ಥನಾದ ಈಶ್ವರನಿಗೆ ತನ್ನಸಾಮರ್ಥ್ಯದದೆಸೆಯಿಂದಲೇ ಸಕಲಪ್ರಯೋಜನವೂ ಸಿದ್ಧಿಸುತ್ತಿರಲಿಕ್ಕಾಗಿ ದುಷ್ಟನಿಗ್ರಹಶಿಷ್ಟಪರಿಪಾಲನಾರ್ಥವಾದ ಕೆಲಸದಿಂದೇನು ಪ್ರಯೋಜನವು? ಮತ್ತು ಯಥೇಚ್ಛೆಯಿಂದನಡೆಯೋಣವು, ಮದಿಸಿ ಅಜಾಗರೂಕನಾದ ಪುರುಷನಲ್ಲಿ ನೋಡಲ್ಪಟ್ಟದೆಯೆ ಹೊರತು ಉತ್ತಮಪುರುಷನಲ್ಲಿ ನೋಡಲ್ಪಟ್ಟಲ್ಲವು. ॥೨೮॥

ಶ್ಲೋಕ॥ ಇತಿಪ್ರಬೋಧಿತಾಃ ಕೇಚಿ-
ದ್ಬಭೂವುಸ್ತೇಷು ಧಾರ್ಮಿಕಾಃ ।
ಮೃತ್ಸ್ನಾಹ್ಯಾರ್ದ್ರತ್ವಮಾಯಾತಿ
ನೋಪಲಂ ಜಲಸೇಚನಾತ್ ॥ ೨೯ ॥

ಟೀ ॥ ಇತಿ-ಈ ಪ್ರಕಾರ, ಪ್ರಬೋಧಿತಾಃ-ವಿಶೇಷವಾಗಿ ಬೋಧಿಸಲ್ಪಟ್ಟ, ತೇಷು-ಅವರುಗಳಲ್ಲಿ, ಕೇಚಿತ್-ಕೆಲವು ತಪಸ್ವಿಗಳು, ಧಾರ್ಮಿಕಾ(ಸ್ಸನ್ತ)ಃ-ಅಹಿಂಸಾಲಕ್ಷಣವಾದ ಧರ್ಮವನ್ನಾಶ್ರಯಿಸಿದವರಾಗಿ, ಬಭೂವುಃ-ಆದರು., ಜಲಸೇಚನಾತ್-ಜಲ-ನೀರನ್ನು, ಸೇಚನಾತ್-ಸುರಿಯುವುದರಿಂದ, ಮೃತ್ಸ್ನಾ-ಮಣ್ಣು, ಆರ್ದ್ರತ್ವಂ-ಹಸೀದಾಗೋಣವನ್ನು (ಮೃದುವಾಗೋಣವನ್ನು), ಆಯಾತಿಹಿ- ಹೊಂದುತಲಿದೆಯಲ್ಲವೆ?, ಉಪಲಂ-ಕಲ್ಲು, ನ-ಮೆತ್ತಗೆ ಆಗುವುದಿಲ್ಲವು.

ತಾತ್ಪರ್ಯ॥ ಈಪ್ರಕಾರ ಬೋಧಿಸಲ್ಪಟ್ಟ ಆ ತಪಸ್ವಿಗಳಲ್ಲಿ ಕೆಲವರು ಭವ್ಯಾತ್ಮರು ಧರ್ಮಿಷ್ಠರಾಗಿ ಆದರು. (ಅಹಿಂಸಾಲಕ್ಷಣ ಪರಮ

ಧರ್ಮಾನುಷ್ಠಾನಪರರಾದರು). ಎಲ್ಲರೂ ಧರ್ಮಿಷ್ಠರಾಗಲಿಲ್ಲವು. ಇದಕ್ಕೆ ದೃಷ್ಟಾಂತವು.-ಲೋಕದಲ್ಲಿ ಮಣ್ಣಿನಮೇಲೆ ನೀರು ಸುರಿದರೆ ಅದು ಮೃದುವಾಗುವುದು. ಕಲ್ಲಿನಮೇಲೆ ಎಷ್ಟು ನೀರನ್ನು ಸುರಿದಾಗ್ಯೂ ಮೃದುವಾಗುವುದಿಲ್ಲವಷ್ಟೆ? ಹಾಗೆ ಅಭವ್ಯಾತ್ಮರಿಗೆ ಎಷ್ಟು ಉಪದೇಶಿಸಿದರೂ ನಿರರ್ಥಕವು. ॥೧೯॥

ಶ್ಲೋಕ ॥ ಧರ್ಮಶ್ರಿತಾನ್ಸಮಾಲೋಕ್ಯ
ತಾಪಸಾನ್ಮುಮುದೇ ಕೃತೀ ।
ಪ್ರೀತಯೇ ಹಿ ಸತಾಂ ಲೋಕೇ
ಸ್ವೋದಯಾಚ್ಚ ಪರೋದಯಃ ॥ ೨೦ ॥

ಟೀ ॥ ಕೃತೀ- ಮಹಾಪುಣ್ಯಪುರುಷನಾಗಿಯೂ, ಸಮರ್ಥನಾಗಿಯೂ ಇರುವ ಜೀವಂಧರ ಸ್ವಾಮಿಯಾದರೋ, ಧರ್ಮಶ್ರಿತಾನ್-ಧರ್ಮ - ಅಹಿಂಸಾಲಕ್ಷಣವಾದ ಧರ್ಮವನ್ನು, ಶ್ರಿತಾನ್- ಆಶ್ರಯಿಸಿರುವ, ತಾಪಸಾನ್- ತಪಸ್ವಿಗಳನ್ನು, ಸಮಾಲೋಕ್ಯ-ನೋಡಿ, ಮುಮುದೇ- ಸಂತೋಷಿಸಿದನು., ಲೋಕೇ-ಲೋಕದಲ್ಲಿ, ಸತಾಂ-ಸತ್ಪುರುಷರಿಗೆ, ಸ್ವೋದಯಾಚ್ಚ- ಸ್ವ-ತನ್ನ, ಉದಯಾಚ್ಚ- ಶ್ರೇಯಸ್ಸಿಗಿಂತಲೂ ಕೂಡ, ಪರೋದಯಃ-ಪರ-ಅನ್ಯರ, ಉದಯಃ-ಶ್ರೇಯಸ್ಸು, ಪ್ರೀತಯೇಹಿ- ಸಂತೋಷಕ್ಕೋಸುಗವಾಗುವುದಲ್ಲವೆ?.

ತಾತ್ಪರ್ಯ ॥ ಮಹಾಪುಣ್ಯಶಾಲಿಯಾಗಿಯೂ ಮಹಾಸಮರ್ಥನಾಗಿಯೂ ಇರುವ ಜೀವಂಧರಕುಮಾರನು ಅಹಿಂಸಾ ಧರ್ಮವನ್ನು ಆಶ್ರಯಿಸಿರುವ ತಪಸ್ವಿಗಳನ್ನು ನೋಡಿ ಸಂತೋಷಿಸಿದನು. ಸತ್ಪುರುಷರಿಗೆ ತಮ್ಮ ಅಭ್ಯುದಯಕ್ಕಿಂತಲೂ ಪರರಿಗೆ ಉಂಟಾಗುವ ಶ್ರೇಯಸ್ಸು ಸಂತೋಷಕ್ಕೆ ಕಾರಣವಾಗುತ್ತದಲ್ಲವೆ? ॥೨೦॥

ಶ್ಲೋಕ ॥ ಬೋಧಿಲಾಭಾತ್ಪರಾ ಪುಂಸಾಂ
ಭೂತಿಃ ಕಾ ವಾ ಜಗತ್ತ್ರಯೇ ।
ಕಿಂ ಶಾಕಫಲಸಂಕಾಶೈಃ
ಕಿಂ ಪರೈರುದಯಚ್ಛಲೈಃ ॥ ೨೧ ॥

ಟೀ ॥ ಪುಂಸಾಂ-ಪುರುಷರಿಗೆ, ಜಗತ್ತ್ರಯೇ- ಮೂರು ಲೋಕದಲ್ಲಿಯೂ, ಬೋಧಿಲಾಭಾತ್-ಜ್ಞಾನವೆಂಬಲಾಭಕ್ಕಿಂತಲೂ, ಪರಾ-ಉತ್ಕೃಷ್ಟವಾದ, ಭೂತಿಃ-ಐಶ್ವರ್ಯವು, ಕಾವಾ-ಯಾವುದು?, ಕಿಂಪಾಕಫಲಸಂಕಾಶೈಃ-ವಿಷಫಲಕ್ಕೆ ಸಮಾನಗಳಾದ, ಉದಯಚ್ಛಲೈಃ-ಉದಯ-ಐಶ್ವರ್ಯವೆಂಬ, ಛಲೈಃ ವ್ಯಾಜವುಳ್ಳ, ಪರೈಃ-ಬೇರೆಯಾದ ಸಂಪತ್ತುಗಳಿಂದ, ಕಿಂ-ಏನು ಪ್ರಯೋಜನವು?.

ತಾತ್ಪರ್ಯ॥ ಪುರುಷರಿಗೆ ಜ್ಞಾನಲಾಭಕ್ಕಿಂತಲೂ ಉತ್ಕೃಷ್ಟವಾದಸಂಪತ್ತು ಮೂರುಲೋಕದಲ್ಲಿಯೂ ಇಲ್ಲವಷ್ಟೆ? ವಿಷಫಲಕ್ಕೆ ಸಮಾನವಾದ ಪತ್ನೀ ಪುತ್ರ ಗೃಹಕ್ಷೇತ್ರವಿತ್ತಾದಿರೂಪವಾದ ಆಭಾಸ ಸಂಪತ್ತುಗಳಿಂದೇನು ಪ್ರಯೋಜನವು? ॥ ೩೦॥

ಶ್ಲೋಕ ॥ ತತಸ್ತಸ್ಮಾದ್ವಿನಿರ್ಗತ್ಯ
ದೇಶೆ ದಕ್ಷಿಣನಾಮಕೆ ।
ಸಹಸ್ರಕೂಟಮಾಶ್ರಿತ್ಯ
ಶ್ರೀವಿಮಾನಂ ನುನಾವ ಸಃ ॥ ೩೧ ॥

ಟೀ ॥ ತತಃ-ಅನಂತರದಲ್ಲಿ, ಸಃ-ಆ ಜೀವಂಧರಕುಮಾರನು, ತಸ್ಮಾತ್-ಆಪ್ರದೇಶದೆಸೆಯಿಂದ, ವಿನಿರ್ಗತ್ಯ-ಹೊರಟು, ದಕ್ಷಿಣನಾಮಕೆ-ದಕ್ಷಿಣದೇಶವೆಂಬುಹೆಸರುಳ್ಳ, ದೇಶೇ-ದೇಶದಲ್ಲಿ, ಸಹಸ್ರಕೂಟಂ-ಸಹಸ್ರ-ಸಾವಿರವಾದ, ಕೂಟಂ- ಶಿಖರಗಳುಳ್ಳ (ಸಹಸ್ರಕೂಟವೆಂಬ) ಪರ್ವತವನ್ನು, ಆಶ್ರಿತ್ಯ-ಆಶ್ರಯಿಸಿ, ಶ್ರೀ ವಿಮಾನಂ-ಸಂಪದ್ಯುಕ್ತವಾದ(ಶ್ರೀಪ್ಮಪಾದಜಿನಮಂದಿರ)ವಿಮಾನವನ್ನು, ನುನಾವ-ಸ್ತುತಿಸಿದನು.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಕುಮಾರನು ಆ ತಪಸ್ವಿಗಳ ಆಶ್ರಮದದೆಸೆಯಿಂದ ಹೊರಟು ದಕ್ಷಿಣದೇಶದಲ್ಲಿ ಸಾವಿರ ಶಿಖರಗಳುಳ್ಳ ಶ್ರೀವಿಮಾನವನ್ನು ಆಶ್ರಯಿಸಿ ಜಿನನಾಥನು ಸ್ತುತಿಸಿದನು. ॥೩೧॥

ಶ್ಲೋಕ ॥ ಭಗವನ್ದುರ್ನಯಧ್ವಾಂತೈ-
ರಾಕೀರ್ಣೇ ಪಥಿ ಮೇ ಸತಿ ।
ಸಂಜ್ಞಾನದೀಪಿಕಾಭೂಯಾ-
ತ್ಸಂಸಾರಾವಧಿ ವರ್ಧಿನೀ ॥ ೩೨ ॥

ಟೀ ॥ ಹೇ ಭಗವನ್-ಎಲೈ ಮಹಾಮಹಿಮೆಯುಳ್ಳ ಸ್ವಾಮಿಯೇ!, ದುರ್ನಯಧ್ವಾಂತೈಃ-ದುರ್ನಯ-ದುಷ್ಟನ್ಯಾಯಗಳೆಂಬ (ದುರ್ಮತಗಳೆಂಬ, ಮಿಥ್ಯಾಶಾಸ್ತ್ರಗಳೆಂಬ), ಧ್ವಾಂತೈಃ-ಅಂಧಕಾರಗಳಿಂದ, ಅಕೀರ್ಣೇ-ವ್ಯಾಪ್ತವಾಗಿರುವ, ಸತಿ-ಶ್ರೇಷ್ಠವಾದ, ಪಥಿ-ಮೋಕ್ಷಮಾರ್ಗದಲ್ಲಿ, ಮೇ-ನನಗೆ, ಸಂಜ್ಞಾನ-ಸಮ್ಯಗ್ಜ್ಞಾನವೆಂಬ, ದೀಪಿಕಾ-ದೀಪವು, ಸಂಸಾರಾವಧಿ-ಸಂಸಾರವಿರುವವರೆಗೂ, ವರ್ಧಿನೀ (ಸತೀ), ವೃದ್ಧಿಹೊಂದುವಂಥಾದ್ದಾಗಿ, ಭೂಯಾತ್-ಉಂಟಾಗಲಿ.

ತಾತ್ಪರ್ಯ॥ ಎಲೈ ಮಹಾಮಹಿಮೆಯುಳ್ಳಸ್ವಾಮಿಯೇ! ನನಗೆ ಸಂಸಾರವಿರುವವರೆಗೂ ಸಮ್ಯಗ್ಜ್ಞಾನದರ್ಶನಚಾರಿತ್ರವೆಂಬ ಮೋಕ್ಷಮಾರ್ಗಕ್ಕೆ ಮಿಥ್ಯಾದರ್ಶನಾದಿಗಳೆಂಬ ಕತ್ತಲೆಯು ಆಕ್ರಮಿಸದೇ ಇರುವಂತೆ ಸಂಜ್ಞಾನವೆಂಬ ದೀಪವು ವೃದ್ಧಿ ಹೊಂದುತಲಿರಲಿ. ॥೨೭॥

ಶ್ಲೋಕ ॥ ಜನ್ಮಜೀರ್ಣಾಟವೀಮಧ್ಯೇ
ಜನುಷಾಂಧಸ್ಯ ಮೇ ಸತಿ ।
ಸನ್ಮಾರ್ಗೇ ಭಗವನ್ಭಕ್ತಿ-
ರ್ಭವತಾನ್ಮುಕ್ತಿದಾಯಿನೀ ॥ ೨೮ ॥

ಟೀ ॥ ಜನ್ಮಜೀರ್ಣಾಟವೀಮಧ್ಯೇ-ಜನ್ಮ-ನಾನಾಜನ್ಮಗಳೆಂಬ, ಜೀರ್ಣ- ಹಳೆಯದಾದ (ಪುರಾತನವಾದ), ಅಟವೀ-ಮಹಾರಣ್ಯದ, ಮಧ್ಯೇ-ಮಧ್ಯದಲ್ಲಿ, ಜನುಷಾ-ಉತ್ಪತ್ತಿಯಿಂದಲೇ, ಅಂಧಸ್ಯ-ಕುರುಡನಾಗಿರುವ (ಅತ್ಯಂತಮೂಢನಾದ), ಮೇ-ನನಗೆ, ಸತಿ-ಶ್ರೇಷ್ಠವಾದ, ಸನ್ಮಾರ್ಗೇ-ಮೋಕ್ಷಮಾರ್ಗದಲ್ಲಿ, ಹೇ ಭಗವನ್-ಎಲೈ ಮಹಾಮಹಿಮೆಯುಳ್ಳ ಸ್ವಾಮಿಯೇ!, ಮುಕ್ತಿದಾಯಿನೀ- ಮುಕ್ತಿ-ಮೋಕ್ಷವನ್ನು, ದಾಯಿನೀ-ಕೊಡುತಲಿರುವ, ಭಕ್ತಿಃ-ಭಕ್ತಿಯು, ಭವತಾತ್-ಉಂಟಾಗಲಿ.

ತಾತ್ಪರ್ಯ ॥ ಎಲೈ ಮಹಾಮಹಿಮೆಯುಳ್ಳ ಸ್ವಾಮಿಯೇ! ಕರ್ಮಾನುಗುಣವಾದ ಅನೇಕ ಜನ್ಮಗಳೆಂಬ ಮಹಾರಣ್ಯದಮಧ್ಯದಲ್ಲಿ ಹುಟ್ಟುಕುರುಡನಂತೆ, ದಾರಿಯುಕಾಣದೆ ತಿರುಗುತ್ತಿರುವ ನನಗೆ ಶ್ರೇಷ್ಠವಾದ ಮೋಕ್ಷಮಾರ್ಗದಲ್ಲಿ ಮೋಕ್ಷವನ್ನು ಕೊಡುತ್ತಿರುವ ಭಕ್ತಿಯು ಉಂಟಾಗುವಂತೆ ಅನುಗ್ರಹಿಸಬೇಕು ॥೨೮॥

ಶ್ಲೋಕ॥ ಸ್ವಾಂತಶಾಂತಿಂ ಮಮೈಕಾಂತಾ-
ಮನೇಕಾಂತೈಕನಾಯಕಃ ।
ಶಾಂತಿನಾಥೋ ಜಿನಃ ಕುರ್ಯಾ-
ತ್ಸಂಸೃತಿಕ್ಲೇಶಶಾಂತಯೇ ॥ ೩೫ ॥

ಟೀ॥ ಅನೇಕಾಂತೈಕನಾಯಕಃ-ಸ್ಯಾದ್ವಾದಕ್ಕೆ ಮುಖ್ಯ ಸ್ವಾಮಿಯಾದ, ಶಾಂತಿನಾಥಃ-ಶಾಂತಿನಾಥನೆಂದು ನಾಮಧೇಯವುಳ್ಳ, ಜಿನಃ - ಸಕಲಕರ್ಮಕ್ಷಯವನ್ನು ಹೊಂದಿರುವ ಜಿನನು, ಸಂಸೃತಿಕ್ಲೇಶಶಾಂತಯೇ-ಸಂಸೃತಿ- ಸಂಸಾರಸಂಬಂಧಿಯಾದ, ಕ್ಲೇಶ-ದುಃಖಗಳ, ಶಾಂತಯೇ-ಶಮನಕ್ಕೋಸ್ಕರ, ಮಮ-ನನಗೆ, ಏಕಾಂತಾಂ-ಸ್ಥಿರವಾದ, ಸ್ವಾಂತಶಾಂತಿಂ-ಸ್ವಾಂತ-ಮನಸ್ಸಿಗೆ, ಶಾಂತಿಂ-ರಾಗದ್ವೇಷಾದಿದೋಷರಾಹಿತ್ಯವನ್ನು, ಕುರ್ಯಾತ್-ಉಂಟುಮಾಡಲಿ.

ತಾತ್ಪರ್ಯ॥ ಪ್ರಪಂಚವು ಅಸ್ತಿನಾಸ್ತ್ಯಾತ್ಮಕವಾಗಿಯೂ, ದ್ರವ್ಯಪರ್ಯಾಯಗಳಿಂದ ಭೇದಾಭೇದಾತ್ಮಕವಾಗಿಯೂ ಇರುವುದೆಂದು ಸ್ಥಾಪಿಸುವ, ಸ್ಯಾದ್ವಾದನ್ಯಾಯಕ್ಕೆ ಮುಖ್ಯಪ್ರತಿಪಾದಕಪ್ರಭುವಾದ, ಶಾಂತಿನಾಥಸ್ವಾಮಿಯೆನಿಸುವ ಸಕಲಕರ್ಮಜೇತಾವಾದ ಜಿನೇಂದ್ರರು ನನ್ನ ಸಂಸಾರದುಃಖನಿವೃತ್ತಿಗೋಸ್ಕರ ಸ್ಥಿರವಾದ ಮನಶ್ಶಾಂತಿಯನ್ನು (ರಾಗದ್ವೇಷಾದಿದೋಷನಿವೃತ್ತಿಯನ್ನು) ಉಂಟುಮಾಡಲಿ ॥೩೫॥

ಶ್ಲೋಕ॥ ಇತಿ ಸ್ತೋತ್ರೇಣ ತಸ್ಯಾಸೀ-
ದುದ್ಘಾಟಿತ ಕವಾಟಕಮ್ ।
ಮುಕ್ತಿದ್ವಾರಕವಾಟಸ್ಯ
ಭೇದಿನಾ ಕಿಂ ನ ಭಿದ್ಯತೇ ॥ ೩೬ ॥

ಟೀ॥ ಇತಿ- ಈ ಪ್ರಕಾರವಾಗಿ, ಸ್ತೋತ್ರೇಣ- ಸ್ತೋತ್ರಮಾಡುವುದರ ಸೆಯಿಂದ, ತಸ್ಯ-ಆ ಜಿನಚೈತ್ಯಾಲಯಮುಖೋಕಾರದ, ಉದ್ಘಾಟಿತಕವಾಟಕಂ(ಸತ್)-ಉದ್ಘಾಟಿತ-ತೆರೆಯಲ್ಪಟ್ಟ, ಕವಾಟಕಂ(ಸತ್)-ಬಾಗಿಲುಗಳುಳ್ಳದಾಗಿ, ಆಸೀತ್- ಆಯಿತು., ಮುಕ್ತಿದ್ವಾರಕವಾಟಸ್ಯ-ಮುಕ್ತಿ-ಮೋಕ್ಷದ, ದ್ವಾರ-ಬಾಗಿಲಿನ, ಕವಾ

ಟಕ್ಯ-ಕವವನ್ನು, ಭೇದಿನಾ-ಭೇದಿಸುವುದರಲ್ಲಿ ಶಕ್ತನಾದ ವಸ್ತುವಿನಿಂದ, ಕಿಂ-ಯಾವುದು, ನಭಿದ್ಯತೇ-ಭೇದಿಸಲ್ಪಡುವುದಿಲ್ಲವು ?.

ತಾತ್ಪರ್ಯ ॥ ಜೀವಂಧರಕುಮಾರನು ಈ ಪ್ರಕಾರಸ್ತೋತ್ರಮಾಡಿದ ಮಾತ್ರದಿಂದಲೇ ಸಹಸ್ರಕೂಟ ಜಿನ ಚೈತ್ಯಾಲಯದ ಬಾಗಿಲು ತನಗೆ ತಾನೇ ತೆಗೆಯಲ್ಪಟ್ಟಿತು. ಮೋಕ್ಷದಬಾಗಿಲನ್ನೇ ತೆಗೆಯುತ್ತಿರುವ ಈಸ್ತೋತ್ರದಿಂದ ಮತ್ತೆಯಾವದು ತಾನೇ ಭೇದಿಸಲ್ಪಡುವುದಿಲ್ಲವು ? (ಸರ್ವವೂ ಭೇದಿಸಲ್ಪಡುತ್ತದೆಂದಭಿಪ್ರಾಯವು) ॥೩೬॥

ಶ್ಲೋಕ ॥ ಅನ್ಯಾಶಕ್ಯಮಿದಂ ಮಾನ್ಯೋ
ವಿತನ್ವನ್ನವಿಸಿಷ್ಮಿಯೇ ।
ಲೋಕಮಾಲೋಕಸಾತ್ಕುರ್ವ-
ನ್ನ ಹಿ ವಿಸ್ಮಯತೇ ರವಿಃ ॥೩೭॥

ಟೀ ॥ ಮಾನ್ಯಃ-ಪೂಜ್ಯನಾದ ಜೀವಂಧರಸ್ವಾಮಿಯು, ಅನ್ಯಾಶಕ್ಯಂ—ಅನ್ಯ-ಇತರರಿಗೆ, ಅಶಕ್ಯಂ-ಅಸಾಧ್ಯವಾದ, ಇದಂ-ಈ ಕೆಲಸವನ್ನು, ವಿತನ್ವನ್(ಸನ್)- ಮಾಡುವವನಾಗಿಯೂ, ನವಿಸಿಷ್ಮಿಯೇ-ಆಶ್ಚರ್ಯಪಡಲಿಲ್ಲವು., ಲೋಕಂ- ಲೋಕವನ್ನು, ಆಲೋಕ(ಸಾತ್)-ಪ್ರಕಾಶಕ್ಕೆ ಅಧೀನವನ್ನಾಗಿ, ಕುರ್ವನ್-ಮಾಡುತಲಿರುವ, ರವಿಃ-ಸೂರ್ಯನು, ನಹಿವಿಸ್ಮಯತೇ-ಆಶ್ಚರ್ಯಪಡುವುದಿಲ್ಲವಷ್ಟೆ ?.

ತಾತ್ಪರ್ಯ ॥ ಇತರರಿಗೆ ಅಸಾಧ್ಯವಾದ ಈ ಜಿನಚೈತ್ಯಾಲಯದ ಬಾಗಿಲನ್ನು ತೆಗೆಸೋಣವೆಂಬಾಶ್ಚರ್ಯ ಕೆಲಸವನ್ನು ಮಾಡಿದಾಗ್ಯೂ, ಜೀವಂಧರಕುಮಾರನು ತನ್ನಸಾಮರ್ಥ್ಯಕ್ಕೆ ತಾನೇ ಆಶ್ಚರ್ಯಪಡಲಿಲ್ಲವು. ಅದು ಹೇಗೆಂದರೆ.— ಲೋಕವನ್ನು ಪ್ರಕಾಶಪಡಿಸುತಲಿರುವ ಸೂರ್ಯನು ತನ್ನ ಸಾಮರ್ಥ್ಯಕ್ಕೆ ತಾನೇ ಆಶ್ಚರ್ಯ ಪಡುವುದಿಲ್ಲವಷ್ಟೆ ? ॥೩೭॥

ಶ್ಲೋಕ॥ ತಾವತ್ತಾ ತಂ ಸಮಾಸಾದ್ಯ
ಪ್ರಣತಃ ಕೋಪಿ ಪಿಪ್ರಿಯೇ ।

ಸ್ವಮನೀಷಿತ ನಿಷ್ಪತ್ತೌ
ಕಿಂ ನ ತುಷ್ಯನ್ತಿ ಜನ್ತವಃ ॥೩೮॥

ಟೀ ॥ ತಾವತಾ-ಅಷ್ಟರಲ್ಲಿಯೇ, ತಂ-ಆ ಜೀವಂಧರಕುಮಾರನನ್ನು, ಸಮೀ ಪಾಪ್ಯ-ಸಮೀಪವನ್ನು ಹೊಂದಿ, ಕೋಪಿ-ಒಬ್ಬಪುರುಷನು, ಪ್ರಣತ(ಸ್ಸನ್)- ನಮ ಸ್ಕರಿಸುವಂಥವನಾಗಿ, ಪಿಪ್ರಿಯೇ-ಸಂತೋಷಿಸಿದನು., ಸ್ವಮನೀಷಿತನಿಷ್ಪತ್ತೌ (ಸತ್ಯಾಂ)–ತಮ್ಮ ಇಷ್ಟಾರ್ಥಸಿದ್ಧಿಯಾಗುತ್ತಿರಲಾಗಿ, ಜಂತವಃ-ಪ್ರಾಣಿಗಳು, ನ ತುಷ್ಯಂತಿಕಿಂ–ಸಂತೋಷಿಸುವುದಿಲ್ಲವೇ ಏನು ?.

ತಾತ್ಪರ್ಯ ॥ ಅಷ್ಟರಲ್ಲಿಯೇ ಒಬ್ಬ ಪುರುಷನು ಜೀವಂಧರಕುಮಾ ರನ ಸಮೀಪವನ್ನು ಹೊಂದಿ, ನಮಸ್ಕರಿಸಿ ಸಂತೋಷಿಸಿದನು. ತನ್ನ ಇಷ್ಟಸಿದ್ಧಿಯಾಗುತ್ತಲಿರಲಾಗಿ ಪ್ರಾಣಿಗಳು ಸಂತೋಷಿಸುವುದು ಸ ಹಜವಷ್ಟೆ ? ॥೩೮॥

ಶ್ಲೋಕ॥ ಸ್ವಾಮೀ ತು ತಂ ಸಮಾಲೋಕ್ಯ
ಕಸ್ತ್ವಮಾರ್ಯೇತಿ ಪೃಷ್ಟವಾನ್ ।
ಪ್ರಭೂಣಾಂ ಪ್ರಾಭವಂನಾಮ
ಪ್ರಣತೇಷ್ವೇಕರೂಪತಾ ॥೩೯॥

ಟೀ ॥ ಸ್ವಾಮೀತು-ಜೀವಂಧರಸ್ವಾಮಿಯಾದರೋ, ತಂ- ಆ ಪುರುಷನನ್ನು, ಸಮಾಲೋಕ್ಯ-ನೋಡಿ, ಹೇ-ಆರ್ಯ, ಎಲೈಪೂಜ್ಯನೇ !, ತ್ವಂ-ನೀನು, ಕಃ-ಯಾರು? ಇತಿ-ಈ ಪ್ರಕಾರ, ಪೃಷ್ಟವಾನ್-ಪ್ರಶ್ನೆಯನ್ನು ಮಾಡಿದನು., ಪ್ರಣತೇಷು-ನಮ್ರ ರಾದವರಲ್ಲಿ, ಏಕರೂಪತಾ-ಒಂದೇಪ್ರಕಾರವಾಗಿರೋಣವು, ಪ್ರಭೂಣಾಂ- ರಕ್ಷಕ ರಾದ ಪ್ರಭುಗಳಿಗೆ, ಪ್ರಾಭವಂನಾಮ-ಪ್ರಭುತ್ವವೆನಿಸುತ್ತದೆಯಲ್ಲವೆ?.

ತಾತ್ಪರ್ಯ ॥ ಜೀವಂಧರಸ್ವಾಮಿಯಾದರೋ ನಮಸ್ಕರಿಸಿದ ಆ ಮನುಷ್ಯನನ್ನು ನೋಡಿ, ಎಲೈ ಪೂಜ್ಯನೇ! ನೀನುಯಾರು? ಎಂದು ಕೇಳಿದನು. ತಮ್ಮಲ್ಲಿ ನಮ್ರರಾದವರೊಳಗೊಂದೇವಿಧವಾಗಿರುವಿಕೆಯೇ ಅ ಲ್ಲವೆ ಪ್ರಭುಗಳ ಪ್ರಭುತ್ವವೆಂಬುದು? ॥೩೯॥

ಶ್ಲೋಕ ॥ ಪೃಷ್ಟಸ್ಸೋಽಪ್ಯುತ್ತರಂ ವಕ್ತು-
ಮುಪಾದತ್ತ ಕೃತತ್ವರಃ ।
ಸವಿಹಿತೇಽಪಿ ಸಾಹಾಯ್ಯೇ
ಪ್ರಯತ್ನೋ ಹಿ ಪ್ರಕೃಷ್ಯತೇ ॥೪೦॥

ಟೀ ॥ ಪೃಷ್ಟಃ-ಪ್ರಶ್ನೆಮಾಡಲ್ಪಟ್ಟ, ಸೋಽಪಿ-ಆ ಜೀವಂಧರಸ್ವಾಮಿಗೆ ನಮಸ್ಕರಿಸಿದಪುರುಷನೂಕೂಡ, ಕೃತತ್ವರ(ಸ್ಸನ್)- ಕೃತ-ಮಾಡಲ್ಪಟ್ಟ, ತ್ವರ(ಸ್ಸನ್)-ತ್ವರೆಯುಳ್ಳವನಾಗಿ, ಉತ್ತರಂ-ಉತ್ತರವನ್ನು, ವಕ್ತುಂ- ಹೇಳಲೋಸುಗ, ಉಪಾದತ್ತ-ಪ್ರಾರಂಭಿಸಿದನು., ಸವಿಹಿತೇಽಪಿ-ತನಗಿಷ್ಟವಾದ ಕಾರ್ಯದಲ್ಲಿಯೂ, ಸಾಹಾಯ್ಯೇ-ಸಹಾಯಕೃತ್ಯವಂ ಮಾಡೋಣವರಲ್ಲಿ, ಪ್ರಯತ್ನಃ-ಪ್ರಯತ್ನವು, ಪ್ರಕೃಷ್ಯತೇಹಿ - ವಿಶೇಷವಾಗಿ ಮಾಡಲ್ಪಡುತ್ತದಲ್ಲವೆ?.

ತಾತ್ಪರ್ಯ ॥ ಪ್ರಶ್ನೆಮಾಡಲ್ಪಟ್ಟು, ಜೀವಂಧರಸ್ವಾಮಿಗೆ ನಮಸ್ಕರಿಸಿ ನಿಂತಿರುವ ಆ ಪುರುಷನೂಕೂಡ ಬಹಳತ್ವರೆಯಿಂದ ಉತ್ತರವಂ ಹೇಳಲಾರಂಭಿಸಿದನು. ಲೋಕದಲ್ಲಿ ಜನಗಳು ತನಗಿಷ್ಟವಾದ ಕೆಲಸದಲ್ಲಿಯೂಕೂಡ ಸಹಾಯವನ್ನು ವಿಶೇಷವಾಗಿಯೇ ಮಾಡುತ್ತಾರಲ್ಲವೆ? ಆದುದರಿಂದಭೃತ್ಯನು ಆದರದಿಂದಹೇಳಲುಪ್ರಯತ್ನಿಸಿದನು. ॥೪೦॥

ಶ್ಲೋಕ ॥ ಇಹ ಕ್ಷೇಮಪುರೀನಾಮ
ರಾಜಧಾನೀ ವಿರಾಜತೇ ।
ನರಪತಿಸ್ತು ದೇವಾಂತೋ
ರಾಜಾ ತತ್ಪುರನಾಯಕಃ ॥ ೪೧ ॥

ಟೀ ॥ ಇಹ-ಇಲ್ಲಿ, ಕ್ಷೇಮಪುರೀನಾಮ-ಕ್ಷೇಮಪುರಿಎಂದು ಪ್ರಸಿದ್ಧವಾದ, ರಾಜಧಾನೀ-ಪಟ್ಟಣವು, ವಿರಾಜತೇ-ಪ್ರಕಾಶಿಸುತಲಿವೆ., ದೇವಾಂತಃ-ದೇವಾಂತನೆಂಬ, ನರಪತಿಸ್ತು ಧೊರೆಯಾದರೋ, ತತ್ಪುರನಾಯಕಃ-ಆ ಕ್ಷೇಮಪುರೀ ಪರಿಪಾಲಕನಾದ, ರಾಜಾ-ರಾಜನು.

ತಾತ್ಪರ್ಯ ॥ ಇಲ್ಲಿ, ಕ್ಷೇಮಪುರಿಯೆಂಬ ಒಂದುಪಟ್ಟಣವು ಪ್ರಕಾಶಿ

ಗಾತ್ತಿರುವುದು. ಆ ಪಟ್ಟಣಕ್ಕೆ ದೇವಾಂತಕನೆಂದು ನಾಮಧೇಯವುಳ್ಳ ಓರ್ವ ರಾಜನಿರುವನು. ॥೪೧॥

ಶ್ಲೋಕ ॥ ತಸ್ಯ ಶ್ರೇಷ್ಠಿಪದಪ್ರಾಪ್ತ-
ಸ್ಸುಭದ್ರಸ್ತಸ್ಯ ಗೇಹಿನೀ ।
ನಾಮ್ನಾ ತು ನಿರ್ವೃತಿಃಪುತ್ರೀ
ಕ್ಷೇಮಶ್ರೀರಿತ್ಯಭೂತ್ತಯೋಃ ॥ ೪೨ ॥

ಟೀ ॥ ತಸ್ಯ-ಆ ರಾಜನಿಗೆ, ಶ್ರೇಷ್ಠಿಪದಪ್ರಾಪ್ತಃ-ಶ್ರೇಷ್ಠಿ-ಶ್ರೇಷ್ಠಿಯ, ಪದ-ಸ್ಥಾನವನ್ನು, ಪ್ರಾಪ್ತಃ-ಹೊಂದಿರುವಂಥಾವನು, ಸುಭದ್ರಃ- ಸುಭದ್ರನೆಂದು ನಾಮಧೇಯವುಳ್ಳವನು., ತಸ್ಯ-ಆವನಿಗೆ, ಗೇಹಿನೀ-ಪತ್ನಿಯಾದವಳು., ನಾಮ್ನಾತು-ಹೆಸರಿನಿಂದಲಾದರೋ, ನಿರ್ವೃತಿಃ-ನಿರ್ವೃತಿ ಎಂಬುವಳು., ತಯೋಃ - ಅವರಿಬ್ಬರಿಗೂ, ಕ್ಷೇಮಶ್ರೀಃ-ಕ್ಷೇಮಶ್ರೀಎಂಬ, ಪುತ್ರೀ-ಮಗಳು. ಅಭೂತ್-ಉಂಟಾದಳು.

ತಾತ್ಪರ್ಯ ॥ ಆ ದೇವಾಂತಮಹಾರಾಜನಿಗೆ ಸುಭದ್ರಶ್ರೇಷ್ಠಿಯೆಂಬ ವೈಶ್ಯನು ಮಿತ್ರನಾಗಿರುವನು. ಆ ಶ್ರೇಷ್ಠಿಗೆ ಹೆಸರಿನಿಂದಲೇ ನಿರ್ವೃತಿಯೆಂಬುವಳುಪತ್ನಿಯಾಗಿರುವಳು. ಆ ಸುಭದ್ರ ನಿರ್ವೃತಿಯರಿಗೆ ಕ್ಷೇಮಶ್ರೀಎಂಬ ಮಗಳಿರುವಳು. ॥೪೨॥

ಶ್ಲೋಕ ॥ ಜನ್ಮಲಗ್ನೇ ಚ ದೈವಜ್ಞಾ-
ಸ್ತತ್ಪತಿಂ ತಮಜೀಗಣ್ ।
ಸ್ವಯಂ ವಿಘಟಿತದ್ವಾರೋ
ಯೇನಾಯಂ ಸ್ಯಾಜ್ಜಿನಾಲಯಃ ॥ ೪೩ ॥

ಟೀ ॥ ಅಯಂಜಿನಾಲಯಃ-ಈ ಜಿನಚೈತ್ಯಾಲಯವು, ಯೇನ-ಯಾವಪುರುಷನಿಂದ, ಸ್ವಯಂ-ತಾನೇ, ವಿಘಟಿತದ್ವಾರ(ಸ್ಸನ್)- ವಿಘಟಿತ-ತೆಗೆಯಲ್ಪಟ್ಟ, ದ್ವಾರ(ಸ್ಸನ್)-ಬಾಗಿಲುಳ್ಳದ್ದಾಗಿ, ಸ್ಯಾತ್-ಆದೀತೋ, ತಂ-ಆ ಪುರುಷನನ್ನು, ದೈವಜ್ಞಾಃ-ಜ್ಯೋತಿಶ್ಶಾಸ್ತ್ರಪಂಡಿತರು, ತತ್ಪತಿಂ(ಸನ್ತಂ)-ಆ ಕ್ಷೇಮಶ್ರೀಯ ಗಂಡನನ್ನಾಗಿ, ಜನ್ಮಲಗ್ನೇ-ಜನನಕಾಲದಲ್ಲಿಯೂ, ಅಜೀಗಣನ್-ತಿಳಿಸಿದ್ದರು.

ತಾತ್ಪರ್ಯ॥ ಈ ಜಿನ ಚೈತ್ಯಾಲಯವು ಯಾವ ಪುರುಷನಿಂದ ಬಾ
ನಾಗಿಯೇ ತೆಗೆಯಲ್ಪಟ್ಟ ಬಾಗಿಲುಳ್ಳದ್ದಾಗುವದೋ, ಅಂಥಾ ಪುರುಷನು ಈ ಕ್ಷೇಮಶ್ರೀಗೆ ಪತಿಯಾಗುವನೆಂದು ಇವಳ ಜನನಕಾಲದಲ್ಲಿಯೇ ಜ್ಯೋತಿಶ್ಶಾಸ್ತ್ರಜ್ಞರು ಹೇಳಿದರು. ॥೪೩॥

ಶ್ಲೋಕ॥ ತತ್ಪರೀಕ್ಷಾಕೃತೇತ್ರೈವ
ಗುಣಭದ್ರಸಮಾಹ್ವಯಃ ।
ಶ್ರೇಷ್ಠಿನಾಹಂ ಪ್ರೇರಿತಸ್ತಿಷ್ಠನ್
ಭವಂತಂ ದೃಷ್ಟವಾನಿತಿ ॥ ೪೪ ॥

ಟೀ॥ ತತ್ಪರೀಕ್ಷಾಕೃತೇ-ಅವನ ಪರೀಕ್ಷೆಗೋಸುಗ, ಅತ್ರೈವ-ಇಲ್ಲಿಯೇ, ಗುಣಭದ್ರಸಮಾಹ್ವಯಃ-ಗುಣಭದ್ರನೆಂಬ ನಾಮಧೇಯವುಳ್ಳ, ಶ್ರೇಷ್ಠಿಃ ಭೃತ್ಯನಾದ, ಅಹಂ-ನಾನು, ಪ್ರೇರಿತ(ಸ್ಸನ್)-ಆಜ್ಞಾಪಿಸಲ್ಪಟ್ಟವನಾಗಿ, ತಿಷ್ಠನ್(ಸನ್)-ಇರುವವನಾಗಿ, ಭವಂತಂ-ನಿನ್ನನ್ನು, ದೃಷ್ಟವಾನ್-ನೋಡಿದೆನು, ಇತಿ-ಈಪ್ರಕಾರ, ಅವೋಚತ್-ಹೇಳಿದನು.

ತಾತ್ಪರ್ಯ॥ ಅವನನ್ನು ಪರೀಕ್ಷಿಸಲೋಸುಗ ಆ ಸುಭದ್ರಶ್ರೇಷ್ಠಿಯಿಂದ ಕಾವಲುಗಾರನಾಗಿ ಆಜ್ಞಾಪಿಸಲ್ಪಟ್ಟು ಇಲ್ಲಿಯೇ ಇರುತ್ತಿದ್ದ ಗುಣಭದ್ರನೆಂದು ನಾಮಧೇಯವುಳ್ಳ ನಾನು ತಮ್ಮನ್ನು ನೋಡಿದೆನು; ಎಂಬದಾಗಿ ಆ ಜೀವಂಧರಕುಮಾರನಂ ಕುರಿತು ಆ ಭೃತ್ಯನು ಹೇಳಿದನು.

ಶ್ಲೋಕ॥ ಇತ್ಯುಕ್ತ್ವಾ ಸಪುನರ್ನತ್ವಾ
ಗತ್ವಾ ಸತ್ವರಮಾತ್ಮನಃ ।
ಸ್ವಾಮಿನೇ ಸ್ವಾಮಿವೃತ್ತಾಂತ-
ಮಮುಂಪ್ರೀತಿರಬ್ರವೀತ್ ॥ ೪೫ ॥

ಟೀ॥ ಸಪುನಃ-ಆ ಶ್ರೇಷ್ಠಿಯ ಭೃತ್ಯನಾದವನೋ, ಇತಿ-ಈಪ್ರಕಾರ, ಉಕ್ತ್ವಾ-ಹೇಳಿ, ನತ್ವಾ-ನಮಸ್ಕರಿಸಿ, ಸತ್ವರಂ(ಯಥಾತಥಾ)-ತ್ವರೆಯೊಡನೆ ಕೂಡಿರೋಣ ಹೇಗೋಹಾಗೆ, ಗತ್ವಾ-ಹೋಗಿ, ಆತ್ಮನಃ-ತನ್ನ, ಸ್ವಾಮಿನೇ-ಯಜಮಾನನಾದ ಸು

ಭದ್ರಶ್ರೇಷ್ಠಿಗೋಸುಗ, ಸ್ವಾಮಿವೃತ್ತಾಂತಂ-ಸ್ವಾಮಿ-ಜೀವಂಧರಸ್ವಾಮಿಯ, ವೃತ್ತಾಂತಂ-ಸಮಾಚಾರವನ್ನು, ಅಮಂದಪ್ರೀತಿ(ಸ್ಸನ್)-ಅಧಿಕಸಂತೋಷವುಳ್ಳವನಾಗಿ, ಅಬ್ರವೀತ್-ಹೇಳಿದನು.

ತಾತ್ಪರ್ಯ ॥ ಆ ಗುಣಭದ್ರನೆಂಬ ಸುಭದ್ರಶ್ರೇಷ್ಠಿಯ ಭೃತ್ಯನಾದರೋ, ಜೀವಂಧರಸ್ವಾಮಿಯನ್ನು ಕುರಿತು ಈ ಪೂರ್ವೋಕ್ತಪ್ರಕಾರವಾಗಿ ಹೇಳಿ, ನಮಸ್ಕರಿಸಿ, ಶೀಘ್ರವಾಗಿ ಹೋಗಿ, ತನ್ನ ಸ್ವಾಮಿಯಾದ ಸುಭದ್ರಶ್ರೇಷ್ಠಿಯಂ ಕಂಡು ಜೀವಂಧರಸ್ವಾಮಿಯ ವೃತ್ತಾಂತವನ್ನು ಬಹಳ ಪ್ರೀತಿಯುಳ್ಳವನಾಗಿ ಹೇಳಿದನು. ॥೪೫॥

ಶ್ಲೋಕ॥ ಭದ್ರವಾರ್ತಾಂ ತತಶ್ಶೃಣ್ವನ್
ಸುಭದ್ರೋಽಪಿ ಸಮಾಗತಃ ।
ತತ್ಕ್ಷಣೇ ಚ ತಮದ್ರಾಕ್ಷೀ-
ಜ್ಜಿನಪೂಜಾಕೃತಕ್ಷಣಮ್ ॥ ೪೬ ॥

ಟೀ ॥ ಭದ್ರವಾರ್ತಾಂ-ಭದ್ರ-ಮಂಗಳಕರವಾದ, ವಾರ್ತಾಂ- ಸಮಾಚಾರವನ್ನು, ಶೃಣ್ವನ್-ಕೇಳುತಲಿರುವ, ಸುಭದ್ರೋಽಪಿ-ಸುಭದ್ರಶ್ರೇಷ್ಠಿಯೂಕೂಡ, ತತಃ-ಅನಂತರದಲ್ಲಿ, ಸಮಾಗತಃ-ಬಂದನು., ತತ್ಕ್ಷಣೇ ಚ- ಆಕ್ಷಣದಲ್ಲಿಯೂ, ಜಿನಪೂಜಾಕೃತಕ್ಷಣಂ-ಅರ್ಹತ್ಪರಮೇಶ್ವರಪೂಜಾಸಕ್ತನಾಗಿರುವ, ತಂ-ಆ ಜೀವಂಧರಸ್ವಾಮಿಯನ್ನು, ಅದ್ರಾಕ್ಷೀತ್-ಕಂಡನು.

ತಾತ್ಪರ್ಯ ॥ ಮಂಗಳಕರವಾದ ಆ ವೃತ್ತಾಂತವಂ ಕೇಳಿ, ಸುಭದ್ರಶ್ರೇಷ್ಠಿಯೂ ಅಲ್ಲಿಗೆ ಬಂದನು. ಆ ಕ್ಷಣದಲ್ಲಿ ಅರ್ಹತ್ಪರಮೇಶ್ವರ ಪೂಜಾನಿರತನಾಗಿ ತದೇಕಾಯತ್ತಚಿತ್ತನಾಗಿರುವ ಜೀವಂಧರಕುಮಾರನನ್ನೂ ನೋಡಿದನು. ॥೪೬॥

ಶ್ಲೋಕ ॥ ನ ಗಾತ್ರಮಾತ್ರಮದ್ರಾಕ್ಷೀ-
ದ್ವೈಭವಂ ಚಾಸ್ಯ ವೈಶ್ಯರಾಟ್ ।

ಸೌಗಂಧಿಕಸ್ಯ ಸೌಗಂಧ್ಯಂ
ಶಪಥಾತ್ಕಿಂ ಪ್ರತೀಯತೇ ॥ ೪೨ ॥

ಟೀ ॥ ವೈಶ್ಯರಾಟ್-ವೈಶ್ಯಶ್ರೇಷ್ಠನಾದ ಸುಭದ್ರಶ್ರೇಷ್ಠಿಯು, ಅಸ್ಯ - ಈ ಜೀವಂಧರಕುಮಾರನ, ಗಾತ್ರಮಾತ್ರಂ - ಶರೀರಮಾತ್ರವನ್ನು, ನಾದ್ರಾಕ್ಷೀತ್-ನೋಡಲಿಲ್ಲವು., ವೈಭವಂಚ-ಮಹಿಮೆಯನ್ನುಕೂಡ, ಅದ್ರಾಕ್ಷೀತ್-ನೋಡಿದನು. ಸೌಗಂಧಿಕಸ್ಯ-ಕಮಲದ, ಸೌಗಂಧ್ಯಂ-ಪರಿಮಳವು, ಶಪಥಾತ್ - ಆಣೆಯಿಡೋಣ ದರಪೆಸೆಯಿಂದ, ಪ್ರತೀಯತೇಕಿಂ-ತೋರುತ್ತಲಿದೆಯೇ ಏನು ?.

ತಾತ್ಪರ್ಯ ॥ ಸುಭದ್ರಶ್ರೇಷ್ಠಿಯು ಜೀವಂಧರಕುಮಾರನ ಶರೀರ ಮಾತ್ರವನ್ನೇ ನೋಡಲಿಲ್ಲವು. ಆಕಾರದರ್ಶನ ಮಾತ್ರದಿಂದಲೇ ಅವನ ಮಾಹಾತ್ಮ್ಯವನ್ನು ಕೂಡ ತಿಳಿದನು. ಸೌಗಂಧಿಕವೆಂಬ ಕಮಲದಪರಿ ಮಳವು ತಾನೇಪ್ರಸರಿಸುವುದೇ ಹೊರತು ಶಪಥಮಾಡೋಣದರಿಂದ ಪ್ರಸ ರಿಸುವುದಿಲ್ಲವಷ್ಟೆ? ॥ ೪೨॥

ಶ್ಲೋಕ ॥ ಇಜ್ಯಾಂತೇಭೂದ್ಯಥಾಯೋಗ್ಯ-
ಮುಪಚಾರಃ ಪರಸ್ಪರಮ್ ।
ಸತಾಂ ಹಿ ಪ್ರಶ್ರಿತಾ ಶಾಸ್ತಿ
ಶಾಲೀನಾಮಿವ ಪಕ್ವತಾಮ್ ॥೪೮॥

ಟೀ ॥ ಇಜ್ಯಾಂತೇ-ಇಜ್ಯಾ-ಪೂಜೆಯ, ಅಂತೇ-ಅವಸಾನದಲ್ಲಿ, ಪರಸ್ಪರಂ- ಒಬ್ಬರಿಗೊಬ್ಬರಿಗೆ, ಯಥಾಯೋಗ್ಯಂ-ಯೋಗ್ಯತಾನುಸಾರವಾಗಿ, ಉಪಚಾರಃ-ಉಪಚಾರವು, ಅಭೂತ್-ಉಂಟಾಯಿತು., ಸತಾಂ-ಸತ್ಪುರುಷರಿಗೆ, ಪ್ರಶ್ರಿತಾ-ವಿನಯ ಗುಣವು, (ಬಗ್ಗಿರೋಣವು), ಶಾಲೀನಾಮಿವ - ಭತ್ತದಪೈರುಗಳಿಗೋಪಾದಿಯಲ್ಲಿ, ಪಕ್ವತಾಂ- ಬಲಿತು ಕಣ್ಣಾಗಿರೋಣವನ್ನು ( ಒಳ್ಳೇ ಹೃದಯಪರಿಪಾಕವನ್ನು ), ಶಾಸ್ತಿಹಿ-ತಿಳಿಯಪಡಿಸುತ್ತೆಯಲ್ಲವೆ? (ಸೂಚಿಸುತ್ತದೆಯಲ್ಲವೆ?).

ತಾತ್ಪರ್ಯ ॥ ಜಿನಪೂಜಾನಂತರದಲ್ಲಿ ಜೀವಂಧರಕುಮಾರನಿಗೂ, ಸುಭದ್ರಶ್ರೇಷ್ಠಿಗೂ ಪರಸ್ಪರವಾಗಿ ಯೋಗ್ಯತಾನುಸಾರ ಪ್ರಥಮಪರಿಚ ಯಾನುಗುಣವಾದ ಉಪಚಾರವು ನಡೆದುದು. ಸತ್ಪುರುಷರಿಗೆ ವಿನಯ

ಗುಣವು ಅವರ ಹೃದಯ ಪರಿಪಾಕವನ್ನು ತಿಳಿಸುವುದು. ಅದು ಹೇಗೆಂದರೆ-ಛತ್ತ್ರದ ಪೈರು ಬಲಿತು ಹಣ್ಣಾದರಲ್ಲವೆ ಬಗ್ಗುವುದು ? ಹೀಗೆ ಸಂಪತ್ಪರಿಪೂರ್ಣರಾದ ಸತ್ಪುರುಷರು ವಿನೀತರಾಗಿ ಪರೋಪಕಾರಶೀಲರಾಗುವರೇ ಹೊರತು ತಮ್ಮ ಐಶ್ವರ್ಯ ಸಮೃದ್ಧಿಯಿಂದ ಗರ್ವಪಡುವುದಿಲ್ಲವು॥

ಶ್ಲೋಕ॥ ತದ್ವೇಶ್ಮ ತಸ್ಯ ನಿರ್ಬಂಧಾ-
ದಥ ಬಂಧುಪ್ರಿಯೋ ಗತಃ ।
ಸಖ್ಯಂ ಸಾಪ್ತಪದೀನಂ ಹಿ
ಲೋಕೇ ಸಂಭಾವ್ಯತೇ ಸತಾಮ್ ॥ ೪೯ ॥

ಟೀ ॥ ಅಥ-ಅನಂತರದಲ್ಲಿ, ಬಂಧುಪ್ರಿಯಃ-ಬಂಧುಗಳಲ್ಲಿ ಪ್ರೀತಿಶಾಲಿಯಾದ ಜೀವಂಧರಕುಮಾರನು, ತಸ್ಯ-ಆ ಸುಭದ್ರಶ್ರೇಷ್ಠಿಯ, ನಿರ್ಬಂಧಾತ್- ನಿರ್ಬಂಧದ ದೆಸೆಯಿಂದ, ತದ್ವೇಶ್ಮ- ತತ್-ಅವನ, ವೇಶ್ಮ- ಗೃಹವನ್ನು, ಗತಃ - ಹೊಂದಿದನು., ಲೋಕೇ-ಲೋಕದಲ್ಲಿ, ಸತಾಂ-ಸತ್ಪುರುಷರಿಗೆ, ಸಖ್ಯಂ-ಸ್ನೇಹವು, ಸಾಪ್ತಪದೀನಂ (ಸತ್)- ಏಳು ಹೆಜ್ಜೆಗಳು ಸಂಗಡ ಬರೋಣ ಮಾತ್ರದಿಂದಲೇ ಉಂಟಾಗುವಂಥಾದ್ದಾಗಿ, ಸಂಭಾವ್ಯತೇ ಹಿ-ತಿಳಿಯಲ್ಪಡುತ್ತಲಿದೆಯಷ್ಟೆ?.

ತಾತ್ಪರ್ಯ ॥ ಅನಂತರದಲ್ಲಿ ಬಂಧುಗಳೊಳು ಅತ್ಯಂತಪ್ರಿಯನಾದ ಜೀವಂಧರಕುಮಾರನು, ಆ ಸುಭದ್ರಶ್ರೇಷ್ಠಿಯ ನಿರ್ಬಂಧದ ದೆಸೆಯಿಂದ ಆತನ ಗೃಹವನ್ನು ಹೊಂದಿದನು. ಸತ್ಪುರುಷರಿಗೆ ಸ್ನೇಹವು ಏಳು ಹೆಜ್ಜೆಗಳು ಅವರಕೂಡ ಬಂದಮಾತ್ರಕ್ಕೇನೇ ಉಂಟಾಗುವುದೆಂದು ಪ್ರಸಿದ್ಧವಲ್ಲವೆ? ॥೪೯॥

ಶ್ಲೋಕ॥ ಕನ್ಯಾಯಾಃ ಕರಪೀಡಾಂ ಚ
ತದ್ದೈನ್ಯಾದನ್ವಮನ್ಯತ ।
ಆಶ್ರಯಂತೀಂ ಶ್ರಿಯಂ ಕೋ ವಾ
ಪಾದೇನ ಭುವಿ ತಾಡಯೇತ್ ॥ ೫೦ ॥

ಟೀ ॥ (ಸಃ-ಆ ಜೀವಂಧರ ಕುಮಾರನು,) ಕನ್ಯಾಯಾಃ-ಕನ್ನಿಕೆಯ, ಕರಪೀಡಾಂಚ-ವಿವಾಹವನ್ನು ಕೂಡ, ತದ್ದೈನ್ಯಾತ್-ಆ ಸುಭದ್ರಶ್ರೇಷ್ಠಿಯ ಪ್ರಾರ್ಥನೆ

ಯದೆಸೆಯಿಂದ, ಅನ್ವಮನ್ಯತ-ಸಮ್ಮತಿಸಿದನು., ಆಶ್ರಯನ್ತೀಂ-ತಾನಾಗಿಆಶ್ರಯಿಸುತ್ತಿರುವ, ಶ್ರಿಯಂ-ಲಕ್ಷ್ಮಿಯನ್ನು, ಭುವಿ-ಭೂಮಿಯಲ್ಲಿ, ಕೋವಾ-ಯಾವಪುರುಷನುತಾನೆ, ಪಾದೇನ-ಕಾಲಿನಿಂದ, ತಾಡಯೇತ್-ಒದೆಯುವನು ?.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಕುಮಾರನು ಆ ಸುಭದ್ರಶ್ರೇಷ್ಠಿಯು ವಿಶೇಷವಾಗಿ ದೀನಭಾವದಿಂದ ಪ್ರಾರ್ಥಿಸಿದನಾದಕಾರಣ ಅವನ ಕನ್ನಿಕೆಯನ್ನು ವಿವಾಹಮಾಡಿಕೊಳ್ಳಲು ಒಪ್ಪಿಕೊಂಡನು. ಲೋಕದಲ್ಲಿ ತಾನಾಗಿಯೇ ಬಂದು ಆಶ್ರಯಿಸುತ್ತಿರುವ ಲಕ್ಷ್ಮಿಯನ್ನು ಯಾವಪುರುಷನುತಾನೇ ಕಾಲಿನಿಂದ ಒದೆಯುವನು? ॥೫೦॥

ಶ್ಲೋಕ ॥ ಅಥ ಭದ್ರತರೇ ಲಗ್ನೇ
ಸುಭದ್ರೇಣ ಸಮರ್ಪಿತಾಮ್ ।
ಕ್ಷೇಮಶ್ರಿಯಂ ಪವಿತ್ರೋಯ-
ಮುಪಯೇಮೇ ಯಥಾವಿಧಿ ॥ ೫೧ ॥

ಟೀ ॥ ಅಥ-ಅನಂತರದಲ್ಲಿ, ಭದ್ರತರೇ-ಅತ್ಯಂತಮಂಗಳಕರವಾದ, ಲಗ್ನೇ-ಲಗ್ನದಲ್ಲಿ, ಸುಭದ್ರೇಣ-ಸುಭದ್ರನಿಂದ, ಸಮರ್ಪಿತಾಂ-ಕೊಡಲ್ಪಟ್ಟ, ಕ್ಷೇಮಶ್ರಿಯಂ-ಕ್ಷೇಮಶ್ರೀಎಂಬುವಳನ್ನು, ಅಯಂಪವಿತ್ರಃ- ಈ ಪವಿತ್ರಕುಮಾರನು, ಯಥಾವಿಧಿ-ಶಾಸ್ತ್ರೋಕ್ತಪ್ರಕಾರ, ಉಪಯೇಮೇ-ವಿವಾಹಮಾಡಿಕೊಂಡನು.

ತಾತ್ಪರ್ಯ ॥ ಅನಂತರದಲ್ಲಿ ಅತ್ಯಂತ ಮಂಗಳಕರವಾದ ಲಗ್ನದೊಳು ಸುಭದ್ರಶ್ರೇಷ್ಠಿಯಿಂದ ಕೊಡಲ್ಪಟ್ಟ ಕ್ಷೇಮಶ್ರೀಯನ್ನು ಈ ಪವಿತ್ರಕುಮಾರನು ಶಾಸ್ತ್ರೋಕ್ತಪ್ರಕಾರವಾಗಿ ವಿವಾಹಮಾಡಿಕೊಂಡನು.

ಇಂತು ಜೀವಂಧರಸ್ವಾಮಿಯು ನವೋಢಳಾದ ಪದ್ಮಾದೇವಿಯೊಡನೆ ಸ್ವಲ್ಪಕಾಲ ಸುಖವನ್ನನುಭವಿಸಿ ಅಲ್ಲಿಂದ ತೀರ್ಥಯಾತ್ರಾರ್ಥವಾಗಿ ಹೊರಟು ಒಂದು ಆಶ್ರಮದಲ್ಲಿ ಪಂಚಾಗ್ನಿಮಧ್ಯ ತಪಸ್ಸಂಗ್ರೈಯುತ್ತಿರುವ ಮುನಿಗಳನ್ನು ನೋಡಿ, ಆ ಅಸತ್ತಪಸ್ಸಿನ ದೋಷಪ್ರದರ್ಶನಪೂರ್ವ

ಕವಾಗಿ ತತ್ತ್ವಮಂ ಬೋಧಿಸಿ, ಅನಂತರ ಸಹಸ್ರಕೂಟಜಿನಚೈತ್ಯಾಲಯ
ಮಂ ಹೊಂದಿ, ಭಗವಂತನಂ ಸ್ತೋತ್ರಮಾಡಲು, ಆ ದೇವಸ್ಥಾನದಬಾಗಿ
ಲು ತಾನಾಗಿಯೇ ತೆರೆದುಕೊಂಡದುದಾಗಲು, ಆಗ ಜೀವಂಧರಸ್ವಾಮಿ
ಯ ಮಾಹಾತ್ಮ್ಯಾದಿಗಳಂ ನೋಡಿ ಸಂತುಷ್ಟಾಂತರಂಗನಾದ ಸುಭದ್ರ
ಶ್ರೇಷ್ಠಿಯಿಂದತ್ಯಂತ ಪ್ರಾರ್ಥನಾಪೂರ್ವಕವಾಗಿ ಸಮರ್ಪಿಸಲ್ಪಟ್ಟ ಪುತ್ರಿ
ಯಾದ ಕ್ಷೇಮಶ್ರೀ ಎಂಬುವಳನ್ನು ವಿವಾಹಮಾಡಿಕೊಂಡನೆಂಬಿಲ್ಲಿಗೆ,

ಶ್ರೀಮದ್ವಾದೀಭಸಿಂಹಸೂರಿಎಂಬ ಮಹಾಕವಿಯಿಂ ವಿರಚಿತವಾದ
ಕ್ಷತ್ರಚೂಡಾಮಣಿ ಎಂಬ ಮಹಾಕಾವ್ಯದೊಳು
ಆರನೆಯಲಂಬಮುಗಿದುದು.





ಶ್ರೀ.

॥ ಓಂ ನಮಸ್ಸಿದ್ಧೇಭ್ಯಃ. ॥

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ,

# ಸಪ್ತಮೋಲಂಬಃ.

ಶ್ಲೋಕ॥ ಅಥ ವಧ್ವಾ ತಯಾಸಾಕ-
ಮನುಭೋಭೂಯ ಭೂಯಸೀಮ್ ।
ಸುಖತಾತಿಂ ತತೋ ಯಾತುಂ
ವಿತತಾನ ಮತಿಂ ಕೃತೀ ॥ ೧ ॥

ಟೀ॥ ಅಥ- ಅನಂತರದಲ್ಲಿ, ಕೃತೀ - ಮಹಾಪುಣ್ಯಶಾಲಿಯಾದ ಜೀವಂಧರಕುಮಾರನು, ವಧ್ವಾ-ನವೋಢಳಾದ (ನೂತನವಾಗಿ ಮದುವೆಮಾಡಿಕೊಳ್ಳಲ್ಪಟ್ಟರುವ), ತಯಾಸಾಕಂ-ಆ ಕ್ಷೇಮಶ್ರೀಯೊಡನೆಕೂಡ, ಭೂಯಸೀಂ-ಅಧಿಕವಾದ, ಸುಖತಾತಿಂ-ಸುಖವನ್ನು, ಅನುಭೋಭೂಯ-ಅನುಭವಿಸಿ, ತತಃ-ಅಲ್ಲಿಂದ, ಯಾತುಂ-ಮುಂದಕ್ಕೆ ಪ್ರಯಾಣಮಾಡಲೋಸುಗ, ಮತಿಂ-ಬುದ್ಧಿಯನ್ನು, ವಿತತಾನ-ಮಾಡಿದನು.

ತಾತ್ಪರ್ಯ॥ ಅನಂತರದಲ್ಲಿ ಆ ಮಹಾಪುಣ್ಯಶಾಲಿಯಾದ ಜೀವಂಧರ ಕುಮಾರನು ಹೊಸದಾಗಿ ವಿವಾಹ ಮಾಡಿಕೊಳ್ಳಲ್ಪಟ್ಟರೋಣದರಿಂದತಿಪ್ರಿಯಳಾದ ಆ ಕ್ಷೇಮಶ್ರೀಯೊಡನೆಕೂಡ ಅತ್ಯಂತ ಸುಖಗಳನ್ನನುಭವಿಸಿ, ಅಲ್ಲಿಂದ ಮುಂದಕ್ಕೆ ಪ್ರಯಾಣಮಾಡಲಿಚ್ಛೈಸಿದನು॥೧॥

ಶ್ಲೋಕ॥ ಅಕಥಯನ್ನಥ ಸ್ವಾಮೀ
ಗಣರಾತ್ರ್ಯಾತ್ಯಯೇ ಗತಃ ।
ನ ಹಿ ಮುಗ್ಧಾಸ್ಸತಾಂ ವಾಕ್ಯಂ
ವಿಶ್ವಸನ್ತಿ ಕದಾಚನ ॥ ೨ ॥

ಟೀ॥ ಅಥ-ಅನಂತರದಲ್ಲಿ, ಸ್ವಾಮೀ-ಜೀವಂಧರಸ್ವಾಮಿಯು, ಗಣರಾತ್ರ್ಯೇ(ಸತಿ)-ಅನೇಕ ರಾತ್ರಿಗಳು ಕಳೆಯುತ್ತಲಿರಲಾಗಿ, ಅಕಥಯನ್(ಸನ್)-ಹೇಳದೇ ಇರುವವನಾಗಿಯೇ, ಗತಃ-ಹೊರಟುಹೋದನು., ಮುಗ್ಧಾಃ-ಮೂಢರು, ಸತಾಂ-ಸತ್ಪುರುಷರ, ವಾಕ್ಯಂ-ವಚನವನ್ನು, ಕದಾಚನ-ಯಾವಕಾಲದಲ್ಲಿಯೂ, ನವಿಶ್ವಸನ್ತಿಹಿ-ನಂಬುವುದಿಲ್ಲವಷ್ಟೆ ?.

ತಾತ್ಪರ್ಯ॥ ಅನಂತರದಲ್ಲಿ ಜೀವಂಧರಸ್ವಾಮಿಯು ಅನೇಕ ರಾತ್ರಿಗಳು ಕಳೆಯುತ್ತಿರಲು, ಹೆಂಡತಿಯಾದ ಕ್ಷೇಮಶ್ರೀಯೇ ಮುಂತಾದ ಯಾವ ಬಾಂಧವಜನಗಳಿಗೂ ಹೇಳದೇ ಇರುವವನಾಗಿಹೊರಟುಹೋದನು. ಅದು ಏತಕೆಂದರೆ.-ಮೂಢರಾದವರು ಸತ್ಪುರುಷರ ಮಾತನ್ನು ಯಾವಾಗಲೂ ನಂಬುವುದಿಲ್ಲವಷ್ಟೆ ? ॥ ೧ ॥

ಶ್ಲೋಕ॥ ತದ್ವಿಯೋಗಾದಭೂತ್ಪತ್ನೀ
ದಗ್ಧರಜ್ಜುಸಮದ್ಯುತಿಃ।
ಪ್ರಾಣಾಃ ಪಾಣಿಗೃಹೀತೀನಾಂ
ಪ್ರಾಣನಾಥೋ ಹಿ ನಾಪರಃ॥ ೨॥

ಟೀ॥ ತದ್ವಿಯೋಗಾತ್-ತತ್-ಆ ಜೀವಂಧರಸ್ವಾಮಿಯ, ವಿಯೋಗಾತ್-ವಿರಹದೆಸೆಯಿಂದ, ಪತ್ನೀ-ಹೆಂಡತಿಯಾದ ಕ್ಷೇಮಶ್ರೀಯು, ದಗ್ಧರಜ್ಜುಸಮದ್ಯುತಿ(ಸ್ಸತೀ)-ದಗ್ಧ-ಸುಡಲ್ಪಟ್ಟ, ರಜ್ಜು-ಹಗ್ಗಕ್ಕೆ, ಸಮ-ಸಮಾನವಾದ, ದ್ಯುತಿ(ಸ್ಸತೀ) ಕಾಂತಿಯುಳ್ಳವಳಾಗಿ, ಅಭೂತ್-ಆದಳು., ಪಾಣಿಗೃಹೀತೀನಾಂ-ಧರ್ಮಪತ್ನಿಯರಿಗೆ, ಪ್ರಾಣನಾಥಃ-ಪತಿಯು, ಪ್ರಾಣಾಹಿ-ಪ್ರಾಣಗಳಲ್ಲವೆ?, ಅಪರಃ- ಬೇರೆಯಾದ ಮತ್ತೆಯಾವಬಂಧುವೂ, ನಹಿ-ಇಲ್ಲವಷ್ಟೆ?.

ತಾತ್ಪರ್ಯ॥ ಆ ಜೀವಂಧರ ಕುಮಾರನ ವಿರಹದ ದೆಸೆಯಿಂದ ಪತ್ನಿಯಾದ ಕ್ಷೇಮಶ್ರೀಯು ದಹಿಸಲ್ಪಟ್ಟ ಹಗ್ಗಕ್ಕೆ ಸಮಾನವಾದ ಕಾಂತಿಯುಳ್ಳವಳಾಗಿ (ವ್ಯಸನದಿಂದ ಮೈ ಕಪ್ಪಾಗಿ ವಿವರ್ಣಳಾಗಿ) ಆದಳು. ಪತಿವ್ರತಾಸ್ತ್ರೀಯರಿಗೆ ಪತಿಯೇ ಪ್ರಾಣವಲ್ಲವೆ? ಪ್ರಾಣದಂತೆ ಅತ್ಯಂತ ಪ್ರಿಯನೆಂದರ್ಥವು. ಪತಿಯಹೊರತು ಮತ್ತೆಯಾವಬಂಧುವೂ ಅಷ್ಟು ಪ್ರಿಯವಲ್ಲವೆಂದರ್ಥವು. ಪತಿವ್ರತೆಯರಿಗೆ ಪತಿಯೇ ಸಕಲಗತಿಯು. ॥ ೨ ॥

ಶ್ಲೋಕ॥ ಸುಭದ್ರೋಽಪಿ ಪವಿತ್ರಂ ತ-
ಮನ್ವಿಷ್ಯಾಧಿಮಯೋ ಭವತ್ ।
ಬಹುಯತ್ನೋಪಲಬ್ಧಸ್ಯ
ಪ್ರಚ್ಯವೋ ಹಿ ದುರುತ್ಸಹಃ ॥ ೪ ॥

ಟೀ ॥ ಸುಭದ್ರೋಽಪಿ-ಸುಭದ್ರಶ್ರೇಷ್ಠಿಯೂಕೂಡ, ಪವಿತ್ರಂ - ಪವಿತ್ರಕು ಮಾರನೆಂದು ಸುದರ್ಶನ ಯಕ್ಷನಿಂದ ಕರೆಯಲ್ಪಟ್ಟ, ತಂ-ಆ ಜೀವಂಧರಕುಮಾರನ ನ್ನು, ಅನ್ವಿಷ್ಯ-ಹುಡುಕಿ, ಆಧಿಮಯ(ಸ್ಸನ್)-ಮನೋವ್ಯಥೆಯಿಂದ ಪ್ರಚುರನಾಗಿ, ಅಭವತ್-ಆದನು., ಬಹುಯತ್ನೋಪಲಬ್ಧಸ್ಯ–ಬಹು-ಅನೇಕವಾದ, ಯತ್ನ-ಪ್ರ ಯತ್ನದಿಂದ, ಉಪಲಬ್ಧಸ್ಯ-ಪಡೆಯಲ್ಪಟ್ಟ ವಸ್ತುವಿನ, ಪ್ರಚ್ಯವಃ-ಚ್ಯುತಿಯು(ಕೈ ಬಿಟ್ಟುಹೋಗೋಣವು), ದುರುತ್ಸಹೋಹಿ-ಸಹಿಸಲಶಕ್ಯವಷ್ಟೆ ?.

ತಾತ್ಪರ್ಯ ॥ ಸುಭದ್ರಶ್ರೇಷ್ಠಿಯೂಕೂಡ ಆ ಸುದರ್ಶನ ಯಕ್ಷ ನಿಗೆ ಪರಿಶುದ್ಧಜನ್ಮವನ್ನುಂಟು ಮಾಡಿದುದರಿಂದ ಪವಿತ್ರಕುಮಾರ ನೆಂದು ಕರೆಯಲ್ಪಟ್ಟಿರುವ ಆಜೀವಂಧರಕುಮಾರನನ್ನು ಎಲ್ಲೆಲ್ಲಿಯೂ ಹುಡುಕಿ ದೊರೆಯದಕಾರಣ ಬಹಳ ಶೋಕವ್ಯಾಕುಲಚಿತ್ತನಾದನು. ಬಹುಪ್ರಯತ್ನದಿಂ ಸಂಪಾದಿಸಲ್ಪಟ್ಟವಸ್ತುವು ನಮ್ಮ ಕೈತಪ್ಪಿಹೋದರೆ ಸಹಿಸುವುದು ಬಹಳಕಷ್ಟವಲ್ಲವೆ ? ॥ ೪ ॥

ಶ್ಲೋಕ ॥ ಸ್ವಾಮೀ ಸ್ವಾಭರಣತ್ಯಾಗ-
ಮೈಚ್ಛದ್ಗಚ್ಛನ್ನತುಚ್ಛಧೀಃ ।
ವಿವೇಕ*ರೂಷಿತಾನಾಂ ಹಿ
ಭೂಷಾ ದೋಷಾಯ ಕಲ್ಪತೇ ॥ ೫ ॥

ಟೀ ॥ ಅತುಚ್ಛಧೀಃ-ಅತುಚ್ಛ-ಅಧಿಕವಾದ (ಶ್ಲಾಘನೀಯವಾದ), ಧೀಃ-ಬು ದ್ಧಿಯುಳ್ಳ, ಸ್ವಾಮೀ-ಜೀವಂಧರಸ್ವಾಮಿಯು, ಗಚ್ಛನ್(ಸನ್)-ಹೋಗುತಲಿರುವವ ನಾಗಿ, ಸ್ವಾಭರಣತ್ಯಾಗಂ–ಸ್ವ-ತನ್ನ, ಆಭರಣ-ಒಡವೆಗಳ, ತ್ಯಾಗಂ- ದಾನಮಾ ಡೋಣವನ್ನು, ಐಚ್ಛತ್-ಇಚ್ಛಿಸಿದನು., ವಿವೇಕರೂಷಿತಾನಾಂ–ವಿವೇಕ-ಹೇಯೋ ಪಾದೇಯಜ್ಞಾನವೆಂಬ ಆಭರಣದಿಂದ, ರೂಷಿತಾನಾಂ- ವ್ಯಾಪ್ತರಾದವರಿಗೆ,

---

* ಭೂಷಿತಾನಾಂ ಎಂದುಪಾಠಾಂತರವು.

(ಭೂಷಿತಾನಾಂ-ಅಲಂಕರಿಸಲ್ಪಟ್ಟವರಿಗೆ,) ಭೂಷಾ-ಆಭರಣವು, ದೋಷಾಯ-ದೋಷಕ್ಕೋಸುಗ, ಕಲ್ಪತೇಹಿ-ಆಗುವುದಲ್ಲವೆ ?.

ತಾತ್ಪರ್ಯ ॥ ಪರಮೋದಾರ ಬುದ್ಧಿಯುಳ್ಳ ಆ ಜೀವಂಧರಸ್ವಾಮಿಯು ತನ್ನ ಅನರ್ಘ್ಯವಾದ ಆಭರಣಗಳನ್ನು ಪರಿತ್ಯಜಿಸಬೇಕೆಂತಲೂ, (ಅಥವಾ) ಯಾರಿಗಾದರೂ ದಾನಮಾಡಬೇಕೆಂತಲೂ ಇಚ್ಛೈಸಿದನು. ಚೋರಾದಿಬಾಧೆಗಾಸ್ಪದವಲ್ಲದೆ ಅಪಹರಿಸಲಶಕ್ಯವಾದ ವಿವೇಕವೆಂಬ ಆಭರಣದಿಂದಲಂಕೃತರಾದವರಿಗೆ ಹಾರಕೇಯೂರಾದ್ಯಾಭರಣಗಳು ಭಾರಭೂತಗಳಾಗಿಯೂ, ಅನರ್ಥದೋಷಾಸ್ಪದವಾಗಿಯೂ, ಆಗುವುದೇ ಹೊರತು ಗುಣಕ್ಕೆ ಕಾರಣವಾಗಲಾರದಷ್ಟೆ ? ॥ ೫ ॥

ಶ್ಲೋಕ ॥ ಧಾರ್ಮಿಕಾಯ ತದಾಕಲ್ಪಂ
ದಾತುಂ ಚ ಸಮಕಲ್ಪಯತ್ ।
ಸ್ಥಾನೇ ಹಿ ಬೀಜವದ್ದತ್ತ-
ಮೇಕಂ ಚಾಪಿ ಸಹಸ್ರಧಾ ॥ ೬ ॥

ಟೀ ॥ ಸಃ-ಆ ಜೀವಂಧರಕುಮಾರನು, ಧಾರ್ಮಿಕಾಯ-ಧರ್ಮಿಷ್ಠನಿಗೋಸುಗ, ತದಾಕಲ್ಪಂ-ಆ ಆಭರಣವನ್ನು, ದಾತುಂಚ-ಕೊಡಲೋಸುಗವೂಕೂಡ, ಸಮಕಲ್ಪಯತ್-ನಿಶ್ಚಯಿಸಿದನು., ಸ್ಥಾನೇ-ಯೋಗ್ಯಸ್ಥಾನದಲ್ಲಿ (ಸತ್ಪಾತ್ರದಲ್ಲಿ, ಸುಕ್ಷೇತ್ರದಲ್ಲಿ), ದತ್ತಂ-ಕೊಡಲ್ಪಟ್ಟ ವಸ್ತುವು, ಏಕಂಚಾಪಿ- ಒಂದಾದರೂಕೂಡ, ಬೀಜವತ್-ಬೀಜದೋಪಾದಿಯಲ್ಲಿ, ಸಹಸ್ರಧಾ-ಸಾವಿರಪ್ರಕಾರವಾಗಿ, ಭವತಿಹಿ- ಆಗುತ್ತದೆಯಲ್ಲವೆ ?.

ತಾತ್ಪರ್ಯ ॥ ಜೀವಂಧರ ಕುಮಾರನು ಒಬ್ಬ ಧರ್ಮಿಷ್ಠನಾದವನಿಗೆ ತನ್ನ ಆಭರಣಗಳಂ ದಾನಕೊಡಲೋಸುಗ ಇಚ್ಛೈಸಿದನು. ಸುಕ್ಷೇತ್ರದಲ್ಲಿ ಬಿತ್ತಲ್ಪಟ್ಟ ಬೀಜವು ಒಂದಾದಾಗ್ಯೂ ಸಹಸ್ರಪ್ರಕಾರವಾಗಿ ಫಲಿಸುವಂತೆ ಸತ್ಪಾತ್ರದಲ್ಲಿ ಕೊಡಲ್ಪಟ್ಟ ದಾನವು ಅಲ್ಪವಾದಾಗ್ಯೂ, ಒಂದುಸಾವಿರವಾಗಿ ಫಲವನ್ನು ಕೊಡುವುದಲ್ಲವೆ ? ॥೬॥

ಶ್ಲೋಕ॥ ತಾವತಾ ಸನ್ನಧಾತ್ಮೋಪಿ
ಸನ್ನಿಧೇಸ್ತಸ್ಯ ಸನ್ನಿಧೌ ।

ಭಾಗಧೇಯವಿಧೇಯಾ ಹಿ
ಪ್ರಾಣಿನಾಂ ತು ಪ್ರವೃತ್ತಯಃ ॥ ೭ ॥

ಟೀ ॥ ತಾವತಾ-ಅಷ್ಟರಲ್ಲಿಯೇ, ಕೋಪಿ ಒಬ್ಬಾನೊಬ್ಬ ಪುರುಷನು, ಸನ್ನಿಧೇಃ-ಸತ್-ಸತ್ಪುರುಷರಿಗೆ, ನಿಧೇಃ-ನಿಧಿಯಾಗಿರುವ, ತಸ್ಯ-ಆ ಜೀವಂಧರಕುಮಾರನ, ಸನ್ನಿಧೌ-ಸಮೀಪದಲ್ಲಿ, ಸನ್ನ್ಯಧಾತ್-ಬಂದನು., ಪ್ರಾಣಿನಾಂ- ಪ್ರಾಣಿಗಳ, ಪ್ರವೃತ್ತಯಸ್ತು-ಪ್ರವೃತ್ತಿಗಳೋ ಎಂದರೆ, ಭಾಗಧೇಯವಿಧೇಯಾಹಿ- ಅದೃಷ್ಟಾಧೀನಗಳಾಗಿಆಗುತ್ತದೆಯಲ್ಲವೆ ?.

ತಾತ್ಪರ್ಯ ॥ ಅಷ್ಟರಲ್ಲಿಯೇ ಸತ್ಪುರುಷರಿಗೆ ನಿಧಿಯಾಗಿರುವ ಆ ಜೀವಂಧರ ಕುಮಾರನ ಸಮೀಪವಂಕುರಿತು ಒಬ್ಬ ಪುರುಷನು ಬಂದನು. ಪ್ರಾಣಿಗಳ ಪ್ರವೃತ್ತಿಗಳು ಅದೃಷ್ಟಾಧೀನವಾಗಿ ಉಂಟಾಗುವುದಲ್ಲವೆ ? (ಇವನಿಗೆ ಒಳ್ಳೇ ಅದೃಷ್ಟವಿರುವುದರಿಂದಲೇ ಆ ವೇಳೆಗೆ ಸರಿಯಾಗಿ ಹಠಾತ್ತಾಗಿ ಅಲ್ಲಿಗೆ ಬಂದನೆಂದುಭಾವವು. ) ॥ ೭ ॥

ಶ್ಲೋಕ ॥ ಆಗಚ್ಛಂತಮಪೃಚ್ಛಚ್ಚ
ಪಾಮರಂ ಪಾರ್ಶ್ವಮಾತ್ಮನಃ ।
ಕುತಃ ಕುತ್ರ ಪ್ರಯಾಸಿ ತ್ವಂ
ಸ್ವಾಸ್ಥ್ಯಂ ಚಾಸ್ತಿ ನವೇತಿ ಚ ॥ ೮ ॥

ಟೀ ॥ (ಸಃ-ಆ ಜೀವಂಧರಕುಮಾರನು,)ಆತ್ಮನಃ-ತನ್ನ, ಪಾರ್ಶ್ವಂ-ಸಮೀಪವನ್ನು ಕುರಿತು, ಆಗಚ್ಛಂತಂ-ಬರುತಲಿರುವ, ಪಾಮರಂ-ಮೂಢನಾದ ಆ ಪುರುಷನನ್ನು, ತ್ವಂ-ನೀನು, ಕುತಃ-ಎಲ್ಲಿಂದಬಂದೆ?, ಕುತ್ರ-ಎಲ್ಲಿಗೆ, ಪ್ರಯಾಸಿ - ಹೋಗುತ್ತೀಯೆ?, ಸ್ವಾಸ್ಥ್ಯಂಚ-ಸ್ವಸ್ಥಚಿತ್ತನಾಗಿರೋಣವೂಕೂಡ, ಅಸ್ತಿ-ಇದೆಯೊ?, ನವಾ- ಇಲ್ಲವೋ?, ಇತಿಚ- ಈ ಪ್ರಕಾರವಾಗಿಯೂ, ಅಪೃಚ್ಛಚ್ಚ-ಪ್ರಶ್ನೆಯನ್ನು ಕೂಡ ಮಾಡಿದನು.

ತಾತ್ಪರ್ಯ ॥ ಆ ಜೀವಂಧರಕುಮಾರನು ತನ್ನ ಸಮೀಪಕ್ಕೆ ಬಂದ ಆ ಪಾಮರಪುರುಷನನ್ನು ಕುರಿತು ನೀನು ಎಲ್ಲಿಂದಬಂದೆ ? ಎಲ್ಲಿಗೆ ಹೋಗುತ್ತೀಯೆ ? ಸ್ವಸ್ಥ ಚಿತ್ತನಾಗಿರುವೆಯೋ ಇಲ್ಲವೊ ? ಎಂಬದಾಗಿ ಪ್ರಶ್ನೆಮಾಡಿದನು. ॥ ೮ ॥

ಶ್ಲೋಕ॥ ಪ್ರೀತಃ ಪ್ರತ್ಯಬ್ರವೀತ್ಸೋಽಪಿ
ಪ್ರಶ್ರಯಿತ್ವಂ ಸಮಾಶ್ರಿತಃ।
ಮುಖದಾನಂ ಹಿ ಮುಖ್ಯಾನಾಂ
ಲಘೂನಾಮಭಿಷೇಚನಮ್ ॥ ೯ ॥

ಟೀ॥ ಸೋಽಪಿ-ಆ ಪಾಮರ ಪುರುಷನೂಕೂಡ, ಪ್ರೀತಸ್ಸನ್- ಸಂತುಷ್ಟನಾಗಿ, ಪ್ರಶ್ರಯಿತ್ವಂ-ಬಹಳ ವಿನಯವನ್ನು, ಸಮಾಶ್ರಿತ(ಸ್ಸನ್)-ಆಶ್ರಯಿಸಿದವನಾಗಿ, ಪ್ರತ್ಯಬ್ರವೀತ್-ಪ್ರತ್ಯುತ್ತರವನ್ನು ಹೇಳಿದನು., ಮುಖ್ಯಾನಾಂ- ಮಹನೀಯರಾದ ಪ್ರಧಾನಪುರುಷರ (ಗೌರವಯೋಗ್ಯರಾದ ದೊಡ್ಡ ಮನುಷ್ಯರ), ಮುಖದಾನಂ-ಮುಖ-ಮುಖವಚನದ, ದಾನಂ-ಕೊಡೋಣವು ( ಅಭಿಮುಖ್ಯದಿಂದ ಮಾತನಾಡೋಣವು), ಲಘೂನಾಂ-ಅಲ್ಪರಾದ ಪಾಮರಜನರಿಗೆ, ಅಭಿಷೇಚನಂಹಿ-ರಾಜ್ಯಾಭಿಷೇಕಕ್ಕೆ ಸಮಾನವಾಗಿ ತೋರುವುದಲ್ಲವೆ?.

ತಾತ್ಪರ್ಯ॥ ಆ ಜೀವಂಧರಸ್ವಾಮಿಯಿಂದ ಕುಶಲಪ್ರಶ್ನೆಮಾಡಲ್ಪಟ್ಟ ಆ ಪಾಮರಪುರುಷನೂಕೂಡ ಸಂತುಷ್ಟನಾಗಿ, ಬಹಳ ವಿನಯದಿಂದ ಪ್ರತ್ಯುತ್ತರವನ್ನು ಹೇಳಿದನು. ಗೌರವಯೋಗ್ಯರಾದ ದೊಡ್ಡ ಮನುಷ್ಯರು ಅಲ್ಪಮನುಷ್ಯರಾದ ಪಾಮರಜನರನ್ನು ಕುರಿತು ಅಭಿಮುಖ್ಯದಿಂದ ಪ್ರೀತಿಪೂರ್ವಕವಾಗಿ ಮಾತನಾಡಿಸಿದುದೇ ಆದರೆ ತಮಗೆ ರಾಜ್ಯಾಭಿಷೇಕವಾದಂತೆ ಆ ಪಾಮರರು ಸಂತೋಷಿಸುವರಷ್ಟೆ? ॥ ೯॥

ಶ್ಲೋಕ॥ ಇತಸ್ತತೋ ಮಯಾ ಮಹ್ಯ(ಹ್ಯಾಂ)
ಗಮ್ಯತೇ ಕಾರ್ಯಕಾಮ್ಯಯಾ।
ಸ್ವಾಸ್ಥ್ಯಂಸ್ವಾಸ್ಥ್ಯತಮಂ ಭೂಯಾ-
ತ್ಕಾರ್ಯೇಪ್ಯಾರ್ಯದೃಶೋ ಮಮ ॥ ೧೦ ॥

ಟೀ॥ ಹೇ ಮಹ್ಯ-ಎಲೈ ಪೂಜ್ಯನೇ!, ಮಯಾ-ನನ್ನಿಂದ, ಕಾಮ್ಯಯಾ- ಕೃಷಿಕೆಲಸದ ಅಪೇಕ್ಷೆಯಿಂದ, ಇತಸ್ತತಃ-ಇತ್ತತ್ತಲಾಗಿ, ಗಮ್ಯತೇ - ಸಂಚರಿಸಲ್ಪಡುತ್ತದೆ., ಆರ್ಯದೃಶಃ-ಪೂಜ್ಯರಾದ ತಮ್ಮನ್ನು ದರ್ಶನಮಾಡಿದ, ಮಮ-ನನಗೆ, ಕಾರ್ಯೇಪಿ-[ಕೃಷಿಯೇ] ಮೊದಲಾದಕೆಲಸದಲ್ಲಿಯೂಕೂಡ, ಸ್ವಾಸ್ಥ್ಯಂ- ಕ್ಷೇಮವು, ಸ್ವಾಸ್ಥ್ಯತಮಂ(ಸತ್)-ಅತ್ಯಂತ [ಕ್ಷೇಮವಾದುದಾಗಿ], [ಭೂಯಾತ್-ಆಗಲಿ].

ತಾತ್ಪರ್ಯ ॥ ಎಲೈ ಪೂಜ್ಯನೇ! ನಾನು ಜೀವನೋಪಾಯವಾದ ಕೆಲಸದ ಅಪೇಕ್ಷೆಯಿಂದ ಇತಸ್ತತಲಾಗಿ ( ಅಲ್ಲಿಇಲ್ಲಿ ) ಸಂಚರಿಸುತ್ತಲಿರುವೆನು. ಪೂಜ್ಯರಾದ ತಮ್ಮನ್ನು ದರ್ಶನಮಾಡಿದ ನನ್ನ ಕಾರ್ಯದಲ್ಲಿಯೂ ಕೂಡ ಉಂಟಾಗುವ ಕ್ಷೇಮವು ವಿಶೇಷ ಕ್ಷೇಮವಾಗಿಯೇ ಆಗಲಿ; (ಮಹಾತ್ಮರ ಸಂದರ್ಶನವು ಮಹಾಫಲಸಿದ್ಧಿಗೆ ಕಾರಣವಾದುದರಿಂದ ನನಿಗೆ ವಿಶೇಷಫಲ ಲಾಭವಾಗುತ್ತದೆಂದು ಭಾವವು.) ॥೧೦॥

ಶ್ಲೋಕ ॥ ಇತ್ಯುಕ್ತೇನ ಕುಮಾರೇಣ
ಪ್ರತ್ಯುಕ್ತೋ ವೃಷಲಃ ಪುನಃ ।
ಸ್ವಾಸ್ಥ್ಯಂ ನಾಮ ನ ಕೃಷ್ಯಾದೇ-
ರ್ಜಾಯಮಾನಂ ಕೃಷೀವಲ ॥ ೧೧ ॥

ಟೀ ॥ ಇತಿ-ಈಪ್ರಕಾರ, ಉಕ್ತೇನ-ಹೇಳಲ್ಪಟ್ಟ, ಕುಮಾರೇಣ- ಜೀವಂಧರ ಕುಮಾರನಿಂದ, ವೃಷಲಃ - ಆ ಕೃಷಿಪರನಾದ ಪಾಮರಪುರುಷನು, ಪುನಃ-ಮರಳಿ, ಪ್ರತ್ಯುಕ್ತಃ-ಪ್ರತಿಯಾಗಿ ಹೇಳಲ್ಪಟ್ಟನು., ಹೇ ಕೃಷೀವಲ- ಎಲೈ ಕೃಷಿಜೀವಿಯಾದವನೇ ! ಸ್ವಾಸ್ಥ್ಯಂನಾಮ-ಸ್ವಸ್ಥಚಿತ್ತನಾಗಿರೋಣವೆಂಬುದು ಯಾವದುಂಟೋ, ತತ್-ಅದು, ಕೃಷ್ಯಾದೇಃ-ಕೃಷಿ-ಭೂಮಿವ್ಯವಸಾಯವೇ, ಆದೀಃ-ಮೊದಲಾಗಿರುವ ಆರುಪ್ರಕಾರವಾದ ಜೀವನೋಪಾಯದ ದೆಸೆಯಿಂದ, ಜಾಯಮಾನಂ (ಸತ್)-ಉಂಟಾಗುವಂಥಾದ್ದಾಗಿ, ನ-ಆಗುವುದಿಲ್ಲವು.

ತಾತ್ಪರ್ಯ॥ ಜೀವಂಧರಸ್ವಾಮಿಯು ಕೃಷಿಜೀವಿಯಾದ ಆ ಪಾಮರ ಪುರುಷನನ್ನು ಕುರಿತು ಮರಳಿಯೂ ಹೇಳುತ್ತಾನೆ.-ಏನೆಂದರೆ,-ಎಲೈಕೃಷಿಜೀವಿಯೇ ! ಕೃಷಿಯೇ ಮೊದಲಾದ ಜೀವನೋಪಾಯಗಳಿಂದುಂಟಾಗುವ ಆತ್ಮಸುಖವು ಸ್ವಾಸ್ಥ್ಯವೆಂಬದಾಗಿ ಆಗುವುದಿಲ್ಲವು. (ಈ ಕೃಷಿಯೇ ಮೊದಲಾದ ಷಟ್ಕರ್ಮದಿಂದುಂಟಾಗುವ ಸುಖವನ್ನು ಮೂಢರು ಸುಖವೆಂದು ತಿಳಿಯುವರೇಹೊರತು ತತ್ವಜ್ಞರು ತಿಳಿಯುವುದಿಲ್ಲವೆಂದುಭಾವವು.) ಸಂಸಾರಸುಖವು ಆಭಾಸವೇ ಹೊರತು ಪರಮಾರ್ಥವಲ್ಲವೆಂದರ್ಥವು. ॥೧೧॥

ಶ್ಲೋಕ ॥ ಷಟ್ಕರ್ಮೋಪಸ್ಥಿತಂ ಸ್ವಾಸ್ಥ್ಯಂ
ತೃಷ್ಣಾಬೀಜಂ ವಿನಶ್ವರಮ್ ।
ಪಾಪಹೇತುಃ ಪರಾಪೇಕ್ಷಿ
ದುರನ್ತಂ ದುಃಖಮಿಶ್ರಿತಮ್ ॥ ೧೨ ॥

ಟೀ ॥ ಷಟ್ಕರ್ಮೋಪಸ್ಥಿತಂ- ಅಸಿ,ಮಷಿ,ಕೃಷಿ,ವಿದ್ಯಾ,ವಾಣಿಜ್ಯ, ಶಿಲ್ಪಗಳೆಂಬ ಆರು ಪ್ರಕಾರವಾದ ಜೀವನೋಪಾಯಗಳಿಂದುಂಟಾಗುವ, ಸ್ವಾಸ್ಥ್ಯಂ-ಕ್ಷೇಮವು (ಸುಖವು), ತೃಷ್ಣಾಬೀಜಂ-ಆಶೆಯೇ ಮೂಲಕಾರಣವಾದದ್ದು ( ಅತಿಕಾಂಕ್ಷೆಗೇನೆ ಕಾರಣವಾದದ್ದು)., ವಿನಶ್ವರಂ-ನಾಶವೇ ಸ್ವಭಾವವಾಗಿವುಳ್ಳದ್ದು., ಪಾಪಹೇತುಃ-ಪಾಪಕ್ಕೆ ಕಾರಣವಾದದ್ದು., ಪರಾಪೇಕ್ಷಿ - ಇತರಾಪೇಕ್ಷೆಯುಳ್ಳದ್ದು (ಪರಾಧೀನವಾದದ್ದು)., ದುರನ್ತಂ-ದುಃಖವೇ ಪರ್ಯವಸಾನದಲ್ಲಿಉಳ್ಳದ್ದು, ದುಃಖಮಿಶ್ರಿತಂ-ದುಃಖದೊಡನೆಕೂಡಿಯೇ ಇರುವುದು.

ಅ ॥ ಜೀವಂಧರಕುಮಾರನು ಪಾಮರನಿಗೆ ದಯೆಯಿಂದ ತತ್ತ್ವೋಪದೇಶವಮಾಡುತ್ತಾನೆ.

ತಾತ್ಪರ್ಯ ॥ ಅಸಿ, ಮಷಿ, ಕೃಷಿ, ವಿದ್ಯಾ, ವಾಣಿಜ್ಯ, ಶಿಲ್ಪಗಳೆಂಬಶಾಸ್ತ್ರೀಯವಾದ ಆರುವಿಧಜೀವನೋಪಾಯಕರ್ಮಗಳಿಂದುಂಟಾಗತಕ್ಕಸುಖವು ಉತ್ತರೋತ್ತರ ಆಶೆಯನ್ನು ಹೆಚ್ಚಿಸುವುದಕ್ಕೇನೇ ಕಾರಣವಾಗಿಯೂ, ಎಂದಿಗಾದರೂ ನಾಶವೇಸ್ವಭಾವವಾಗಿವುಳ್ಳದ್ದಾಗಿಯೂ, ಪಾಪಕ್ಕೆ ಕಾರಣವಾಗಿಯೂ, ಆತ್ಮನಿಗಿಂತಲೂ ಇತರವಸ್ತುವಿನ ಸಹಾಯದಿಂದಲೇ ಉಂಟಾಗತಕ್ಕದ್ದಾಗಿಯೂ, ಪರ್ಯವಸಾನದಲ್ಲಿ ದುಃಖವನ್ನೇವುಂಟುಮಾಡುವದಾಗಿಯೂ, ಅನುಭವಿಸುವ ಕಾಲದಲ್ಲಿ ಕೇವಲ ಸುಖಸ್ವರೂಪವಾಗಿಯೂ ಇಲ್ಲದೇ ,ವಿಷಮಿಶ್ರಿತಭೋಜನವಂತೆ, ದುಃಖದೊತಗೂಡಿದುದಾಗಿಯೇ ಇರುವುದರಿಂದಲೂ ಈ ಷಟ್ಕರ್ಮದಿಂದುಂಟಾಗುವ ಸುಖವನ್ನು ಕುರಿತು ಗುಣದೋಷವಿಚಾರಮಾಡುವಲ್ಲಿ ಅನೇಕ ದೋಷಾಸ್ಪದವಾಗಿ ತಿಳಿಯುಬರುವುದರಿಂದಿದುಸುಖವಲ್ಲವು॥೧೨

ಶ್ಲೋಕ॥ ಆತ್ಮೋತ್ಥಮಾತ್ಮನಾಸಾಧ್ಯ-
ಮವ್ಯಾಬಾಧಮನುತ್ತರಮ್ ।

ಅನನ್ತಂ ಸ್ವಾಸ್ಥ್ಯಮಾನಂದ-
ಮತೃಷ್ಣಮಪವರ್ಗಜಮ್ ॥ ೧೩ ॥

ಟೀ॥ಆತ್ಮೋತ್ಥಂ-ಆತ್ಮ-ಆತ್ಮನಲ್ಲಿ, ಉತ್ಥಂ-ಉಂಟಾಗತಕ್ಕದ್ದಾಗಿಯೂ, ಆತ್ಮನಾ-ತನ್ನಿಂದ, ಸಾಧ್ಯಂ- ಸಾಧಿಸಲೋಸುಗಯೋಗ್ಯವಾದುದಾಗಿಯೂ, ಅವ್ಯಾಬಾಧಂ - ಬಾಧಾರಹಿತವಾದುದಾಗಿಯೂ, ಅನುತ್ತರಂ - ಸರ್ವಶ್ರೇಷ್ಠವಾದುದಾಗಿಯೂ, ಅನನ್ತಂ-ಅಪಾರವಾದುದಾಗಿಯೂ, ಅತೃಷ್ಣಂ- ಆಶಾರಹಿತವಾದುದಾಗಿಯೂ ಇರುವ, ಅಪವರ್ಗಜಂ-ಅಪವರ್ಗ - ಮೋಕ್ಷದಲ್ಲಿ, ಜಂ - ಉಂಟಾಗತಕ್ಕ, ಆನಂದಂ-ಆನಂದಸ್ವರೂಪವಾದದ್ದು, ಸ್ವಾಸ್ಥ್ಯಂ- ಮೋಕ್ಷರೂಪವಾದ ಅನಂತ ಸುಖ ಸ್ವಾಸ್ಥ್ಯವೆಂದು ಹೇಳಲ್ಪಡುವುದು.

ತಾತ್ಪರ್ಯ ॥ (ಆತ್ಮನಲ್ಲಿ ಉಂಟಾಗತಕ್ಕದುದಾಗಿಯೂ, ಆತ್ಮನಿಂದಲೇ ಸಾಧಿಸತಕ್ಕದುದಾಗಿಯೂ, ನಿರ್ಬಾಧವಾದುದಾಗಿಯೂ, ಸರ್ವಶ್ರೇಷ್ಠವಾದುದಾಗಿಯೂ, ಅಪಾರವಾದುದಾಗಿಯೂ, ಆಶಾರಹಿತವಾದುದಾಗಿಯೂ, ಮೋಕ್ಷದಶೆಯಲ್ಲಿ ಉಂಟಾಗತಕ್ಕದಾಗಿಯೂ ಇರುವ ಆನಂದವು ಸ್ವಾಸ್ಥ್ಯವೆನ್ನಲ್ಪಡುವುದೇ ಹೊರತು ಈ ವಿಷಯಸುಖವು ಸುಖವಾಗಿ ಆಗುವುದಿಲ್ಲವೆಂದರ್ಥವು. ॥೧೩॥

ಶ್ಲೋಕ ॥ ತದಪಿ ಸ್ವಪರಜ್ಞಾನೇ
ಯಾಥಾತ್ಮ್ಯರುಚಿಮಾತ್ರಕೇ ।
ಪರತ್ಯಾಗೇ ಚ ಪೂರ್ಣೇ ಸ್ಯಾ-
ತ್ಪರಮಂ ಪದಮಾತ್ಮನಃ ॥ ೧೪ ॥

ಟೀ ॥ ಆತ್ಮನಃ-ಆತ್ಮನಿಗೆ, ಪರಮಂ-ಉತ್ಕೃಷ್ಟವಾದ, ಪದಂ-ಸ್ಥಾನವಾದ, (ಫಲವಾದ), ತದಪಿ-ಆ ಸ್ವಾಸ್ಥ್ಯವೂಕೂಡ, ಸ್ವಪರಜ್ಞಾನೇ-ಸ್ವ-ಆತ್ಮನೂ, ಪರ-ಬೇರೆವಸ್ತುವು ಇವುಗಳ, ಜ್ಞಾನೇ-ಜ್ಞಾನವೂ, ಯಾಥಾತ್ಮ್ಯರುಚಿಮಾತ್ರಕೇ-ಜೀವಾಜೀವಾದಿತತ್ತ್ವಗಳಯಥಾಸ್ಥಿತಿಯಲ್ಲಿ ಶ್ರದ್ಧಾಮಾತ್ರವಾದ ಸಮ್ಯಗ್ದರ್ಶನವೂ, ಪರತ್ಯಾಗೇಚ-ಆತ್ಮವ್ಯತಿರಿಕ್ತವಾದ ಸಮಸ್ತ ಹೇಯಪರಿತ್ಯಾಗ ಇವುಗಳೂಕೂಡ, ಪೂರ್ಣೇ(ಸತಿ)-ಪರಿಪೂರ್ಣವಾಗಿಉಂಟಾಗುತಲಿರಲು, ಸ್ಯಾತ್-ಉಂಟಾಗುವುದು.

ತಾತ್ಪರ್ಯ॥ ಆತ್ಮನಿಗೆ ಮೋಕ್ಷದಲ್ಲಿ ಉಂಟಾಗತಕ್ಕ ಅಖಂಡಾನಂದಸ್ವರೂಪವಾದ ಸ್ವಾಸ್ಥ್ಯವೂಕೂಡ ಜೀವಾಜೀವಾದಿ ತತ್ತ್ವಯಾಥಾರ್ಥ್ಯ

ಜ್ಞಾನವೂ, ತತ್ತ್ವಾರ್ಥಶ್ರದ್ಧಾರೂಪಸಮ್ಯಗ್ದರ್ಶನವೂ, ಆತ್ಮತತ್ತ್ವಕ್ಕಿಂತಲೂ ಬೇರೆಯಾದ ರಾಗದ್ವೇಷಕ್ಕೆ ಕಾರಣವಾದ ಶರೀರವೇ ಮೊದಲಾಗಿ ಸಕಲಪರಿಗ್ರಹಗಳಲ್ಲಿ ಮಮತೆಯತ್ಯಾಗವೆಂಬಪರತ್ಯಾಗವೂಕೂಡ ಈ ಮೂರೂನೂ ಪರಿಪೂರ್ಣವಾಗಿ ಉಂಟಾಗುತ್ತಿರಲಾಗಿಯೇ ಸಿದ್ಧಿಸುವುದು. ಈ ( ರತ್ನತ್ರಯದಲ್ಲಿಯಾವದೊಂದು ಕಡಮೆಯಾದರೂ ಅನಂತಸುಖಸ್ವರೂಪವಾದ ಮೋಕ್ಷಾನಂದವು ದೊರಕಲಾರದೆಂದು ಭಾವವು.) ॥೧೪॥

ಶ್ಲೋಕ ॥ ಸ್ವಮಪಿ ಜ್ಞಾನದೃಕ್ಸೌಖ್ಯ-
ಸಾಮರ್ಥ್ಯಾದಿ ಗುಣಾತ್ಮಕಮ್ ।
ಪರಂ ಪುತ್ರಕಳತ್ರಾದಿ
ವಿದ್ಧಿ ಗಾತ್ರಮಲಂ ಪರೈಃ ॥ ೧೫ ॥

ಟೀ ॥ ಸ್ವಮಪಿ-ಆತ್ಮನೂಕೂಡ, ಜ್ಞಾನದೃಕ್ಸೌಖ್ಯಸಾಮರ್ಥ್ಯಾದಿಗುಣಾತ್ಮಕಂ—ಜ್ಞಾನ-ಜ್ಞಾನವೂ, ದೃಕ್-ದರ್ಶನವೂ,ಸೌಖ್ಯ-ಸೌಖ್ಯವೂ, ಸಾಮರ್ಥ್ಯ-ಅಘಟಿತಘಟನಾಸಾಮರ್ಥ್ಯವೂ (ಅನಂತವೀರ್ಯವೂ), ಆದಿ-ಇವೇ ಮೊದಲಾದವುಗಳ್, ಆತ್ಮಕಂ-ಸ್ವಭಾವವಾಗಿವುಳ್ಳವನೆಂತಲೂ, ಪುತ್ರಕಳತ್ರಾದಿ-ಪುತ್ರ-ಮಕ್ಕಳು, ಕಳತ್ರ-ಹೆಂಡತಿಯೇ, ಆದಿ-ಮೊದಲಾಗಿವುಳ್ಳ,ಗಾತ್ರಂ-ಶರೀರವನ್ನು,ಪರಂ(ಸತ್)-ಪರಪದಾರ್ಥವೆಂತಲೂ, ವಿದ್ಧಿ-ತಿಳಿ., ಪರೈಃ-ಉಳಿದವುಗಳಿಂದ, ಅಲಂ-ಸಾಕು.

ಅವತರಣಿಕೆ ॥ ಜೀವಂಧರ ಕುಮಾರನು ಜೀವಾಜೀವ ತತ್ತ್ವಗಳ ಯಥಾಸ್ಥಿತಿಯನ್ನುಪದೇಶಿಸುತ್ತಾನೆ. ಏನೆಂದರೆ.—

ತಾತ್ಪರ್ಯ ॥ ಸ್ವಪರ ಪದಾರ್ಥಯಾಥಾತ್ಮ್ಯಜ್ಞಾನವೆಂಬ ಸಮ್ಯಗ್ಜ್ಞಾನವು ಮೋಕ್ಷಕಾರಣವೆಂದು ಹೇಳಲ್ಪಟ್ಟಿತು. ಸ್ವಪದಾರ್ಥವಾವದೆಂದರೆ, ಆತ್ಮನು, ಆತ್ಮನಿಗೆ ಜ್ಞಾನವೂ, ದರ್ಶನವೂ, ಸೌಖ್ಯವೂ, ಸಾಮರ್ಥ್ಯವೂ, ಇವೇ ಮೊದಲಾದಗುಣಗಳು ಸ್ವಭಾವವು. ಪರವಸ್ತುವೆಂದರೆ.— ಆತ್ಮನಿಗಿಂತಲೂ ಬೇರೆಯಾದುದರಿಂದ ದೇಹವನ್ನೂ, ದೇಹಾನುಬಂಧಿಗಳಾದ ಪತ್ನೀಪುತ್ರಗೃಹಕ್ಷೇತ್ರವಸ್ತುವಾಹನಧನ ಧನಕರಾಜ್ಯಾದಿ ಸಮಸ್ತವನ್ನೂ, ಪರವಸ್ತುವೆಂದು ತಿಳಿ. ( ಆತ್ಮಸ್ವರೂಪ, ದೇಹಾದಿಯಾದ ಪರಪದಾರ್ಥಸ್ವರೂಪಗಳಾದ ಎರಡರಯಾಥಾತ್ಮ್ಯ

ಜ್ಞಾನವೆಂಬ ಹೇಯೋಪಾದೇಯ ವಿಜ್ಞಾನವೇ ಸಮ್ಯಗ್ಜ್ಞಾನವೆನ್ನಲ್ಪಡುವುದು. ಉಳಿದ ಯಾವುದರಿಂದಲೂ ಪ್ರಯೋಜನವಿಲ್ಲವಾದುದರಿಂದಮೋಕ್ಷಾರ್ಥವಾಗಿ ಮತ್ತೆ ಯಾವವಿಚಾರವೂ ಆವಶ್ಯಕವಿಲ್ಲವೆಂದು ಅರ್ಥವು.) ॥೧೫॥

ಶ್ಲೋಕ॥ ಏವಂ ಭಿನ್ನಸ್ವಭಾವೋಽಯಂ
ದೇಹೀ*ಸ್ವತ್ವೇನ(ಸ್ವಾತ್ಮತ್ವೇನ)ದೇಹಕಮ್ ।
ಬುಧ್ಯತೇ ಪುನರಜ್ಞಾನಾ-
ದತೋದೇಹೇನ ಬಧ್ಯತೇ ॥ ೧೬ ॥

ಟೀ ॥ ಏವಂ-ಈ ಪ್ರಕಾರ, ಭಿನ್ನಸ್ವಭಾವಃ-ಭಿನ್ನ-ದೇಹದ ಹೇಯಸ್ವಭಾವಕ್ಕಿಂತಲೂ ಬೇರೆಯಾದ, ಸ್ವಭಾವಃ-ಅಪರಿಚ್ಛಿನ್ನಜ್ಞಾನಸುಖಾದಿಸ್ವಭಾವವುಳ್ಳ, ಅಯಂ ದೇಹೀ-ಈ ಆತ್ಮನು, ದೇಹಕಂ-ಮಲಮಯಪುದ್ಗಲಪಿಂಡಸ್ವರೂಪವಾದ ದೇಹವನ್ನು, ಸ್ವತ್ವೇನ-ತಾನೆಂಬ ಭಾವದಿಂದ, ಬುಧ್ಯತೇ - ತಿಳಿಯುತ್ತಾನೆ., ಪುನಃ-ಮರಳಿಯೂ, ಅತಃ ಅಜ್ಞಾನಾತ್-ದೇಹವೇ ಆತ್ಮನೆಂಬ ಈ ಭ್ರಾಂತಿಯಿಂದ, ದೇಹೇನ-ಕರ್ಮಾನುಗುಣವಾದ ಮತ್ತೊಂದು ದೇಹದಿಂದ, ಬಧ್ಯತೇ-ಕಟ್ಟಲ್ಪಡುತ್ತಾನೆ.

ತಾತ್ಪರ್ಯ॥ಈ ಪ್ರಕಾರಜ್ಞಾನದರ್ಶನ ಸೌಖ್ಯಸಾಮರ್ಥ್ಯಗಳೇಸ್ವಭಾವವಾಗಿವುಳ್ಳವನಾಗಿಯೂ, ನಿತ್ಯನಾಗಿಯೂ, ( ನಾಶವಿಲ್ಲದೇಸ್ಥಿರನಾಗಿಯೂ) ಚೈತನ್ಯಸ್ವರೂಪನಾಗಿಯೂ, ಪರಿಶುದ್ಧಸ್ವರೂಪನಾಗಿಯೂ ಇರುವ ಆತ್ಮನು, ಮಲಮಯಪುದ್ಗಲಪಿಂಡರೂಪವಾದುದರಿಂದ ಅಶುದ್ಧವಾಗಿಯೂ ಅಸ್ಥಿರವಾಗಿಯೂ, ಜ್ಞಾನರಹಿತವಸ್ತುವಾದದೇಹವನ್ನೇ ತಾನೆಂದು ( ಆತ್ಮವಸ್ತುವೆಂದು) ಭ್ರಮಿಸಿ, ಈ ದೇಹಾತ್ಮ ಭ್ರಾಂತಿರೂಪವಾದ ಅಜ್ಞಾನದದೆಸೆಯಿಂದ ತಿರಿಗಿ ಇಂಥಾ ಅಜ್ಞಾನಮೂಲಕವಾದ ಪಾಪಕರ್ಮದದೆಸೆಯಿಂದ ಇದಕ್ಕೆ ತಕ್ಕದೇಹವನ್ನೇ ಹೊಂದುತ್ತಾನೆ. ಸ್ವಪರಗಳೆಂದರೆ.—ಆತ್ಮನೂ, ದೇಹವೂ ಇವುಗಳು. ಈ ದೇಹಾತ್ಮಯಾಥಾತ್ಮ್ಯಜ್ಞಾನವೆಂಬ ತತ್ತ್ವಜ್ಞಾನವುಂಟಾಗುವವರೆಗೂ ಆತ್ಮನಿಗೆ ದೇಹಾತ್ಮ ಭ್ರಾಂತಿರೂಪವಾದ ಅಜ್ಞಾನವು ತಪ್ಪಲಾರದು. ಈ ಅಜ್ಞಾನಮೂಲಕವಾಗಿಯೇ ರಾಗದ್ವೇಷಾದಿಗಳೇ

ಮುಖ್ಯಕಾರಣವಾಗಿವುಳ್ಳ ಅನೇಕ ಪಾಪಕರ್ಮಗಳು ಮಾಡಲ್ಪಡುತ್ತವೆ. ಆ ಕರ್ಮಾನುಗುಣವಾಗಿ ಆತ್ಮನಿಗೆ ನಾನಾ ಭವಗಳೆಂದರೆ.-ಜನ್ಮಗಳುಂಟಾಗುವುವು. ತತ್ತ್ವಜ್ಞಾನವುಂಟಾದರೆ, ಅಜ್ಞಾನನಿವೃತ್ತಿಯುಂಟಾಗುವುದು. ಅಜ್ಞಾನವು ನಿವರ್ತಿಸುತ್ತಿರಲಾಗಿ ಆತ್ಮನಿಗೆ ಚತುರ್ಗತಿಭ್ರಮಣರೂಪವಾದ ಸಂಸಾರವು ನಿವರ್ತಿಸಿ ಆತ್ಮನು ಅನಂತಜ್ಞಾನದರ್ಶನಾದಿನಿಜರೂಪವನ್ನು ಪಡೆದು ಮುಕ್ತನಾಗುವನು. (ಸಿದ್ಧಪದ ಮೋಕ್ಷಸ್ವರೂಪಮಂ ಪಡೆಯುವನೆಂದು ಮುಖ್ಯಭಾವವು.) ॥೧೮॥

ಶ್ಲೋಕ ॥ ಅಜ್ಞಾನಾತ್ಕಾಯಹೇತುಸ್ಸ್ಯಾ-
ತ್ಕರ್ಮಾಜ್ಞಾನಮಿಹಾತ್ಮನಾಮ್ ।
ಪ್ರತೀಕೇ ಸ್ಯಾತ್ಪ್ರಬಂಧೋಯ-
ಮನಾದಿಸ್ಸೈವ ಸಂಸೃತಿಃ ॥ ೧೨ ॥

ಟೀ ॥ ಅಜ್ಞಾನಾತ್-ದೇಹಾತ್ಮಭ್ರಾಂತಿಯೆಂಬ ಅಜ್ಞಾನದ ದೆಸೆಯಿಂದ, ಕಾಯಹೇತುಃ-ಕಾಯ-ದೇಹಕ್ಕೆ, ಹೇತುಃ-ಕಾರಣವಾದ, ಕರ್ಮ-ಕರ್ಮವು,ಸ್ಯಾತ್-ಉಂಟಾಗುವುದು., ಅಜ್ಞಾನಂ-ಅಜ್ಞಾನವು,ಇಹ-ಇಲ್ಲಿ, ಆತ್ಮನಾಂ-ಸಂಸಾರ್ಯಾತ್ಮಗಳಿಗೆ,ಪ್ರತೀಕೇ-ದೇಹದಲ್ಲಿ, ಸ್ಯಾತ್-ಉಂಟಾಗುವುದು., ಅಯಂಪ್ರಬಂಧಃ-ಆತ್ಮನಿಗೆ ಈ ನಾನಾ ದೇಹ ಸಂಬಂಧವೆಂಬ ಬಂಧನವು, ಅನಾದಿಃ-ಆದಿಇಲ್ಲದೇ ಇರುವಂಥಾದ್ದು(ತಿಳಿಯಲಶಕ್ಯವಾದ ಪ್ರಾರಂಭವುಳ್ಳದ್ದು).,ಸೈವ-ಆತ್ಮನಿಗೆ ಕರ್ಮಾಜ್ಞಾನಗಳ ಮೂಲಕವಾದ ಆ ನಾನಾದೇಹಸಂಬಂಧವೇ, ಸಂಸೃತಿಃ-ಸಂಸಾರವೆನ್ನಲ್ಪಡುವುದು.

ತಾತ್ಪರ್ಯ ॥ ಆತ್ಮನಿಗೆ ದೇಹವೇ ಆತ್ಮವೆಂಬ ಅಜ್ಞಾನದದೆಸೆಯಿಂ ರಾಗದ್ವೇಷನಿಮಿತ್ತಕರವಾದ ಪಾಪಕರ್ಮವುಂಟಾಗುವುದು. ಕರ್ಮಕ್ಕೆ ಕಾರಣವಾದ ಆ ಅಜ್ಞಾನವಾದರೋ ದೇಹದಲ್ಲಿ ಉಂಟಾಗುವುದು. (ಆತ್ಮಸ್ವರೂಪವನ್ನರಿಯದೆ ದೇಹವನ್ನೇ ಆತ್ಮನೆಂದು ತಿಳಿಯೋಣವು.) ನಾಶರಹಿತನಾಗಿ, ನಿರ್ಮಲಸ್ವಭಾವನಾಗಿ ಜ್ಞಾನವೇಲಕ್ಷಣವಾಗಿವುಳ್ಳ ಆತ್ಮನು ನರಸುರತಿರ್ಯಗ್ನಾರಕಿಗಳೆಂಬ ನಾಲ್ಕು ಪ್ರಕಾರವಾದ ದೇಹಗಳಲ್ಲಿ ನಾನಾಭವಗಳನ್ನು ಹೊಂದುತ್ತಾ ಇರೋಣವೇ ಸಂಸಾರವು. ಈ ಸಂಸಾರವು ಜೀವನಿಗೆ ಯಾವಕಾಲದಲ್ಲಿ ಉಂಟಾದುದೆಂದರೆ.-ಆದಿಯು ತಿಳಿಯಲಶಕ್ಯವಾ

ದುದರಿಂದ ಸಂಸಾರವು ಅನಾದಿಯೆನ್ನಲ್ಪಡುವುದು. ಈ ಸಂಸಾರವಶ
ಯೇ ಜೀವನಿಗೆ ಬಂಧವೆನ್ನಲ್ಪಡುವುದು. ॥೧೩॥

ಶ್ಲೋಕ ॥ ಸ್ವಂ ಸ್ವತ್ವೇನ ತತಃ ಪಶ್ಯನ್
ಪರತ್ವೇನ ಚ ತತ್ಪರಮ್ ।
ಪರತ್ಯಾಗೇ ಮತಿಂ ಕುರ್ಯಾಃ
ಕಾರ್ಯೈರನ್ಯೈಃ ಕಿಮಸ್ಥಿರೈಃ ॥ ೧೪ ॥

ಟೀ॥ ಸ್ವಂ-ತನ್ನನ್ನು (ಆತ್ಮವಸ್ತುವನ್ನು), ಸ್ವತ್ವೇನ-ಆತ್ಮಭಾವದಿಂದಲೂ, (ಆತ್ಮವಸ್ತುವಿನ ಯಥಾವತ್ತಾದ ಸ್ವರೂಪದಿಂದಲೂ), ತತ್-ಆ ದೇಹವೇ ಮೊದಲಾಗಿ ಸಮಸ್ತವಾದ, ಪರಂ-ಪರಪದಾರ್ಥವಾದ ವಸ್ತುವನ್ನು, ತತಃ-ಆ ಆತ್ಮನಿಗಿಂತಲೂ, ಪರತ್ವೇನಚ-ಬೇರೆಯೆಂಬ ಭಾವದಿಂದಲೂ, ಪಶ್ಯನ್(ಸನ್)-ನೋಡುವವನಾಗಿ, ಪರತ್ಯಾಗೇ - ಆತ್ಮಕ್ಕಿಂತಲೂ ಬೇರೆಯಾದ ದೇಹಾದಿ ಸಕಲಪರವಸ್ತುತ್ಯಾಗವನ್ನಿಯೂ, ಮತಿಂ-ಬುದ್ಧಿಯನ್ನು, ಕುರ್ಯಾಃ-ಮಾಡು., ಅಸ್ಥಿರೈಃ-ಸ್ಥಿರವಾದ ಫಲವನ್ನು ಕೊಡದೇಇರುವ, ಅನ್ಯೈಃ-ಬೇರೆಯಾದ, ಕಾರ್ಯೈಃ-ಕೆಲಸಗಳಿಂದ, ಕಿಂ-ಏನು ಪ್ರಯೋಜನವು?.

ತಾತ್ಪರ್ಯ ॥ ನಿತ್ಯಶುದ್ಧ, ಚೈತನ್ಯಸ್ವರೂಪವೆಂಬಾತ್ಮಸ್ವಭಾವದಿಂದಾತ್ಮನನ್ನು ತಿಳಿದು, ನೀರುಗುಳ್ಳೆಯಂದದಿ ಅಸ್ಥಿರವಾಗಿ, ಮಲಮಯಪುದ್ಗಲರಾಶಿಯಾಗಿ ಜಡವಸ್ತುವಾದ ಶರೀರಸ್ವಭಾವದಿಂದ ಶರೀರವಂ ತಿಳಿದು, ಆತ್ಮನಿಗಿಂತಲೂ ಬೇರೆಯಾದ ದೇಹವೇ ಮೊದಲಾದುದರೊಳು ಮಮತೆಯನ್ನುಬಿಡು. ವೈರಾಗ್ಯಬುದ್ಧಿಯನ್ನಿಡು. ಅಸ್ಥಿರವಾದ ಬೇರೆ ಕೆಲಸಗಳಿಂದೇನು ಪ್ರಯೋಜನವು? ( ಸ್ಥಿರವಾದ ಮೋಕ್ಷಕ್ಕೆ ಕಾರಣವಾದ ಧರ್ಮಸಾಧನದಲ್ಲಿ ಪ್ರವರ್ತಿಸುವವನಾಗು. ಇದು ಹೊರತು ಅಸ್ಥಿರವಾದ ಈ ಶರೀರಾನುಬಂಧಿಪರಿಗ್ರಹಗಳಲ್ಲಿ ರಾಗಮೂಲಕವಾದ ಇತರ ಯಾವ ಕೆಲಸಗಳಿಂದಲೂ ಏನೂ ಪ್ರಯೋಜನವಿಲ್ಲವೆಂದು ಭಾವವು. ) ॥೧೪॥

ಶ್ಲೋಕ ॥ ಪರತ್ಯಾಗಕೃತೋ ಜ್ಞೇಯಾ-
ಸ್ಸಾನಗಾರಾ ಅಗಾರಿಣಃ ।

ಗಾತ್ರಮಾತ್ರಧನಾಃ ಪೂರ್ವೇ
ಸಾರ್ವಾಸ್ಸಾವದ್ಯವರ್ಜಿತಾಃ ॥೧೯॥

ಟೀ ॥ ಸಾನಗಾರಾಃ-ಮನೆಯನ್ನೂ, ಆ ಮನೆಗೆ ಸಂಬಂಧಿಸಿದ ಸಮಸ್ತ ಪತ್ನೀಪುತ್ರಾದಿ ಪರಿಗ್ರಹಗಳನ್ನೂ ಕೂಡ ಪರಿತ್ಯಜಿಸಿ ಜಿನದೀಕ್ಷೆಯನ್ನಂಗೀಕರಿಸಿದ ಯತಿಗಳೊಡಗೂಡಿದ, ಅಗಾರಿಣಃ- ಗೃಹಸ್ಥರೆನಿಸಿದ ಹನ್ನೊಂದನೆಯ ನೆಲೆಯುವ ರಾವಶ್ರಾವಕರು, ಪರತ್ಯಾಗಕೃತಃ— ಪರ- ಆತ್ಮನಿಗಿಂತಲೂ ಬೇರೆಯಾವ ದೇಹವೇ ಮೊದಲಾದುದರೊಳು, ತ್ಯಾಗಕೃತಇತಿ-ಮಮತೆಯುಂ ತೊರೆದಿರುವ ವೈರಾಗ್ಯಭಾಗ್ಯವಂ ಪಡೆವವರೆಂದು, ಜ್ಞೇಯಾಃ-ತಿಳಿಯಲ್ಕೋಸುಗ ಯೋಗ್ಯರು., ಪೂರ್ವೇ-ಮೊದಲನೆಯವರಾದ ಯತಿಗಳು, ಗಾತ್ರಮಾತ್ರಧನಾಃ—ಗಾತ್ರಮಾತ್ರ-ಶರೀರಮಾತ್ರವೇ, ಧನಾಃ-ಧನವಾಗಿವುಳ್ಳವರು., ಸಾರ್ವಾಃ-ಸರ್ವಪ್ರಾಣಿಗಳಲ್ಲಿಯೂ ದಯಾಶಾಲಿಗಳು., ಸಾವದ್ಯವರ್ಜಿತಾಃ—ಸಾವದ್ಯ- ದೋಷವೊಡಗೂಡಿದ ಸಮಸ್ತ ಕೃತ್ಯಗಳನ್ನೂ ಬಿಟ್ಟಿರುವವರು.

ತಾತ್ಪರ್ಯ ॥ ಆತ್ಮನಿಗಿಂತಲೂ ಬೇರೆಯಾದ ಶರೀರಾದಿಗಳಲ್ಲಿ ಮಮತೆಯುಂತೊರೆದಿರುವ ವೈರಾಗ್ಯಶಾಲಿಗಳು ಅನಗಾರರೆಂತಲೂ, ಸಾಗಾರರೆಂತಲೂ ಎರಡು ಪ್ರಕಾರವು. ಇವರಲ್ಲಿ ಮೊದಲನೆಯವರಾದ ಅನಗಾರರು (ಮನೆಯುಂಬಿಟ್ಟು ಜಿನದೀಕ್ಷೆಯನ್ನಂಗೀಕರಿಸಿ, ಅರಣ್ಯದಲ್ಲಿ ತಪಸ್ಸು ಮಾಡುವ ಮುನಿಗಳು.) ಶರೀರಮಾತ್ರವೇ ಧನವಾಗಿವುಳ್ಳವರು; ಸರ್ವಪ್ರಾಣಿಗಳಿಗೂ ಹಿತಚಿಂತಕರಾದ ದಯಾಶಾಲಿಗಳು. ಸಾವದ್ಯವರ್ಜಿತರೆಂದರೆ.—ಸ್ಥೂಲಸೂಕ್ಷ್ಮಹಿಂಸಾಸ್ಪದವಾದ ಸಮಸ್ತ ಪಾಪಕೃತ್ಯಗಳನ್ನೂ ಪರಿತ್ಯಜಿಸಿರುವವರು. ॥೧೯॥

ಶ್ಲೋಕ ॥ ಮೂಲೋತ್ತರಾದಿಕಾನ್ವೋಢುಂ
ತ್ವಂ ನಶಕ್ನೋಷಿ ತಾನ್ಗುಣಾನ್ ।
ನ ಹಿ ವಾರಣಪರ್ಯಾಣಂ
ಭರ್ತುಂ ಶಕ್ತೋ ವನಾಯುಜಃ ॥ ೨೦ ॥

ಟೀ॥ ತ್ವಂ-ನೀನು, ಮೂಲೋತ್ತರಾಧಿಕಾನ್—ಮೂಲ-ಮೂಲಗುಣಗಳೂ, ಉತ್ತರ-ಉತ್ತರಗುಣಗಳೂ, ಆದಿಕಾನ್-ಇವೇಮೊದಲಾಗಿವುಳ್ಳ, ತಾನ್‌ಗುಣಾನ್-ಆಗುಣಗಳನ್ನು, ವೋಢುಂ-ವಹಿಸಲ್ಕೋಸುಗ, ನಶಕ್ನೋಷಿ-ಸಮರ್ಥನಾಗುವುದಿಲ್ಲ

ವು.,ವನಾಯುಜಃ-ವನಾಯುಜವೆಂಬ ಜಾತಿವಿಶೇಷವುಳ್ಳಕುದುರೆಯು, ವಾರಣಪರ್ಯಾಣಂ-ವಾರಣ-ಆನೆಯ,ಪರ್ಯಾಣಂ-ತಡಿಯನ್ನು, ಭರ್ತುಂ-ಹೊರಲು,ನಶಕ್ನೋತಿ-ಸಮರ್ಥವಲ್ಲವಷ್ಟೆ?.

ತಾತ್ಪರ್ಯ ॥ ನೀನು ಆ ಯತಿಗಳ ಮೂಲಗುಣ ಉತ್ತರಗುಣಗಳೆನಿಸಿದ ಆ ಶಾಸ್ತ್ರಸಿದ್ಧವಾದ ಉತ್ತಮಕ್ಷಮಾಮಾರ್ದವಾರ್ಜವ ಸತ್ಯಶೌಚಸಂಯಮತಪಸ್ತ್ಯಾಗ ಆಕಿಂಚನ್ಯಬ್ರಹ್ಮಚರ್ಯಗಳೆಂಬ ದಶಧರ್ಮಂಗಳೇ ಮೊದಲಾದ ಗುಣಗಳನ್ನು ವಹಿಸಲೋಸುಗ ಸಮರ್ಥನಲ್ಲವು. ಅದುಹೇಗೆಂದರೆ.—ಆನೆಗೆ ಹಾಕುವ ತಡಿಯನ್ನು ವನಾಯುಜವೆಂಬಕುದುರೆಯು ಹೊರಲು ಸಮರ್ಥವಲ್ಲವಷ್ಟೆ? ಅದರಂತೆಯೇ ನೀನೂಬಹುಕಷ್ಟಸಾಧ್ಯವಾದ ಆ ಯತಿಧರ್ಮವನ್ನು ಮೊದಲೇ ಆಚರಿಸಲು ಶಕ್ತನಲ್ಲವೆಂದರ್ಥವು. ॥ ೨೦ ॥

ಶ್ಲೋಕ॥ ಅತಸ್ತ್ವಮಧುನಾ ಧರ್ಮಂ
ಗೃಹಾಣ ಗೃಹಮೇಧಿನಾಮ್ ।
ನ ಹ್ಯಾರೋಢುಮಧಿಶ್ರೇಣಿಂ
ಯೌಗಪದ್ಯೇನ ಪಾರ್ಯತೇ ॥ ೨೧ ॥

ಟೀ ॥ ಅತಃ-ಆ ಕಾರಣದ ದೆಸೆಯಿಂದ, ತ್ವಂ-ನೀನು, ಅಧುನಾ-ಈಗ, ಗೃಹಮೇಧಿನಾಂ-ಗೃಹಸ್ಥರ (ಶ್ರಾವಕರ), ಧರ್ಮಂ-ಧರ್ಮವನ್ನು, ಗೃಹಾಣ-ಗ್ರಹಿಸು., ಜನಃ-ಜನವು, ಯೌಗಪದ್ಯೇನ-ಏಕಕಾಲದಿಂದ, ಅಧಿಶ್ರೇಣಿಂ-ಏಣಿಯನ್ನು, ಆರೋಢುಂ- ಹತ್ತಲೋಸುಗ, ನಪಾರ್ಯತೇಹಿ-ಸಮರ್ಥವಾಗುವುದಿಲ್ಲವಷ್ಟೆ?.

ತಾತ್ಪರ್ಯ ॥ ಆದುದರಿಂದ ನೀನು ಈಗ ಗೃಹಸ್ಥರ ಧರ್ಮವನ್ನಂಗೀಕರಿಸು. ಲೋಕದಲ್ಲಿ ಏಣಿಯನ್ನು ಹತ್ತುವಪುರುಷನು ಏಕಕಾಲದಲ್ಲಿ (ಹತ್ತುವಕಾಲದಲ್ಲಿ) ಕೊನೆಯ ಮೆಟ್ಟಲಿನಲ್ಲಿ ಕಾಲನ್ನಿಡುವನೆ? ಕ್ರಮವಾಗಿಯಲ್ಲವೇ ಹತ್ತುವನು ?(ಆ ಪ್ರಕಾರ ನೀನೂಕೂಡ ಮೊದಲು ಗೃಹಸ್ಥಧರ್ಮವನ್ನಾಚರಿಸಿ ಕ್ರಮವಾಗಿ ಮಹಾವ್ರತವನ್ನೆಂದರೆ,— ಯತಿಧರ್ಮವನ್ನಾಶ್ರಯಿಸಲು ಶಕ್ತನೆಂದು ಭಾವವು.) ॥ ೨೧ ॥

ಶ್ಲೋಕ॥ ತ್ರಿಚತುಃ ಪಂಚಭಿರ್ಯುಕ್ತಾ
ಗುಣಶಿಕ್ಷಾಣುಭಿರ್ವ್ರತೈಃ ।

ತತ್ತ್ವಧೀರುಚಿ ಭಾಜೋಽಲ್ಪಾಃ
ಸಾವದ್ಯಾ ಗೃಹಮೇಧಿನಃ ॥ ೨೨ ॥

ಟೀ ॥ ತ್ರಿಚತುಃಪಂಚಭಿಃ—ತ್ರಿ-ಮೂರುಪ್ರಕಾರವಾಗಿಯೂ, ಚತುಃ-ನಾಲ್ಕುಪ್ರಕಾರವಾಗಿಯೂ, ಪಂಚಭಿಃ- ಐದುಪ್ರಕಾರವಾಗಿಯೂ ಇರುವ, ಗುಣಶಿಕ್ಷಾಣುಭಿಃ-ಗುಣ-ಗುಣವ್ರತವೂ, ಶಿಕ್ಷಾ-ಶಿಕ್ಷಾವ್ರತವೂ, ಅಣುಭಿಃ-ಅಣುವ್ರತವೂ ಇವುಗಳೆಂಬ, ವ್ರತೈಃ-ವ್ರತಗಳೊಡನೆ, ಯುಕ್ತಾಃ-ಕೂಡಿಕೊಂಡಿರುವ, ತತ್ತ್ವಧೀರುಚಿಭಾಜಃ—ತತ್ತ್ವ-ಜೀವಾಜೀವಾದಿ ಸಪ್ತತತ್ತ್ವಸ್ವರೂಪಗಳ, ಧೀ-ಯಥಾರ್ಥಜ್ಞಾನವಲ್ಲಿ, ರುಚಿ-ಶ್ರದ್ಧೆ (ಅತ್ಯಂತನಂಬಿಕೆ)ಯನ್ನು, ಭಾಜಃ- ಹೊಂದಿರುವ, ಅಲ್ಪಾಃ-ಅಣುವ್ರತಧರರಾದಕೆಲವರು, ಸಾವದ್ಯಾಃ- ದೋಷವಿಶಿಷ್ಟರಾದ, ಗೃಹಮೇಧಿನಃ-ಗೃಹಸ್ಥರೆನಿಸುವರು.

ತಾತ್ಪರ್ಯ ॥ ಮೂರು ಪ್ರಕಾರವಾದ ಗುಣವ್ರತವೂ ನಾಲ್ಕುಪ್ರಕಾರವಾದ ಶಿಕ್ಷಾವ್ರತವೂ ಐದುಪ್ರಕಾರವಾದ ಅಣುವ್ರತವೂ, ಆದ ಈ ಮೂರು ವ್ರತಗಳುಳ್ಳವರಾಗಿಯೂ, ತತ್ತ್ವಾರ್ಥ ಶ್ರದ್ಧಾನರೂಪವಾದ ಸಮ್ಯಗ್ದರ್ಶನ ಶಾಲಿಗಳಾಗಿಯೂ, ಸೂಕ್ಷ್ಮಹಿಂಸಾದಿ ಕೆಲವು ದೋಷಾಸ್ಪದರಾದವರು ಗೃಹಸ್ಥರೆನಿಸುವರು. ॥ ೨೨ ॥

ಶ್ಲೋಕ ॥ ಅಹಿಂಸಾ ಸತ್ಯಮಸ್ತೇಯಂ
ಸ್ವಸ್ತ್ರೀಮಿತವಸುಸ್ಪೃಹಾ(ಗ್ರಹಾ) ।
ಮದ್ಯಮಾಂಸಮಧುತ್ಯಾಗೈಃ
ತೇಷಾಂ ಮೂಲಗುಣಾಷ್ಟಕಮ್ ॥ ೨೩ ॥

ಟೀ ॥ ಅಹಿಂಸಾ-ಪ್ರಾಣಿಹಿಂಸೆಮಾಡದೇ ಇರೋಣವು, ಸತ್ಯಂ-ಸುಳ್ಳು ಹೇಳದೇ ಇರೋಣವೂ, ಅಸ್ತೇಯಂ-ಕಳ್ಳತನವನ್ನು ಬಿಡೋಣವೂ, ಸ್ವಸ್ತ್ರೀಮಿತವಸುಸ್ಪೃಹಾ—ಸ್ವ-ತನ್ನ, ಸ್ತ್ರೀ-ಹೆಂಡತಿಯಲ್ಲಿಯೂ, ಮಿತ-ಕ್ಲಪ್ತವಾದ, ವಸು-ದ್ರವ್ಯವಲ್ಲಿಯೂ, ಸ್ಪೃಹಾ-ಆಶೆಯೂ, ( ಸ್ವಸ್ತ್ರೀಮಿತವಸುಗ್ರಹಾ—ಎಂಬ ಪಾಠವಲ್ಲಿ, ಸ್ವಸ್ತ್ರೀ-ತನ್ನಸ್ತ್ರೀಯೂ, ಮಿತ-ಮಿತವಾದ, ವಸು-ದ್ರವ್ಯವೂ ಇವುಗಳುಮಾತ್ರ, ಗ್ರಹಾ - ಸ್ವೀಕರಿಸೋಣವೂ-) ಮದ್ಯಮಾಂಸ ಮಧುತ್ಯಾಗೈಃ— ಮದ್ಯ-ಸುರಾಪಾನವೂ, ಮಾಂಸ-ಮಾಂಸವೂ, ಮಧು- ಜೇನುತುಪ್ಪವೂ ಇವುಗಳ-ತ್ಯಾಗೈಃ-ಪರಿತ್ಯಾಗದೊಡನೆ, ತೇಷಾಂ-ಆ ಗೃಹಸ್ಥರಿಗೆ, ಮೂಲಗುಣಾಷ್ಟಕಂ, ಎಂಟು ಗುಣಗಳೂ ಮೂಲಗುಣಗಳಾಗಿ, ಭವತಿ-ಆಗುತ್ತವೆ.

ತಾತ್ಪರ್ಯ॥ "ಪ್ರಮತ್ತಯೋಗಾತ್ಪ್ರಾಣವ್ಯಪರೋಪಣಂ ಹಿಂಸಾ" ಎಂಬ ಸೂತ್ರೋಕ್ತವಾಗಿ ಪ್ರಾಣವ್ಯಪರೋಪಣ ರೂಪವಾದ ಹಿಂಸಾತ್ಯಾಗವೆಂಬ ಅಹಿಂಸೆಯೂ, ಸುಳ್ಳುಹೇಳದೇ ಇರೋಣವು, ಕಳವನ್ನು ಬಿಟ್ಟಿರೋಣವೂ, ತನ್ನ ಸ್ತ್ರೀಮಾತ್ರದಲ್ಲಿಯೇ ತೃಪ್ತನಾಗಿ ಪರಸ್ತ್ರೀಯರಲ್ಲಿಯೂ, ಪರದ್ರವ್ಯದಲ್ಲಿಯೂ ಆಶೆಯಂ ತೊರೆದು ತೃಪ್ತನಾಗಿರೋಣವೂ, ಮದ್ಯತ್ಯಾಗವೂ, ಮಾಂಸತ್ಯಾಗವೂ, ಮಧುತ್ಯಾಗವೂ, ಇವು ಎಂಟುಗುಣಗಳು ಗೃಹಸ್ಥರಿಗೆ ಮೂಲಗುಣಗಳೆನ್ನಲ್ಪಡುವುವು. ಈ ಗುಣಗಳೊಡಗೂಡಿದವನೇ ಗೃಹಸ್ಥನು. ॥ ೨೩ ॥

ಶ್ಲೋಕ॥ ಭೋಗೋಪಭೋಗಸಂಹಾರೋ-
ಽನರ್ಥದಂಡವ್ರತಾನ್ವಿತಃ ।
ಗುಣಾನುಬೃಂಹಣಾದ್ಜ್ಞೇಯಂ
ದಿಗ್ವ್ರತೇನ ಗುಣವ್ರತಮ್ ॥ ೨೪ ॥

ಟೀ॥ ಅನರ್ಥದಂಡವ್ರತಾನ್ವಿತಃ-ಅನರ್ಥದಂಡವ್ರತದೊಡಗೂಡಿದ, ಭೋಗೋಪಭೋಗಸಂಹಾರಃ-ಭೋಗೋಪಭೋಗಪದಾರ್ಥಗಳನ್ನು ಲೆಕ್ಕಮಾಡಿ ಇಷ್ಟೇ ಸೇವಿಸುವೆನೆಂದು ಪರಿಮಾಣವಂ ಕಲ್ಪಿಸಿಕೊಳ್ಳುವಿಕೆಯೂ, ಗುಣಾನುಬೃಂಹಣಾತ್-ಗುಣ-ಅಹಿಂಸಾ, ಅಸ್ತೇಯ, ಅಪರಿಗ್ರಹಾದಿ ಮದ್ಯಮಾಂಸ ಮಧುಪರಿತ್ಯಾಗಪರ್ಯಂತವಾದ ಎಂಟುಗುಣಗಳನ್ನು (ಶ್ರಾವಕೋಚಿತವಾದ ಮೂಲೋತ್ತರಗುಣಗಳನ್ನು), ಅನುಬೃಂಹಣಾತ್- ಸರ್ವದಾ ಅಭಿವೃದ್ಧಿ ಹೊಂದಿಸುವುದರ ದೆಸೆಯಿಂದ, ದಿಗ್ವ್ರತೇನ- ದಶದಿಕ್ಕುಗಳಲ್ಲಿಯೂ ಇಷ್ಟೇಗಾವುದಗಳು ಸಂಚರಿಸುವೆನೇ ಹೊರತು ಪರಿಗಣಿಸಲ್ಪಟ್ಟ ಪ್ರದೇಶಕ್ಕಿಂತಲೂ ಹೊರಗೆ ಹೋಗುವುದಿಲ್ಲವೆಂದು ಸಂಕಲ್ಪಿಸಿಕೊಳ್ಳುವಿಕೆಯೆಂಬ ದಿಗ್ವ್ರತದೊಡನೆ, ಗುಣವ್ರತಂ- ಗುಣವ್ರತವೆಂಬುದಾಗಿ, ಜ್ಞೇಯಂ-ತಿಳಿಯತಕ್ಕದ್ದು.

ತಾತ್ಪರ್ಯ॥ ಗುಣವ್ರತವನ್ನು ಜೀವಂಧರಸ್ವಾಮಿಯು ಆ ಪಾಮರಪುರುಷನಿಗೆ ಉಪದೇಶಿಸುತ್ತಾನೆ. ಏನೆಂದರೆ.— ಭೋಗೋಪಭೋಗಗಳ ಪರಿಮಾಣವೂ, ಅನರ್ಥದಂಡವ್ರತವೂ, ಅಹಿಂಸಾದಿಗುಣಗಳನ್ನಭಿವೃದ್ಧಿ ಹೊಂದಿಸೋಣದರ ದೆಸೆಯಿಂದ, ದಿಗ್ವ್ರತವೂ ಕೂಡ ಸೇರಿ ಈ ಮೂರನ್ನೂ ಗುಣವ್ರತವೆಂದು ಪ್ರಾಜ್ಞರಾದ ಪೂಜ್ಯರು ಹೇಳುತ್ತಾರೆ.

ಅಣುವ್ರತಿಗಳೆಂದರೆ.—ಅಗತ್ಯಾನುಭವಿಸುವ ಸೂಕ್ಷ್ಮಪ್ರಾಣಿ ಹಿಂಸಾ ರೂಪವಾದ ಪಾಪನಿವೃತ್ತಿಗೋಸುಗ ಕೊಲೆ, ಹುಸಿ, ಕಳವು, ಪರಸ್ತ್ರೀ ಗಮನ, ಅತಿಕಾಂಕ್ಷಾ, ಇವುಗಳ ಪರಿತ್ಯಾಗವೆಂಬ ಈ ಐದುಪ್ರ ಕಾರವಾದ ವ್ರತಗಳು ಅಣುವ್ರತಗಳೆನ್ನಲ್ಪಡುವುವು. ಮತ್ತು, ಪ್ರಾ ತಃಕಾಲಾನಂತರ ಎರಡುಘಳಿಗೆಗಳನ್ನೂ, ಸಾಯಂಕಾಲಕ್ಕೆ ಪೂರ್ವ ಭಾವಿಯಾಗಿ ಎರಡು ಘಳಿಗೆಗಳನ್ನೂ ಬಿಟ್ಟು ಭೋಜನ ಮಾಡುವುದು ಆರನೆಯ ಅಣುವ್ರತವೆನ್ನಲ್ಪಡುವುದು. ಈ ಆರುವ್ರತಗಳಂ ಪರಿಪಾಲಿ ಸುವವರು, ಅಣುವ್ರತಿಗಳೆಂತಲೂ, ಶ್ರಾವಕರೆಂತಲೂ, ಗೃಹಸ್ಥರೆಂತಲೂ, ಅಗಾರಿಗಳೆಂತಲೂ, ಹೇಳಲ್ಪಡುವರು.

ಇದಕ್ಕೆ ಶ್ರಾವಕಧರ್ಮ ಪ್ರಮಾಣವು. (ಶ್ಲೋ॥ ವಧಾದಸತ್ಯಾ ಚ್ಚೌರ್ಯಾಚ್ಚ ಕಾಮಾದ್ಗ್ರಂಥಾನ್ನಿವರ್ತನಂ। ಪಂಚಕಾಣುವ್ರತಂರಾ ತ್ರ್ಯಭುಕ್ತಿಷ್ಷಷ್ಠಮಣುವ್ರತಂ॥) ಎಂಬದಾಗಿ, ಮತ್ತು; ನಿರತೀಚಾ ರವಾಗಿ( ಅತಿಕ್ರಮವಿಲ್ಲದುತೆ ) ಈ ಪಂಚಾಣುವ್ರತಗಳಂ ಪರಿಪಾಲಿ ಸುವ ಗೃಹಸ್ಥರು ಅವಧಿಜ್ಞಾನವನ್ನೂ, ಅಣಿಮಾದ್ಯಷ್ಟಸಿದ್ಧಿಗಳ ನ್ನೂ, ದೇವಶರೀರವನ್ನೂಕೂಡ ಫಲವನ್ನಾಗಿ ಪಡೆಯುವರು.

ಇದಕ್ಕೆ ಪ್ರಮಾಣವು- (ಶ್ಲೋ॥ ಪಂಚಾಣುವ್ರತನಿಧಯೋ ನಿರತಿ ಕ್ರಮಣಾಃ ಫಲಂತಿಸುರಲೋಕಂ। ಯತ್ರಾವಧಿರಷ್ಟಗುಣಾದಿವ್ಯಶರೀ ರಂಚಲಭ್ಯಂತೇ॥ ) ಇಷ್ಟೇಭೋಗೋಪ ಭೋಗವಸ್ತುಗಳನ್ನನುಭವಿ ಸುವೆನೆಂದು, ಅನುರಾಗ, ಆಸಕ್ತಿ, ಇವುಗಳನ್ನು ಕೃಶಪಡಿಸಲೋಸುಗ ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳೆಂಬ ಮೋಹಕವಾದ ಪಂಚೇಂ ದ್ರಿಯ ವಿಷಯಗಳ ಪರಿಮಿತಿಯಂ ಸಂಕಲ್ಪಿಸಿಕೊಳ್ಳುವಿಕೆಯು, ಭೋ ಗೋಪಭೋಗ ಪರಿಮಾಣವ್ರತವೆನ್ನಲ್ಪಡುವುದು.

ಅನುಭವಿಸಿದನಂತರವೇ ಬಿಡುವದಕ್ಕೆ ಯೋಗ್ಯವಾದವಸ್ತುಗಳು ಭೋ ಗವಸ್ತುಗಳೆನ್ನಲ್ಪಡುವುವು. (ಅವುಗಳಾವುವೆಂದರೆ.- ಚಂದನಕುಸು ಮ ತಾಂಬೂಲಾದಿಗಳು.)ಅನುಭವಿಸಲ್ಪಟ್ಟರೂ, ಪುನಃ ಅನುಭವಯೋ ಗ್ಯವಾದವಸ್ತ್ರೀಯೇ ಮೊದಲಾದವುಗಳು ಉಪಭೋಗವಸ್ತುಗಳೆನ್ನ

ಲ್ಪಡುವುವು. ಇದಕ್ಕೆ ಪ್ರಮಾಣ.-( ಶ್ಲೋ ॥ ಭುಕ್ತ್ವಾಪರಿಹಾತ ವ್ಯೋಭೋಗೋಭುಕ್ತ್ವಾಪುನಶ್ಚಭೋಕ್ತವ್ಯಃ । ಉಪಭೋಗೋಶನ ವಸನಪ್ರಭೃತಿಃ ಪಂಚೇಂದ್ರಿಯೋವಿಷಯಃ ॥ ) ಅನರ್ಥದಂಡವ್ರತವೆಂದರೆ.—ದಿಗ್ವ್ರತಮಾಡಿದ ಎಲ್ಲೆಯಮಧ್ಯದಲ್ಲಿ ನಿಷ್ಪ್ರಯೋಜನವಾದ ಪಾಪದೊಡಗೂಡಿದ ಮನೋವಾಕ್ಕಾಯಮೂಲಕವಾದ ಪಾಪಗಳು ಸಂಭವಿಸದಂತೆ ಜಾಗರೂಕತೆಯಿಂವ್ರತವಂಮಾಡಿಕೊಳ್ಳುವಿಕೆಯು ಅನರ್ಥದಂಡವ್ರತವೆನ್ನಲ್ಪಡುವುದು. ಇದಕ್ಕೆ ಶ್ರಾವಕಧರ್ಮ ಪ್ರಮಾಣವು. (ಶ್ಲೋ ॥ ಅಭ್ಯಂತರಂದಿಗವಧೇರಪಾರ್ಥಿಕೇಭ್ಯಸ್ಸಪಾಪಯೋಗೇಭ್ಯಃ।ವಿರಮಣಮನರ್ಥದಂಡವ್ರತಂವಿದು ರ್ವ್ರತಧರಾಗ್ರಣ್ಯಾಃ ॥) ಸೂಕ್ಷ್ಮಪ್ರಾಣಿ ಹಿಂಸಾನಿವೃತ್ತಿಗೋಸುಗ ಮರಣಪರ್ಯಂತದಲ್ಲೂ ದಶದಿಕ್ಕುಗಳಲ್ಲಿಯೂ ಇಷ್ಟೇಗಾವುದಗಳು ಹೋಗುವೆನೆಂದು ಸಂಕಲ್ಪಿಸಿಕೊಂಡು ಅದರಿಂದ ಹೊರಗೆ ಹೋಗದೇ ಇರುವಿಕೆಯು ದಿಗ್ವ್ರತವೆನ್ನಲ್ಪಡುವುದು. ಇದಕ್ಕೆಪ್ರಮಾಣವು. (ಶ್ಲೋ॥ದಿಗ್ವಲಯಂಪರಿಗಣಿತಂಕೃತ್ವಾತೋಹಂಬಹಿರ್ನಯಾಸ್ಯಾಮಿ ।.ಇತಿಸಂಕಲ್ಪೋದಿಗ್ವ್ರತಮಾಮೃತ್ಯಣುಪಾಪನಿವೃತ್ತ್ಯೈ ॥) ಈ ಮೂರುವ್ರತಗಳೂ ಗೃಹಸ್ಥಾಶ್ರಮಿಗಳಿಗೆ ಗುಣವ್ರತವೆನ್ನಲ್ಪಡುವುದು. ॥೨೪॥

ಶ್ಲೋಕ॥ ಪ್ರೋಷಧೋಪವಾಸೇನ<br>
ವ್ರತಂ ಸಾಮಾಯಿಕೇನ ಚ।<br>
ದೇಶಾವಕಾಶಿಕೇನ ಸ್ಯಾ-<br>
ದ್ವೈಯಾವೃತ್ತ್ಯೇನ ಶಿಕ್ಷಕಮ್ ॥ ೨೫ ॥

ಟೀ ॥ ಪ್ರೋಷಧೋಪವಾಸೇನ—ಅಷ್ಟಮೀ ಚತುರ್ದಶೀಮೊದಲಾದ ಪರ್ವತಿಥಿಗಳಲ್ಲಿ, ಅನ್ನ-ಪಾನ-ಖಾದ್ಯ-ಲೇಹ್ಯಗಳೆಂಬ ನಾಲ್ಕು ವಿಧಆಹಾರಗಳನ್ನೂ ಸರ್ವದಾ ಇಚ್ಛೆಯೊಡನೆಕೂಡಪ್ರತ್ಯಾಖ್ಯಾನವು(ತಿರಸ್ಕರಿಸುವಿಕೆಯು)ಪ್ರೋಷಧೋಪವಾಸವೆನ್ನಲ್ಪಡುವುದು. ಈಪ್ರೋಷಧೋಪವಾಸದೊಡನೆಕೂಡಿದ, ಸಾಮಾಯಿಕೇನಚ-ಆ ಸಮಯಪರಿಗೆ ಬಿಡಲ್ಪಟ್ಟ ಎಲ್ಲಾ ಕಡೆಯಲ್ಲಿಯೂ ಐದು ಪಾಪಗಳನ್ನು ಸಮಸ್ತಭಾವನೆಯಿಂದ ಬಿಡೋಣವೆಂಬ ಸಾಮಾಯಿಕವ್ರತದೊಡನೆಯೂ, ದೇಶಾವಕಾಶಿಕೇನ- ಪ್ರತಿದಿವಸದಲ್ಲಿಯೂ ಕಾಲಪ್ರಮಾಣದಿಂದ ವಿಶಾಲವಾದ ದೇಶಸಂ

ವೈಯಾವೃತ್ಯವೆಂದರೆ.—ಇದಕ್ಕೆ ಪ್ರಮಾಣವು-(ಶ್ಲೋ॥ ದಾನಂ ವೈಯಾವೃತ್ಯಂಧರ್ಮಾಯತಪೋಧನಾಯಗುಣನಿಧಯೇ। ಅನಪೇಕ್ಷಿತೋಪಚಾರೋಪಕ್ರಿಯಮಗೃಹಾಯವಿಭವೇನ ॥ ) ಯತಿಗಳಿಗೆ ಆಹಾರದಾನವು, ಆ ಯತಿಗಳಿಗೆ ವ್ಯಾಧ್ಯಾದಿಗಳಲ್ಲಿ ಗುಣಪ್ರೀತಿಯಿಂದ ಶುಶ್ರೂಷೆಮಾಡೋಣವು, ವೈಯಾವೃತ್ತ್ಯವೆನ್ನಲ್ಪಡುವುದು. ಈ ನಾಲ್ಕು ವ್ರತಗಳೂ ಶಿಕ್ಷಕವ್ರತವಾಗಿಯಾಗುವುದು. ಪ್ರಮಾಣವು.-( ಶ್ಲೋ॥ಆಹಾರೌಷಧಯೋರಪ್ಯುಪಕರಣಾವಾಸಯೋಶ್ಚದಾನೇನ। ವೈಯಾವೃತ್ಯಂಬ್ರುವತೇಚತುರಾತ್ಮತ್ವೇನಚತುರಸ್ರಾಃ ॥ ) ಸತ್ಪಾತ್ರಕ್ಕೆ ಆಹಾರದಾನ, ಔಷಧ, ಪುಸ್ತಕಾದ್ಯುಪಕರಣ, ಆಶ್ರಯ ಇವುಗಳ ದಾನಗಳೆಂಬ ಈ ನಾಲ್ಕುದಾನಗಳನ್ನೂ ವೈಯಾವೃತ್ಯವೆಂದು ಪ್ರಾಜ್ಞರು ಹೇಳುತ್ತಾರೆ. ಯತಿಗೆ ಆಹಾರದಾನವಂ ಮಾಡುವ ಗೃಹಸ್ಥನು.- (ಶ್ಲೋ॥ ನವಪುಣ್ಯೈಃಪ್ರತಿಪತ್ತಿಸ್ಸಪ್ತಗುಣಸಮಾಹಿತೇನಶುದ್ಧೇನ । ಅಪಸೂನಾರಂಭಾಣಾಮಾರ್ಯಾಣಾಮಿಷ್ಯತೇದಾನಂ॥) ಎಂಬ ಪ್ರಮಾಣಾನುಸಾರವಾಗಿ ನಿಲ್ಲಿಸುವುದು. ಉತ್ಕೃಷ್ಟಸ್ಥಾನವು, ಪಾದವಂತೊಳೆಯುವುದು, ಪಾದಪ್ರೂಜೆಯು, ನಮಸ್ಕಾರಮಾಡುವುದು; ವಾಕ್, ಮನಸ್ಸು, ಶರೀರಗಳ ಶುದ್ಧಿಯು, ಭಿಕ್ಷಾಶುದ್ಧಿಯು, ಈ ಒಂಭತ್ತುಬಗೆಸತ್ಕರ್ಮಗಳೂ ನವವಿಧಪುಣ್ಯಗಳೆಂದು ಹೆಸರು.

ಈ ನವಪುಣ್ಯಗಳೊಡನೆಯು ( ಶ್ಲೋ॥ ಶ್ರದ್ಧಾಶಕ್ತಿರ್ಭಕ್ತಿರ್ವಿಜ್ಞಾನಮಲುಬ್ಧತಾದಯಾಕ್ಷಾಂತಿಃ । ಯಸ್ಯೈತೇಸಪ್ತಗುಣಾಸ್ತಂದಾತಾರಂ ಪ್ರಶಂಸನ್ತಿ॥)ಎಂಬ ಪ್ರಮಾಣಾನುಸಾರವಾಗಿ ಅತ್ಯಂತಶ್ರದ್ಧಾರೂಪವಾದ ನಂಬಿಕೆಯು; ಶಕ್ತಿ, ಭಕ್ತಿ, ಜ್ಞಾನ, ಲೋಭವಿಲ್ಲದೇ ಇರುವುದು, ದಯೆಯು, ಶಾಂತಿಯು, ಕ್ಷಮೆಯು, ಎಂಬೀ ಏಳುಗುಣಗಳೊಡನೆಯೂ ಕೂಡಿ ಮಹಾವ್ರತಿಯಾದ ಯತಿಗೆ ಆಹಾರದಾನವಂಮಾಡಬೇಕು. ಇವು ದಾತೃಗುಣಗಳು. ॥ ೧೫ ॥

ಶ್ಲೋಕ॥ ಪರಚ್ಛಿನ್ನದಿಶಿ ಪ್ರಾಪ್ತಿಂ
　　ತ್ಯಾಗಂ ನಿಷ್ಫಲದುಷ್ಕೃತೇಃ ।

ಮಿತಾನ್ನಸ್ತ್ರ್ಯಾದಿಕತ್ವಂ ಚ
ಕೃತ್ಯಂ ವಿದ್ಧಿ ಗುಣವ್ರತೇ ॥ ೨೬ ॥

ಟೀ ॥ ಪರಿಚ್ಛಿನ್ನದಿಶಿ-ದಿಗ್ವ್ರತದಿಂದ ಸಂಕಲ್ಪಿಸಲ್ಪಟ್ಟ ಯೆಲ್ಲೆಯುಳ್ಳ ದಿಕ್ಕಿನ್ನಲ್ಲಿ, ಪ್ರಾಪ್ತಿಂ-ಲಾಭವನ್ನು, ನಿಷ್ಫಲದುಷ್ಕೃತೇಃ- ನಿಷ್ಫಲ- ಪ್ರಯೋಜನವಿಲ್ಲದ, ದುಷ್ಕೃತೇಃ-ಪಾಪಕರ್ಮದ, ತ್ಯಾಗಂ-ಬಿಡೋಣವನ್ನು, ಮಿತಾನ್ನ ಸ್ತ್ರ್ಯಾದಿಕತ್ವಂ ಚ-ಮಿತ-ಮಿತವಾದ, ಅನ್ನ-ಭೋಜ್ಯವಸ್ತುವೂ, ಸ್ತ್ರೀ-ಹೆಂಗಸೂ, ಆದಿಕತ್ವಂ ಚ-ಈಮೊದಲಾದ ಭೋಗೋಪಭೋಗವುಳ್ಳೋಣವನ್ನು, ಗುಣವ್ರತೇ-ಗುಣವ್ರತದಲ್ಲಿ, ಕೃತ್ಯಂಸತ್-ಮಾಡುವುದಕ್ಕೆ ಯೋಗ್ಯವಾದುವನ್ನಾಗಿ, ವಿದ್ಧಿ-ತಿಳಿ.

ತಾತ್ಪರ್ಯ ॥ ದಿಗ್ವ್ರತದಿಂದ ನಿರ್ಣಯಿಸಲ್ಪಟ್ಟ ಎಲ್ಲೆಯುಳ್ಳ ದಿಕ್ಕಿನಲ್ಲಿ ಎಷ್ಟುದೊರೆಯುವುದೋ ಅಷ್ಟರಿಂದಲೇ ತೃಪ್ತಿಪಡೋಣವೂ, ನಿಷ್ಪ್ರಯೋಜನವಾದ ಪಾಪಗಳಂ ತ್ಯಜಿಸುವುದೆಂದರೆ-(ಶ್ಲೋ॥ ಪರಶುಕೃಪಾಣಖನಿತ್ರಜ್ವಲನಾಯುಧಶೃಂಗಿಶೃಂಖಲಾದೀನಾಂ । ವಧಹೇತೂನಾಂದಾನಂಹಿಂಸಾದಾನಂಬ್ರುವನ್ತಿವಿಬುಧಾಃ ॥ ಕ್ಷಿತಿಸಲಿಲದಹನಪವನಾರಂಭಂವಿಫಲಂವನಸ್ಪತಿಭೇದಂ । ಸರಣಂಸಾರಣಮಪಿಚಪ್ರಮಾದಚರ್ಯಾಂಪ್ರಭಾಷಂತೇ ॥) ಇತ್ಯಾದಿ ಪ್ರಮಾಣಸಿದ್ಧವಾದ ಕೊಡಲಿ, ಕತ್ತಿ, ಗುದ್ದಲಿ, ಬೆಂಕಿ, ಕೊಂಬಿನಿಂದಮಾಡಲ್ಪಟ್ಟ ಆಯುಧ ಸಂಕೋಲೆ ಮುಂತಾದ ಹಿಂಸೆಯ ಉಪಕರಣಂಗಳಂ ಕೊಡುವುದೂ, ಭೂಮಿ, ನೀರು, ಬೆಂಕಿ, ಗಾಳಿ, ಇವುಗಳ ಸಂಬಂಧವಾದ ಆರಂಭವು, ಪ್ರಯೋಜನವಿಲ್ಲದೆ ಗಿಡ ಮರಗಳಂಕಡಿಯುವುದೂ, ನಿಷ್ಪ್ರಯೋಜನವಾಗಿ ತಿರುಗುವುದೂ ಮತ್ತೊಬ್ಬರನ್ನು ತಿರಿಗಿಸುವುದೂ, ಕಾಮ, ಭಂಡತನ, ಮೂರ್ಖತನ, ಅತ್ಯಲಂಕಾರ, ಚೆನ್ನಾಗಿನೋಡದೇ ಪದಾರ್ಥಗಳನ್ನಿಡುವುದೂ, ಈ ಅತೀಚಾರಗಳಾದ ಅನರ್ಥದಂಡರೂಪವಾದ ಪಾಪಗಳಂ ಬಿಡುವುದೂ, ಮಿತವಾದ ಅನ್ನ, ಸ್ತ್ರೀ ಮೊದಲಾದ ಭೋಗೋಪ ಭೋಗಗಳರುವಿಕೆಯೂ, ಇವುಗಳು ಗುಣವ್ರತದಿಂದುಂಟಾಗುವ ಕೃತ್ಯವು. ಇಂತೆಂದು ಜೀವಂಧರಸ್ವಾಮಿಯು ಆ ಪಾಮರನಿಗೆ ಉಪದೇಶಿಸಿದನು. ಸರ್ವತ್ರ ವಿರುದ್ಧಾಚರಣವಂ ಬಿಡೋಣವೇ ವ್ರತವು. ॥೨೬ ॥

ಶ್ಲೋಕ ॥ ಸಂಚಾರಸ್ಯಾವಧಿರ್ನಿತ್ಯಂ
ಸಚಿಹ್ನಾ ಚಾತ್ಮಭಾವನಾ ।
ದಾನಾದ್ಯೈರುಪವಾಸಶ್ಚ
ಪರ್ವಾದಿಷ್ವನ್ಯದಿಷ್ಯತೇ ॥೨೭॥

ಟೀ॥ ನಿತ್ಯಂ-ಯಾವಾಗಲೂ, ಸಂಚಾರಸ್ಯ-ಸಂಚಾರಕ್ಕೆ, ಅವಧಿಃ-ಎಲ್ಲೆಯು, ಸಚಿಹ್ನಾ-ಪಲ್ಯಂಕಾಸನಕಾಯೋತ್ಸರ್ಗಾದಿಧ್ಯಾನಲಕ್ಷಣಗಳಿಂದೊಡಗೂಡಿದ, ಆತ್ಮಭಾವನಾಚ- ಆತ್ಮ ಸ್ವರೂಪಧ್ಯಾನವೂ, ದಾನಾದ್ಯೈಃ- ನಾಲ್ಕು ಪ್ರಕಾರವಾದ ದಾನವೇ ಮೊದಲಾದವುಗಳೊಡನೆ, ಪರ್ವಾದಿಷು-ಅಷ್ಟಮೀಚತುರ್ದಶೀಮೊದಲಾದ ಪರ್ವಕಾಲಗಳಲ್ಲಿ, ಉಪವಾಸಶ್ಚ-ಇಚ್ಛೆಯೊಡನೆ ಕೂಡ ಚತುರ್ವಿಧಾಹಾರಪರಿತ್ಯಾಗವೆಂಬ ಉಪವಾಸವೂಕೂಡ, ಅನ್ಯತ್(ಸತ್)-ಗುಣವ್ರತಕ್ಕಿಂತಲೂ ಬೇರೆಯಾದ ಶಿಕ್ಷಕವ್ರತದಲ್ಲಿ ಮಾಡಲ್ಪಡುವ ಕೃತ್ಯವಾಗಿ, ಇಷ್ಯತೇ-ಪ್ರಾಜ್ಞರಿಂದ ಸಮ್ಮತಿಸಲ್ಪಡುತ್ತದೆ.

ತಾತ್ಪರ್ಯ ॥ ನಿತ್ಯವಾಗಿ ಸಂಕಲ್ಪಿಸಲ್ಪಟ್ಟ ಎಲ್ಲೆಗಿಂತಲೂ ಹೊರಗೆ ಹೋಗದೇಇರುವಿಕೆಯೂ, ಸಲಕ್ಷಣವಾಗಿ ಆತ್ಮಧ್ಯಾನಮಾಡುವಿಕೆಯೂ, ಆಹಾರಾಭಯಭೈಷಜ್ಯಶಾಸ್ತ್ರದಾನಗಳೂ, ಜಿನಪೂಜೆಯೂ, ಇವೇ ಮೊದಲಾದವುಗಳೊಡನೆ ಅಷ್ಟಮೀ, ಚತುರ್ದಶಿಯೇ ಮೊದಲಾದಕಾಲಗಳಲ್ಲಿ ಚತುರ್ವಿಧಾಹಾರದ ಇಚ್ಛೆಯನ್ನೂಕೂಡ ಬಿಟ್ಟು, ಉಪವಾಸಮಾಡುವಿಕೆಯೂ, ಈ ಕೆಲಸಗಳು ಶಿಕ್ಷಕವ್ರತದಲ್ಲಿ ಮಾಡಲ್ಪಡುವ ಕೃತ್ಯವಾಗಿ ಆಗುತ್ತದೆ. ಅಣುವ್ರತಿಗಳಿಗೆ ಮದ್ಯ ಮಾಂಸ ಮಧುತ್ಯಾಗಗಳು ಅತ್ಯಂತಾವಶ್ಯಕವಾದ ಮೂಲಗುಣಗಳಾಗಿ ಏತಕೆ ಹೇಳಲ್ಪಟ್ಟಿರುವುದು ? ಎಂದರೆ.— ( ಶ್ಲೋ ॥ ಮಾಂಸಾಶಿಷುದಯಾನಾಸ್ತಿನಸತ್ಯಂ ಮದ್ಯಪಾಯಿಷು । ಧರ್ಮಭಾವೋನಜೀವೇಷುಮಧೂದುಂಬರಸೇವಿಷು॥ ಎಂಬ ಪ್ರಮಾಣದಿಂದ ಮಾಂಸಭಕ್ಷಕರಿಗೆ ಪ್ರಾಣಿಗಳೊಳು ದಯೆಯು ಇಲ್ಲವಾದುದರಿಂದಲೂ, ಮದ್ಯಪಾಯಿಗಳಿಗೆ ಸತ್ಯವಚನವಿಲ್ಲವಾದುದರಿಂದಲೂ; ಮಧು, ಅತ್ತಿಹಣ್ಣುಗಳನ್ನು ಸೇವಿಸುವವರಿಗೆ ಧರ್ಮಭಾವವಿಲ್ಲವಾದುದರಿಂದಲೂ, ಅಹಿಂಸಾದಿ ಧರ್ಮಪರಿಪಾಲಕರಿಗೆ ಇವುಗಳು ಅತ್ಯಾವಶ್ಯಕವಾದ ಗುಣಗಳಾಗಿವೆ. ॥ ೨೭ ॥

ಶ್ಲೋಕ॥ ಅಣುವ್ರತೀ ವ್ರತೈರೇತೈಃ
ಕ್ವಚಿದ್ದೇಶೇ ಕ್ವಚಿತ್ಕ್ಷಣೇ ।
ಮಹಾವ್ರತೀ ಭವೇತ್ತಸ್ಮಾ-
ದ್ಗ್ರಾಹ್ಯಂ ಧರ್ಮಮಗಾರಿಣಾಮ್ ॥೨೮॥

ಟೀ॥ ಅಣುವ್ರತೀ-ಅಣುವ್ರತಶಾಲಿಯಾದವನು (ಗೃಹಸ್ಥಧರ್ಮದಲ್ಲಿರುವಪುರುಷನು), ಏತೈಃ-ಈ ಪೂರ್ವೋಕ್ತವಾದ, ವ್ರತೈಃ-ವ್ರತಗಳಿಂದ,ಕ್ವಚಿದ್ದೇಶೇ-ಒಂದಾನೊಂದು ದೇಶದಲ್ಲಿ, ಕ್ವಚಿತ್ಕ್ಷಣೇ - ಒಂದಾನೊಂದುಕ್ಷಣದಲ್ಲಿ, ಮಹಾವ್ರತೀ (ಸನ್)-ಮಹಾವ್ರತವುಳ್ಳವನಾಗಿ (ಯತಿಧರ್ಮನಿರತನಾಗಿ), ಭವೇತ್-ಆದಾನು., ತಸ್ಮಾತ್-ಆ ಕಾರಣದ ದೆಸೆಯಿಂದ, ಅಗಾರಿಣಾಂ-ಗೃಹಸ್ಥರ, ಧರ್ಮಂ-ಧರ್ಮವು, (ಶ್ರಾವಕಧರ್ಮವು), ಗ್ರಾಹ್ಯಂ-ಗ್ರಹಿಸಲ್ಕೋಸುಗ ಯೋಗ್ಯವು.

ತಾತ್ಪರ್ಯ ॥ ಅಣುವ್ರತಶೀಲನಾಗಿರುವ ಪುರುಷನು (ಗೃಹಸ್ಥಾಶ್ರಮಧರ್ಮನಿರತನಾದಪುರುಷನು) ಪೂರ್ವೋಕ್ತವಾದ ಅಣುವ್ರತ, ಗುಣವ್ರತ, ಶಿಕ್ಷಾವ್ರತಾದಿಗಳಿಂದೊಡಗೂಡಿದವನಾಗಿ, ಯಾವುದಾದರೂ ಒಂದು ಸ್ಥಾನದಲ್ಲಿ ಯಾವದಾದರೂ ಒಂದು ಕಾಲದೊಳು ಕಾಲಲಬ್ಧ್ಯಾದಿ ಸಾಮಗ್ರಿಯ ಬಲದಿಂದ ಮಹಾವ್ರತಿಯಾಗಿ (ಯತಿಯಾಗಿ) ಆಗುವನು. ಆದಕಾರಣದ ದೆಸೆಯಿಂದ ಗೃಹಸ್ಥ ಧರ್ಮವು ಮೊದಲು ಆಶ್ರಯಿಸುವುದಕ್ಕೋಸುಗ ಯೋಗ್ಯವು. (ಗೃಹಸ್ಥಧರ್ಮವನ್ನು ಮೊದಲು ಆಶ್ರಯಿಸಬೇಕೆಂಬು ಅರ್ಥವು). ॥೨೮॥

ಶ್ಲೋಕ॥ ಇತ್ಯುಕ್ತಃ ಪ್ರತ್ಯಗೃಹ್ಣಾಚ್ಚ
ಸಧರ್ಮಂ ಗೃಹಮೇಧಿನಾಮ್ ।
ಕಃ ಕದಾ ಕೀದೃಶೋ ನ ಸ್ಯಾ-
ದ್ಭಾಗ್ಯೇಸತಿ ಪಚೇಳಿಮೇ ॥ ೨೯ ॥

ಟೀ॥ ಇತಿ-ಈ ಪ್ರಕಾರ, ಉಕ್ತಃ-ಹೇಳಲ್ಪಟ್ಟ, ಸಃ-ಆ ಪುರುಷನು, ಗೃಹಮೇಧಿನಾಂ-ಗೃಹಸ್ಥರ,ಧರ್ಮಂ-ಧರ್ಮವನ್ನು, ಪ್ರತ್ಯಗೃಹ್ಣಾಚ್ಚ-ಅಂಗೀಕರಿಸಿದವನಾಗಿಯೂ ಆದನು., ಭಾಗ್ಯೇ-ಅದೃಷ್ಟವು, ಪಚೇಳಿಮೇ(ಸತಿ)- ಪರಿಪಕ್ವವಾಗುತಲಿರಲಾಗಿ, ಕಃ-ಯಾವನು, ಕದಾ-ಯಾವಾಗ್ಯೆ, ಕೀದೃಶಃ-ಎಂತಹವನಾಗಿ, ನಸ್ಯಾತ್-ಆಗಲಾರನು?.

ತಾತ್ಪರ್ಯ॥ ಈ ಪ್ರಕಾರ ಹೇಳಲ್ಪಟ್ಟ ಉಪದೇಶಿಸಲ್ಪಟ್ಟ ಆ ಪುರುಷನು, ಗೃಹಸ್ಥಧರ್ಮವನ್ನಂಗೀಕರಿಸಿದನು. ಅದೃಷ್ಟವು ಫಲವನ್ನು ಕೊಡುವಕಾಲದೊಳು ಹೇಗಿದ್ದವನು ಹೇಗಾಗುವುದಿಲ್ಲವು?. ( ಅತ್ಯಂತ ನೀಚಸ್ಥಿತಿಯಲ್ಲಿದ್ದರೂ ಅತ್ಯುತ್ತಮಸ್ಥಿತಿಯನ್ನು ಹೊಂದುವನೆಂದು ಭಾವವು. ) ಪುಣ್ಯಪ್ರಭಾವದಿಂದಲೇ ಸಕಲವೂ ಸಿದ್ಧಿಸುವುದರಿಂದ ಐಹಿಕಾಮುಷ್ಮಿಕ ಸುಖಾಪೇಕ್ಷೆಯುಳ್ಳವರು ಸರ್ವಾತ್ಮನಾ ಪುಣ್ಯವಂ ಸಂಪಾದಿಸಬೇಕು. ॥ ೨೯॥

ಶ್ಲೋಕ ॥ ಅತ್ಯಾದರಾನ್ನಿಜಾಪಾರ್ಯ-
ಮಮುಷ್ಮೈ ಪ್ರ ದಾನವಿದ್ದದೌ ।
ನಾದಾನೇ ಕಿನ್ತು ದಾನೇ ಹಿ
ಸತಾಂ ತುಷ್ಯತಿ ಮಾನಸಮ್ ॥೩೦॥

ಟೀ ॥ ದಾನವಿತ್-ದಾನವಿಧಿಯನ್ನು ತಿಳಿದಿರುವ ಜೀವಂಧರಸ್ವಾಮಿಯು, ಅತ್ಯಾದರಾತ್-ಅತಿಪ್ರೀತಿಯ ದೆಸೆಯಿಂದ, ನಿಜಾಪಾರ್ಯಂ-ನಿಜ-ತನ್ನ, ಆಪಾರ್ಯಂ-ಆಭರಣವನ್ನು, ಅಮುಷ್ಮೈ-ಈ ಪುರುಷನಿಗೋಸುಗ, ದದೌ- ಕೊಟ್ಟನು., ಸತಾಂ-ಸತ್ಪುರುಷರ, ಮಾನಸಂ-ಮನಸ್ಸು, ಆದಾನೇ-ಸ್ವೀಕರಿಸೋಣದರಲ್ಲಿ (ತೆಗೆದುಕೊಳ್ಳುವುದರಲ್ಲಿ), ನತುಷ್ಯತಿ-ಸಂತೋಷಿಸುವುದಿಲ್ಲವು., ಕಿಂತು-ಮತ್ತೇನೆಂದರೆ.— ದಾನೇ-ಕೊಡೋಣದರಲ್ಲಿ, ತುಷ್ಯತಿಹಿ-ಸಂತೋಷಿಸುತ್ತದೆಯಲ್ಲವೆ?.

ತಾತ್ಪರ್ಯ॥ ಜೀವಂಧರಸ್ವಾಮಿಯು ಆ ಮಾರ್ಗಸ್ಥನಾದ ಪುರುಷನಿಗೆ ಧರ್ಮಬೋಧೆಯಂಮಾಡಿ ತನ್ನ ಸರ್ವಾಭರಣಗಳನ್ನು ಕೊಟ್ಟನು. ಮೊದಲೇ ಏತಕ್ಕೆ ಕೊಡಬಾರದೆಂದರೆ.— ಜೀವಂಧರ ಕುಮಾರನು ದಾನವಿಧಿಯಂ ತಿಳಿದವನಾದುದರಿಂದ ಉತ್ತಮ, ಮಧ್ಯಮ. ಜಘನ್ಯಪಾತ್ರಗಳನ್ನರಿತು ಸತ್ಪಾತ್ರದಲ್ಲಿ ದಾನಮಾಡಬೇಕೆಂಬ ಶಾಸ್ತ್ರವನ್ನನುಸರಿಸಿ ಧರ್ಮಬೋಧೆಯಿಂದಲಾ ಪುರುಷನಂ ದಾನಯೋಗ್ಯ ಪಾತ್ರವನ್ನಾಗಿಮಾಡಿ, ದಾನಮಾಡಿದನೆಂದರ್ಥವು. ಮತ್ತು ಅಂಥಾ ಅನರ್ಘ್ಯರತ್ನಾಭರಣಗಳಂ ಕೊಟ್ಟು ಬಹಳ ಸಂತೋಷಿಸಿದನು. ಸತ್ಪುರುಷರಿಗೆ ತೆಗೆದುಕೊಳ್ಳುವುದರಲ್ಲಿ ಸಂತೋಷವಿಲ್ಲವು. ಕೊಡುವುದರಲ್ಲಿ ಬಹಳಸಂತೋಷವಲ್ಲವೆ?

ಶ್ಲೋಕ॥ ಅನರ್ಘ್ಯಕಲ್ಪಲಾಭಾಚ್ಚ
ಧರ್ಮಲಾಭಾಚ್ಚ ಪಿಪ್ರಿಯೇ ।
ತಾದಾತ್ವಿಕಸುಖಪ್ರೀತಿ-
ಸ್ಸಂಸೃತೌ ಹಿ ವಿಶೇಷತಃ ॥೩೧॥

ಟೀ॥ ಸಃ-ಆ ಪುರುಷನು, ಅನರ್ಘ್ಯಕಲ್ಪಲಾಭಾಚ್ಚ-ಅನರ್ಘ್ಯ-ಶ್ರೇಷ್ಠವಾದ, ಆಕಲ್ಪ-ಒಡವೆಗಳ, ಲಾಭಾಚ್ಚ-ಲಾಭವದೆಸೆಯಿಂದಲೂ, ಧರ್ಮಲಾಭಾಚ್ಚ-ಧರ್ಮಲಾಭವಾದುದರದೆಸೆಯಿಂದಲೂ, ಪಿಪ್ರಿಯೇ-ಬಹಳವಾಗಿ ಸಂತೋಷಿಸಿದನು., ತಾದಾತ್ವಿಕಸುಖಪ್ರೀತಿಃ-ತಾದಾತ್ವಿಕ-ತತ್ಕಾಲದಲ್ಲಿ ಉಂಟಾಗುವ, ಸುಖ-ಸೌಖ್ಯದಲ್ಲಿ, ಪ್ರೀತಿಃ-ಪ್ರೀತಿಪಡೋಣವು, ಸಂಸೃತೌ-ಸಂಸಾರದಲ್ಲಿ, ವಿಶೇಷತೋಹಿ- ವಿಶೇಷವಾಗಿ ಉಂಟಾಗುತ್ತದೆಯಲ್ಲವೆ ?.

ತಾತ್ಪರ್ಯ ॥ ಆ ಪುರುಷನು ಶ್ರೇಷ್ಠವಾದ ಆಭರಣಗಳು ದೊರೆತದುದರಿಂದಲೂ, ಧರ್ಮವು ಲಭಿಸಿದುದರಿಂದಲೂ, (ಜೀವಂಧರಸ್ವಾಮಿಯು ಮಾಡಿದ ಧರ್ಮೋಪದೇಶದ ದೆಸೆಯಿಂದಲೂ)ಬಹಳವಾಗಿ ಸಂತೋಷಿಸಿದನು. ಸಂಸಾರದಲ್ಲಿ ಪ್ರಾಣಿಗಳಿಗೆ ತತ್ಕಾಲಸುಖದಿಂದ ಬಹಳ ಪ್ರೀತಿಯುಂಟಾಗುವುದಲ್ಲವೆ ? ॥ ೩೧ ॥

ಶ್ಲೋಕ॥ ತಂ ವಿಸೃಜ್ಯ ತತಸ್ಸ್ವಾಮೀ
ತಸ್ಯ ಸ್ಮೃತ್ವೈವ ನಿರ್ಯಯೌ।
ಪ್ರತ್ಯಕ್ಷೇ ಚ ಪರೋಕ್ಷೇ ಚ
ಸಂತೋ ಹಿ ಸಮವೃತ್ತಿಕಾಃ ॥೩೨॥

ಟೀ॥ ತಂ-ಆ ಪುರುಷನನ್ನು, ವಿಸೃಜ್ಯ-ಬಿಟ್ಟು, ತತಃ-ಅನಂತರದಲ್ಲಿ, ಸ್ವಾಮೀ-ಜೀವಂಧರಸ್ವಾಮಿಯು, ತಸ್ಯ-ಅವನನ್ನು, ಸ್ಮೃತ್ವೈವ- ಸ್ಮರಿಸಿಕೊಂಡವನಾಗಿಯೇ, ನಿರ್ಯಯೌ-ಹೊರಟುಹೋದನು., ಸಂತಃ-ಸತ್ಪುರುಷರು, ಪ್ರತ್ಯಕ್ಷೇಚ-ಪ್ರತ್ಯಕ್ಷದಲ್ಲಿಯೂ, ಪರೋಕ್ಷೇಚ - ಕಣ್ಣುಮರೆಯಲ್ಲಿರುವಾಗಲೂ ಕೂಡ ಸಮವೃತ್ತಿಕಾಹಿ-ಸಮ-ಸಮಾನವಾದ, ವೃತ್ತಿಕಾಹಿ-ರೀತಿಯುಳ್ಳವರಲ್ಲವೆ (ಮನೋವ್ಯಾಪಾರವುಳ್ಳವರಲ್ಲವೆ)?.

ತಾತ್ಪರ್ಯ ॥ ಈ ರೀತಿಯಾಗಿ ಜೀವಂಧರಕುಮಾರನು ಅವನಂ[illegible]ಳುಹಿ, ಅನಂತರದಲ್ಲಿ ಅವನನ್ನೇ ಸ್ಮರಿಸಿಕೊಂಡು ಹೊರಟುಹೋದನು

ಸತ್ಪುರುಷರು ಪ್ರತ್ಯಕ್ಷದೊಳು ಯಾವ ಪ್ರೀತಿಯನ್ನಿಡುವರೋ ಕಣ್ಣು ಮರೆಯಲ್ಲಿದ್ದರೂ ತನ್ನ ಇಷ್ಟಜನದಲ್ಲಿ ಅದೇಪ್ರಕಾರ ಪ್ರೀತಿಯನ್ನಿಡುವರಲ್ಲವೆ? ದುರ್ಜನರಲ್ಲವೆ ಪ್ರತ್ಯಕ್ಷದೊಳೊಂದು ಪ್ರಕಾರವಾಗಿಯೂ, ಪರೋಕ್ಷದೊಳೊಂದುಪ್ರಕಾರವಾಗಿಯೂ ಇರುವರು. ॥ ೩೦ ॥

ಶ್ಲೋಕ॥ ಅಥಾರಣ್ಯೇ ಕ್ವಚಿಚ್ಛ್ರಾಂತೋ
ನಿಷಣ್ಣೋ ನಿರುಪದ್ರವಃ ।
ಶರಣ್ಯಂ ಸರ್ವಜೀವಾನಾಂ
ಪುಣ್ಯಮೇವ ಹಿ ನಾಪರಮ್ ॥೩೩॥

ಟೀ॥ ಅಥ-ಅನಂತರದಲ್ಲಿ, (ಸಃ-ಆ ಜೀವಂಧರಕುಮಾರನು), ಅರಣ್ಯೇ-ಮಹಾರಣ್ಯದಲ್ಲಿ, ಕ್ವಚಿತ್-ಒಂದಾನೊಂದುಸ್ಥಲದೊಳು, ಶ್ರಾಂತ(ಸ್ಸನ್)-ಬಳಲಿದವನಾಗಿ, ನಿರುಪದ್ರವ(ಸ್ಸನ್)-ಉಪದ್ರವರಹಿತನಾಗಿ, ನಿಷಣ್ಣಃ- ಕುಳಿತುಕೊಂಡನು., ಸರ್ವಜೀವಾನಾಂ-ಸರ್ವ-ಸಮಸ್ತವಾದ, ಜೀವಾನಾಂ-ಪ್ರಾಣಿಗಳಿಗೆ,ಪುಣ್ಯಮೇವ-ಪುಣ್ಯವೇ, ಶರಣ್ಯಂಹಿ-ರಕ್ಷಕವಲ್ಲವೆ?, ಅಪರಂ-ಮತ್ತೆಯಾವುದು, ನಹಿ-ರಕ್ಷಕವಲ್ಲವಷ್ಟೆ?-

ತಾತ್ಪರ್ಯ ॥ ಅನಂತರದಲ್ಲಿ ಮಹಾರಣ್ಯದೊಳು ಬಳಲಿರುವ ಜೀವಂಧರಕುಮಾರನು, ಒಂದಾನೊಂದು ಸ್ಥಳದೊಳು ಯಾವವಿಧವಾದ ತೊಂದರೆಯೂ ಇಲ್ಲದವನಾಗಿ ಕುಳಿತುಕೊಂಡನು. ಸರ್ವಪ್ರಾಣಿಗಳಿಗೂ ಪುಣ್ಯವೇ ರಕ್ಷಕವಲ್ಲವೆ?. (ಮತ್ತೆಯಾವುದೂ ರಕ್ಷಕವಲ್ಲವು.) (ಅರಣ್ಯದಲ್ಲಿ ಏಕಾಕಿಯಾಗಿದ್ದರೂ ಪುಣ್ಯವಿರುವವರೆಗೂ ಪ್ರಾಣಿಗಳಿಗೆ ಯಾವಭೀತಿಯೂ ಸಂಭವಿಸುವುದಿಲ್ಲವೆಂದರ್ಥವು.) ॥೩೩॥

ಶ್ಲೋಕ॥ ತತ್ರ ಚೈಕಾಕಿನೀಂ ರಾಮಾಂ
ಪಶ್ಯನ್ನಾಸೀತ್ಪರಾಙ್ಮುಖಃ ।
ಅಪದೋಷಾನುಷಂಗಾ ಹಿ
ಕರುಣಾಕೃತಿಸಂಭವಾ ॥೩೪॥

ಟೀ ॥ ತತ್ರಚ-ಅಲ್ಲಿಯೂಕೂಡ, (ಸಃ-ಆ ಜೀವಂಧರಕುಮಾರನು,) ಏಕಾಕಿನೀಂ- ಒಬ್ಬಳೇ ಇರುತಲಿರುವ, ರಾಮಾಂ- ಸುಂದರಿಯಾದ ಸ್ತ್ರೀಯನ್ನು, ಪಶ್ಯನ್(ಸನ್)- ನೋಡುವವನಾಗಿ, ಪರಾಙ್ಮುಖ(ಸ್ಸನ್)-ರಾಗರಹಿತನಾಗಿ (ಮುಖವನ್ನು

ಹಿಂದಿರುಗಿಸಿಕೊಳ್ಳುವವನಾಗಿ),ಆಸೀತ್-ಆದನು., ಕೃತಿಸಂಭವಾ-ಪುಣ್ಯಶಾಲಿಗಳಿಗೆ ಉಂಟಾದ, ಕರುಣಾ-ದಯೆಯು, ಅಪದೋಷಾನುಷಂಗಾಹಿ- ದೋಷಸಂಬಂಧರಹಿತವಲ್ಲವೆ?.

ತಾತ್ಪರ್ಯ ॥ ಜೀವಂಧರಕುಮಾರನು ಆ ಮಹಾರಣ್ಯದೊಳು ಕೂಡ ಒಬ್ಬಳಾಗಿ ಇರುತಲಿರುವ ಸುಂದರಿಯಾದ ಸ್ತ್ರೀಯನ್ನು ನೋಡಿ, ಅನಾಸಕ್ತನಾಗಿ ( ಮುಖವನ್ನು ಹಿಂದಿರುಗಿಸಿಕೊಂಡವನಾಗಿ ) ಆದನು. ಸತ್ಪುರುಷರದಯೆಯು ದೋಷಸಂಬಂಧಕ್ಕೆ ( ಪಾಪಕ್ಕೆ ) ಆಸ್ಪದವಲ್ಲದ ವಿಷಯದೊಳು ಉಂಟಾಗುವುದೇಹೊರತು ಪಾಪಾಸ್ಪದವಾಗುವಹಾಗಿದ್ದರೆ ಪ್ರವರ್ತಿಸುವುದಿಲ್ಲವಷ್ಟೆ ? ॥೩೪॥

ಶ್ಲೋಕ॥ ಸಾ ತು ಜಾತಾ ವೃಷಸ್ಯಂತೀ
ವೃಷಸ್ಕಂಧಸ್ಯ ವೀಕ್ಷಣಾತ್ ।
ಅಪ್ರಾಪ್ತೇ ಹಿ ರುಚಿಸ್ಸ್ತ್ರೀಣಾಂ
ನ ತು ಪ್ರಾಪ್ತೇ ಕದಾಚನ ॥೩೫॥

ಟೀ ॥ ಸಾತು-ಆ ಸ್ತ್ರೀಯಾದರೋ, ವೃಷಸ್ಕಂಧಸ್ಯ–ವೃಷ-ಗೂಳಿಯ, ಸ್ಕನ್ಧಸ್ಯ-ಹಿರಳಿನೋಪಾದಿಯಲ್ಲಿ ಭುಜಶಿರಸ್ಸುಗಳುಳ್ಳಜೀವಂಧರಕುಮಾರನ, ವೀಕ್ಷಣಾತ್-ದರ್ಶನದದೆಸೆಯಿಂದ, ವೃಷಸ್ಯಂತೀ-ಕಾಮುಕಿಯಾಗಿ, ಜಾತಾ-ಆದಳು., ಸ್ತ್ರೀಣಾಂ-ಹೆಂಗಸರಿಗೆ, ಅಪ್ರಾಪ್ತೇ-ಅಯೋಗ್ಯ ಕೆಲಸದಲ್ಲಿ (ಮೋಹಕೃತ್ಯದಲ್ಲಿ), ರುಚಿಃ-ಅಭಿಲಾಷೆಯಲ್ಲವೆ?, ಪ್ರಾಪ್ತೇ-ಯೋಗ್ಯಕೆಲಸದಲ್ಲಿ, ಕದಾಚನ-ಒಂದು ಕಾಲದಲ್ಲಿಯೂ, ನತುರುಚಿಃ-ಪ್ರೀತಿಯು ಉಂಟಾಗುವುದಿಲ್ಲವಷ್ಟೆ?.

ತಾತ್ಪರ್ಯ ॥ ಆ ಸ್ತ್ರೀಯುಳಾದರೋ, ಗೂಳಿಯಹಿರಳಿನೋಪಾದಿಯಲ್ಲಿ ಭುಜಮೂಲಪ್ರದೇಶವುಳ್ಳವನಾಗಿಯೂ, ಉತ್ತಮಪುರುಷಲಕ್ಷಣಗಳಿಂದೊಡಗೂಡಿದವನಾಗಿಯೂ, ಇರುವ ಜೀವಂಧರ ಸ್ವಾಮಿಯನ್ನು ನೋಡಿ, ಸಂಭೋಗೇಚ್ಛೆಯುಳ್ಳವಳಾದಳು. ಸ್ತ್ರೀಯರಿಗೆ ಅಯೋಗ್ಯಕೆಲಸದಲ್ಲಿ ಇಚ್ಛೆಯುಂಟಾಗುವುದೇ ಹೊರತು ಯೋಗ್ಯವಾದಕೆಲಸದಲ್ಲಿ ಬುದ್ಧಿಯುಂಟಾಗುವುದಿಲ್ಲವು. ॥ ೩೫ ॥

ಶ್ಲೋಕ ॥ ಅಶ್ವಸ್ಯಂತೀಂ ವಿಭಾವ್ಯೈನಾ
ಮಾಕೃತಿಜ್ಞೋ ವ್ಯರಜ್ಯತ ।

ಅನುರಾಗಕೃದಜ್ಞಾನಾಂ
ವಶಿನಾಂ ಹಿ ವಿರಕ್ತಯೇ ॥೩೬॥

ಟೀ ॥ ಆಕೃತಿಜ್ಞಃ-ಇಂಗಿತಜ್ಞನಾದ ಜೀವಂಧರಕುಮಾರನು, ಏನಾಂ- ಇವಳನ್ನು, ಅಕ್ಷ್ವಸ್ಯಂತೀಂ(ಸತೀಂ)- ಕಾಮುಕಿಯನ್ನಾಗಿ, ವಿಭಾವ್ಯ-ಊಹಿಸಿ, ವ್ಯರಜ್ಯತ-ವೈರಾಗ್ಯವನ್ನು ಹೊಂದಿದನು., ಅಜ್ಞಾನಾಂ-ಮೂಢರಿಗೆ, ಅನುರಾಗಕೃತ್-ಅನುರಾಗವನ್ನುಂಟುಮಾಡುವ ಸ್ತ್ರೀಯೇಮೊದಲಾದ ವಸ್ತುವು, ವಶಿನಾಂ- ಜಿತೇಂದ್ರಿಯರಿಗೆ, ವಿರಕ್ತಯೇಹಿ-ವೈರಾಗ್ಯಕ್ಕೋಸುಗ ಕಾರಣವಾಗುತ್ತದೆಯಲ್ಲವೆ ?.

ತಾತ್ಪರ್ಯ ॥ ಇಂಗಿತವನ್ನು ಬಲ್ಲವನಾದ ಜೀವಂಧರಕುಮಾರನು ಈ ಸ್ತ್ರೀಯನ್ನು ತನ್ನಂ ಕಾಮಿಸುವವಳನ್ನಾಗಿ ತಿಳಿದು, ಅವಳವಿಷಯದಲ್ಲಿ ವೈರಾಗ್ಯವನ್ನು ವಹಿಸಿದನು. ಮೂಢರಿಗೆ ಅನುರಾಗಕ್ಕೆ ಕಾರಣವಾದ ಸ್ತ್ರೀಯೆಮೊದಲಾದ ವಸ್ತುವು, ಜಿತೇಂದ್ರಿಯರಿಗೆ ವೈರಾಗ್ಯಕ್ಕೇ ವೆ ಕಾರಣವಾಗುವುದಲ್ಲವೆ? (ಶ್ಲೇಷ್ಮಮಯಗೃಹಪ್ರಾಯವಾದ ಸ್ತ್ರೀಯಮುಖವಂ ನೋಡಿ ಪೂರ್ಣಚಂದ್ರಬಿಂಬವೆಂತಲೂ, ತಾವರೆಯಕಮಲವೆಂತಲೂ, ಮಾಂಸದಗಂಟುಗಳಾದ ಸ್ತನಗಳನೀಕ್ಷಿಸಿ ಇದು ಅಮೃತತುಂಬಿದ ಭಂಗಾರದ ಬಿಂದಿಗೆಯೆಂತಲೂ, ಕಾಮಿನಿಯ ನೇತ್ರಗಳಂ ನೈದಿಲೆಯಪುಷ್ಪಗಳೆಂತಲೂ, ಮನ್ಮಥಬಾಣಗಳೆಂತಲೂ, ಮಲಮೂತ್ರಮಯಸ್ಥಾನವು ಕೇವಲಸುಖಾಸ್ಪದಸ್ಥಲವೆಂತಲೂ ಮೂಢರಾದವರು ಮೋಹಿಸುವರು. ವಿವೇಕಿಗಳಾದರೋ ಸ್ತ್ರೀಯರನ್ನು ಕೀವು, ಶ್ಲೇಷ್ಮ, ಮಾಂಸ, ರಕ್ತ, ಮೂಳೆ, ಮೆದಳು, ಮಲ, ಮೂತ್ರಗಳೆಂಬಿವುತುಂಬಿದ ಒಂದು ಚರ್ಮದಚೀಲವೆಂದು ತಿಳಿದು, ಜುಗುಪ್ಸೆಪಡುವರೆಂದಭಿಪ್ರಾಯವು.)॥೩೬॥

ಶ್ಲೋಕ॥ ಪೃಥಕ್ಚೇದಂಗನಿರ್ಮಾಣಂ
ಚರ್ಮಮಾಂಸಮಲಾದಿಕಂ।
ನಿರ್ಜುಗುಪ್ಸೋತ್ರ ತತ್ಪಂಜೀ
ಮೂಢಾತ್ಮಾ ಹನ್ತ ಮುಹ್ಯತಿ ॥೩೭॥

ಟೀ॥ಅಂಗನಿರ್ಮಾಣಂ-ಅಂಗ-ಶರೀರದ,ನಿರ್ಮಾಣಂ-ಸೃಷ್ಟಿಯು, ಪೃಥಕ್ಚೇತ್-ಬೇರೆಯಾಗಿದ್ದದ್ದೇಆದರೆ, ಚರ್ಮಮಾಂಸಮಲಾದಿಕಂ-ಚರ್ಮ-ತೊಗಲೂ, ಮಾಂಸ-

ಮಾಂಸವು, ಮಲ-ಅಮೇಧ್ಯವೂ, ಆದಿಕಂ-ಇವೇಮೊದಲಾಗಿವುಳ್ಳದ್ದಾಗಿಯುಲ್ಲವೇ(ಇರು ವುದು), ಸಜುಗುಪ್ಸಃ-ಜುಗುಪ್ಸೆಯೊಡನೆಕೂಡಿರುವ, ಮೂಢಾತ್ಮಾ-ಮೂಢನಾದ ಆತ್ಮನು, ತತ್ಪುಂಜೇ-ತತ್-ಆ ಚರ್ಮಮಾಂಸಮಲಾದಿಗಳ, ಪುಂಜೇ-ರಾಶಿಸ್ವರೂಪವಾಗಿರುವ, ಅತ್ರ-ಈ ದೇಹದಲ್ಲಿ, ಮುಹ್ಯತಿ-ಮೋಹಪಡುತ್ತಾನೆ., ಹನ್ತ-ಆಶ್ಚರ್ಯವು!!.

ತಾತ್ಪರ್ಯ ॥ ಜೀವಂಧರಸ್ವಾಮಿಯು ತನ್ನಲ್ಲಿ ತಾನೇ ಆಲೋಚಿಸುತ್ತಾನೆ. ಏನೆಂದರೆ.—

ದೇಹಕ್ಕೆಸೇರಿದ ವಸ್ತುಗಳು ಬೇರೆಬೇರೆಯಾಗಿ ಸೃಷ್ಟಿಸಿದ್ದಲ್ಲಿ ಚರ್ಮಮಾಂಸಮಲರಕ್ತಮುಂತಾದ ಹೇಯವಸ್ತುಗಳೇಹೊರತಾಗಿ ಮತ್ತೆಯಾವ ಶ್ರೇಷ್ಠವಸ್ತುವೂ ಈ ದೇಹದಲ್ಲಿ ಇಲ್ಲವಷ್ಟೆ?. ಇಂಥಾ ಮಲಮಯರಾಶಿಯಾದ ಈ ದೇಹದಲ್ಲಿ ಪರಮಮೂಢಾತ್ಮನಲ್ಲವೆ ಮೋಹಪಡುವನು. ಪ್ರತ್ಯಕ್ಷವಾಗಿ ಅತ್ಯಂತ ಹೇಯವಾದ ಹೆಂಗಸಿನ ದೇಹವನ್ನು ಅತ್ಯಂತ ಭೋಗಯೋಗ್ಯವೆಂದು ತಿಳಿಯುವ ಮೂಢಾತ್ಮನ ಈ ಅಜ್ಞಾನವು ಬಹಳ ಆಶ್ಚರ್ಯಕರವಾದ್ದು. ॥ ೩೭ ॥

ಶ್ಲೋಕ॥ ದುರ್ಗಂಧಮಲಮಾಂಸಾದಿ
ವ್ಯತಿರಿಕ್ತಂ ವಿವೇಚನೇ ।
ನೇಕ್ಷ್ಯತೇ ಜಾತು ದೇಹೇಸ್ಮಿ-
ನ್ಮೋಹೇ ಕೋಹೇತುರಾತ್ಮನಾಮ್ ॥ ೩೮ ॥

ಟೀ ॥ ವಿವೇಚನೇ(ಸತಿ)-ಪರ್ಯಾಲೋಚಿಸಿ ದೇಹಸ್ವರೂಪವಂ ನೋಡುತ್ತಿರಲಾಗಿ, ಅಸ್ಮಿನ್ದೇಹೇ-ಈ ದೇಹದಲ್ಲಿ, ದುರ್ಗಂಧಮಲಮಾಂಸಾದಿವ್ಯತಿರಿಕ್ತಂ-ದುರ್ಗಂಧ-ಸಹಿಸಲಶಕ್ಯವಾದ ದುರ್ವಾಸನೆಯುಳ್ಳ, ಮಲ-ನವದ್ವಾರಗಳಲ್ಲಿಯೂ ಬರುವ ಮಲವೂ, ಮಾಂಸ-ಮಾಂಸವೂ, ಆದಿ-ಇವೇಮೊದಲಾದ ಹೇಯಪದಾರ್ಥಕ್ಕಿಂತಲೂ, ವ್ಯತಿರಿಕ್ತಂ-ಬೇರೆಯಾದ ಉತ್ಕೃಷ್ಟವಸ್ತುವು, ಜಾತು-ಯಾವಾಗಲೂ, ನೇಕ್ಷ್ಯತೇ-ನೋಡಲ್ಪಡುವುದಿಲ್ಲವು., ಆತ್ಮನಾಂ-ಆತ್ಮಗಳಿಗೆ, ಮೋಹೇ-ಪ್ರೀತಿಪಡೋಣವರೊಳು, ಹೇತುಃ-ಕಾರಣವು, ಕಃ-ಯಾವುದು?.

ತಾತ್ಪರ್ಯ ॥ ದೇಹಸ್ವಭಾವವನ್ನು ಚೆನ್ನಾಗಿ ಆಲೋಚಿಸಿ ನೋಡುವಲ್ಲಿ ಸಹಿಸಲಶಕ್ಯವಾದ ಮಲ ಮಾಂಸಾದಿಗಳಿಗಿಂತಲೂ ಬೇರೆಯಾದ ಉತ್ಕೃಷ್ಟವಸ್ತುವು ಯಾವಕಾಲದಲ್ಲಿಯೂ ನೋಡಲ್ಪಡುವುದಿಲ್ಲವು

ಹೀಗಿದ್ದಾಗ್ಯೂ ಕಾಮಿನೀ ಕಾಮುಕರು ಈ ಹೇಯಶರೀರದಲ್ಲಿ ಪರಸ್ಪರವಾಗಿ ಅತ್ಯಂತ ವ್ಯಾಮೋಹಪಡುತ್ತಾರೆಯಷ್ಟೆ ? ಇದಕ್ಕೇನುಕಾರವೊ ? ॥ ೩೮ ॥

ಶ್ಲೋಕ॥ ಅಜ್ಞಾತಮಶುಚೇರ್ಬೀಜಂ
ಜ್ಞಾತ್ವಾ ವ್ಯೂಹಂ ಚ ದೇಹಕಮ್ ।
ಆತ್ಮಾತ್ರ ಸಸ್ಪೃಹೋ ವಕ್ತಿ
ಕರ್ಮಾಧೀನತ್ವಮಾತ್ಮನಃ ॥ ೩೯ ॥

ಟೀ ॥ ಅಶುಚೇಃ-ಅಶುದ್ಧಿಗೆ, ಬೀಜಂ-ಮೂಲಕಾರಣವೆಂಬುದಾಗಿ, ಅಜ್ಞಾತಂ-ತಿಳಿಯಲ್ಪಡದೇಇರುವ, ದೇಹಕಂ-ಹೇಯದೇಹವನ್ನು, ವ್ಯೂಹಂ-ಮಲಮಯಪುದ್ಗಲ (ಸಮೂಹವನ್ನಾಗಿ) ಪುಂಜವನ್ನಾಗಿ, ಜ್ಞಾತ್ವಾಚ-ತಿಳಿದೂಕೂಡ, ಅತ್ರ-ಈ ದೇಹದಲ್ಲಿ, ಸಸ್ಪೃಹಃ-ಆಶೆಯಿಂದೊಡಗೂಡಿರುವ, ಆತ್ಮಾ-ಆತ್ಮನು, ಆತ್ಮನಃ-ತನ್ನ, ಕರ್ಮಾಧೀನತ್ವಂ-ಮೋಹನೀಯಕರ್ಮಕ್ಕಧೀನವಾಗಿರೋಣವನ್ನು, ವಕ್ತಿ-ಹೇಳುತ್ತಲಿವೆ, (ಸೂಚಿಸುತ್ತಲಿದೆ).

ತಾತ್ಪರ್ಯ ॥ ಅಶುದ್ಧಿಗೆ ಕಾರಣವೆಂತಲೂ, ಮಲಮಾಂಸಾದಿರಾಶಿರೂಪವೆಂತಲೂ, ಮೊದಲುತಿಳಿಯಲ್ಪಡದೇ ಇದ್ದು, ಆ ಬಳಿಕ ತಿಳಿದಾಗ್ಯೂಕೂಡ ಆತ್ಮನು ಈದೇಹದಲ್ಲಿ ಅತ್ಯಾಸಕ್ತನಾಗಿರುವ ರೀತಿಯನ್ನು ಭಾವಿಸಿನೋಡುತ್ತಿರಲಾಗಿ ಇಂಥಾ ಅಜ್ಞಾನಕ್ಕೆ ಕಾರಣವು ಮೋಹನೀಯಕರ್ಮವೇ ಹೊರತು ಮತ್ತೆಯಾವುದೂ ಕಾರಣವಲ್ಲವೆಂದು ಸ್ಪಷ್ಟವಾಗಿ ತಿಳಿಯಲ್ಪಡುತ್ತದೆ. ॥ ೩೯ ॥

ಶ್ಲೋಕ॥ ಮದೀಯಂ ಮಾಂಸಲಂ ಮಾಂಸ-
ಮವಿಮಾಂಸೇಯಮಂಗನಾ ।
ಪಶ್ಯಂತೀ ಘಾರವಶ್ಯಾಂಧಾ
ತತೋ ಯಾಮ್ಯನ್ಯತೋಥವಾ ॥ ೪೦ ॥

ಟೀ ॥ ಇಯಮಂಗನಾ-ಈ ಸ್ತ್ರೀಯು, ಮದೀಯಂ-ನನ್ನಸಂಬಂಧಿಯಾದ, ಮಾಂಸಲಂ-ಅತ್ಯಂತದಪ್ಪನಾದ, ಮಾಂಸಂ-ಮಾಂಸಪಿಂಡಸ್ವರೂಪವಾದ ದೇಹವನ್ನು, ಅವಿಮಾಂಸಾ-ವಿಚಾರಮಾಡದೇ ಇರುವವಳಾಗಿ, ಪಶ್ಯಂತೀ(ಸತೀ)-ನೋ

ಡುತಲಿರುವವಳಾಗಿ, ಪಾರವಶ್ಯಾಂಧಾ–ಪಾರವಶ್ಯ-ಕಾಮಪರವಶತೆಯಿಂದ, ಅಂಧಾ (ಸತೀ)-ಮೂಢಳಾಗಿ, ಅಭೂತ್-ಆದಳು., ಅಥವಾ-ಹಾಗಲ್ಲದಿದ್ದರೆ, ತತಃ-ಆ ಕಾರಣವದೆಸೆಯಿಂದ, ಅನ್ಯತಃ-ಮತ್ತೊಂದು ನಿರ್ಬಾಧ ಪ್ರದೇಶಕ್ಕೆ, ಯಾಮಿ-ಹೋಗುತ್ತೇನೆ.

ತಾತ್ಪರ್ಯ ॥ ಈ ಸ್ತ್ರೀಯು ನನ್ನ ಸಂಬಂಧಿಯಾದ ದೇಹವನ್ನು ನೋಡಿ; ಇದು ದಪ್ಪವಾದ ಮಾಂಸಪಿಂಡವೆಂದು ಭಾವಿಸದೆ ತನ್ನ ಭೋಗಕ್ಕೆ ಅತ್ಯಂತ ಯೋಗ್ಯವಾದುದೆಂದು ಭಾವಿಸಿ ಕಾಮಾಂಧಳಾದಳು. ಈಬಳಿಯೊಳದ್ದರೆ ಪಾಪಸಂಭವಿಸುವುದಾದುದರಿಂದ ಆತ್ಮಹಿತಾರ್ಥವಾಗಿ ಮತ್ತೊಂದೆಡೆಗೆ ಹೋಗುವೆನು. ಎಂಬದಾಗಿ ದೇಹಾತ್ಮ ವಿವೇಕವಂ ಪಡೆದು ಅಧರ್ಮಕ್ಕೆ ಹೆದರುವವನಾದ ಜೀವಂಧರಸ್ವಾಮಿಯು ತನ್ನಲ್ಲಿತಾನೇ ಆಲೋಚಿಸಿದನು. ॥ ೪೦ ॥

ಶ್ಲೋಕ॥ ಅಂಗಾರಸದೃಶೀ ನಾರೀ
ನವನೀತಸಮಾ ನರಾಃ ।
ತತ್ತತ್ಸಾನ್ನಿಧ್ಯಮಾತ್ರೇಣ
ದ್ರವೇತ್ಪುಂಸಾಂ ಹಿ ಮಾನಸಮ್ ॥ ೪೧ ॥

ಟೀ ॥ ನಾರೀ-ಹೆಂಗಸು, ಅಂಗಾರಸದೃಶೀ- ಬೆಂಕಿಯುಕೆಂಡಕ್ಕೆ ಸಮಾನವಾದವಳು., ನರಾಃ-ಪುರುಷರು, ನವನೀತಸಮಾಃ–ನವನೀತ-ಬೆಣ್ಣೆಗೆ, ಸಮಾಃ-ಸಮಾನರು., ತತ್ತತ್ಸಾನ್ನಿಧ್ಯಮಾತ್ರೇಣ- ಆ ಸ್ತ್ರೀ ಪುರುಷರ ಸನ್ನಿಧಾನ ಮಾತ್ರದಿಂದ, ಪುಂಸಾಂ-ಪುರುಷರ, ಮಾನಸಂ- ಮನಸ್ಸು, ದ್ರವೇದ್ಧಿ-ಕರಗುವುದಲ್ಲವೆ ?.

ತಾತ್ಪರ್ಯ ॥ ಜೀವಂಧರಸ್ವಾಮಿಯು ಸ್ತ್ರೀಸಾನ್ನಿಧ್ಯ ಪ್ರಯುಕ್ತ ದೋಷವಂ ಪರ್ಯಾಲೋಚಿಸುತ್ತಾನೆ. ಏನೆಂದರೆ.—ಹೆಂಗಸು ಬೆಂಕಿಕೆಂಡದಂತಾದುದರಿಂದಲೂ, ಪುರುಷರು ಬೆಣ್ಣೆಯಂತಾದುದರಿಂದಲೂ ಸ್ತ್ರೀಯಾದವಳು ಪುರುಷನ ಸಮೀಪದಲ್ಲಿದ್ದಮಾತ್ರಕ್ಕೇನೆ ಪುರುಷರ ಮನಸ್ಸು ಕರಗುವುದು. ॥ ೪೧ ॥

ಶ್ಲೋಕ ॥ ಸಲ್ಲಾಪಸಹವಾಸಾದಿ
ತದ್ವರ್ಜ್ಯಂ ಪಾಪಭೀರುಣಾ ।

ಬಾಲಯಾ ವೃದ್ಧಯಾ ಮಾತ್ರಾ
ದುಹಿತ್ರಾ ವಾ ವ್ರತಸ್ಥಯಾ ॥ ೪೨ ॥

ಟೀ ॥ ಪಾಪಭೀರುಣಾ-ಪಾಪದದೆಸೆಯಿಂದ ಭಯಪಡುವ ಪುರುಷನಿಂದ, ಬಾಲಯಾ-ಬಾಲೆಯೊಡನೆಯಾಗಲೀ, ವೃದ್ಧಯಾ- ಮುದುಕಿಯೊಡನೆಯಾಗಲೀ, ಮಾತ್ರಾ-ತಾಯಿಯೊಡನೆಯಾಗಲಿ, ವ್ರತಸ್ಥಯಾ-ವ್ರತದಲ್ಲಿರುವಸ್ತ್ರೀಯೊಡನೆಯಾಗಲೀ, ದುಹಿತ್ರಾವಾ-ಮಗಳೊಡನೆಯೇ ಆಗಲಿ, ಸಲ್ಲಾಪಸಹವಾಸಾದಿ– ಸಲ್ಲಾಪ-ಮಾತನಾಡೋಣವೂ, ಸಹವಾಹ-ಸಹವಾಸಮಾಡೋಣವೂ, ಆದಿ-ಈ ಮೊದಲಾದಕೃತ್ಯಗಳು, ತತ್-ಆ ಕಾರಣದದೆಸೆಯಿಂದ, ವರ್ಜ್ಯಂ-ಬಿಡಲೋಸುಗಯೋಗ್ಯವು.

ತಾತ್ಪರ್ಯ ॥ ಆ ಕಾರಣದದೆಸೆಯಿಂದ ( ಸ್ತ್ರೀಸಾನ್ನಿಧ್ಯವೇ ಅನರ್ಥಕಾರಣವಾದುದರದೆಸೆಯಿಂದ ಪಾಪಕ್ಕೆ ಹೆದರುವ ಪುರುಷನು ಬಾಲೆಯೊಡನೆಯಾಗಲೀ, ಮುದುಕಿಯೊಡನೆಯಾಗಲೀ, ತಾಯಿಯೊಡನೆಯಾಗಲೀ, ಮಗಳೊಡನೆಯೇ ಅಗಲೀ, ವ್ರತದಲ್ಲಿರುವ ಸ್ತ್ರೀಯೊಡನೆಯೇ ಆಗಲಿ, ಸಲ್ಲಾಪಸಹವಾಸಾದಿಗಳಂ ಬಿಡಬೇಕು. ಪಾಪಕ್ಕೆ ಹೆದರದವರವಿಷಯದಲ್ಲಿ ಶಾಸ್ತ್ರವು ನಿರರ್ಥಕವೆಂದು ಭಾವವು. ) ಮತ್ತು, ಕಾಮಾಂಧರು ಸ್ತ್ರೀಮಾತ್ರದಲ್ಲಿ ಮೋಹವಿಡುವರೇ ಹೊರತು ಇವಳು ಬಾಲೆಯು; ಇವಳು ವೃದ್ಧಳು, ಇವಳು ತಾಯಿಯು; ಇವಳು ಮಗಳು; ಇವಳು ವ್ರತಸ್ಥೆಯೆಂಬ ವಿಚಾರವಂ ಮಾಡರು. ಯೇನಕೇನಾಪಿಪ್ರಕಾರೇಣತಮ್ಮ ಕಾಮಶಾಂತಿಯನ್ನೇ ಫಲವನ್ನಾಗಿಭಾವಿಸುವರು. ( ಆದುದರಿಂದ ಸ್ತ್ರೀಮೋಹದಂತೆ ಆತ್ಮನಿಗೆ ಮೂಢತ್ವವನ್ನುಂಟುಮಾಡುವುದು ಬೇರೆಯಾವುದೂ ಇಲ್ಲವೆಂದಭಿಪ್ರಾಯವು. ॥ ೪೨ ॥

ಶ್ಲೋಕ ॥ ಇತಿವೈರಾಗ್ಯತರ್ಕೇಣ
ತತೋ ಯಾತುಂ ಪ್ರಚಕ್ರಮೇ ।
ಭೇತವ್ಯಂ ಖಲು ಭೇತವ್ಯಂ
ಪ್ರಾಜ್ಞೈರಜ್ಞೋಚಿತಾತ್ಪದಾತ್ ॥ ೪೩ ॥

ಟೀ ॥ ಇತಿ- ಈ ಪ್ರಕಾರ, ವೈರಾಗ್ಯತರ್ಕೇಣ- ವೈರಾಗ್ಯದ ವಿಚಾರದಿಂದ, ತತಃ-ಆ ಸ್ಥಾನದದೆಸೆಯಿಂದ, ಯಾತುಂ-ಹೋದಹಲೋಸುಗ, ಪ್ರಚಕ್ರಮೇ-ಪ್ರಾ

ರಂಭಿಸಿದನು., ಪ್ರಾಜ್ಞೈಃ-ಪ್ರಾಜ್ಞರಾದ ಸತ್ಪುರುಷರಿಂದ, ಅಜ್ಞೋಚಿತಾತ್-ಮೂಢರಿಗೆ ಯೋಗ್ಯವಾದ ಪಾಪದಸೆಯಿಂದ, ಪರಂ-ವಿಶೇಷವಾಗಿ, ಭೇತವ್ಯಂ-ಹೆದರತಕ್ಕದ್ದು ಯೋಗ್ಯವು., ಭೇತವ್ಯಂಖಲು-ಹೆದರಲೇಬೇಕು.

ತಾತ್ಪರ್ಯ ॥ ಈಪ್ರಕಾರ ವೈರಾಗ್ಯದ ವಿಚಾರದಿಂದ ಜೀವಂಧರ ಕುಮಾರನು ಆ ಸ್ಥಳವಂಬಿಟ್ಟು ಮುಂದಕ್ಕೆ ಹೊರಡಲಾರಂಭಿಸಿದನು. ಪ್ರಾಜ್ಞರು ಮೂಢರಿಗೆ ಯೋಗ್ಯವಾದ ಪಾಪದದೆಸೆಯಿಂದ ಬಹಳವಾಗಿ ಹೆದರಲೇಬೇಕು. ॥ ೪೩ ॥

ಶ್ಲೋಕ ॥ ವಿರಕ್ತಮೇವ ರಕ್ತಾಸಾ
ನಿಶ್ಚಿಕಾಯ ವಿಪಶ್ಚಿತಮ್ ।
ನಿಸರ್ಗಾದಿಂಗಿತಜ್ಞಾನ-
ಮಂಗನಾಸು ಹಿ ಜಾಯತೇ ॥ ೪೪ ॥

ಟೀ ॥ ರಕ್ತಾ-ಜೀವಂಧರಸ್ವಾಮಿಯಲ್ಲಿ ಆಶೆಯುಳ್ಳ, ಸಾ-ಆಸ್ತ್ರೀಯು, ವಿಪಶ್ಚಿತಂ-ವಿದ್ವಾಂಸನಾದ ಜೀವಂಧರಸ್ವಾಮಿಯನ್ನು, ವಿರಕ್ತಮೇವ - ವೈರಾಗ್ಯಶಾಲಿಯನ್ನಾಗಿಯೇ, ನಿಶ್ಚಿಕಾಯ-ನಿಶ್ಚಯಿಸಿದಳು., ನಿಸರ್ಗಾತ್-ಸ್ವಭಾವದಸೆಯಿಂದ, ಇಂಗಿತಜ್ಞಾನಂ-ಇಂಗಿತ-ಆಕಾರದಿಂದ, ಜ್ಞಾನಂ-ಮನೋಭಾವವನ್ನುತಿಳಿಯೋಣವು, ಅಂಗನಾಸು-ಸ್ತ್ರೀಯರಲ್ಲಿ, ಜಾಯತೇಹಿ-ಉಂಟಾಗುವುದಲ್ಲವೆ?.

ತಾತ್ಪರ್ಯ ॥ ಜೀವಂಧರಸ್ವಾಮಿಯಲ್ಲಿ ಅತ್ಯಂತ ಅನುರಾಗವುಳ್ಳ ಆ ಸ್ತ್ರೀಯು ವಿದ್ವಾಂಸನಾದ ಜೀವಂಧರ ಕುಮಾರನನ್ನು ವೈರಾಗ್ಯಶಾಲಿಯನ್ನಾಗಿಯೇ ನಿಶ್ಚಯಿಸಿದಳು. ಮನುಷ್ಯನ ಮುಖಭಾವಾದಿಗಳನ್ನು ನೋಡಿ ಮನೋಭಾವವು ತಿಳಿಯೋಣವು ಸ್ತ್ರೀಜಾತಿಗೆ ಸಹಜಗುಣವಲ್ಲವೆ? ॥ ೪೪ ॥

ಶ್ಲೋಕ ॥ ತಸ್ಯ ಸ್ವಾಂತಂ ವಶೀಕರ್ತುಂ
ಸೋದ್ಯಮಿಯಮೂಚುಷೀ ।
ಪ್ರತಾರಣವಿಧೌಸ್ತ್ರೀಣಾಂ
ಬಹುದ್ವಾರಾ ಹಿ ದುರ್ಮತಿಃ ॥ ೪೫ ॥

ಟೀ ॥ ಇಯಂ-ಈ ಸ್ತ್ರೀಯು, ತಸ್ಯ-ಆ ಜೀವಂಧರಸ್ವಾಮಿಯ, ಸ್ವಾಂತಂ

ಮನಸ್ಸನ್ನು, ವಶೀಕರ್ತುಂ-ಸ್ವಾಧೀನಪಡಿಸಿಕೊಳ್ಳಲೋಸುಗ, ಸ್ವೋದನ್ತಂ-ತನ್ನ ವೃತ್ತಾಂತವನ್ನು, ಊಚಿಷೀ-ಹೇಳಿದಳು., ಪ್ರತಾರಣವಿಧೌ-ಮೋಸದ ಕೆಲಸದಲ್ಲಿ, ಸ್ತ್ರೀಣಾಂ-ಹೆಂಗಸರಿಗೆ, ದುರ್ಮತಿಃ-ದುರ್ಬುದ್ಧಿಯು, ಬಹುಪ್ರಕಾರಾ- ನಾನಾಮುಖವಾಗಿ ಉಂಟಾಗುವುದಲ್ಲವೆ ?.

ತಾತ್ಪರ್ಯ ॥ ಈ ಸ್ತ್ರೀಯು ಆ ಜೀವಂಧರಕುಮಾರನ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಲೋಸುಗ ತನ್ನ ವೃತ್ತಾಂತವನ್ನು ಹೇಳಿದಳು. ಮೋಸಗೊಳಿಸುವಿಕೆಯಲ್ಲಿ ಸ್ತ್ರೀಯರಿಗೆ ದುರ್ಬುದ್ಧಿಯು ನಾನಾಪ್ರಕಾರವಾಗಿ ಉಂಟಾಗುತ್ತೆಯಲ್ಲವೆ ? ॥ ೪೫ ॥

ಶ್ಲೋಕ ॥ ವಿದ್ಧಿ ದೀನಾಂ ಮಹಾಭಾಗ-
ಮಾಂ ವಿದ್ಯಾಧರಕನ್ಯಕಾಮ್ ।
ಸ್ಯಾಲೇನಾತ್ರ ಬಲಾನ್ನೀತಾಂ
ತ್ಯಕ್ತಾಮಾತ್ಮಪ್ರಿಯಾ ಭಯಾತ್ ॥ ೪೬ ॥

ಟೀ ॥ ಹೇ ಮಹಾಭಾಗ-ಎಲೈ ಮಹಾಭಾಗ್ಯಶಾಲಿಯಾದವನೇ !, ಸ್ಯಾಲೇನ-ಭಾವಮೈದುನನಿಂದ, ಅತ್ರ-ಇಲ್ಲಿ, ಬಲಾತ್-ಬಲಾತ್ಕಾರದದೆಸೆಯಿಂದ, ನೀತಾಂ-ಐದಿಸಲ್ಪಟ್ಟ, ಆತ್ಮಪ್ರಿಯಾಭಯಾತ್- ತನ್ನಹೆಂಡತಿಯ ಭಯದದೆಸೆಯಿಂದ, ತ್ಯಕ್ತಾಂ-ಬಿಡಲ್ಪಟ್ಟ, ದೀನಾಂ-ಅನಾಥಳಾದ, ಮಾಂ-ನನ್ನನ್ನು, ವಿದ್ಯಾಧರಕನ್ಯಕಾಂ-ವಿದ್ಯಾಧರಕನ್ನಿಕೆಯನ್ನಾಗಿ, ವಿದ್ಧಿ-ತಿಳಿ.

ತಾತ್ಪರ್ಯ ॥ ಎಲೈ ಮಹಾಭಾಗ್ಯಶಾಲಿಯೆ ! ನನ್ನನ್ನು ಅನಾಥಳನ್ನಾಗಿತಿಳಿ. ನಾನು ವಿದ್ಯಾಧರಕನ್ನಿಕೆಯು, ನನ್ನಭಾವಮೈದುನನು ನನ್ನನ್ನು ಬಲಾತ್ಕಾರದಿಂದ ಇಲ್ಲಿಗೆ ಕರದುಕೊಂಡು ಬಂದನು. ತನ್ನ ಹೆಂಡತಿಯ ಭಯದದೆಸೆಯಿಂದ ಇಲ್ಲೇಬಿಟ್ಟು ಹೊರಟುಹೋದನು. ಎಂದುವಂಚನೆಯ ಮಾತನ್ನಾಡಿದಳು. (ಎಲೈ ಮಹಾ ಭಾಗ್ಯಶಾಲಿಯೇ ! ನಾನು ವಿದ್ಯಾಧರಕನ್ನಿಕೆಯೆಂದು ಹೇಳುವ ಆಸ್ತ್ರೀಗೆ ಭಾವವೇನೆಂದರೆ.– ನಾನು ನಿನ್ನಯ ಭೋಗಯೋಗ್ಯವಾದ ಉತ್ತಮಕುಲದಲ್ಲಿಯೇ ಹುಟ್ಟಿದವಳು. ಮತ್ತು, ವಿದ್ಯಾಸಿದ್ಧಿಯುಳ್ಳವಳು. ಆದುದರಿಂದಲೇ ಯಾವ ಅಪಾಯಕ್ಕೂ ನೀನು ಅಂಜಬೇಡ. ಮತ್ತು, ನಾನು ಕನ್ನಿಕೆಯಾದುದರಿಂದ ನಿರ್ದೋಷವಾಗಿ ವಿವಾಹಯೋಗ್ಯಳಾಗಿಯೂ ಇರುವೆನು. ಆದ

ರೆ, ಈಗ ನಾನಾಗಿ ವ್ಯಭಿಚಾರಿಣೀಸ್ತ್ರೀಯಂತೆ ಪುರುಷನನ್ನು ಹುಡಿಕಿಕೊಂಡು ಬಂದವಳಲ್ಲವು. ಮುಂದಕ್ಕೂ ಇವಳು ಈ ದುರ್ನಡತೆಯುಳ್ಳವಳೆಂದು ತಿಳಿಯಬೇಡ. ಇದು ನನ್ನ ಭಾವಮೈದುನನ ದೋಷವು. ನಿನ್ನ ಭಾಗ್ಯದಿಂದಲೇ ನಾನು ಇಲ್ಲಿಗೆ ಬರುವಕಾರಣವು ಸಂಭವಿಸಿದುದೆಂದು ಭಾವವು.) ॥ ೪೬ ॥

ಶ್ಲೋಕ॥ ಅನಂಗತಿಲಕಾಂ ನಾಮ್ನಾ<br>
ಪುಂಸಾಂ ತಿಲಕ ರಕ್ಷ ಮಾಮ್।<br>
ಅಶರಣ್ಯಶರಣ್ಯತ್ವಂ<br>
ವರೇಣ್ಯೇ ವರ್ತತಾಮಿತಿ ॥ ೪೭ ॥

ಟೀ ॥ ಪುಂಸಾಂ- ಪುರುಷರಿಗೆ, ಹೇ ತಿಲಕ-ಎಲೈ ಶ್ರೇಷ್ಠನಾದವನೇ!, ನಾಮ್ನಾ-ಹೆಸರಿನಿಂದ, ಅನಂಗತಿಲಕಾಂ-ಅನಂಗತಿಲಕೆಯೆಂಬ, ಮಾಂ-ನನ್ನನ್ನು, ರಕ್ಷ-ರಕ್ಷಿಸು, ಅಶರಣ್ಯಶರಣ್ಯತ್ವಂ- ಅಶರಣ್ಯ- ಅನಾಥರಿಗೆ, ಶರಣ್ಯತ್ವಂ - ರಕ್ಷಕನಾಗಿರೋಣವು, ವರೇಣ್ಯೇ-ಶ್ರೇಷ್ಠನಾದ ನಿನ್ನಲ್ಲಿ, ವರ್ತತಾಂ-ಇರಲಿ., ಇತಿ- ಹೀಗೆಂದು, (ಅವೋಚತ್-ಹೇಳಿದಳು.)

ತಾತ್ಪರ್ಯ ॥ ಎಲೈ ಪುರುಷರಲ್ಲಿ ತಿಲಕಪ್ರಾಯನಾದವನೇ! ನಾನು ಅನಂಗತಿಲಕಾ ಎಂದು ನಾಮಧೇಯವುಳ್ಳವಳು. ನನ್ನನ್ನು ರಕ್ಷಿಸು. ಶ್ರೇಷ್ಠನಾದ ನಿನಿಗೆ ಅನಾಥರನ್ನು ರಕ್ಷಿಸೋಣವು ಇರಲಿ. ಎಂಬದಾಗಿ ನುಡಿದಳು. ( ಅನಾಥರಕ್ಷಣವು ಪರಮಧರ್ಮವಲ್ಲವೆ? ನಿನ್ನಂಥಸತ್ಪುರುಷನು ದೀನಳಾಗಿ ಪ್ರಾರ್ಥಿಸುವ ಯುನ್ನಿಷ್ಟಾರ್ಥವು ಪೂರ್ತಿಮಾಡದೇ ಧರ್ಮಪರಿತ್ಯಾಗಮಾಡಹುದೇ ?. ಮತ್ತು, ಅನಂಗತಿಲಕಾ ಎಂಬ ನಾಮಧೇಯ ವುಳ್ಳ ನನ್ನನ್ನು, ಪುರುಷರೊಳು ತಿಲಕಪ್ರಾಯನಾದ ನೀನು ರಕ್ಷಿಸೆಂಬ ಪ್ರಾರ್ಥನೆಯಿಂದ ಸೌಂದರ್ಯ ಸೌಕುಮಾರ್ಯ ಲಾವಣ್ಯ ರತಿಕಲಾಚಾತುರ್ಯಾದಿ ಗುಣಗಳಿಂ ಕಾಮನಿಗೆ ತಿಲಕಪ್ರಾಯಳಾದುದರಿಂದಲೇ ಅನಂಗತಿಲಕಾ ಎಂಬ ಹೆಸರು ಪಡೆದಿರುವ ನಾನು ಸೌಂದರ್ಯಾದಿಗುಣಗಣ ರತ್ನಾಕರನಾಗಿ ಕಾಮರಸಜ್ಞ ಶಿಖಾಮಣಿಯಾದ ಪುರುಷರಲ್ಲಿ ತಿಲಕಪ್ರಾಯನಾದ ನಿನ್ನಿಂ ಉನ್ಮಸ್ತಕವಾದ ರತಿಸುಖವನ್ನೈದಿಸಲು, ಶಕ್ತಳೆಂಬ

ಅವಳ ಅಂತರ್ಭಾವವು ಸೂಚಿಸಲ್ಪಡುತ್ತದೆ. ಮತ್ತು, ಪುರುಷರಲ್ಲಿಉತ್ತ ಮೋತ್ತಮನಾದುದರಿಂದಲೇ ನಾನು ನಿನ್ನನ್ನಪೇಕ್ಷಿಸಿದೆನೇ ಹೊರತು, ಅಧಮನನ್ನಪೇಕ್ಷಿಸುವೆನೆ? ಇಂಥಾನನ್ನನ್ನು ಉಪೇಕ್ಷಿಸಿದಲ್ಲಿ ನೀನುಹೇ ಗೆ ಪುರುಷರಲ್ಲಿ ತಿಲಕಪ್ರಾಯನೆನಿಸುವಿ. (ನಿನ್ನನ್ನು ಷಂಡಪ್ರಾಯನನ್ನಾ ಗಿ ತಿಳಿಯುವೆನೆಂದು ಭಾವವು.) ಮತ್ತು, ಈ ವಿಜನಪ್ರದೇಶವೂಕೂ ಡನಿರ್ಭಯವಾಗಿ ರಮಿಸುವುದಕ್ಕೆ ಯೋಗ್ಯಸ್ಥಾನವೆಂತಲೂ ಮಾಂ ಎಂ ಬ ಏಕವಚನದಿಂದ ತೋರುವಂತೆ ಸೂಚಿಸುತ್ತಾಳೆ. ಮತ್ತು; ಕಾಮ ಬಾಣದಿಂದತ್ಯಂತ ಪೀಡಿತಳಾದ ನನ್ನ ಬಾಧೆಯಂ ಪ್ರತ್ಯಕ್ಷವಾಗಿ ನೋಡಿ ಯೂ ಉಪೇಕ್ಷಿಸುವಲ್ಲಿ ನೀನು ಹೇಗೆ ಅನಾಥರಕ್ಷಕನೆನಿಸುವೆ? ಇಷ್ಟು ನಿರ್ದಯನಾದ ನೀನು ಹೇಗೆ ಪುರುಷಶ್ರೇಷ್ಠನೆನಿಸುವಿ ? ಎಂಬೀ ಭಾವ ಗಳಂ ಸೂಚಿಸುವಂತೆ ಆ ವಿದ್ಯಾಧರಸ್ತ್ರೀಯು ಜೀವಂಧರ ಕುಮಾರನಂ ಪ್ರಾರ್ಥಿಸುತ್ತಾಳೆಂದು ಭಾವವು.) ॥೪೭॥

ಶ್ಲೋಕ॥ ತಾವತಾರ್ತಸ್ವರಃ ಕೋಪಿ
　　ಶುಶ್ರುವೇ ಶ್ರುತಶಾಲಿನಾ ।
　　ಕ್ವಪ್ರಯಾತಾ ಪ್ರಿಯಾ ಪ್ರಾಣಾ
　　ಮಮ ಯಾಂತೀತಿ ದುಸ್ಸಹಃ ॥೪೮॥

ಟೀ॥ ತಾವತಾ-ಅಷ್ಟರಲ್ಲಿಯೇ, ಶ್ರುತಶಾಲಿನಾ–ಶ್ರುತ-ಶಾಸ್ತ್ರದಿಂದ, ಶಾಲಿ ನಾ-ಪ್ರಕಾಶಿಸುತ್ತಿರುವ ಆ ಜೀವಂಧರಸ್ವಾಮಿಯಿಂದ, ಪ್ರಿಯಾ - ನನ್ನ ನಾಯಕಿ ಯು, ಕ್ವ-ಎಲ್ಲಿ, ಪ್ರಯಾತಾ-ಹೋದಳೋ!, ಮಮ-ನನ್ನ, ಪ್ರಾಣಾಃ - ಪ್ರಾಣಗ ಳು, ಯಾನ್ತಿ-ಹೋಗುತಲಿವೆ., ಇತಿ-ಹೀಗೆಂದು, ದುಸ್ಸಹಃ-ಸಹಿಸಲಶಕ್ಯವಾದ, ಕೋ ಪಿ-ಒಂದಾನೊಂದು, ಆರ್ತಸ್ವರಃ-ದೀನಧ್ವನಿಯು, ಶುಶ್ರುವೇ-ಕೇಳಲ್ಪಟ್ಟಿತು.

ತಾತ್ಪರ್ಯ॥ ಅಷ್ಟರಲ್ಲಿಯೇ ಶಾಸ್ತ್ರಜ್ಞನಾದ ಜೀವಂಧರಸ್ವಾಮಿ ಯಿಂದ ನನ್ನಹೆಂಡತಿಯು ಎಲ್ಲಿಹೋದಳೋ! ನನ್ನ ಪ್ರಾಣಗಳು ಹೋ ಗುತಲಿವೆ!, ಎಂದು ಸಹಿಸಲಶಕ್ಯವಾದ ಒಂದು ದೀನಧ್ವನಿಯುಕೇ ಳಲ್ಪಟ್ಟಿತು. ॥ ೪೮ ॥

ಶ್ಲೋಕ॥ ಯೋಷಾಪ್ಯೇಷಾಮಿಷೇಣಾಸ್ಮಾ-
ನ್ನಿಮೇಷಾದಿವ ನಿರ್ಯಯೌ ।
ಮಾಯಾಮಯೀ ಹಿ ನಾರೀಣಾಂ
ಮನೋವೃತ್ತಿರ್ನಿಸರ್ಗತಃ ॥೪೯॥

ಟೀ॥ ಏಷಾ-ಈ, ಯೋಷಾಪಿ-ಸ್ತ್ರೀಯೂಕೂಡ, ಮಿಷೇಣ-ಒಂದು ನೆಪವ ದೆಸೆಯಿಂದ, ಅಸ್ಮಾತ್-ಜೀವಂಧರಕುಮಾರನಸಮೀಪದಿಂ, ನಿಮೇಷಾದಿವ- ನಿಮಿಷ ಮಾತ್ರದಿಂದಲೇ, ನಿರ್ಯಯೌ-ಹೊರಟುಹೋದಳು., ನಾರೀಣಾಂ-ಹೆಂಗಸರ, ಮ ನೋವೃತ್ತಿಃ-ಮನೋವ್ಯಾಪಾರವು, ನಿಸರ್ಗತಃ-ಸ್ವಭಾವದದೆಸೆಯಿಂದ, ಮಾಯಾ ಮಯೀಹಿ-ಕಪಟದಿಂ ಪ್ರಚುರವಾದದ್ದೇ ಅಲ್ಲವೆ ?.

ತಾತ್ಪರ್ಯ॥ ಈ ಸ್ತ್ರೀಯು ಆ ದೀನಸ್ವರವನ್ನು ಕೇಳದಕ್ಷಣದಲ್ಲಿ ಯೇ ಒಂದು ನಿಮಿಷಮಾತ್ರದಿಂದ ಯಾವುದೋಒಂದು ನೆಪದಿಂದ ಹೊರ ಟುಹೋದಳು. ಸ್ತ್ರೀಯರ ಮನೋವ್ಯಾಪಾರವು ಸ್ವಾಭಾವಿಕವಾಗಿಯೇ ಮೋಸ ಮಯವಾದುದಲ್ಲವೆ ? ( ಇಷ್ಟುವಂಚನೆಯ ಮಾತುಗಳಾಡಿದ ವಿದ್ಯಾಧರ ಸ್ತ್ರೀಯೇ ಹೆಂಗಸಿನ ಮನಸ್ಸು ಮೋಸಗಳಿಂದಲೇ ನಿರ್ಮಿತ ವಾಗಿದೆಎಂಬ ವಿಷಯದಲ್ಲಿ ಪರಿಪೂರ್ಣದೃಷ್ಟಾಂತಳಾಗಿರುತ್ತಾಳೆ. ಆ ದುದರಿಂದಲೇ ಹೆಂಗಸಿನ ಮನಸ್ಸುನಂಬತಕ್ಕದ್ದಲ್ಲವು. ಏಕೆಂದರೆ.-ಅದು ಅತ್ಯಂತ ನೀಚಕೃತ್ಯದಲ್ಲಿಯೇ ಅಭಿರುಚಿಯುಳ್ಳದ್ದಾದುದರಿಂದಲೂ, ಪತಿಗೆ ಮಹಾ ಅನರ್ಥವನ್ನುಂಟುಮಾಡತಕ್ಕದ್ದಾದುದರಿಂದಲೂ, ಅತಿ ಚಂಚಲವಾದುದರಿಂದಲೂ, ಲೋಕಕ್ಕೆ ಅನರ್ಥಕರವಾದುದರಿಂದಲೂ, ನಿರ್ದಯವಾದುದರಿಂದಲೂ, ಸ್ವಯಂ ನಷ್ಟವಾಗುವುದಲ್ಲದೆ ನಂಬಿದ ಪತಿ ಯನ್ನೂ ದುಃಖಸಾಗರದಲ್ಲಿ ತಳ್ಳತಕ್ಕದ್ದಾದುದರಿಂದಲೂ, ಪತಿಯಧರ್ಮ ವಂ ಭಂಗಪಡಿಸುವುದಾದುದರಿಂದಲೂ, ಐಹಿಕಾಮುಷ್ಮಿಕಗಳೆಂಬ ಉಭ ಯಸುಖಗಳಂಕೆಡಿಸಿ ನರಕಾದಿ ದುರ್ಗತಿಯನ್ನುಂಟು ಮಾಡತಕ್ಕುದಾದು ದರಿಂದಲೂ ನಂಬತಕ್ಕದ್ದಲ್ಲವು. ॥೪೯॥

ಶ್ಲೋಕ॥ ಆರ್ತಸ್ವರಕರೋಪ್ಯಾತು
ಸದ್ಯೈನ್ಯಂ ಮಾನ್ಯವೀಕ್ಷಣಾತ್ ।

ಶೋಚ್ಯಾಃ ಕಥಂ ನ ರಾಗಾಂಧಾ

ಯೋ ತು ವಾಚ್ಯಾನ್ನಬಿಭ್ಯತಿ ॥೫೦॥

ಟೀ ॥ ಆರ್ತಸ್ವರಕರೋಪಿ-ದೀನಸ್ವರದಿಂದ ಕೂಗಿದ ಆ ಪುರುಷನೂ ಕೂಡ, ಮಾನ್ಯವೀಕ್ಷಣಾತ್-ಪೂಜ್ಯನಾದ ಜೀವಂಧರಕುಮಾರನ ದರ್ಶನದದೆಸೆಯಿಂದ, ಸದೈನ್ಯಂ (ಯಥಾತಥಾ)-ದೀನಭಾವದೊಡನೆಕೂಡಿರೋಣಹೇಗೋ ಹಾಗೆ, ಆಹ-ಹೇಳುತ್ತಾನೆ.,-ಯೇತು-ಯಾರಾದರೋ, ವಾಚ್ಯಾತ್-ಲೋಕಾಪವಾದದದೆಸೆಯಿಂದ, ನಬಿಭ್ಯತಿ-ಹೆದರುವುದಿಲ್ಲವೋ, ರಾಗಾಂಧಾಃ-ಸ್ತ್ರೀವ್ಯಾಮೋಹದಿಂದ ಮೂಢರಾದವರು, ಕಥಂ-ಹೇಗೆತಾನೇ, ನಶೋಚ್ಯಾಃ-ದುಃಖಯೋಗ್ಯರಾಗುವುದಿಲ್ಲವು?.

ತಾತ್ಪರ್ಯ ॥ ಆ ದೀನಸ್ವರದಿಂದ ಕೂಗಿಕೊಂಡ ಆ ಪುರುಷನೂಕೂಡ ಪೂಜ್ಯನಾದ ಜೀವಂಧರಸ್ವಾಮಿಯ ದರ್ಶನದದೆಸೆಯಿಂದ ಈ ಮಹಾಪುರುಷನಲ್ಲಿ ಹೇಳಿಕೊಂಡರೆ ನನ್ನ ದುಃಖನಿವೃತ್ತಿಯೂ, ಇಷ್ಟಸಿದ್ಧಿಯೂ, ಆಗುವುದೆಂದು ಭ್ರಮಿಸಿ ಬಹಳದೀನನಾಗಿ ಹೇಳಿಕೊಂಡನು. ಸ್ತ್ರೀವ್ಯಾಮೋಹಿತರಾದವರು ಲೋಕನಿಂದೆಗೂ ಹೆದರುವದಿಲ್ಲವು, ಶೋಕಿಸುವುದಕ್ಕೆ ಯೋಗ್ಯರಾಗಿಯೂ ಆಗುತ್ತಾರಷ್ಟೆ ? ॥ ೫೦ ॥

ಶ್ಲೋಕ ॥ ಉದನ್ಯೋಪದ್ರುತಾಮತ್ರ,

ಮಾನ್ಯಭಾರ್ಯಾಂ ಪತಿವ್ರತಾಮ್ ।

ಪಾನೀಯಾರ್ಥಮವಸ್ಥಾಪ್ಯ

ನಾದ್ರಾಕ್ಷಂ ಪ್ರಸ್ಥಿತಾ ಗತಃ ॥೫೧॥

ಟೀ ॥ ಹೇ ಮಾನ್ಯ-ಎಲೈ ಪೂಜ್ಯನೇ!, ಉದನ್ಯೋಪದ್ರುತಾಂ-ಉದನ್ಯಾ-ಬಾಯಾರಿಕೆಯಿಂದ, ಉಪದ್ರುತಾಂ-ಉಪದ್ರವಪಡಿಸಲ್ಪಟ್ಟ, ಪತಿವ್ರತಾಂ - ಪತಿವ್ರತೆಯಾದ, ಭಾರ್ಯಾಂ-ಹೆಂಡತಿಯನ್ನು, ಅತ್ರ-ಈ ಅರಣ್ಯದಲ್ಲಿ, ಅವಸ್ಥಾಪ್ಯ-ಇರಿಸಿ, ಪಾನೀಯಾರ್ಥಂ-ನೀರಿಗೋಸುಗ, ಪ್ರಸ್ಥಿತಾಗತಃ-ಹೋಗಿಬಂದಂಥ, ಅಹಂ-ನಾನು, ನಾದ್ರಾಕ್ಷಂ-ನೋಡಲಿಲ್ಲವು (ಕಾಣಲಿಲ್ಲವು).

ತಾತ್ಪರ್ಯ ॥ ಎಲೈ ಪೂಜ್ಯನೇ ! ಈ ಅರಣ್ಯದೊಳು ಬಹಳ ಬಾಯಾರಿಕೆಯಿಂದ ಪೀಡಿತಳಾದ ಪತಿವ್ರತೆಯಾದ ನನ್ನ ಹೆಂಡತಿಯನ್ನು ಬಿಟ್ಟು ನೀರು ತರಲೋಸುಗ ಹೋಗಿಬರುದು ನೋಡಲಾಗಿ ನನ್ನ ಪತ್ನಿಯು ಕಾಣಲಿಲ್ಲವು. ॥೫೧॥

ಶ್ಲೋಕ॥ ವಿದ್ಯಾಪ್ಯವಿದ್ಯಮಾನೇವ
ಮಮ ವಿದ್ಯಾಧರೋಚಿತಾ।
ಮರ್ತ್ಯೋತ್ತಮಭವಾನತ್ರ
ಕರ್ತವ್ಯಂ ಕಥಯೇದಿತಿ ॥೫೨॥

ಟೀ॥ ಮಮ-ನನಗೆ, ವಿದ್ಯಾಧರೋಚಿತಾ-ವಿದ್ಯಾಧರರಿಗೆ, ಉಚಿತಾ-ಯೋಗ್ಯವಾದ, ವಿದ್ಯಾಪಿ-ವಿದ್ಯೆಯೂಕೂಡ, ಅವಿದ್ಯಮಾನೇವ-ನಷ್ಟವಾದಂತೆಯೇತೋರುತ್ತಿದೆ., ಹೇ ಮರ್ತ್ಯೋತ್ತಮ-ಎಲೈ ಮನುಷ್ಯಶ್ರೇಷ್ಠನೇ! ಭವಾನ್-ನೀನು, ಅತ್ರ-ಈ ವಿಷಯದಲ್ಲಿ, ಕರ್ತವ್ಯಂ-ಮಾಡತಕ್ಕ ಕೆಲಸವನ್ನು, ಕಥಯೇತ್-ಹೇಳು. ಇತಿ-ಹೀಗೆಂದು, ಆಹ-ಹೇಳಿದನು.

ತಾತ್ಪರ್ಯ ॥ ಎಲೈ ಮನುಷ್ಯಶ್ರೇಷ್ಠನಾದವನೇ! ವಿದ್ಯಾಧರರಿಗೆ ಯೋಗ್ಯವಾದ ವಿದ್ಯೆಯು ನನಗೆ ಇದ್ದಾಗ್ಯೂಕೂಡ ಈಗ ನಷ್ಟವಾದಂತೆಯೇ ತೋರುತ್ತಿದೆ. ವಿದ್ಯಾಸಿದ್ಧಿಯಾದರೂ ಇದನ್ನಲ್ಲಿ ತಿಳಿಯುವೆನು. ಈಗ ಏನನ್ನುಮಾಡಲಿ?; ಹೇಳು ಎಂಬದಾಗಿ ಆ ದೀನ ಪುರುಷನು ಜೀವಂಧರಕುಮಾರನನ್ನು ಕುರಿತುಕೇಳಿದನು. ॥೫೨॥

ಶ್ಲೋಕ॥ ಪುರಂಧ್ರೀಷ್ವತಿಸಂಧಾನಾ-
ದಭೈಷೀದಭಯಂಕರಃ।
ವಚನೀಯಾದ್ಧಿ ಭೀರುತ್ವಂ
ಮಹತಾಂ ಮಹನೀಯತಾ ॥೫೩॥

ಟೀ॥ ಅಭಯಂಕರಃ- ಅಭಯವನ್ನು ಕೊಡುತಲಿರುವ, ಜೀವಂಧರಸ್ವಾಮಿಯು, ಪುರಂಧ್ರೀಷು-ಪತಿವ್ರತೆಯರಲ್ಲಿ, ಅತಿಸಂಧಾನಾತ್-ವಂಚನೆಯ ದೆಸೆಯಿಂದ, ಅಭೈಷೀತ್-ಹೆದರಿದನು., ವಚನೀಯಾತ್-ಅಪವಾದದದೆಸೆಯಿಂದ, ಭೀರುತ್ವಂಹಿ-ಭಯಪಡೋಣವಲ್ಲವೆ, ಮಹತಾಂ-ಮಹಾತ್ಮರಿಗೆ, ಮಹನೀಯತಾ - ಪೂಜ್ಯತೆಯು ?.

ತಾತ್ಪರ್ಯ ॥ ದೀನರಿಗೆ ಅಭಯಪ್ರದಾನಮಾಡತಕ್ಕವನಾದರೂ, ಜೀವಂಧರಕುಮಾರನು ಪತಿವ್ರತೆಯರಲ್ಲಿಯೂ ವಂಚನೆ ಇರೋಣದರದೆಸೆಯಿಂದ ಭಯಪಟ್ಟನು. (ಯಾವುದರಿಂದಲೂ ಹೆದರದವನಾದಾಗ್ಯೂ

ಈ ಪತಿವ್ರತಾಸ್ತ್ರೀಯ ವಂಚನೆಗೆ ಹೆದರಿದನೆಂದು ಭಾವವು.) ಮಹಾತ್ಮರಿಗೆ ಲೋಕಾಪವಾದಕ್ಕೆ ಭಯಪಡೋಣವೇ ಅಲ್ಲವೆ ಪೂಜ್ಯತೆಗೆ ಕಾರಣವಾದ ಉತ್ಕೃಷ್ಟಗುಣವು ? ॥೫೩॥

ಶ್ಲೋಕ॥ ನಭಶ್ಚರಂ ಪುನಶ್ಚೈನಂ
ಸವಿಪಶ್ಚಿದಬೋಧಯತ್ ।
ಅಪಶ್ಚಿಮಂ ಫಲಂವಕ್ತುಂ
ನಿಶ್ಚಿತಂ ಹಿ ಹಿತಾರ್ಥಿನಃ ॥೫೪॥

ಟೀ ॥ ವಿಪಶ್ಚಿತ್- ವಿದ್ವಾಂಸನಾದ, ಸಃ-ಆ ಜೀವಂಧರಸ್ವಾಮಿಯು, ನಭಶ್ಚರಂ-ಖೇಚರನಾದ, ಏನಂಚ ಪುನಃ-ಈ ದೀನಪುರುಷನನ್ನಾದರೋ, ಅಬೋಧಯತ್-ಬೋಧಿಸಿದನು., ಅಪಶ್ಚಿಮಂ-ಮೊದಲನೆಯದಾದ, ಫಲಂ- ಪುರುಷಾರ್ಥವಾದ ಧರ್ಮವು, ಹಿತಾರ್ಥಿನಃ—ಹಿತ-ಹಿತವನ್ನು, ಅರ್ಥಿನಃ-ಅಪೇಕ್ಷಿಸುತಲಿರುವ ಪುರುಷನಿಗೆ, ವಕ್ತುಂ-ಹೇಳಲೋಸುಗ, ನಿಶ್ಚಿತಂಹಿ-ನಿಶ್ಚಯಿಸಲ್ಪಟ್ಟದೆಯಲ್ಲವೆ?.

ತಾತ್ಪರ್ಯ ॥ ವಿದ್ವಾಂಸನಾದ ಆ ಜೀವಂಧರಸ್ವಾಮಿಯು ಆ ದೀನನಾಗಿರುವ ಖೇಚರನಿಗೆ ಧರ್ಮತತ್ತ್ವಬೋಧೆಯಂ ಮಾಡಿದನು. ಸತ್ಪುರುಷರು ಹಿತವನ್ನಪೇಕ್ಷಿಸುವವರಿಗೆ ಹೇಳುವುದಕ್ಕೋಸುಗವಲ್ಲವೆ ಧರ್ಮವಂ ನಿಶ್ಚಯಿಸಿರುವರು?. (ಸತ್ಪುರುಷರು ಧರ್ಮವಂ ತಿಳಿದಿರುವುದು ಪರಹಿತಾರ್ಥವಾಗಿಯೇ ಯೆಂದಭಿಪ್ರಾಯವು.) ದೀನನಾಗಿ ಪ್ರಾರ್ಥಿಸುವವನಿಗೆ ಸತ್ಪುರುಷರು ಧರ್ಮವನ್ನುಪದೇಶಿಸುವರು. ॥೫೪॥

ಶ್ಲೋಕ॥ ಭವದತ್ತಮುಧಾರ್ತೋಽಪಿ
ವಿದ್ಯಾವಿತ್ತೋ ಭವನ್ನಪಿ ।
ನ ವಿದ್ಯತೇ ಹಿ ವಿದ್ಯಾಯಾ-
ಮಗಮ್ಯಂ ರಮ್ಯವಸ್ತುಷು ॥೫೫॥

ಟೀ ॥ ಹೇಭವದತ್ತ-ಎಲೈಭವದತ್ತನೇ!, ತ್ವಂ-ನೀನು, ವಿದ್ಯಾವಿತ್ತಃ-ವಿದ್ಯೆಯೇಧನವಾಗಿ, ಭವನ್ನಪಿ - ಉಳ್ಳವನಾದಾಗ್ಯೂಕೂಡ, ಮುಧಾ- ವ್ಯರ್ಥವಾಗಿ, ಆರ್ತ(ಸ್ಸನ್)-ದುಃಖಿತನಾಗಿ, ಅಸಿ- ಆಗುತ್ತೀಯೇ., ವಿದ್ಯಾಯಾಂ (ಸತ್ಯಾಂ)-ವಿದ್ಯೆಯು ಇರುತ್ತಿರಲಿಕ್ಕಾಗಿ, ರಮ್ಯವಸ್ತುಷು-ಉತ್ಕೃಷ್ಟವಸ್ತುಗಳಲ್ಲಿ, ಅಗಮ್ಯಂ-

ಪಡೆಯಲಶಕ್ಯವಾದವು, ನವಿದ್ಯತೇಹಿ-ಇಲ್ಲವಷ್ಟೆ?.

ತಾತ್ಪರ್ಯ ॥ ನೀನು ವಿದ್ಯಾಧರನಾದಾಗ್ಯೂ ವ್ಯರ್ಥವಾಗಿ ದುಃಖಿ
ಸುತ್ತೀಯೆ? ವಿದ್ಯೆಯು ಇರುತ್ತಿರಲಾಗಿ, ಉತ್ಕೃಷ್ಟವಸ್ತುಗಳಲ್ಲಿ ಯಾ
ವವಸ್ತುವೂ ಪಡೆಯಲಶಕ್ಯವಲ್ಲವಷ್ಟೆ? ಎಂದು ಹೇಳಿದನು. ॥ ೫೫ ॥

ಶ್ಲೋಕ॥ ನಭಶ್ಚರ ನ ಕಶ್ಚಿತ್ಸ್ಯಾ-
ದ್ವಿಪಶ್ಚಿದವಿಪಶ್ಚಿತೋಃ ।
ವಿನಿಶ್ಚಲ ಶುಚೋರ್ಭೇದೋ
ಯತಶ್ಚ ನ ಕುತಶ್ಚ ನ ॥೫೬॥

ಟೀ ॥ ಹೇ ನಭಶ್ಚರ-ಎಲೈ ಖೇಚರನೇ !, ವಿಪಶ್ಚಿದವಿಪಶ್ಚಿತೋಃ- ವಿದ್ವಾಂಸ
ರು ಮೂಢರು ಇವರೀರ್ವರೂ, ವಿನಿಶ್ಚಲಶುಚೋಃ(ಸ್ಸತೋಃ)- ವಿನಿಶ್ಚಲ-ಸ್ಥಿರವಾದ
ಶುಚೋಃ(ಸ್ಸತೋಃ)-ಶೋಕವುಳ್ಳವರಾಗುತ್ತಿರಲಾಗಿ, ಯತಶ್ಚನಕುತಶ್ಚನ- ಯಾವ
ದೊಂದುಕಾರಣವಶದಿಂದಲೂ, ಕಶ್ಚಿದ್ಭೇದಃ-ಯಾವಭೇದವೂ, ನಸ್ಯಾತ್-ಉಂ
ಟಾಗಲಾರದು?

ತಾತ್ಪರ್ಯ ॥ ಶೋಕವು ಪ್ರಾಪ್ತವಾಗುತ್ತಿರಲಾಗಿ ಶೋಕಿಸದೇ
ಇರುವುದೇ ಪ್ರಾಜ್ಞರಸ್ವಭಾವವು. ಹೀಗಿರಲು, ವಿದ್ವಾಂಸನೂಕೂ
ಮೂಢನಂತೆಯೇ ಶೋಕಿಸುತ್ತಲಿರಲು, ಇವನು ವಿದ್ವಾಂಸನು; ಇವನು
ಮೂಢನು; ಎಂದುಮತ್ತೆ ಯಾವುದರಿಂದ ತಿಳಿಯಬಹುದು?(ಯಾವಕಾ
ಣದಿಂದಲೂ ತಿಳಿಯಲಶಕ್ಯವೆಂದಭಿಪ್ರಾಯವು.) ॥೫೬॥

ಶ್ಲೋಕ॥ ಸಹಸ್ರಸಹಸ್ರಧೀಭಾಜಿ
ಸ್ತ್ರೀವರ್ಗೇ ಕಾ ಪತಿವ್ರತಾ ।
ಪಾತಿವ್ರತ್ಯಂ ಹಿ ನಾರೀಣಾಂ
ಗತ್ಯಭಾವೇತು ಕುತ್ರಚಿತ್ ॥೫೭॥

ಟೀ ॥ ಸಹಸ್ರಸಹಸ್ರಧೀಭಾಜಿ-ಸಾವಿರಕ್ಕಿಂತಲೂ ಅಧಿಕವಾದ (ಅಸಂಖ್ಯಾ
ವಾದ) ಬುದ್ಧಿಯುಳ್ಳ, ಸ್ತ್ರೀವರ್ಗೇ-ಸ್ತ್ರೀಯರಸಮೂಹದಲ್ಲಿ, ಪತಿವ್ರತಾ-ಪತಿ
ತೆಯು, ಕಾ-ಯಾವಳು?, ನಾರೀಣಾಂ- ಸ್ತ್ರೀಯರಿಗೆ, ಪಾತಿವ್ರತ್ಯಂಹಿ- ಪತಿ
ತಾ ಧರ್ಮವಾದರೋ, ಗತ್ಯಭಾವೇತು-ಗತಿಇಲ್ಲದೇ ಇದ್ದರೇನೆ, ಕುತ್ರಚಿತ್-ಎಲ್ಲಿ
ಒಬ್ಬಳಲ್ಲಿ, ಭವತಿ-ಉಂಟಾಗುತ್ತಲಿದೆ?

ತಾತ್ಪರ್ಯ॥ ಅನೇಕ ಸಹಸ್ರಪ್ರಕಾರವಾದ ವಂಚನೆಗಳಂ ತಿಳಿದಿರುವ ಸ್ತ್ರೀಸಮೂಹದಲ್ಲಿ ಪತಿವ್ರತೆಯಾದವಳು ಯಾರು? (ಅತ್ಯಂತ ದುರ್ಲಭವೆಂದರ್ಥವು.) ಸ್ತ್ರೀಯರಿಗೆ ಪತಿವ್ರತಾಧರ್ಮವಾದರೋ, (ಅತ್ತೆ, ಮಾವ, ಪತಿ, ಲೋಕಾಪವಾದ, ನರಕಭೀತಿ ಈ ಮೊದಲಾದ ನಿರ್ಬಂಧಗಳಿಂದಲತಿಪ್ರಯಾಸದಿಂ ಕಾಯಿಕ ವಾಚಿಕಪಾತಿವ್ರತ್ಯವು ರಕ್ಷಿತವಾದರೂ, ಪರಸ್ಪಹಪ್ರವಾಗಿ ಚಲಿಸುವ ಮನೋದೋಷಕಾರಣವಾದ ಪುರಾತನ ಪಾಪವನ್ನು ನಾಶಪಡಿಸುವ ಪುಣ್ಯವೆಂಬ ಗತಿಯಿಲ್ಲದಿರುವಲ್ಲಿ, ಮಾನಸಿಕವಾದ ಪ್ರಧಾನಪಾತಿವ್ರತ್ಯವು ಸಿದ್ಧಿಸುವುದಿಲ್ಲವೆಂದು ನಿರ್ಗಳಿತಭಾವವು)॥೫೭॥

ಶ್ಲೋಕ॥ ಮದಮಾತ್ಸರ್ಯ ಮಾಯೇರ್ಷ್ಯಾ
ರಾಗರೋಷಾದಿ ಭೂಷಿತಾಃ।
ಅಸತ್ಯಾಶುದ್ಧಿ ಕೌಟಿಲ್ಯ
ಶಾಠ್ಯ ಮೌಢ್ಯಧನಾಸ್ಸ್ತ್ರಿಯಃ ॥೫೮॥

ಟೀ॥ ಸ್ತ್ರಿಯಃ-ದುಷ್ಟಹೆಂಗಸರು, ಮದಮಾತ್ಸರ್ಯಮಾಯೇರ್ಷ್ಯಾರಾಗರೋಷಾದಿಭೂಷಿತಾಃ—ಮದ-ಮದವೂ, ಮಾತ್ಸರ್ಯ-ಇತರರಸಂಪತ್ತನ್ನು ನೋಡಿ ದ್ವೇಷದಿಂದ ಸಹಿಸದೇ ಇರೋಣವೂ, ಮಾಯಾ-ವಂಚನೆಯೂ, ಈರ್ಷ್ಯಾ-ಅಸೂಯೆಯೂ, ರಾಗ-ಭೋಗೋಪಭೋಗೇಚ್ಛೆಯೂ, ರೋಷ-ಕೋಪವೂ, ಆದಿ-ಇವೇ ಮೊದಲಾದ ದೋಷಗಳಿಂದ, ಭೂಷಿತಾಃ-ಅಲಂಕರಿಸಲ್ಪಟ್ಟವರು., ಅಸತ್ಯಾಶುದ್ಧಿಕೌಟಿಲ್ಯಶಾಠ್ಯಮೌಢ್ಯಧನಾಃ—ಅಸತ್ಯ-ಸುಳ್ಳುಹೇಳೋಣವು, ಅಶುದ್ಧಿ-ಅಶುದ್ಧಿಯೂ, ಕೌಟಿಲ್ಯ-ಕುಟಿಲತ್ವವೂ (ವಕ್ರತೆಯೂ), ಶಾಠ್ಯಂ-ಮೂರ್ಖತ್ವವೂ, ಮೌಢ್ಯಂ-ಮೂಢತ್ವವೂ, ಇವುಗಳೇ, ಧನಾಃ-ಧನವಾಗಿ ವುಳ್ಳವರು.

ತಾತ್ಪರ್ಯ॥ ದುಷ್ಟಸ್ತ್ರೀಯರು ಮದಮಾತ್ಸರ್ಯವೂ, ಮಾಯೆಯೂ, ಅಸೂಯೆಯೂ, ರಾಗವೂ, ರೋಷವೂ, ಇವುಗಳೇ ಮೊದಲಾದ ದುರ್ಗುಣಗಳನ್ನೇ ಆಭರಣದಂತೆ ರಕ್ಷಿಸಿಕೊಳ್ಳುವರು; ಮತ್ತು, ಸುಳ್ಳು, ಅಶುದ್ಧಿ, ಮನೋವಾಕ್ಕಾಯಗಳಲ್ಲಿ ಬೇರೆ ಬೇರೆ ನಡತೆಯುಳ್ಳೋಣವು, ಮೂರ್ಖತೆಯೂ, ಮೂಢತ್ವವು ಇವೇ ಮೊದಲಾದ ದುರ್ಗುಣಗಳನ್ನು ಧನದಂತೆ ರಕ್ಷಿಸಿಕೊಳ್ಳುವರು. (ದುರ್ಗುಣಗಳನ್ನು ಆಭರಣದಂತೆಯೂ, ಧನದಂತೆಯೂ ಅತಿಪ್ರಿಯವನ್ನಾಗಿ ತಿಳಿಯುವರೇ ಹೊರತು ಇದು ದೋಷವೆಂದರಿಯರು.) ॥೫೮॥

ಶ್ಲೋಕ॥ ನಿರ್ಘೃಣೇ ನಿರ್ದ್ರವೇ ಕ್ರೂರೇ
ನಿರ್ವ್ಯವಸ್ಥೇ ನಿರಂಕುಶೇ ।
ಪಾಪೇ ಪಾಪನಿಮಿತ್ತೇ ಚ
ಕಲತ್ರೇ ತೇ ಕುತಸ್ಸ್ಪೃಹಾ ॥೫೯॥

ಟೀ ॥ ನಿರ್ಘೃಣೇ-ದಯಾರಹಿತಳಾಗಿಯೂ, ನಿರ್ದ್ರವೇ- ಶುಷ್ಕಹೃದಯಳಾಗಿಯೂ, ಕ್ರೂರೇ-ಕ್ರೂರಸ್ವಭಾವವುಳ್ಳವಳಾಗಿಯೂ, ನಿರ್ವ್ಯವಸ್ಥೇ- ಮರ್ಯಾದೆ ಇಲ್ಲದವಳಾಗಿಯೂ, ನಿರಂಕುಶೇ-ತಡೆಇಲ್ಲದವಳಾಗಿಯೂ, ಪಾಪೇ- ಪಾಪಿಷ್ಠಳಾಗಿಯೂ, ಪಾಪನಿಮಿತ್ತೇಚ-ಪಾಪಕ್ಕೆ ಕಾರಣವಾಗಿಯೂ ಇರುವ, ಕಳತ್ರೇ- ಹೆಂಡತಿಯಲ್ಲಿ, ತೇ-ನಿನಗೆ, ಕುತಃ-ಯಾವಕಾರಣದ ದೆಸೆಯಿಂದ, ಸ್ಪೃಹಾ-ಆಶೆಯು?.

ತಾತ್ಪರ್ಯ ॥ ಎಲೈ ವಿದ್ಯಾಧರನೇ! ದಯಾರಹಿತಳಾಗಿಯೂ, ಶುಷ್ಕಹೃದಯಳಾಗಿಯೂ, ಕ್ರೂರಸ್ವಭಾವಳಾಗಿಯೂ, ವ್ಯವಸ್ಥಾರಹಿತಳಾಗಿಯೂ, ತಡೆಯಿಲ್ಲದೆ ಅಕಾರ್ಯದಲ್ಲಿ ಪ್ರವರ್ತಿಸುವವಳಾಗಿಯೂ, ಪಾಪಿಷ್ಠಳಾಗಿಯೂ, ಪಾಪಕ್ಕೆ ಕಾರಣಭೂತಳಾಗಿಯೂ ಇರುವ ಹೆಂಡತಿಯಲ್ಲಿ ನಿನಗೆ ಏತಕೋಸುಗ ಆಶೆಯು? ಇಂಥಾಗುಣಹೀನೆಯಲ್ಲಿ ಈ ವ್ಯಾಮೋಹವನ್ನು ಬಿಡು.

( ಮತ್ತು, 'ಕಳತ್ರೇ ತೇ ಕುತಸ್ಸ್ಪೃಹಾ' ಎಂಬ ಮಾತಿನಿಂದ ಈ ದುಷ್ಟಸ್ತ್ರೀವ್ಯಾಮೋಹಿತನಾದ ನಿನ್ನಂದದಿ ಅಯೋಗ್ಯಪತ್ನೀ ವಿಷಯದಲ್ಲಾಸಕ್ತನಾಗಿದ್ದಲ್ಲಿ ನನಗೂ ಇದೇ ನ್ಯಾಯವು ಸಿದ್ಧವಾಗಿರುವದು. ಹಾಗಿಲ್ಲದೆ 'ಸಂಸಾರೇ ಪಿಯಧಾಯೋಗ್ಯಾದ್ಯೋಗ್ಯಾನ್ನಸು ಸುಖೀಜನಃ' ಎಂಬದಾಗಿ ಪ್ರೋಕ್ತರೀತಿಯಿಂದ ತಾವೂ ಧರ್ಮಪರರಾಗಿ, ಪತಿಧರ್ಮಪರಿಪಾಲಕರಾಗಿ,ಯನ್ನೊಡನೆ ಜಿನದೀಕ್ಷೆಯನ್ನಂಗೀಕರಿಸಲು ಸಿದ್ಧರಾಗಿರುವ ಪತ್ನಿಯರಲ್ಲಿ ಅಂತಃ ವೈರಾಗ್ಯವುಳ್ಳವನಾಗಿಯೇ ಸಂಸಾರಪರಿತ್ಯಾಗಪೂರ್ವಕವಾಗಿ ದೀಕ್ಷೆಯಂ ತೆಗೆದುಕೊಳ್ಳುವ ಪರ್ಯಂತವೂ ಆಭಾಸ ರಾಗಬದ್ಧನಾಗಿರುವೆನೆಂದು ಮುಖ್ಯಭಾವವು. ಯೋಗ್ಯವಾದ ಪತ್ನೀಪುತ್ರಾದಿ ಪರಿವಾರವೂ ಸುಖಹೇತುವೆಂದಭಿಪ್ರಾಯವು.) ॥೫೯॥

ಶ್ಲೋಕ ॥ ಇತ್ಯುಪಾದಿಷ್ಟಮೋ ತಸ್ಯ
ಹೃದಯೇನಾಸಜತ್ತರಾಮ್ ।

ಜಠರೇ ಸಾರಮೇಯಸ್ಯ
ಸರ್ಪಿಷೋ ನ ಹಿ ಸಂಜನಮ್ ||೬೦||

ಟೀ || ಇತಿ-ಈ ಪ್ರಕಾರ, ಉಪಾದಿಷ್ಟಂ-ಉಪದೇಶಿಸಲ್ಪಟ್ಟ ಅರ್ಥವು, ಏತಸ್ಯ-ಇವನ, ಹೃದಯೇ-ಮನಸ್ಸಿನಲ್ಲಿ, ನಾಸಜತ್ತಗಾಂ-ಸಂಬಂಧಿಸಲೇ ಇಲ್ಲವು., ಸಾರಮೇಯಸ್ಯ-ನಾಯಿಯ, ಜಠರೇ-ಹೊಟ್ಟೆಯಲ್ಲಿ, ಸರ್ಪಿಷಃ-ತುಪ್ಪದ, ಸಂಜನಂ- ಸೇರೋಣವು, ನಹಿ-ಇಲ್ಲವಷ್ಟೆ ?.

ತಾತ್ಪರ್ಯ || ಜೀವಂಧರಸ್ವಾಮಿಯಿಂದ ಉಪದೇಶಿಸಲ್ಪಟ್ಟ ಈ ತತ್ತ್ವಾರ್ಥವು ಈ ವಿದ್ಯಾಧರನ ಹೃದಯದಲ್ಲಿ ನಿಲ್ಲಲೇ ಇಲ್ಲವು. ಇದು ಯುಕ್ತವೇಸರಿ; ನಾಯಿಯ ಹೊಟ್ಟೆಯಲ್ಲಿ ತುಪ್ಪವುದಕ್ಕುವು ದಿಲ್ಲವಷ್ಟೆ? ಹಾಗೆಯೇ ಪಾಪಿಯ ಮನಸ್ಸಿನಲ್ಲಿ ಧರ್ಮೋಪದೇಶವು ನಿಲ್ಲುವದಿಲ್ಲವಲ್ಲವೆ ? ||೬೦||

ಶ್ಲೋಕ|| ಸ್ವಾಮಿನಾ ತು ತಸ್ಯ ಮೌಢ್ಯೇನ
ಸುತರಾಮನ್ವಕಂಪತ
ಉತ್ಪಥಸ್ಥೇ ಪ್ರಬುದ್ಧಾನಾ-
ಮನುಕಂಪಾ ಹಿ ಯುಜ್ಯತೇ ||೬೧||

ಟೀ || ಸ್ವಾಮೀತು-ಜೀವಂಧರಸ್ವಾಮಿಯಾದರೋ, ತಸ್ಯ-ಅವನ, ಮೌಢ್ಯೇನ-ಮೂಢತ್ವದಿಂದ, ಸುತರಾಂ-ಬಹಳವಾಗಿ, ಅನ್ವಕಂಪತ-ಕೃಪೆಯನ್ನು ಮಾಡಿದನು., ಉತ್ಪಥಸ್ಥೇ-ದುರ್ಮಾರ್ಗಪ್ರವಿಷ್ಟನಲ್ಲಿ, ಪ್ರಬುದ್ಧಾನಾಂ - ತಿಳಿದಂಥಾವರಿಗೆ, (ಪ್ರಾಜ್ಞರಿಗೆ), ಅನುಕಂಪಾ-ದಯೆಯು, ಯುಜ್ಯತೇಹಿ-ಉಂಟಾಗುವುದಲ್ಲವೆ ?.

ತಾತ್ಪರ್ಯ || ಜೀವಂಧರಸ್ವಾಮಿಯಾದರೋ, ಅವನ ಮೌಢ್ಯದಿಂದ ಬಹಳವಾಗಿ ದಯೆಯನ್ನಿಟ್ಟನು. ದುರ್ಮಾರ್ಗಪ್ರವಿಷ್ಟನಲ್ಲಿ ಪ್ರಾಜ್ಞರಿಗೆ ದಯೆಯುಂಟಾಗುವುದೇಹೊರತು ಕೋಪ ಬರುವುದಿಲ್ಲವಷ್ಟೆ ?

ಶ್ಲೋಕ|| ತತಸ್ತಸ್ಮಾದ್ವಿನಿರ್ಗತ್ಯ
ಕಮಪ್ಯಾರಾಮಮಾಶ್ರಯತ್ |
ಅದೃಷ್ಟಪೂರ್ವದೃಷ್ಟೌ ಹಿ
ಪ್ರಾಯೇಣೋತ್ಕಂಠತೇ ಮನಃ ||೬೨||

ಟೀ ॥ ತತಃ- ಅನಂತರದಲ್ಲಿ, ತಸ್ಮಾತ್-ಆ ಪ್ರದೇಶದ ದೆಸೆಯಿಂದ, ವಿನಿರ್ಗತ್ಯ-ಹೊರಟು, ಕಮಪಿ-ಒಂದಾನೊಂದು, ಆರಾಮಂ- ಉದ್ಯಾನ ವನವನ್ನು, ಅಶ್ರಯತ್-ಆಶ್ರಯಿಸಿದನು., ಅದೃಷ್ಟಪೂರ್ವದೃಷ್ಟೌ(ಸತ್ಯಾಂ)-ಅದೃಷ್ಟಪೂರ್ವ- ಪೂರ್ವದಲ್ಲಿ ಯಾವತ್ತೂ ನೋಡಲ್ಪಡದೇಇರುವ ವಸ್ತುವಿನ, ದೃಷ್ಟೌ(ಸತ್ಯಾಂ)- ದರ್ಶನವುಂಟಾಗುತಲಿರಲಾಗಿ, ಮನಃ-ಮನಸ್ಸು, ಪ್ರಾಯೇಣ-ಬಹಳವಾಗಿ, ಉತ್ಕಂಠತೇಹಿ-ಕುತೂಹಲಪಡುತ್ತದೆಯಲ್ಲವೆ ?.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಸ್ವಾಮಿಯು ಆ ಸ್ಥಾನದದೆಸೆಯಿಂದ ಹೊರಟು, ಒಂದಾನೊಂದು ಉದ್ಯಾನವನವನ್ನು ಹೊಂದಿದನು. ಪೂರ್ವದೊಳೆಂದಿಗೂ ನೋಡಲ್ಪಡದೇ ಇರುವವಸ್ತುವನ್ನು ನೋಡಿದುದೇ ಆದರೆ, ಪ್ರಾಯೇಣ ಮನಸ್ಸಿಗೆ ಕುತೂಹಲವು ಉಂಟಾಗುತ್ತೆಯಲ್ಲವೆ ? ॥೬೦॥

ಶ್ಲೋಕ ॥ ತತ್ರಾಮ್ರಫಲಮಾಕ್ರಷ್ಟುಂ
ಧನುಷಾ ಕೋಪಿ ನಾಶಕತ್ ।
ಅಶಕ್ತೈಃ ಕರ್ತುಮಾರಬ್ಧಂ
ಸುಕರಂ ಕಿಂ ನ ದುಷ್ಕರಮ್ ॥೬೩॥

ಟೀ ॥ ತತ್ರ-ಆ ಉದ್ಯಾನವನದಲ್ಲಿ, ಕೋಪಿ-ಒಬ್ಬಾನೊಬ್ಬ ಪುರುಷನು, ಆಮ್ರಫಲಂ ಮಾವಿನಹಣ್ಣನ್ನು, ಧನುಷಾ-ಧನುಸ್ಸಿನಿಂದ, ಆಕ್ರಷ್ಟುಂ-ಸೆಳೆಯಲೋಸುಗ, ನಾಶಕತ್-ಸಮರ್ಥನಾಗಲಿಲ್ಲವು., ಅಶಕ್ತೈಃ-ಶಕ್ತಿಹೀನರಿಂದ, ಕರ್ತುಂ-ಮಾಡಲೋಸುಗ, ಆರಬ್ಧಂ-ಪ್ರಾರಂಭಿಸಲ್ಪಟ್ಟ, ಸುಕರಂ-ಅನಾಯಾಸದಿಂದ ಮಾಡುವುದಕ್ಕೆ ಯೋಗ್ಯವಾದಕೆಲಸವು, ದುಷ್ಕರಂನಕಿಂ-ಮಾಡಲಶಕ್ಯವಲ್ಲವೇನು ?

ತಾತ್ಪರ್ಯ ॥ ಆ ವನದಲ್ಲಿ ಒಬ್ಬನು ಧನುಸ್ಸಿನಿಂದ ಒಂದು ಮಾವಿನಹಣ್ಣನ್ನು ಕೆಳಗೆ ಇಳಸುವುದಕ್ಕೋಸುಗ ಎಷ್ಟು ಶ್ರಮಪಟ್ಟಾಗ್ಯೂ ಸಾಧ್ಯವಾಗಲಿಲ್ಲವು. ಸುಖವಾಗಿ ಸಾಧಿಸುವುದಕ್ಕೆ ಯೋಗ್ಯವಾದ ಕೆಲಸವಾದರೂ ಅಶಕ್ತರಿಗೆ ಅಸಾಧ್ಯವಷ್ಟೆ ? ॥ ೬೩ ॥

ಶ್ಲೋಕ ॥ ಸ್ವಾಮಿನಾ ತು ತತ್ಫಲಂ ವಿದ್ಧ-
ಮಾದತ್ತ ಸಖಿಲೀಮುಖಮ್ ।

ತತ್ತನ್ಮಾತ್ರಾಕೃತೋತ್ಸಾಹೈಃ
ಸಾಧ್ಯೇತ ಹಿ ಸಮೀಹಿತಮ್ ॥೬೪॥

ಟೀ ॥ ಸ್ವಾಮಿನಾತು-ಜೀವಂಧರಸ್ವಾಮಿಯಾದರೋ, ವಿದ್ಧಂ - ಹೊಡೆಯಲ್ಪಟ್ಟ, ತತ್ಫಲಂ-ಆ ಫಲವನ್ನು, ಸಶಿಲೀಮುಖಂ(ಸತ್)- ಬಾಣದೊಡಗೂಡಿದುದಾಗಿ, ಆವತ್ತ-ಸ್ವೀಕರಿಸಿದನು., ತತ್ತನ್ಮಾತ್ರಾಕೃತೋತ್ಸಾಹೈಃ-ಆ ಆ ಕಾರ್ಯಕ್ಕೆ ತಕ್ಕ ಪರಿಮಾಣದಿಂದ ಮಾಡಲ್ಪಟ್ಟ ಉತ್ಸಾಹವುಳ್ಳವರಿಂದ, ಸಮೀಹಿತಂ- ಇಷ್ಟಾರ್ಥವು, ಸಾಧ್ಯೇತಹಿ-ಸಾಧಿಸಲ್ಪಟ್ಟೀತಲ್ಲವೆ?.

ತಾತ್ಪರ್ಯ ॥ ಜೀವಂಧರಸ್ವಾಮಿಯಾದರೋ ತನ್ನಿಂದ ಹೊಡೆಯಲ್ಪಟ್ಟು ಬಾಣದಿಂದೊಡಗೂಡಿ ಬೀಳುತಲಿರುವ ಆ ಮಾವಿನಹಣ್ಣನ್ನು ತೆಗೆದುಕೊಂಡನು. ಯಾವಯಾವಕೆಲಸಕ್ಕೆ ಎಷ್ಟುಮಾತ್ರಪ್ರಯತ್ನ ಮಾಡಿದರೆ ಸಾಧ್ಯವಾಗುವುದೋ, ಅಷ್ಟೇಪ್ರಯತ್ನ ಮಾಡತಕ್ಕವರಿಂದ ಆಯಾಯ ಕಾರ್ಯವು ಸಾಧಿಸಲ್ಪಡುವದು. ॥ ೬೪ ॥

ಶ್ಲೋಕ ॥ ಅಪರಾದ್ಧ ಪೃಷತ್ಕೋಽಪಿ
ದೃಷ್ಟ್ವಾ ವ್ಯಸ್ಮೇಷ್ಟ ತತ್ಕೃತಿಂ ।
ಅಪದಾನಮಶಕ್ತಾನಾ-
ಮದ್ಭುತಾಯ ಹಿ ಜಾಯತೇ ॥೬೫॥

ಟೀ ॥ ಅಪರಾದ್ಧಪೃಷತ್ಕೋಽಪಿ-ಅಪರಾದ್ಧ-ಗುರಿತಪ್ಪಿಹೋದ, ಸಾಯುಕೊಪಿ-ಬಾಣವುಳ್ಳ ಆ ಪುರುಷನೂಕೂಡ, ತತ್ಕೃತಿಂ-ಆ ಜೀವಂಧರ ಸ್ವಾಮಿಯು ಅದ್ಭುತಕಾರ್ಯವನ್ನು, ದೃಷ್ಟ್ವಾ-ನೋಡಿ, ವ್ಯಸ್ಮೇಷ್ಟ - ಆಶ್ಚರ್ಯಪಟ್ಟನು., ಅಪದಾನಂ-ಶೂರರುಮಾಡಿದಕೃತ್ಯವು, ಅಶಕ್ತಾನಾಂ-ಶಕ್ತಿಹೀನರಿಗೆ, ಅದ್ಭುತಾಯ - ಆಶ್ಚರ್ಯಕ್ಕೋಸುಗ, ಜಾಯತೇಹಿ- ಆಗುತ್ತದೆಯಲ್ಲವೆ?.

ತಾತ್ಪರ್ಯ ॥ ಅನೇಕಾವರ್ತಿ ಹೊಡದಾಗ್ಯೂ, ಗುರಿ ತಪ್ಪಿಹೋದ ಬಾಣವುಳ್ಳ ಆ ಪುರುಷನೂಕೂಡ ಜೀವಂಧರಸ್ವಾಮಿಯು ಒಂದೇಆವರ್ತಿ ಬಾಣಪ್ರಯೋಗವಂ ಮಾಡಿ ಆ ಬಾಣದಿಂದೊಡಗೂಡಿದ ಆ ಮಾವಿನಹಣ್ಣನ್ನು ತೆಗೆದುಕೊಂಡದ್ದನ್ನು ನೋಡಿ, ಆ ಜೀವಂಧರಸ್ವಾಮಿಯು ಸಾಹಸಕೃತ್ಯಕ್ಕೆ ಅತ್ಯಾಶ್ಚರ್ಯಪಟ್ಟನು. ಶೂರರುಮಾಡುವ ಸಾಹಸ

ಕೃತ್ಯವು ಅಶಕ್ತರಿಗೆ ಆಶ್ಚರ್ಯಕರವಾಗಿಯೇ ಇರುವುದಷ್ಟೆ ? ಅದೇಸಾ ಹಸನು ಶೂರರಿಗೆ ಸಹಜಕೃತ್ಯವಾಗಿದೆ. ॥ ೬೫ ॥

ಶ್ಲೋಕ॥ ಸ್ವಾಮಿನೋಽಯಂ ಸ್ವವೃತ್ತಾಂತಂ
ಸಕಾತರ್ಯ್ಯಂ ಸಮಭ್ಯಧಾತ್ ।
ಸನ್ನಿಧಾನೆ ಸಮರ್ಥಾನಾಂ
ವರಾ ಕೋಽಪಿ ಪರೋಽಜನಃ ॥೭೬॥

ಟೀ ॥ ಅಯಂ-ಈಪುರುಷನು, ಸ್ವಾಮಿನಃ-ಜೀವಂಧರಸ್ವಾಮಿಗೆ, ಸ್ವವೃತ್ತಾಂತಂ-ತನ್ನ ಸಮಾಚಾರವನ್ನು, ಸಕಾತರ್ಯ್ಯಂ (ಯಥಾತಥಾ) - ಭಯದೊಡನೆ ಕೂಡಿರೋಣಹೇಗೋಹಾಗೆ, ಸಮಭ್ಯಧಾತ್-ಹೇಳಿದನು., ಸಮರ್ಥಾನಾಂ - ಸಮರ್ಥರಾದ ಪುರುಷರ, ಸನ್ನಿಧಾನೇ-ಸಮೀಪದಲ್ಲಿ, ಪರೋಽಪಿಜನಃ-ಉತ್ಕೃಷ್ಟಜನರೂ ಕೂಡ, ವರಾಕಃ-ನಮ್ರತೆಯನ್ನು ಹೊಂದುತ್ತಾರೆ.

ತಾತ್ಪರ್ಯ ॥ ಈ ಪುರುಷನೂಕೂಡ ಜೀವಂಧರಸ್ವಾಮಿಗೆ ತನ್ನ ಸಮಾಚಾರವಂ ಬಹಳ ಭಯದೊಡನೆ ತಿಳಿಸಿದನು. ಸಮರ್ಥರ ಸಮೀಪದಲ್ಲಿ ಜನವು ತಾನು ಉತ್ಕೃಷ್ಟನಾದಾಗ್ಯೂ ಅಪಕೃಷ್ಟನನ್ನಾಗಿ ತಿಳಿದುಕೊಳ್ಳುವನಲ್ಲವೆ?. ॥ ೭೬ ॥

ಶ್ಲೋಕ॥ ಕರ್ತವ್ಯಂ ವಾ ನ ವಾ ಪ್ರೋಕ್ತಂ
ಮಯಾ ಕಾರ್ಮ್ಮುಕಕೋವಿದ ।
ಕರ್ಣಕಟ್ವಪಿಮದ್ವಾಕ್ಯ-
ಮಾಕರ್ಣಯಿತುಮರ್ಹಸಿ ॥೭೭॥

ಟೀ ॥ ಹೇ ಕಾರ್ಮ್ಮುಕಕೋವಿದ-ಎಲೈ ಧನುರ್ವಿದ್ಯಾಪಂಡಿತನೇ !, ಮಯಾ-ನನ್ನಿಂದ, ಪ್ರೋಕ್ತಂ-ಹೇಳಲ್ಪಟ್ಟ ಕಾರ್ಯವು, ಕರ್ತವ್ಯಂ ವಾ-ಮಾಡುವುದಕ್ಕೆ ಯೋಗ್ಯವಾದದ್ದೋ, ನವಾ-ಅಲ್ಲವೋ, ಕರ್ಣಕಟ್ವಪಿ-ಕಿವಿಗೆ ಕೇಳುವುದಕ್ಕೆ ಅತ್ಯಂತಕಠಿಣವಾಗಿದ್ದಾಗ್ಯೂಕೂಡ, ಮದ್ವಾಕ್ಯಂ-ನನ್ನಮಾತನ್ನು, ಆಕರ್ಣಯಿತುಂ-ಕೇಳಲೋಸುಗ, ಅರ್ಹಸಿ-ಯೋಗ್ಯನಾಗುತ್ತೀಯೆ ?.

ತಾತ್ಪರ್ಯ ॥ ಎಲೈ ಧನುರ್ವಿದ್ಯಾಪಂಡಿತನೇ ! ನಾನು ಒಂದು ಮಾತನ್ನು ಹೇಳುತ್ತೇನೆ.— ಅದು ತಮಗೆ ಮಾಡುವದಕ್ಕೆ ಯೋಗ್ಯ

ವಾದ ಕೆಲಸವೋ ಅಲ್ಲವೋ, ನಾನರಿಯೆನು. ಕರ್ಣಕಠೋರ ವಾಗಿದ್ದಾಗ್ಯೂ ನಾನು ಹೇಳುವಮಾತನ್ನು ದಯೆಯಿಟ್ಟು ತಾವು ಕೇಳಬೇಕು. ॥ ೬೭ ॥

ಶ್ಲೋಕ॥ ಏತನ್ಮಧ್ಯಮದೇಶಸ್ಥಾ
ಹೇಮಾಭಾಸ್ಯಾದಿಯಂ ಪುರೀ ।
ಕ್ಷತ್ರಿಯೋದೃಢಮಿತ್ರೋಽಸ್ಯ
ತತ್ಪ್ರಿಯಾ ನಳಿನಾಹ್ವಯಾ ॥ ೬೮॥

ಟೀ॥ ಇಯಂಪುರೀ-ಈ ಪಟ್ಟಣವು, ಏತನ್ಮಧ್ಯಮದೇಶಸ್ಥಾ-ಈ ಮಧ್ಯದೇಶ ದಲ್ಲಿರುವ, ಹೇಮಾಭಾ-ಹೇಮಾಭಾ ಎಂದು ಹೆಸರುಳ್ಳದ್ದಾಗಿ, ಸ್ಯಾತ್-ಆಗುವುದು. ಅಸ್ಯ-ಈ ಪಟ್ಟಣಕ್ಕೆ, ಕ್ಷತ್ರಿಯಃ-ರಾಜನು, ದೃಢಮಿತ್ರಃ-ದೃಢಮಿತ್ರನೆಂದುನಾ ಮಧೇಯವುಳ್ಳವನು., ತತ್ಪ್ರಿಯಾ-ಆ ದೃಢಮಿತ್ರರಾಜನ ಪತ್ನಿಯು, ನಳಿನಾಹ್ವಯಾ-ನಳಿನಾದೇವಿಯೆಂದು ಹೆಸರುಳ್ಳವಳು.

ತಾತ್ಪರ್ಯ ॥ ಈ ಮಧ್ಯದೇಶದಲ್ಲಿರುವ ಈ ಪಟ್ಟಣವು ಹೇಮಾ ಭಾಯೆಂಬ ಹೆಸರುಳ್ಳದ್ದು; ಈ ದೇಶಕ್ಕೆ ( ಅಥವಾ, ಈಹೇಮಾಭಾಪು ರಿಗೆ ) ಅರಸನಾದವನು ದೃಢಮಿತ್ರನೆಂದು ನಾಮಧೇಯವುಳ್ಳವನು. ಈ ದೃಢಮಿತ್ರ ಮಹಾರಾಜನ ಪತ್ನಿಯು ನಳಿನಾದೇವಿಯೆಂದು ನಾಮ ಧೇಯವುಳ್ಳವಳು. ॥ ೬೮ ॥

ಶ್ಲೋಕ॥ ಸುಮಿತ್ರಾದ್ಯಾಸ್ತಯೋಃ ಪುತ್ರಾ
ಸ್ತೇಷ್ವಪ್ಯನ್ಯತಮೋಽಸ್ಮ್ಯಹಮ್ ।
ವಯಸ್ಯೈವ ವಯಂ ಪಕ್ವಾ
ವಿಶ್ವೇಪಿ ನ ತು ವಿದ್ಯಯಾ ॥೬೯।

ಟೀ॥ ಸುಮಿತ್ರಾದ್ಯಾಃ-ಸುಮಿತ್ರ-ಸುಮಿತ್ರನೇ, ಆದ್ಯಾಃ-ಮೊದಲಾಗಿವು ಳ್ಳವರು, ತಯೋಃ-ಆ ದಂಪತಿಗಳಿಗೆ, ಪುತ್ರಾಃ-ಪುತ್ರರು, ತೇಷ್ವಪಿ-ಅವ ರಲ್ಲಿಯೂ, ಅಹಂ-ನಾನು, ಅನ್ಯತಮ(ಸ್ಸನ್)-ಒಬ್ಬನಾಗಿ, ಅಸ್ಮಿ-ಆಗುತ್ತೇನೆ., ವಯಂ-ನಾವು, ವಯಸ್ಯೈವ- ವಯಸ್ಸಿನಿಂದಲೇ, ಪಕ್ವಾಃ - ಪರಿಪಾಕವನ್ನು

ಹೊಂದಿದಂಥಾವರು, ವಿದ್ಯಯಾ-ವಿದ್ಯೆಯಿಂದ, ನತು-ಅಲ್ಲವೇಅಲ್ಲವು.

ತಾತ್ಪರ್ಯ ॥ ಸುಮಿತ್ರನೇ ಮೊದಲಾಗಿವುಳ್ಳವರು ಆ ನಳಿನಾದೃಢಮಿತ್ರನ ಪುತ್ರರು. ಅವರಲ್ಲಿಯೂ ನಾನು ಒಬ್ಬನಾಗಿದೇನೆ. ನಾವು ವಯಸ್ಸಿನಿಂದ ಪರಿಪಾಕವನ್ನು ಹೊಂದಿದವರೇಹೊರತು ವಿದ್ಯೆಯಿಂದ ಪರಿಪಾಕವನ್ನು ಹೊಂದಿದವರಲ್ಲವು. (ವಯಸ್ಸಿನಿಂದಮಾತ್ರ ದೊಡ್ಡವರೆನಿಸಿ ವಿದ್ಯಾಹೀನರಾದುದರಿಂದ ಭೂಭಾರವಾಗಿರುವುವೆಂದು ಭಾವವು.) ॥೬೯॥

ಶ್ಲೋಕ ॥ ತಾತಪಾದೋಽಯಮಸ್ಮಾಕಂ
ಚಾಪವಿದ್ಯಾ ವಿಶಾರದಮ್ ।
ವಿಚಿನೋತಿ ನ ಚೇದ್ದೋಷ
ಏಷೋಽಪ್ಯಾಲೋಕ್ಯತಾಮಿತಿ ॥೭೦॥

ಟೀ ॥ ಅಸ್ಮಾಕಂ-ನಮಗೆ, ತಾತಪಾದಃ-ತಂದೆಯಾದ, ಅಯಂ- ಈ ದೃಢಮಿತ್ರಮಹಾರಾಜನು, ಚಾಪವಿದ್ಯಾವಿಶಾರದಂ-ಚಾಪವಿದ್ಯಾ-ಧನುರ್ವಿದ್ಯೆಯಲ್ಲಿ, ವಿಶಾರದಂ-ಪಂಡಿತನಾದವನನ್ನು, ವಿಚಿನೋತಿ-ಹುಡುಕುತ್ತಾನೆ., ದೋಷಃ- ಪ್ರಕೃತಕಾರ್ಯಭಂಗವು, ನಚೇತ್-ಇಲ್ಲದೇಇದ್ದರೆ, ಏಷೋಽಪಿ-ಇವನೂ ಕೂಡ, ಆಲೋಕ್ಯತಾಂ-ನೋಡಲ್ಪಡಲಿ., ಇತಿ-ಹೀಗೆಂದು, ಆಹ-ಹೇಳಿದನು.

ತಾತ್ಪರ್ಯ ॥ ನಮಗೆ, ತಂದೆಯಾದ ಈ ದೃಢಮಿತ್ರ ಮಹಾರಾಜನು ಧನುರ್ವಿದ್ಯಾಪಂಡಿತನನ್ನು ಹುಡುಕುತ್ತಾನೆ.— ತಮಗೆ ಪ್ರಕೃತಕಾರ್ಯಕ್ಕೆ ಕುಂದಕವಿಲ್ಲದೇಇದ್ದಲ್ಲಿ, ಈ ನಮ್ಮ ತಂದೆಯು ನೋಡಲ್ಪಡಲಿ? (ತಮ್ಮ ಪ್ರಕೃತಕಾರ್ಯಕ್ಕೆ ವಿರೋಧವಾದಲ್ಲಿ ತಮ್ಮ ಇಷ್ಟಾನುಸಾರ ನಡೆಸಬಹುದೆಂದಭಿಪ್ರಾಯವು.) ತಮ್ಮ ಕಾರ್ಯ ಗೌರವವು ಹೇಗಿರುವುದೊನಾನರಿಯೆನೆಂದು ಭಾವವು. ॥೭೦॥

ಶ್ಲೋಕ ॥ ತದ್ವ್ಯಾಪಾರೇ ವಿಸಂವಾದೊ
ವಿದುಷೋಽಪ್ಯಸ್ಯನಾಜನಿ ।
ವಿಧಿರ್ಘಟಯತೀಷ್ಟಾರ್ಥೈ-
ಸ್ಸ್ವಯಮೇವ ಹಿ ದೇಹಿನಃ ॥೭೧॥

ಟೀ ॥ ವಿಮುಷಃ-ವಿದ್ವಾಂಸನಾದ, ಅಸ್ಯ-ಈ ಜೀವಂಧರಸ್ವಾಮಿಗೆ, ತದ್ವ್ಯಾಹಾರೇ-ಅವನ ಮಾತಿನಲ್ಲಿ, ವಿಸಂವಾದಃ-ವಿರುದ್ಧಾರ್ಥವು, ನಾಜನಿ-ಉಂಟಾಗಲಿಲ್ಲವು. ವಿಧಿಃ-ಅದೃಷ್ಟವು(ಕರ್ಮವು), ದೇಹಿನಃ-ಪ್ರಾಣಿಗಳನ್ನು, ಸ್ವಯಮೇವ-ತಾನಾಗಿಯೇ, ಇಷ್ಟಾರ್ಥೈಃ-ಇಷ್ಟಾರ್ಥಗಳೊಡನೆ, ಘಟಯತಿ-ಸೇರಿಸುತಲಿದೆ.

ತಾತ್ಪರ್ಯ ॥ ಪ್ರಾಜ್ಞನಾದ ಈ ಜೀವಂಧರಸ್ವಾಮಿಗೆ ಆ ರಾಜಪುತ್ರನ ಮಾತಿನಲ್ಲಿ ಸಂದೇಹವುಂಟಾಗಲಿಲ್ಲವು. ನಂಬಿಕೆಯುಂಟಾದುದು. ಪೂರ್ವಕರ್ಮವು ಪ್ರಾಣಿಗಳನ್ನು ಇಷ್ಟಾರ್ಥದೊಡನೆ ಸೇರಿಸುತ್ತದೆಯಲ್ಲವೆ? (ಪ್ರಾಣಿಗಳಿಗೆ ಶುಭಾಶುಭಫಲಗಳು ಸಿದ್ಧಿಸುವುದಕ್ಕೆ ಅದೃಷ್ಟವೇ ಮುಖ್ಯಕಾರಣವೆಂದು ಭಾವವು.) ॥ ೭೧ ॥

ಶ್ಲೋಕ ॥ ಪಾರ್ಥಿವಂ ಚ ತತಃ ಪಶ್ಯನ್
ತದ್ವಶ್ಯೋಽಭೂಚ್ಚ ಸಮ್ಮತೇಃ ।
ಅನುಸಾರಪ್ರಿಯೋ ನ ಸ್ಯಾ-
ತ್ಕೋ ವಾ ಲೋಕೇ ಸಚೇತನಃ ॥ ೭೨ ॥

ಟೀ ॥ ತತಃ-ಅನಂತರದಲ್ಲಿ, ಪಾರ್ಥಿವಂ-ದೊರೆಯಾದ ದೃಢಮಿತ್ರ ಮಹಾರಾಜನನ್ನೂ ಕೂಡ, ಪಶ್ಯನ್(ಸನ್)-ನೋಡುವವನಾಗಿ, ಸಮ್ಮತೇಃ- ಸಮ್ಮತಿಯುದೆಸೆಯಿಂದ, ತದ್ವಶ್ಯ(ಸ್ಸನ್)-ಆ ರಾಜನಿಗೆ ಅಧೀನನಾಗಿ, ಅಭೂಚ್ಚ-ಆಗಿಯೂ ಆದನು., ಲೋಕೇ-ಲೋಕದಲ್ಲಿ, ಸಚೇತನಃ- ಜ್ಞಾನದಿಂದೊಡಗೂಡಿದ, ಕೋವಾ-ಯಾವನು ತಾನೇ, ಅನುಸಾರಪ್ರಿಯಃ-ಅನುಸಾರ-ಅನುಸರಿಸೋಣವದೆಸೆಯಿಂದ, ಪ್ರಿಯ(ಸ್ಸನ್)-ಪ್ರೀತಿಪಡುವವನಾಗಿ, ನಸ್ಯಾತ್-ಆಗಲಾರನು.

ತಾತ್ಪರ್ಯ ॥ ಅನಂತರದಲ್ಲಿ ಜೀವಂಧರಕುಮಾರನು ದೊರೆಯನ್ನು ನೋಡಿ, ತನ್ನ ಸಮ್ಮತಿಯಿಂದ ಆ ದೃಢಮಿತ್ರ ಮಹಾರಾಜನಿಗೆ ಅಧೀನನಾಗಿ ಆದನು. ಲೋಕದಲ್ಲಿ ತನ್ನನ್ನು ಬಹಳವಾಗಿ ಅನುಸರಿಸಿದರೆ ಪ್ರೀತಿಪಡದವನು, ಜ್ಞಾನರಹಿತವಾದ ಅಚೇತನವಸ್ತುವಿಗೆ ಸಮಾನನೇ ಹೊರತು ಜ್ಞಾನವುಳ್ಳವನೆಂದು ಹೇಳಲ್ಪಡುವನೆ? (ಗುಣಗ್ರಹಣವೆ ಜ್ಞಾನವಿರುವದಕ್ಕೆ ಫಲವೆಂದಭಿಪ್ರಾಯವು. ॥ ೭೨ ॥

ಶ್ಲೋಕ॥ ಮಹೀಕ್ಷಿತಾಕ್ಷಣಾತ್ತಸ್ಯ
ಮಾಹಾತ್ಮ್ಯಮಪಿ ವೀಕ್ಷಿತಮ್ ।
ವಪುರ್ವಕ್ತಿ ಹಿ ಸುವ್ಯಕ್ತ-
ಮನುಭಾವಮನಕ್ಷರಮ್ ॥೭೩॥

ಟೀ॥ ಮಹೀಕ್ಷಿತಾ-ದೊರೆಯಿಂದ, ಕ್ಷಣಾತ್-ಕ್ಷಣಕಾಲದೊಳಗೆ, ತಸ್ಯ-ಆ ಜೀವಂಧರಸ್ವಾಮಿಯು, ಮಾಹಾತ್ಮ್ಯಮಪಿ-ಮಹಿಮೆಯೂಕೂಡ, ಈಕ್ಷಿತಂ-ನೋಡಲ್ಪಟ್ಟಿತು., ವಪುಃ-ಶರೀರವು, ಅನುಭಾವಂ-ಮಹಿಮೆಯನ್ನು, ಅನಕ್ಷರಂ (ಯಥಾ ತಥಾ)-ಅಕ್ಷರರಹಿತವಾಗಿರೋಣ ಹೇಗೋಹಾಗೆ, ಸುವ್ಯಕ್ತಂ-ಸ್ಫುಟವಾಗಿ, ವಕ್ತಿ ಹಿ-ಹೇಳುತ್ತದೆಯಲ್ಲವೆ ?.

ತಾತ್ಪರ್ಯ ॥ ಆ ದೃಢಮಿತ್ರಮಹಾರಾಜನಿಂದ ಒಂದು ಕ್ಷಣಮಾತ್ರದಿಂದಲೇ ಆ ಜೀವಂಧರಕುಮಾರನ ಮಾಹಾತ್ಮ್ಯವೂಕೂಡ ನೋಡಲ್ಪಟ್ಟಿತು. ಶರೀರವೇ ಮನುಷ್ಯನ ಮಹಿಮೆಯನ್ನು ಸ್ಫುಟವಾಗಿ ಸೂಚಿಸುತ್ತದೆಯಲ್ಲವೆ.? ಬುದ್ಧಿಶಾಲಿಗಳಿಗೆ ಬಾಯಿಯಿಂದಲೇ ಹೇಳಿ ತಿಳಿಸಲವಶ್ಯಕವಿಲ್ಲವಷ್ಟೆ ? ॥ ೭೩ ॥

ಶ್ಲೋಕ॥ ಸುತವಿದ್ಯಾರ್ಥಮತ್ಯರ್ಥಂ
ಪಾರ್ಥಿವಸ್ತಮಯಾಚತ ।
ಆರಾಧನೈಕಸಮ್ಪಾದ್ಯಾ
ವಿದ್ಯಾ ನಹ್ಯನ್ಯಸಾಧನಾ ॥ ೭೪ ॥

ಟೀ ॥ ಪಾರ್ಥಿವಃ-ದೃಢಮಿತ್ರಮಹಾರಾಜನು, ಸುತವಿದ್ಯಾರ್ಥಂ-ಸುತ-ಪುತ್ರರ, ವಿದ್ಯಾರ್ಥಂ-ವಿದ್ಯೆಗೋಸುಗ, ತಂ-ಆ ಜೀವಂಧರಸ್ವಾಮಿಯನ್ನು, ಅತ್ಯರ್ಥಂ-ಬಹಳವಾಗಿ, ಅಯಾಚತ-ಪ್ರಾರ್ಥಿಸಿದನು., ವಿದ್ಯಾ-ವಿದ್ಯೆಯು, ಆರಾಧನೈಕಸಂಪಾದ್ಯಾ-ಗುರುಶುಶ್ರೂಷೆಯೊಂದರಿಂದಲೇ ಸಂಪಾದಿಸಲೋಸುಗ ಯೋಗ್ಯವಾದದ್ದು, ಅನ್ಯಸಾಧನಾ(ಸತೀ)-ಇತರ ಯಾವುದರಿಂದಲೂ ಸಾಧಿಸಲೋಸುಗ ಯೋಗ್ಯವಾದುದಾಗಿ, ನಹಿ-ಆಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ಆ ದೃಢಮಿತ್ರಮಹಾರಾಜನು ತನ್ನ ಪುತ್ರರ ವಿದ್ಯಾಭ್ಯಾಸಕ್ಕೋಸುಗ ಆ ಜೀವಂಧರ ಕುಮಾರನನ್ನು ಬಹಳವಾಗಿ ಕೇ

ಕೊಂಡನು. ವಿದ್ಯೆಯು ಗುರುವಿನ ಮನಸ್ಸಂತೋಷಕರವಾದ ಶುಶ್ರೂಷೆಯುಪೊರತು ಮತ್ತೆ ಯಾವುದರಿಂದಲೂ ಸಾಧಿಸಲತಕ್ಕವನಷ್ಟೆ ?॥೨೪॥

ಶ್ಲೋಕ॥ ಅಭ್ಯರ್ಥನಾಬಲಾತ್ತಸ್ಯ
ಕುಮಾರೋಪ್ಯಭ್ಯುಪಾಗಮತ್ ।
ಸ್ವಯಂ ದೇಯಾ ಸತೀ ವಿದ್ಯಾ
ಪ್ರಾರ್ಥನಾಯಾಂ ತು ಕಿಂ ಪುನಃ ॥೨೫॥

ಟೀ ॥ ತಸ್ಯ-ಆ ದೃಢಮಿತ್ರಮಹಾರಾಜನ, ಅಭ್ಯರ್ಥನಾಬಲಾತ್- ಅಧಿಕವಾದಪ್ರಾರ್ಥನೆಯುದೆಸೆಯಿಂದ, ಕುಮಾರೋಪಿ- ಜೀವಂಧರಕುಮಾರನೂಕೂಡ, ಅಭ್ಯುಪಾಗಮತ್- ಅಂಗೀಕರಿಸಿದನು., ಸತೀ-ಶ್ರೇಷ್ಠವಾದ, ವಿದ್ಯಾ-ವಿದ್ಯೆಯು, ಸ್ವಯಂ-ತಾನಾಗಿಯೇ (ಅಪ್ರಾರ್ಥಿತವಾಗಿಯೇ), ದೇಯಾ- ಕೊಡಲೋಸುಗ ಯೋಗ್ಯವು., ಪ್ರಾರ್ಥನಾಯಾಂಸತ್ಯಾಂತು-ಪ್ರಾರ್ಥನೆಯೂಕೂಡ ಉಂಟಾಗುತ್ತಲಿರಲಾಗಿ, ಕಿಂಪುನಃ-ಏನು ಹೇಳತಕ್ಕದ್ದು?.

ತಾತ್ಪರ್ಯ ॥ ಆ ದೃಢಮಿತ್ರ ಮಹಾರಾಜನು ಬಹಳವಾಗಿ ಕೇಳಿಕೊಂಡದುದರಿಂದ ಜೀವಂಧರಕುಮಾರನು ಸುಮಿತ್ರನೇಮೊದಲಾದ ಆ ರಾಜಪುತ್ರರಿಗೆ ಕ್ಷತ್ರಿಯೋಚಿತವಾದ ಧನುರ್ವಿದ್ಯಾಭ್ಯಾಸವಂ ಮಾಡಿಸಲೋಸುಗ ಒಪ್ಪಿಕೊಂಡನು. ಗುರುವು ತಾನಾಗಿಯೆ ದಯೆಯಿಂದ ವಿದ್ಯೆಯಂ ಕಲಿಸಬೇಕು. ಹೀಗಿರುವಲ್ಲಿ ಪ್ರಾರ್ಥಿಸಲ್ಪಟ್ಟಾಗ್ಯಾದರೂ ಕಲಿಸದೇ ಇರುವದುಂಟೆ ? ॥ ೨೫ ॥

ಶ್ಲೋಕ॥ ಪವಿತ್ರೋಪಿ ಸುಮಿತ್ರಾದೀ-
ನಧ್ಯಾಪಯದವಂಚಿತಮ್ ।
ಕೃತಾರ್ಥಾನಾಂ ಹಿ ಪಾರಾರ್ಥ್ಯ-
ಮೈಹಿಕಾರ್ಥಪರಾಙ್ಮುಖಮ್ ।೨೬॥

ಟೀ ॥ ಪವಿತ್ರೋಪಿ-ಪವಿತ್ರಕುಮಾರನೆಂಬ ನಾಮಧೇಯವುಳ್ಳ ಜೀವಂಧರಕುಮಾರನೂಕೂಡ, ಸುಮಿತ್ರಾದೀನ್-ಸುಮಿತ್ರನೇಮೊದಲಾದವರನ್ನು, ಅವಂಚಿತಂ(ಯಥಾತಥಾ)-ನಿರ್ವಂಚನೆಯಾಗಿರೋಣಕ್ಕೆಹಾಗೆ, ಅಧ್ಯಾಪಯತ್-ಅಧ್ಯಯನವನ್ನು ಮಾಡಿಸಿದನು., ಕೃತಾರ್ಥಾನಾಂ-ಸತ್ಪುರುಷರಿಗೆ, ಪಾರಾರ್ಥ್ಯಂ-ಪರಪ್ರಯೋಜನವೇ ಮುಖ್ಯವಾಗಿರುವಿಕೆಯು, ಐಹಿಕಾರ್ಥಪರಾಙ್ಮುಖಂಹಿ- ಐಹಿಕ-ಇಹಲೋಕಸಂಬಂಧಿಯಾದ, ಅರ್ಥ-ಪ್ರಯೋಜನದಲ್ಲಿ, ಪರಾಙ್ಮುಖಂ ಹಿ- ಅಸಕ್ತ

ರಹಿತವಾಗಿದೆಯಲ್ಲವೆ?.

ತಾತ್ಪರ್ಯ ॥ ಪವಿತ್ರಕುಮಾರನೂಕೂಡ ಆ ಸುಮಿತ್ರನೇ ಮೊದಲಾದ ರಾಜಪುತ್ರರನ್ನೂ ನಿರ್ವಂಚನೆಯಾಗಿರೋಣ ಹೇಗೋ ಹಾಗೆ ಧನುರ್ವಿದ್ಯಾಭ್ಯಾಸವಂ ಮಾಡಿಸಿದನು. ಕೃತಾರ್ಥರಾದ ಮಹಾಪುರುಷರಿಗೆ, ಪರರಿಗೆಉಪಕಾರಮಾಡೋಣದರಲ್ಲಿ ಅತ್ಯಾಸಕ್ತಿಯೇ ಹೊರತು ತಮ್ಮ ಐಹಿಕಪ್ರಯೋಜನದಲ್ಲಾಸಕ್ತಿ ಇಲ್ಲವಷ್ಟೆ? ॥ ೭೬ ॥

ಶ್ಲೋಕ॥ ಪ್ರಶ್ರಯೇಣ ಬಭೂವುಸ್ತೇ
ಪ್ರತ್ಯಕ್ಷಾಚಾರ್ಯರೂಪಕಾಃ ।
ವಿನಯಃ ಖಲು ವಿದ್ಯಾನಾಂ
ದೋಗ್ಧ್ರೀ ಸುರಭಿರಂಜಸಾ ॥೭೭॥

ಟೀ ॥ ತೇ-ಆ ಸುಮಿತ್ರನೇ ಮೊದಲಾಗುಳ್ಳವರು, ಪ್ರಶ್ರಯೇಣ- ವಿನಯದಿಂದ, ಪ್ರತ್ಯಕ್ಷಾಚಾರ್ಯರೂಪಕಾಸ್ಸಂತಃ—ಪ್ರತ್ಯಕ್ಷ-ಪ್ರತ್ಯಕ್ಷವಾದ, ಆಚಾರ್ಯ-ಗುರುವಾದ ಜೀವಂಧರಸ್ವಾಮಿಗೆ, ರೂಪಕಾ(ಸ್ಸಂತಃ)-ಸಮಾನರಾಗಿ, ಬಭೂವುಃ- ಆದರು., ವಿನಯಃ-ವಿನಯಗುಣವು, ವಿದ್ಯಾನಾಂ-ವಿದ್ಯೆಗಳಿಗೆ, ಅಂಜಸಾ-ಶೀಘ್ರವಾಗಿ, ದೋಗ್ಧ್ರೀ-ಕರೆಯುತ್ತಿರುವ, ಸುರಭಿಃ ಖಲು-ಕಾಮಧೇನುವಲ್ಲವೆ?.

ತಾತ್ಪರ್ಯ ॥ ಆ ಸುಮಿತ್ರನೇ ಮೊದಲಾದ ಶಿಷ್ಯರು ವಿನಯಗುಣದಿಂದ ಪ್ರತ್ಯಕ್ಷವಾಗಿ ಗುರುವಾದ ಜೀವಂಧರಸ್ವಾಮಿಗೆ ಸಮಾನಗುಣವುಳ್ಳವರಾಗಿ ( ಸಮಾನ ಸಾಮರ್ಥ್ಯವುಳ್ಳವರಾಗಿ ) ಆದರು. ವಿನಯಗುಣವು ವಿದ್ಯೆಗೆ ಕಾಮಧೇನುವಲ್ಲವೆ? ( ಗುರುವಿನಲ್ಲಿ ಪರಮವಿಶ್ವಾಸವೂ, ವಿನಯವೂ, ಇರುವ ಶಿಷ್ಯನಿಗಲ್ಲವೆ? ವಿದ್ಯೆಯು ಶೀಘ್ರವಾಗಿ ಸ್ವಾಧೀನವಾಗುವುದೆಂದರ್ಥವು.) ॥೭೭ ॥

ಶ್ಲೋಕ॥ ವೀಕ್ಷ್ಯ ತಾನತ್ರ ಭೂಪೋ
ವಿದ್ಯಾನಾಂ ಪಾರದೃಶ್ವನಃ ।
ಪುತ್ರಮಾತ್ರಂ ಮುದೇ ಪಿತ್ರೋ-
ರ್ವಿದ್ಯಾಪಾತ್ರಂ ತು ಕಿಂ ಪುನಃ ॥೭೮॥

ಟೀ ॥ ಭೂಪಃ-ದೃಢಮಿತ್ರಮಹಾರಾಜನು, ವಿದ್ಯಾನಾಂ-ವಿದ್ಯೆಗಳ, ಪಾರದೃಶ್ವನಃ-ಪಾರ-ಕೊನೆಯನ್ನು, ದೃಶ್ವನಃ-ನೋಡಿರುವ, ತಾನ್-ಅವರನ್ನು, ವೀಕ್ಷ್ಯ-

ನೋಡಿ, ಅಶೃಪತ್-ಸಂತೋಷಿಸಿದನು., ಪುತ್ರಮಾತ್ರಂ-ಮಗನೆನಿಸಿಕೊಂಡಮಾತ್ರಕ್ಕೇನೆ, ಪಿತ್ರೋಃ-ತಾಯಿತಂದೆಗಳ, ಮುದೇ-ಸಂತೋಷಕ್ಕೋಸುಗ, ಭವತಿ-ಆಗುತ್ತಾನೆ., ವಿದ್ಯಾಪಾತ್ರಂತು-ವಿದ್ಯಾವಂತನಾದಮಗನಾದರೊ, ಕಿಂಪುನಃ-ಹೇಳತಕ್ಕದೇನು?

ತಾತ್ಪರ್ಯ ॥ ಆ ದೃಢಮಿತ್ರಮಹಾರಾಜನು ಧನುರ್ವಿದ್ಯಾಪಾರಂಗತರಾದ ಆ ಪುತ್ರರನ್ನೂನೋಡಿ ಸಂತೋಷಿಸಿದನು. ತಾಯಿ ತಂದೆಗಳಿಗೆ ಮಗನೆಂದು ಇದ್ದಮಾತ್ರಕ್ಕೇನೆ ಸಂತೋಷವು. ಹೀಗಿರುವಲ್ಲಿ, ವಿದ್ವಾಂಸನಾದ ಮಗನನ್ನುನೋಡಿ ತಾಯಿತಂದೆಗಳು ಸಂತೋಷಿಸುವ ವಿಷಯದಲ್ಲಿ ಹೇಳತಕ್ಕದ್ದೇನಿದೆ?(ಬಹಳಸಂತೋಷಿಸಿದರೆಂದರ್ಥವು)॥೭೮

ಶ್ಲೋಕ ॥ ಅತಿಮಾತ್ರಂ ಪವಿತ್ರಂ ಚ
ಧಾತ್ರೀಪಸ್ಸಮಭಾವಯತ್ ।
ಅಸಂಭಾವಯಿತುರ್ದೋಷೋ
ವಿದುಷಾಂ ಚೇದಸಮ್ಮತಿಃ ॥೭೯॥

ಟೀ॥ ಧಾತ್ರೀಪಃ-ದೃಢಮಿತ್ರಮಹಾರಾಜನು, ಪವಿತ್ರಂಚ-ಪವಿತ್ರಕುಮಾರನಾದ ಜೀವಂಧರಸ್ವಾಮಿಯನ್ನೂಕೂಡ, ಅತಿಮಾತ್ರಂ- ಬಹಳವಾಗಿ, ಸಮಭಾವಯತ್-ಗೌರವಿಸಿದನು (ಸತ್ಕರಿಸಿದನು, ಪೂಜಿಸಿದನು)., ವಿದುಷಾಂ- ವಿದ್ವಾಂಸರಿಗೆ, ಅಸಮ್ಮತಿ(ಶ್ಚೇತ್)-ಸಮ್ಮತಿಯಿಲ್ಲದೇಹೋದರೆ, ಅಸಂಭಾವಯಿತುಃ-ಪೂಜಿಸದೇ ಇರುವ ಪುರುಷನ, ದೋಷಃ-ದೋಷವು.

ತಾತ್ಪರ್ಯ ॥ ದೃಢಮಿತ್ರಮಹಾರಾಜನು ಬಹಳವಾಗಿ ವಿದ್ಯಾಪ್ರದಾನರೂಪವಾದ ಮಹೋಪಕಾರವಂ ಮಾಡಿದ ಜೀವಂಧರಕುಮಾರನನ್ನು ಸತ್ಕರಿಸಿದನು. ವಿದ್ವಾಂಸರಿಗೆ ಸಮ್ಮತಿಯಿಲ್ಲದಿದ್ದರೆ, ಸತ್ಕರಿಸುವಪುರುಷನು ಸತ್ಕಾರವಂಮಾಡದೇ ಇದ್ದಲ್ಲಿ ಅವನಿಗೇನೇದೋಷವಲ್ಲವೆ? ( ವಿದ್ವಾಂಸನಾದ ಜೀವಂಧರಸ್ವಾಮಿಗೆ ಸತ್ಕಾರಾಪೇಕ್ಷೆಯಿಲ್ಲದಿದ್ದಾಗ್ಯೂ ದೃಢಮಿತ್ರಮಹಾರಾಜನು ತನಗೆ ದೋಷಸಂಭವಿಸದೇ ಇರುವುದಕ್ಕೋಸುಗವಾಗಿ ಸತ್ಕರಿಸಿದನೆಂದರ್ಥವು.) ॥೭೯ ॥

ಶ್ಲೋಕ ॥ ಮಹೋಪಕಾರಿಣಃ ಕಿಂ ವಾ
ಕುರ್ಯಾಮಿತ್ಯೈಪ್ಯತರ್ಕಯತ್ ।

ವಿದ್ಯಾಪ್ರದಾಯಿನಾಂ ಲೋಕೇ
ಕಾವಾ ಸ್ಯಾತ್ಪ್ರತ್ಯುಪಕ್ರಿಯಾ ॥೪೦॥

ಟೀ॥ (ಸಃ-ಆ ದೃಢಮಿತ್ರಮಹಾರಾಜನು,) ಮಹೋಪಕಾರಿಣಃ-ಮಹಾ-ಶ್ರೇಷ್ಠವಾದ, ಉಪಕಾರಿಣಃ-ವಿದ್ಯಾಪ್ರದಾನರೂಪವಾದ ಉಪಕಾರವಂ ಮಾಡಿದ ಈ ಮಹಾ ಪುರುಷನಿಗೆ, ಕಿಂವಾ-ಯಾವ ಉಪಕಾರವನ್ನು, ಕುರ್ಯಾಂ-ಮಾಡಲಿ?, ಇತ್ಯಪಿ ಹೀಗೆಂದೂಕೂಡ, ಅತರ್ಕಯತ್-ಊಹಿಸಿದನು (ಆಲೋಚಿಸಿದನು)., ವಿದ್ಯಾಪ್ರದಾಯಿನಾಂ-ವಿದ್ಯಾ-ವಿದ್ಯೆಯನ್ನು, ಪ್ರದಾಯಿನಾಂ-ಕೊಡುವವರಿಗೆ, ಪ್ರತ್ಯುಪಕ್ರಿಯಾ-ಪ್ರತ್ಯುಪಕಾರವು, ಕಾವಾ-ಯಾವುದುತಾನೇ ಆಗುತ್ತದೆ?.

ತಾತ್ಪರ್ಯ ॥ ಆ ದೃಢಮಿತ್ರಮಹಾರಾಜನು ಆಲೋಚಿಸುತ್ತಾನೆ.- ವಿದ್ಯೆಯನ್ನು ಕೊಡೋಣವೆಂಬ ಮಹೋಪಕಾರವಂ ಮಾಡಿದ ಈ ಮಹಾಪುರುಷನಿಗೆ (ಜೀವಂಧರಸ್ವಾಮಿಗೆ) ನಾನು ಯಾವ ಪ್ರತ್ಯುಪಕಾರವಂ ಮಾಡಲಿ; ಎಂದು ಆಲೋಚಿಸಿದನು. ಲೋಕದಲ್ಲಿ ವಿದ್ಯಾದಾನಮಾಡಿದವರಿಗೆ ಯಾವುದುಕೊಟ್ಟರೂಸರಿ ಯೋಗ್ಯವಾಗಲಾರದಾದುದರಿಂದ ಯಾವುದೂ ಪ್ರತ್ಯುಪಕಾರವಾಗಿ ಆಗಲಾರದು. ಆದುದರಿಂದ ಈ ಮಹಾತ್ಮನಿಗೆ ನಾನು ಯಾವ ಪ್ರತ್ಯುಪಕಾರವಂ ಮಾಡಲಿ? ಎಂದು ಚಿಂತಿಸಿದನು.

ಶ್ಲೋಕ॥ ಕನ್ಯಾವಿಶ್ರಾಣನಂ ತಸ್ಮೈ
ಕರಣೀಯಮಜೀಗಣತ್ ।
ಶಕ್ಯಮೇವ ಹಿ ದಾತವ್ಯಂ
ಸಾದರೈರಪಿ ದಾತೃಭಿಃ ॥೪೧॥

ಟೀ॥(ಸಃ-ಆ ದೃಢಮಿತ್ರಮಹಾರಾಜನು,) ತಸ್ಮೈ-ಆಜೀವಂಧರಸ್ವಾಮಿಗೋಸುಗ, ಕನ್ಯಾವಿಶ್ರಾಣನಂ-ಕನ್ಯಾಪ್ರದಾನವನ್ನು, ಕರಣೀಯಂ(ಸತ್)-ಮಾಡುವುದಕ್ಕೆ ಯೋಗ್ಯವನ್ನಾಗಿ, ಅಜೀಗಣತ್-ಎಣಿಸಿದನು., ಸಾದರೈರಪಿ-ಅತ್ಯಂತ ಪ್ರೀತಿಯುಳ್ಳವರಾದಾಗ್ಯೂಕೂಡ, ದಾತೃಭಿಃ- ಕೊಡತಕ್ಕ ಪುರುಷರಿಂದ, ಶಕ್ಯಮೇವ-ತಮ್ಮ ಶಕ್ತಿಗೆಯೋಗ್ಯವಾದವಸ್ತುವೇ, ದಾತವ್ಯಂಹಿ-ಕೊಡುವುದಕ್ಕೆ ಯೋಗ್ಯವಲ್ಲವೆ?

ತಾತ್ಪರ್ಯ॥ ಆ ದೃಢಮಿತ್ರಮಹಾರಾಜನು ಅಂಥಾ ಮಹೋಪಕಾರವಾಡಿದ ಜೀವಂಧರ ಸ್ವಾಮಿಗೋಸುಗ ತನ್ನ ಕನ್ನಿಕೆಯನ್ನು ದಾನಮಾಡಬೇಕೆಂದು ನಿಶ್ಚಯಿಸಿದನು. ಲೋಕದಲ್ಲಿ ಕೊಡತಕ್ಕ ದಾತೃಪುರುಷನಿಗೆ ಎಷ್ಟುಪ್ರೀತಿಯಿದ್ದಾಗ್ಯೂ ತನ್ನ ಶಕ್ತಿಗೆ ಅನುಸಾರವಾದ ವಸ್ತುವ

ನ್ನು ಕೊಡೋಣವು ನ್ಯಾಯುವೇ? ಹೊರತು ಶಕ್ತಿಯುಂ ವಿಾರಿ ಕೊಡಲು ಯಾರಿಗೂ ಸಾಧ್ಯವಲ್ಲವಷ್ಟೆ ? ॥ ೮೦ ॥

ಶ್ಲೋಕ ॥ ಅಭ್ಯುಪಾಜೀಗಮತ್ಪುತ್ರೀಂ
ಪರಿಣೇತುಮಮುಂ ಪುನಃ ।
ಉದಾರಾಃ ಖಲು ಮನ್ಯನ್ತೇ
ತೃಣಾಯೇದಂ ಜಗತ್ತ್ರಯಮ್ ॥೮೧॥

ಟೀ॥(ಸಃ-ಆ ದೃಢಮಿತ್ರಮಹಾರಾಜನು,)ಪುತ್ರೀಂ-ಮಗಳನ್ನು, ಪರಿಣೇತುಂ-ಮದುವೆಮಾಡಿಕೊಳ್ಳಲೋಸುಗ, ಅಮುಂ ಪುನಃ- ಈ ಜೀವಂಧರಕುಮಾರನನ್ನಾದರೋ, ಅಭ್ಯುಪಾಜೀಗಮತ್-ಸಮ್ಮತಪಡಿಸಿದನು (ಒಪ್ಪಿಸಿದನು)., ಉದಾರಾಃ-ಉತ್ತಮಪುರುಷರು, ಇದಂಜಗತ್ತ್ರಯಂ-ಈ ಮೂರುಲೋಕವನ್ನೂ, ತೃಣಾಯ-ಹುಲ್ಲಿನಂತೆ ಅಸಾರವನ್ನಾಗಿ, ಮನ್ಯಂತೇ ಖಲು-ತಿಳಿಯುತ್ತಾರೆಯಲ್ಲವೆ ?.

ತಾತ್ಪರ್ಯ ॥ ಆ ದೃಢಮಿತ್ರಮಹಾರಾಜನು ತನ್ನ ಮಗಳನ್ನು ವಿವಾಹಮಾಡಿಕೊಳ್ಳಬೇಕೆಂದು ಪ್ರಾರ್ಥಿಸಿ ಜೀವಂಧರಸ್ವಾಮಿಯನ್ನು ಬಹಳಶ್ರಮದಿಂದ ಸಮ್ಮತಿಪಡಿಸಿದನು. ಉತ್ತಮಪುರುಷರು ಈ ಮೂರು ಲೋಕವನ್ನು ಕೊಟ್ಟರೂ ತೃಣಪ್ರಾಯವನ್ನಾಗಿ ತಿಳಿಯತಕ್ಕ ಉದಾರಬುದ್ಧಿಯುಳ್ಳವರಾದುದರಿಂದ ಉತ್ತಮ ಪುರುಷರಲ್ಲಿ ಅಗ್ರಗಣ್ಯನಾದಜೀವಂಧರಕುಮಾರನು ಪ್ರಾರ್ಥಿಸಿದಮಾತ್ರಕ್ಕೆ ಒಪ್ಪತಕ್ಕವನಲ್ಲವಷ್ಟೆ?॥೮೧॥

ಶ್ಲೋಕ॥ತತಃ ಕನಕಮಾಲಾಖ್ಯಾಂ
ಕನ್ಯಾಂ ರಾಜ್ಞಾ ಸಮರ್ಪಿತಾಮ್ ।
ಪರ್ಯಣೈಷೀತ್ಪವಿತ್ರೋಽಯಂ
ಪವಿತ್ರಾಮಗ್ನಿಸಾಕ್ಷಿಕಮ್ ॥೮೨॥

ಟೀ ॥ ತತಃ-ಅನಂತರದಲ್ಲಿ, ಅಯಂ ಪವಿತ್ರಃ-ಈ ಪವಿತ್ರಕುಮಾರನಾದ ಜೀವಂಧರಸ್ವಾಮಿಯು, ರಾಜ್ಞಾಂ-ದೊರೆಯಾದ ದೃಢಮಿತ್ರಮಹಾರಾಜನಿಂದ, ಸಮರ್ಪಿತಾಂ-ಸಮರ್ಪಿಸಲ್ಪಟ್ಟ, ಪವಿತ್ರಾಂ-ಪರಿಶುದ್ಧಳಾದ, ಕನಕಮಾಲಾಖ್ಯಾಂ- ಕನಕಮಾಲೆಯೆಂದು ನಾಮಧೇಯವುಳ್ಳ, ಕನ್ಯಾಂ- ಕನ್ನಿಕೆಯನ್ನು, ಅಗ್ನಿಸಾಕ್ಷಿಕಂ (ಯಥಾತಥಾ)-ಅಗ್ನಿಯೇ ಸಾಕ್ಷಿಯಾಗಿ ತೋರುವ ಹಾಗೆ (ಶಾಸ್ತ್ರೋಕ್ತ ಪ್ರಕಾರವಾಗಿ), ಪರ್ಯಣೈಷೀತ್-ವಿವಾಹಮಾಡಿಕೊಂಡನು.

ತಾತ್ಪರ್ಯ ॥ ಅನಂತರದಲ್ಲಿ, ಈ ಪವಿತ್ರಕುಮಾರನಾದ ಜೀವಂಧರಸ್ವಾಮಿಯು, ಪರಿಶುದ್ಧಳಾದ ಕನಕಮಾಲೆ ಎಂದು ನಾಮಧೇಯವುಳ್ಳವಳಾದ ದೃಢಮಿತ್ರ ಮಹಾರಾಜನಿಂದ ಸಮರ್ಪಿಸಲ್ಪಟ್ಟ ಆ ಕನ್ನಿಕೆಯನ್ನು ಅಗ್ನಿಸಾಕ್ಷಿಯಾಗಿ ( ಶಾಸ್ತ್ರೋಕ್ತಪ್ರಕಾರವಾಗಿ ) ವಿವಾಹ ಮಾಡಿಕೊಂಡನು. ॥ ೮೩ ॥

ಇಂತು ಜೀವಂಧರಕುಮಾರನು ಪತ್ನಿಯಾದ ಕ್ಷೇಮಶ್ರೀಯೊಡನೆಕೂಡ ಅನೇಕ ಸುಖಗಳನ್ನನುಭವಿಸಿ, ಯಾರಿಗೂತಿಳಿಯದಂತೆ ಉದ್ದೇಶಿಸಲ್ಪಟ್ಟ ತೀರ್ಥಯಾತ್ರೆಗೋಸುಗ ಹೊರಟುಹೋಗಲಾಗಿ, ಪತ್ನಿಯಾದಕ್ಷೇಮಶ್ರೀಯು ಬಹಳದುಃಖಾಕ್ರಾಂತಳಾಗಲು, ಆಗಲವಳತಂದೆಯಾದ-ಸುಭದ್ರನು ವ್ಯಾಕುಲತೆಯಿಂದ ಜೀವಂಧರಕುಮಾರನನ್ನೆಲ್ಲೆಲ್ಲಿ ಹುಡಿಕಿಸಿದಾಗ್ಯೂ ದೊರೆಯದಿರಲು ಬಹಳ ವ್ಯಸನಾಕ್ರಾಂತನಾದನು. ಅನಂತರ ಜೀವಂಧರಕುಮಾರನೂಕೂಡ ಮಾರ್ಗದಲ್ಲಿ ಹೋಗುತಲಿರುವವನಾಗಿ ಒಬ್ಬಪಾಮರಪುರುಷನಂ ನೋಡಿ ಅವನಿಗೆ ಶ್ರಾವಕಧರ್ಮವನ್ನುಪದೇಶಿಸಿ, ತನ್ನ ಸರ್ವಾಭರಣಗಳನ್ನೂ ಕೊಟ್ಟು ಅವನಂ ಕಳುಹಿ, ಬಳಿಕ ಒಂದು ಅರಣ್ಯವಂ ಸೇರಿದವನಾಗಲು, ಅಲ್ಲೊರ್ವ ಅನಂಗತಿಲಕಾಎಂಬ ವಿದ್ಯಾಧರಸ್ತ್ರೀಯು ಆ ಜೀವಂಧರಕುಮಾರನಂ ಕಾಮಿಸಲು, ಮಹಾ ಸತ್ಪುರುಷಾಗ್ರೇಸರನಾದ ಆ ಜೀವಂಧರಕುಮಾರನು ವೈರಾಗ್ಯವಂ ಹೊಂದಿ ವಿಮುಖನಾಗಲು, ಅಷ್ಟರಲ್ಲಿಯೇ ಅವಳ ಪತಿಯು ಅವಳಂ ಹುಡುಕಿಕೊಂಡುಬಂದು, ಅತ್ಯಂತಶೋಕಾವಿಷ್ಟನಾಗಿ ಏಕಾಕಿಯಾದ ಜೀವಂಧರಕುಮಾರನಂ ಕಂಡು ಪ್ರಶ್ನೆಯಂ ಮಾಡಲು, ಅದಕ್ಕಾ ಜೀವಂಧರಕುಮಾರನು ಆ ಖೇಚರನಿಗೆ ಸ್ತ್ರೀಜಾತಿದೂಷಣಪೂರ್ವಕವಾಗಿ ತತ್ತ್ವವನ್ನುಪದೇಶಿಸಿದಾಗ್ಯೂ ಅವನು ಸ್ತ್ರೀವ್ಯಾಮೋಹಕ್ಕೆ ಶಿಕ್ಕಿದವನಾಗಿಯೇ ಇರುತಿರಲು, ಜೀವಂಧರಕುಮಾರನು ಅಲ್ಲಿಂ ಹೊರವಂಟು ಹೇಮಾಭಾ ಪಟ್ಟಣದ ಒಂದು ಉದ್ಯಾನವನವಂ ಸೇರಿ, ಅಲ್ಲಿ ಒಂದು ಮಾವಿನಮರದೊಳಿರುವಹಣ್ಣಿಗೆ ಗುರಿಯನಿಟ್ಟು ಬಾಣಗಳಂ ಪ್ರಯೋಗಿಸಿ ಗುರಿಯಂಭೇದಿಸಲರಿಯದೋರ್ವ ಸುಮಿತ್ರನೆಂಬ ರಾಜಪುತ್ರನಂ ಕಂಡು, ಜೀವಂಧರಕುಮಾರನು ಆ ಗುರಿಯಂ ಲೀಲಾಮಾತ್ರದಿಂ ಭೇದಿಸಲು, ಆ ಸುಮಿತ್ರನೆಂಬರಾಜಪುತ್ರನು ಜೀವಂಧರನಸಾಹಸಕೃತ್ಯವಂ ನೋಡಿ, ಆತನನ್ನು ತನ್ನ ತಂದೆಯಾದ ದೃಢಮಿತ್ರನಸಮೀಪವನ್ನೈದಿಸಲು, ಆತನಿಂ ಪ್ರಾರ್ಥಿಸಲ್ಪಟ್ಟವನಾಗಿ ಜೀವಂಧರಸ್ವಾಮಿಯು ಸುಮಿತ್ರಾದಿ ಆ ರಾಜಪುತ್ರರಿಗೆ ಧನುರ್ವಿದ್ಯೆಯಂ ಕಲಿಸಿ ಗುರುದಕ್ಷಿಣಾರೂಪವಾಗಿ ಆ ದೃಢಮಿತ್ರಮಹಾರಾಜನಿಂ ಕೊಡಲ್ಪಟ್ಟ ಕನ್ನಿಕೆಯಾದ ಕನಕಮಾಲೆಯನ್ನು ಶಾಸ್ತ್ರೋಕ್ತಪ್ರಕಾರ ವಿವಾಹಮಾಡಿಕೊಂಡನೆಂಬಲ್ಲಿಗೆ, ಏಳನೆಯಲಂಬವು ಸಮಾಪ್ತವಾದುದು.

---



ಶ್ರೀರಸ್ತು.

॥ ಓಂ ನಮಸ್ಸಿದ್ಧೇಭ್ಯಃ. ॥

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ,

# ಅಷ್ಟಮೋಲಂಬಃ.

ಶ್ಲೋಕ ॥ ಅಥ ತತ್ಕರಪೀಡಾಂತೇ
ಸಕ್ತಸ್ವಾಂತೋ ಭವತ್ಸುಧೀಃ ।
ತೀರಸ್ಥಾಃ ಖಲು ಜೀವಂತಿ
ನ ಹಿ ರಾಗಾಬ್ಧಿಗಾಹಿನಃ ॥೧॥

ಟೀ ॥ ಅಥ-ಅನಂತರದಲ್ಲಿ, ತತ್ಕರಪೀಡಾಂತೇ–ತತ್-ಆ ಕನಕಮಾಲೆಯ, ಕರಪೀಡಾ-ವಿವಾಹದ, ಅಂತೇ-ಅವಸಾನದಲ್ಲಿ, ಸುಧೀಃ- ಮಹಾವಿವೇಕಿಯಾದ ಜೀವಂಧರಸ್ವಾಮಿಯು, ಅಸಕ್ತಸ್ವಾಂತ(ಸ್ಸನ್)-ರಾಗಾಕ್ರಾಂತವಾಗದ ಮನಸ್ಸುಳ್ಳವನಾಗಿ, ಅಭವತ್-ಆದನು., ತೀರಸ್ಥಾಃ-ದಡದಲ್ಲಿರುವವರು, ಜೀವಂತಿಖಲು-ಜೀವಿಸುತ್ತಾರೆಯಲ್ಲವೆ?, ರಾಗಾಬ್ಧಿಗಾಹಿನಃ–ರಾಗ-ಸ್ತ್ರೀವ್ಯಾಮೋಹವೆಂಬ, ಅಬ್ಧಿ- ಸಮುದ್ರದಲ್ಲಿ, ಗಾಹಿನಃ-ಪ್ರವೇಶಿಸಿರುವಂಥಾವರು, ನಹಿ-ಜೀವಿಸುವುದಿಲ್ಲವಷ್ಟೆ?.

ತಾತ್ಪರ್ಯ ॥ ಅನಂತರದಲ್ಲಿ ಬುದ್ಧಿಶಾಲಿಯಾದ ಜೀವಂಧರಕುಮಾರನು ಆ ಕನಕಮಾಲಾದೇವಿಯ ವಿವಾಹಾವಸಾನದಲ್ಲಿ ಅತ್ಯಂತ ಸ್ತ್ರೀಮೋಹಿತ ಮನಸ್ಸುಳ್ಳವನಾಗಿರಲಿಲ್ಲವು. ರಾಗವೆಂಬ ಸಮುದ್ರದ ತೀರದಲ್ಲಿರುವವರು ಜೀವಿಸುವರೇಹೊರತು ರಾಗವೆಂಬ ಸಮುದ್ರವಂ ಪ್ರವೇಶಿಸಿದವರು ಜೀವಿಸುವುದಿಲ್ಲವಷ್ಟೆ? ॥ ೧ ॥

ಶ್ಲೋಕ॥ ಸ್ಯಾಲಾನಾಂ ತತ್ರ ವಾತ್ಸಲ್ಯಾ-
ದವಾತ್ಸೀತ್ಸುಚಿರಂ ಸುಧೀಃ ।

ವತ್ಸಲೇಷು ಹಿ ಮೋಹಸ್ಸ್ಯಾ-
ದ್ವಾತ್ಸಲ್ಯಂ ಹಿ ಮನೋಹರಮ್ ॥೧॥

ಟೀ ॥ ಸುಧೀಃ-ವಿವೇಕಿಯಾದ ಜೀವಂಧರ ಕುಮಾರನು, ಸ್ನಾಲಾನಾಂ- ಭಾವಮೈದುನರ, ವಾತ್ಸಲ್ಯಾತ್-ಪ್ರೀತಿಯುಳ್ಳಸೆಯಿಂದ, ತತ್ರ-ಆ ಚಂದ್ರಾಭಪಟ್ಟಣದಲ್ಲಿ, ಸುಚಿರಂ-ಬಹುಕಾಲಪರಿಗೂ, ಅವಾತ್ಸೀತ್-ವಾಸಮಾಡಿದನು., ವತ್ಸಲೇಷು ಹಿ-ವಾತ್ಸಲ್ಯಗುಣವುಳ್ಳವರಲ್ಲಿಯೇ ಅಲ್ಲವೆ, ಮೋಹಃ-ಅತ್ಯಂತಪ್ರೀತಿಯು, ಸ್ಯಾತ್-ಉಂಟಾದೀತು?., ವಾತ್ಸಲ್ಯಂ-ವಾತ್ಸಲ್ಯಗುಣವು, ಮನೋಹರಂಹಿ- ಮನಸ್ಸನ್ನು ಅಪಹರಿಸುತ್ತೆಯಲ್ಲವೆ?.

ತಾತ್ಪರ್ಯ ॥ ಬುದ್ಧಿಶಾಲಿಯಾದ ಜೀವಂಧರಸ್ವಾಮಿಯು ತನ್ನ ಭಾವಮೈದುನರಾದ ಸುಮಿತ್ರನೇ ಮೊದಲಾದ ಶಿಷ್ಯರ ವಾತ್ಸಲ್ಯಾತಿಶಯದ ದೆಸೆಯಿಂದ ಆ ಪಟ್ಟಣದಲ್ಲಿ ಬಹುಕಾಲ ವಾಸಮಾಡಿದನು. ಲೋಕದಲ್ಲಿಯಾರುವಾತ್ಸಲ್ಯವಿಡುವರೋ ಅವರಲ್ಲಿಯೇಅಲ್ಲವೆ ಪ್ರೀತಿಯುಂಟಾಗುವುದು?. ಲೋಕದಲ್ಲಿ ವಾತ್ಸಲ್ಯಗುಣವಲ್ಲವೆ ಚಿತ್ತಾಕರ್ಷಕವಾದದ್ದು? ( ಲೋಕನು ಪ್ರೀತಿಗೆ ವಶ್ಯವಾದದ್ದೆಂದರ್ಥವು.) ॥ ೧ ॥

ಶ್ಲೋಕ ॥ ಯಾಪಿತೋಪಿ ಮಹಾನ್ಕಾಲ-
ಸ್ತಸ್ಯನೋದ್ವೇಗಮಾತನೋತ್ ।
ವತ್ಸಲೈಸ್ಸಹ ಸಂವಾಸೇ
ವತ್ಸರೋ ಹಿ ಕ್ಷಣಾಯತೇ ॥೨॥

ಟೀ ॥ ಮಹಾನ್-ಅಧಿಕವಾದ, ಕಾಲಃ-ಕಾಲವು, ಯಾಪಿತೋಪಿ - ಕಳೆಯಲ್ಪಟ್ಟಾಗ್ಯೂ, ತಸ್ಯ-ಆ ಜೀವಂಧರಸ್ವಾಮಿಗೆ, ಉದ್ವೇಗಂ-ಬೇಸರಿಕೆಯನ್ನು, ನಾತನೋತ್-ಉಂಟುಮಾಡಲಿಲ್ಲವು., ವತ್ಸಲೈಸ್ಸಹ-ಪ್ರಿಯಮಿತ್ರರೊಡನೆಕೂಡ, ಸಂವಾಸೇಸತಿ-ವಾಸವುಂಟಾಗುತಿರಲಿಕಾಗಿ, ವತ್ಸರೋಪಿ-ಸಂವತ್ಸರವೂ ಕೂಡ, ಕ್ಷಣಾಯತೇಹಿ-ಒಂದು ಕ್ಷಣದಂತೆ ತೋರುವುದಲ್ಲವೆ?.

ತಾತ್ಪರ್ಯ ॥ ಆ ಪಟ್ಟಣದಲ್ಲಿ ಬಹುದಿವಸಗಳು ವಾಸಮಾಡಿದಾಗ್ಯೂ ಜೀವಂಧರಸ್ವಾಮಿಗೆ ಬೇಸರಿಕೆಯುಂಟಾಗಲಿಲ್ಲವು. ಪ್ರಿಯರಾದ ಜನಗಳೊಡನೆ ವಾಸಮಾಡುತ್ತಿದ್ದಲ್ಲಿ ಒಂದು ಸಂವತ್ಸರವು ಕ್ಷಣದಂತೆತೋರುವುದಲ್ಲವೆ? ॥ ೨ ॥

ಶ್ಲೋಕ ॥ ಕದಾಚಿತ್ಕಾಪಿ ತತ್ಪ್ರಾಂತಂ
ಸಮಂದಸ್ಮಿತಮಾಸದತ್ ।
ನೈಸರ್ಗಿಕಂ ಹಿ ನಾರೀಣಾಂ
ಚೇತಸ್ಸಮ್ಮೋಹಿ ಚೇಷ್ಟಿತಮ್ ॥೪॥

ಟೀ ॥ ಕದಾಚಿತ್-ಒಂದಾನೊಂದುಕಾಲದಲ್ಲಿ, ಕಾಪಿ- ಒಬ್ಬಾನೊಬ್ಬ ಸ್ತ್ರೀಯು, ಸಮಂದಸ್ಮಿತಂ(ಯಥಾ ತಥಾ)-ಮಂದಹಾಸದೊಡನೆ ಕೂಡಿರೋಣ ಹೇಗೋ ಹಾಗೆ, ತತ್ಪ್ರಾಂತಂ-ಆ ಜೀವಂಧರಕುಮಾರನ ಸಮೀಪವನ್ನು, ಆಸದತ್-ಹೊಂದಿದಳು., ನಾರೀಣಾಂ- ಸ್ತ್ರೀಯರಿಗೆ, ಚೇತಸ್ಸಮ್ಮೋಹಿ- ಚೇತಃ-ಮನಸ್ಸನ್ನು, ಸಮ್ಮೋಹಿ - ಮೋಹಗೊಳಿಸುತ್ತಿರುವ, ಚೇಷ್ಟಿತಂ- ವ್ಯಾಪಾರವು, ನೈಸರ್ಗಿಕಂ ಹಿ-ಸ್ವಭಾವಸಿದ್ಧವಲ್ಲವೆ ?.

ತಾತ್ಪರ್ಯ ॥ ಒಂದಾನೊಂದುಕಾಲದಲ್ಲಿ ಒಬ್ಬ ಸ್ತ್ರೀಯು ಮುಗುಳುನಗೆಯೊಡನೆ ಕೂಡಿಕೊಂಡಿರೋಣ ಹೇಗೋ ಹಾಗೆ ಜೀವಂಧರಕುಮಾರನ ಸಮೀಪವನ್ನು ಹೊಂದಿದಳು. ಸ್ತ್ರೀಯರಿಗೆ ನಗುವೇ ಮೊದಲಾದ ಮನೋಹರಚೇಷ್ಟೆಗಳು ಸ್ವಭಾವಸಿದ್ಧವಲ್ಲವೆ ? ॥ ೪ ॥

ಶ್ಲೋಕ॥ ಅಪ್ರಾಕ್ಷೀತ್ತಾಂ ಚ ಸಾಕೂತಾಂ
ಕಿಮಾಯಾತೇತಿ ಸಾದರಃ ।
ವಿವಕ್ಷಾಲಿಂಗತೋ ಹಿ ಸ್ಯಾ-
ದ್ದ್ರಷ್ಟುಃ ಪ್ರಶ್ನಕುತೂಹಲಮ್ ॥೫॥

ಟೀ ॥ ಸಾದರಃ-ಪ್ರೀತಿಯೊಡನೆ ಕೂಡಿಕೊಂಡಿರುವ ಆ ಜೀವಂಧರಸ್ವಾಮಿಯು, ಸಾಕೂತಾಂ- ಮನಸ್ಸಿನಲ್ಲಿ ಒಂದು ಅಭಿಪ್ರಾಯವನ್ನಿಟ್ಟುಕೊಂಡು ನಗುತಲಿರುವ, ತಾಂ ಚ-ಆ ಸ್ತ್ರೀಯನ್ನು ಕೂಡ, ಕಿಂ-ಏತಕೋಸುಗ, ಆಯಾತಾ- ಬಂದವಳಾದೆ., ಇತಿ-ಹೀಗೆಂದು ಅಪ್ರಾಕ್ಷೀತ್- ಪ್ರಶ್ನೆಯಂ ಮಾಡಿದನು., ವಿವಕ್ಷಾಲಿಂಗತಃ - ವಿವಕ್ಷಾ-ಹೇಳಬೇಕೆಂಬ ಇಚ್ಛೆಗೆ ಸೂಚಕವಾದ, ಲಿಂಗತಃ-ಮುಖಭಾವವೇ ಮೊದಲಾದ ಗುರುತಿನ ದೆಸೆಯಿಂದ, ದ್ರಷ್ಟುಃ-ನೋಡುವಂಥಾ ಪುರುಷನಿಗೆ, ಪ್ರಶ್ನಕುತೂಹಲಂ-ಪ್ರಶ್ನೆಮಾಡಬೇಕೆಂಬ ಕುತೂಹಲವು, ಸ್ಯಾದ್ಧಿ-ಉಂಟಾಗುವುದಲ್ಲವೆ ?.

ತಾತ್ಪರ್ಯ ॥ ಒಂದಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು

ನಗುತ್ತಾಬಂದ ಆ ಸ್ತ್ರೀಯನ್ನು ಪ್ರೀತಿಯೊಡನೆ ಕೂಡಿದವನಾಗಿ ಜೀವಂಧರಸ್ವಾಮಿಯು ಏತಕೋಸುಗ ನನ್ನಲ್ಲಿ ಬಂದವಳಾದೆ? ಎಂದು ಕೇಳಿದನು. ಯಾವುದಾದರೂ ಒಂದಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಲಿಚ್ಛೈಸಿದವರ ಮುಖಭಾವಾದಿಗಳನ್ನು ನೋಡುವ ಪುರುಷನಿಗೆ ಕೇಳಬೇಕೆಂಬ ಕುತೂಹಲವು ಉಂಟಾಗುತ್ತದೆಯಲ್ಲವೆ? ॥ ೫ ॥

ಶ್ಲೋಕ ॥ ಅತ್ರ ಚಾಯುಧಶಾಲಾಯಾಂ
ಚೈಕದೈವಾವಿಶೇಷತಃ ।
ಸ್ವಾಮಿನ್ ಸ್ವಾಮಿನಮದ್ರಾಕ್ಷ-
ಮಿತ್ಯಸೌ ಪ್ರತ್ಯಭಾಷತ ॥೬॥

ಟೀ ॥ ಹೇ ಸ್ವಾಮಿನ್-ಎಲೈ ಸ್ವಾಮಿಯೇ!, ಅತ್ರಚ-ಇಲ್ಲಿಯೂ, ಆಯುಧಶಾಲಾಯಾಂ ಚ-ಆಯುಧಶಾಲೆಯಲ್ಲಿಯೂ ಕೂಡ, ಏಕದೈವ-ಒಂದೇಕಾಲದಲ್ಲಿ, ಅವಿಶೇಷತಃ-ಸಮಾನವಾದಆಕಾರವದೆಸೆಯಿಂದ, ಸ್ವಾಮಿನಂ-ಸ್ವಾಮಿಯಾದತಮ್ಮನ್ನು, ಅದ್ರಾಕ್ಷಂ-ನೋಡಿದೆನು., ಇತಿ-ಹೀಗೆಂದು, ಅಸೌ-ಈ ಸ್ತ್ರೀಯು, ಪ್ರತ್ಯಭಾಷತ-ಪ್ರತ್ಯುತ್ತರವನ್ನು ಹೇಳಿದಳು.

ತಾತ್ಪರ್ಯ ॥ ಎಲೈ ಸ್ವಾಮಿಯೇ! ಇಲ್ಲಿಯೂ, ಆಯುಧಶಾಲೆಯಲ್ಲಿಯೂಕೂಡ ಏಕಕಾಲದಲ್ಲಿಯೇ ಸಮಾನಾಕಾರವಾದ ತಮ್ಮನ್ನು ನೋಡಿದೆನು. ಎಂಬದಾಗಿ ಪ್ರತ್ಯುತ್ತರವನ್ನು ಹೇಳಿದಳು. ॥ ೬ ॥

ಶ್ಲೋಕ ॥ ಅತಿಮಾತ್ರಂ ಪವಿತ್ರೋಽಯ-
ಮಚಿತ್ರೀಯತ ತಚ್ಛ್ರುತೇಃ ।
ಅಯುಕ್ತಂ ಖಲು ದೃಷ್ಟಂ ವಾ
ಶ್ರುತಂ ವಾ ವಿಸ್ಮಯಾವಹಮ್ ॥೭॥

ಟೀ ॥ ಪವಿತ್ರಃ-ಪವಿತ್ರಕುಮಾರನೆಂದುನಾಮಧೇಯವುಳ್ಳ, ಅಯಂ-ಈ ಜೀವಂಧರಸ್ವಾಮಿಯು, ತಚ್ಛ್ರುತೇಃ-ಆ ಮಾತನ್ನು ಕೇಳೋಣವದದೆಸೆಯಿಂದ, ಅತಿಮಾತ್ರಂ-ಬಹಳವಾಗಿ, ಅಚಿತ್ರೀಯತ-ಆಶ್ಚರ್ಯಪಟ್ಟನು., ಅಯುಕ್ತಂ - ಅಸಂಭವವಾದ ವಿಷಯವು, ದೃಷ್ಟಂವಾ-ನೋಡಲ್ಪಡುತಲಿರಲಿಕ್ಕಾಗಿಯೂ, ಶ್ರುತಂವಾ-ಕೇಳಲ್ಪಟ್ಟಾಗ್ಯಾಸರಿ, ವಿಸ್ಮಯಾವಹಂಖಲು-ಆಶ್ಚರ್ಯಕರವಲ್ಲವೆ?.

ತಾತ್ಪರ್ಯ ॥ ಈ ಪವಿತ್ರಕುಮಾರನೆಂದು ಪ್ರಸಿದ್ಧನಾದ ಜೀವಂಧರಕುಮಾರನು ಆಮಾತನ್ನು ಕೇಳಿ ಉಂಟಾದ ಹರ್ಷದಿಂದ ಬಹಳವಾಗಿ ಆಶ್ಚರ್ಯಪಟ್ಟನು. ಸಂಭವಿಸದೇಇರುವ ವಿಷಯವನ್ನು ನೋಡಿದರೂ ಬಹಳ ಆಶ್ಚರ್ಯವುಂಟಾಗುತ್ತದೆ. ಕೇಳಿದರೂ ಬಹಳ ಆಶ್ಚರ್ಯ ಉಂಟಾಗುತ್ತದೆಯಲ್ಲವೆ? ॥ ೭ ॥

ಶ್ಲೋಕ॥ ನಂದಾಢ್ಯಃ ಕಿಮಿಹಾಯಾತ
ಇತ್ಯಯಂ ಪುನರೌಹತ ।
ಸಂಸ್ಕಾರವಿಷಯೇ ಸದ್ಯಃ
ಸ್ವತೋ ಹಿ ಮನಸೋಗತಿಃ ॥೮॥

ಟೀ ॥ ನಂದಾಢ್ಯಃ-ತಮ್ಮನಾದ ನಂದಾಢ್ಯನು, ಇಹ-ಇಲ್ಲಿಗೆ, ಆಯಾತಃಕಿಂ-ಬಂದನೋ ಏನು?. ಇತಿ-ಈ ಪ್ರಕಾರ, ಅಯಂ-ಈ ಜೀವಂಧರಕುಮಾರನು, ಪುನಃ-ಮರಳಿ, ಔಹತ-ಊಹಿಸಿದನು., ಸಂಸ್ಕಾರವಿಷಯೇ-ಸಂಸ್ಕಾರ-ಸರ್ವಕಾಲದಲ್ಲಿಯೂ ಬುದ್ಧಿಯು ತೊಳಲಿಕೆಗೆ, ವಿಷಯೇ-ಗೋಚರವಾದ ವಿಷಯದಲ್ಲಿಯೇ, ಸದ್ಯಃ- ತತ್‌ಕ್ಷಣದಲ್ಲಿ, ಮನಸಃ-ಮನಸ್ಸಿನ, ಗತಿಃ-ಗತಿಯು, ಸ್ವತೋಹಿ - ತನಿಗೆತಾನೇ ಉಂಟಾಗುವುದಲ್ಲವೆ?.

ತಾತ್ಪರ್ಯ ॥ ನಂದಾಢ್ಯನು ಇಲ್ಲಿಗೆ ಬಂದನೋ ಏನು? ಎಂಬದಾಗಿ ಆ ಜೀವಂಧರನು ಊಹಿಸಿದನು. ಲೋಕದಲ್ಲಿ ಮನುಷ್ಯನು ಸರ್ವದಾ ಯಾವುದನ್ನು ಕನವರಿಸುವನೋ ಅದರಲ್ಲಿಯೇ ಅಲ್ಲವೆ ಬುದ್ಧಿಯು ಪ್ರವರ್ತಿಸುತ್ತದೆ? ॥೮॥

ಶ್ಲೋಕ ॥ ಪ್ರಾಗೇವ ತನ್ಮನೋವೃತ್ತೇಃ
ಪ್ರಯಯೌ ತತ್ರ ತದ್ವಪುಃ ।
ಆಸ್ಥಾಯಾಂ ಹಿ ವಿನಾ ಯತ್ನ-
ಮಸ್ತಿ ವಾಕ್ಕಾಯಚೇಷ್ಟಿತಮ್ ॥೯॥

ಟೀ ॥ ತನ್ಮನೋವೃತ್ತೇಃ-ಆ ಜೀವಂಧರನ ಮನೋವ್ಯಾಪಾರಕ್ಕಿಂತಲೂ, ಪ್ರಾಗೇವ-ಮೊದಲೇನೆ, ತತ್ರ-ಆ ಆಯುಧಶಾಲೆಗೆ, ತದ್ವಪುಃ-ಆ ಜೀವಂಧರಕುಮಾರನ ಶರೀರವು, ಪ್ರಯಯೌ-ಹೊರಟುಹೋಯಿತು., ಆಸ್ಥಾಯಾಂ(ಸತ್ಯಾಂ)- ಆ

ಸ್ಥೆಯುಇರುತಿರಲಾಗಿ, ಯತ್ನಂವಿನಾ-ಪ್ರಯತ್ನವನ್ನು ಬಿಟ್ಟು, ವಾಕ್ಕಾಯ ಚೇಷ್ಟಿತಂ-ವಾಕ್-ವಾಕ್ಕು, ಕಾಯ-ಶರೀರವೂ ಇವುಗಳ, ಚೇಷ್ಟಿತಂ-ವ್ಯಾಪಾರವು, ಅಸ್ತಿಹಿ- ಉಂಟಾಗುವುದಲ್ಲವೆ ?.

ತಾತ್ಪರ್ಯ ॥ ಆ ಜೀವಂಧರ ಕುಮಾರನು, ನಂದಾಢ್ಯನು ಬಂದಿರುವನೋ ಏನೋ ಎಂದು ಆಲೋಚಿಸುವಷ್ಟರಲ್ಲಿಯೇ ಆ ಆಯುಧಶಾಲೆಗೆ ಅವನ ಶರೀರವು ಹೊರಟುಹೋಯಿತು. ( ನಂದಾಢ್ಯನಲ್ಲಿರುವ ಪ್ರೇಮಾತಿಶಯದಿಂದ ನಂದಾಢ್ಯನನ್ನು ಹೋಗಿ ನೋಡಿದಂತೆ ಮನಸ್ಸಿನಲ್ಲಿ ಭಾವಿಸಿದನು.) ಇದರಿಂದ ಲೋಕದಲ್ಲಿ ಅತ್ಯಂತ ಇಷ್ಟವಾದಜನದ ದರ್ಶನದಲ್ಲಿ ಸ್ವತಸ್ಸಿದ್ಧವಾಗಿರುವ ಮನಸ್ಸಿನ ತ್ವರಾತಿಶಯವು ನಂದಾಢ್ಯನವಿಷಯದಲ್ಲಿ ಜೀವಂಧರಸ್ವಾಮಿಗೂ ಉಂಟಾಯಿತೆಂದು ಹೇಳಲ್ಪಟ್ಟಿತು. ಮತ್ತು, ಮನುಷ್ಯನಿಗೆ ಇಷ್ಟವಾದವಿಷಯದಲ್ಲಿ ಆಸ್ಥೆಯು ಇರುತ್ತಿರಲಾಗಿ ಇವನುಪ್ರಯತ್ನಿಸದೇಇದ್ದಾಗ್ಯೂ ವಾಗ್ವ್ಯಾಪಾರ ಮನೋವ್ಯಾಪಾರಗಳು ತನಿಗೆತಾನೇ ಉಂಟಾಗುವುದಲ್ಲವೆ ? ॥ ೯ ॥

ಶ್ಲೋಕ ॥ ಗತ್ವಾ ತತ್ರ ಚ ನಂದಾಢ್ಯಂ
ಪಶ್ಯನ್ ಸಮ್ಮದಸಾದಭೂತ್ ।
ಭ್ರಾತುರ್ವಿಲೋಕನಂ ಪ್ರೀತ್ಯೈ
ವಿಪ್ರಯುಕ್ತಸ್ಯ ಕಿಂ ಪುನಃ ॥೧೦॥

ಟೀ ॥ (ಸಃ- ಆ ಜೀವಂಧರಸ್ವಾಮಿಯು,) ಗತ್ವಾ-ಹೋಗಿ, ತತ್ರ ಚ-ಆ ಆಯುಧಶಾಲೆಯಲ್ಲಿಯೂ ಕೂಡ, ನಂದಾಢ್ಯಂ- ನಂದಾಢ್ಯನನ್ನು, ಪಶ್ಯನ್(ಸನ್)- ನೋಡುವವನಾಗಿ, ಸಮ್ಮದಸಾತ್- ಪ್ರೀತಿಪರವಶನಾಗಿ, ಅಭೂತ್-ಆದನು., ಭ್ರಾತುಃ-ಸಹೋದರನ, ವಿಲೋಕನಂ-ನೋಡೋಣವು, ಪ್ರೀತ್ಯೈ- ಸಂತೋಷಕ್ಕೋಸುಗವಾಗುವುದು., ವಿಪ್ರಯುಕ್ತಸ್ಯ-ದೇಶಾಂತರದಲ್ಲಿದ್ದಂಥ ಸಹೋದರನ, ವಿಲೋಕನಂ-ನೋಡೋಣವು, ಕಿಂ ಪುನಃ-ಹೇಳತಕ್ಕದ್ದೇನು ?.

ತಾತ್ಪರ್ಯ ॥ ಜೀವಂಧರಸ್ವಾಮಿಯು ಆಯುಧಶಾಲೆಗೆ ಹೋಗಿನಂದಾಢ್ಯನನ್ನು ನೋಡಿ, ಅತ್ಯಂತ ಸಂತೋಷಿಸಿದನು. ಸಾಮಾನ್ಯವಾಗಿ ಸಹೋದರನನ್ನು ನೋಡೋಣವೇ ಸಂತೋಷಕ್ಕೆ ಕಾರಣವು. ಹೀಗಿರುವಲ್ಲಿ, ದೇಶಾಂತರದಲ್ಲಿದ್ದ ಸಹೋದರನನ್ನು ದೈವಯೋಗದಿಂದ

ಹಠಾತ್ತಾಗಿ ನೋಡುವಲ್ಲಿ ಎಷ್ಟು ಸಂತೋಷವಾಗುವುದು ? ॥ ೧೦ ॥

ಶ್ಲೋಕ ॥ ಅನುಜೋಽಪಿ ತಮಾಲೋಕ್ಯ
ಮುಮುಚೇ ದುಃಖಸಾಗರಾತ್ ।
ವಿಸ್ಮೃತಂ ಹಿ ಚಿರಂ ಭುಕ್ತಂ
ದುಃಖಂ ಸ್ಯಾತ್ಸುಖಲಾಭತಃ ॥೧೧॥

ಟೀ ॥ ಅನುಜೋಽಪಿ-ತಮ್ಮನಾದ ನಂದಾಢ್ಯನೂಕೂಡ, ತಂ-ಆ ಜೀವಂಧರ ಕುಮಾರನನ್ನು, ಆಲೋಕ್ಯ-ನೋಡಿ, ದುಃಖಸಾಗರಾತ್-ದುಃಖವೆಂಬ ಸಮುದ್ರದ ದೆಸೆಯಿಂದ, ಮುಮುಚೇ-ಬಿಡಲ್ಪಟ್ಟನು , ಚಿರಂ-ಬಹುಕಾಲದಿಂದ, ಭುಕ್ತಂ-ಅನುಭವಿಸಲ್ಪಟ್ಟ, ದುಃಖಂ-ದುಃಖವು, ಸುಖಲಾಭತಃ-ಸುಖಪ್ರಾಪ್ತಿಯ ದೆಸೆಯಿಂದ, ವಿಸ್ಮೃತಂ (ಸತ್)-ಮರೆಯಲ್ಪಟ್ಟದ್ದಾಗಿ, ಸ್ಯಾದ್ಧಿ-ಆದೀತಲ್ಲವೆ?.

ತಾತ್ಪರ್ಯ ॥ ತಮ್ಮನಾದ ನಂದಾಢ್ಯನೂಕೂಡ ಆ ಜೀವಂಧರಸ್ವಾಮಿಯನ್ನು ನೋಡಿ ದುಃಖವೆಂಬ ಸಮುದ್ರದ ದೆಸೆಯಿಂದ ಬಿಡಲ್ಪಟ್ಟನು. ಬಹುಕಾಲದಿಂದ ಅನುಭವಿಸಲ್ಪಟ್ಟ ದುಃಖವೂಕೂಡ ಸುಖಲಾಭದ ದೆಸೆಯಿಂದ ಮರೆಯಲ್ಪಟ್ಟದ್ದಾಗಿ ಆಗುತ್ತದೆಯಲ್ಲವೆ ? ॥೧೧॥

ಶ್ಲೋಕ ॥ ಕಥಮಾಯಾ ಇತಿ ಜ್ಯಾಯಾ-
ನನ್ವಯುಙ್ಕ್ತ ಮಿಥೋಽನುಜಮ್ ।
ವಂಚನಂ ಚಾಪಮಾನಂ ಚ
ನ ಹಿ ಪ್ರಾಜ್ಞೈಃ ಪ್ರಕಾಶ್ಯತೇ ॥೧೨॥

ಟೀ ॥ ಜ್ಯಾಯಾನ್-ಅಣ್ಣನಾದ ಜೀವಂಧರಸ್ವಾಮಿಯು, ಅನುಜಂ- ತಮ್ಮನಾದ ನಂದಾಢ್ಯನನ್ನು ಕುರಿತು, ಕಥಂ-ಹೇಗೆ, ಆಯಾಃ-ಬಂದವನಾದೆ?, ಇತಿ-ಹೀಗೆಂದು, ಮಿಥಃ-ರಹಸ್ಯದಲ್ಲಿ, ಅನ್ವಯುಂಕ್ತ-ಪ್ರಶ್ನೆಮಾಡಿದನು., ವಂಚನಂಚ- ವಂಚನೆಯೂ, ಅಪಮಾನಂಚ-ಅಪಮಾನವೂ ಇವೆರಡೂಕೂಡ, ಪ್ರಾಜ್ಞೈಃ - ಪ್ರಾಜ್ಞರಾದವರಿಂದ, ನ ಪ್ರಕಾಶ್ಯತೇಹಿ-ಪ್ರಕಾಶಪಡಿಸಲ್ಪಡುವುದಿಲ್ಲವಷ್ಟೆ ?.

ತಾತ್ಪರ್ಯ ॥ ಅಣ್ಣನಾದ ಜೀವಂಧರಸ್ವಾಮಿಯು, ತಮ್ಮನಾದ ನಂದಾಢ್ಯನನ್ನು ಕುರಿತು ನೀನು ಇಲ್ಲಿಗೆ ಹೇಗೆಬಂದೆ? ಎಂದು ರಹಸ್ಯದಲ್ಲಿ ಕೇಳಿದನು. ವಂಚನೆಯೂ, ಅಪಮಾನವೂ, ಇವುಗಳನ್ನು ಪ್ರಾಜ್ಞ

ರು ಪ್ರಕಾಶಪಡಿಸುವುದಿಲ್ಲವಷ್ಟೆ? ( ಆದುದರಿಂದ ರಹಸ್ಯದಲ್ಲಿ ಪ್ರಶ್ನೆ ಮಾಡಿದನೆಂದಭಿಪ್ರಾಯವು. ) ॥ ೧೨ ॥

ಶ್ಲೋಕ ॥ ಸಖೇದಂ ಧ್ಯಾತದುಃಖೋಽಯ-
ಮಾಚಖ್ಯೌ ವೃತ್ತಿಮಾತ್ಮನಃ ।
ಧ್ಯಾತೇಽಸತಿ ಪುರಾದುಃಖೇ
ಭೃಶಂ ದುಃಖಾಯತೇ ಜನಃ ॥೧೩॥

ಟೀ ॥ ಅಯಂ-ಈ ನಂದಾಢ್ಯನು, ಧ್ಯಾತದುಃಖ(ಸ್ಸನ್)-ಧ್ಯಾತ-ಧ್ಯಾನಿಸಲ್ಪಟ್ಟ, ದುಃಖ(ಸ್ಸನ್)-ದುಃಖವುಳ್ಳವನಾಗಿ, ಸಖೇದಂ(ಯಥಾತಥಾ)-ದುಃಖದಿಂದೊಡಗೂಡಿರೋಣ ಹೇಗೋ ಹಾಗೆ, ಆತ್ಮನಃ-ತನ್ನ, ವೃತ್ತಿಂ-ವ್ಯಾಪಾರವನ್ನು, ಆಚಖ್ಯೌ-ಹೇಳಿದನು., ಪುರಾ-ಪೂರ್ವದಲ್ಲಿ ಅನುಭವಿಸಲ್ಪಟ್ಟ, ದುಃಖೇ-ದುಃಖವು, ಧ್ಯಾತೇಽಸತಿ-ಸ್ಮರಿಸಲ್ಪಡುತ್ತಲಿರಲಾಗಿ, ಜನಃ-ಜನವು, ಭೃಶಂ-ಬಹಳವಾಗಿ, ದುಃಖಾಯತೇ ಹಿ-ದುಃಖವನ್ನು ಹೊಂದುತ್ತೆಯಲ್ಲವೆ?.

ತಾತ್ಪರ್ಯ ॥ ಈ ಪೂರ್ವೋಕ್ತಪ್ರಕಾರ ಜೀವಂಧರಸ್ವಾಮಿಯಿಂದ ಪ್ರಶ್ನೆಮಾಡಲ್ಪಟ್ಟ ನಂದಾಢ್ಯನು ಅಣ್ಣನ ವಿರಹದಿಂದ ಇದುವರೆಗೆ ಅನುಭವಿಸಲ್ಪಟ್ಟ ದುಃಖಗಳನ್ನು ಸ್ಮರಿಸಿಕೊಂಡು ಬಹುದುಃಖದಿಂದೊಡಗೂಡಿರೋಣ ಹೇಗೋ ಹಾಗೆ ತನ್ನ ವೃತ್ತಾಂತವೆಲ್ಲವ ಹೇಳಿದನು. ಕಾರಣಾಂತರದಿಂದ ಪೂರ್ವದುಃಖವು ಸ್ಮರಿಸಲ್ಪಡುತ್ತಿರಲಾಗಿ ಜನಗಳು ಬಹಳ ದುಃಖಿಸುತ್ತಾರೆಯಲ್ಲವೆ? ॥ ೧೩ ॥

ಶ್ಲೋಕ ॥ ಪೂಜ್ಯಪಾದ ತದಾಸ್ಮಾಕಂ
ಪಾಪಾದ್ಭವತಿನಿರ್ಗತೇ ।
ಮೃತಕಲ್ಪೋಽಪ್ಯಹಂ ಮರ್ತುಂ
ಸರ್ವಥಾ ಸಮಕಲ್ಪಯಮ್ ॥೧೪॥

ಟೀ ॥ ಹೇ ಪೂಜ್ಯಪಾದ-ಎಲೈ ಮಹಾಪೂಜ್ಯನೇ!, ತದಾ-ಆ ಕಾಲದಲ್ಲಿ, ಅಸ್ಮಾಕಂ-ನಮ್ಮ, ಪಾಪಾತ್-ಪಾಪದದೆಸೆಯಿಂದ, ಭವತಿ-ತಾವು, ನಿರ್ಗತೇ(ಸತಿ)-ಹೊರಟುಹೋಗುತ್ತಿರಲಾಗಿ, ಮೃತಕಲ್ಪೋಽಪಿ-ಸತ್ತಹೆಣಕ್ಕೆ ಸಮಾನನಾಗಿದ್ದಾಗ್ಯೂ, ಅಹಂ-ನಾನು, ಸರ್ವಥಾ-ಸರ್ವಪ್ರಕಾರದಿಂದಲೂ, ಮರ್ತುಂ-ಮರಣವನ್ನು ಹೊಂ

ಲೋಸುಗ, ಸಮಕಲ್ಪಯಂ-ಸಂಕಲ್ಪಿಸಿದೆನು (ನಿರ್ಣಯಿಸಿಕೊಂಡೆನು).

ತಾತ್ಪರ್ಯ ॥ ಎಲೈ ಮಹಾಪ್ರಾಜ್ಞನೇ ! ಆ ಕಾಷ್ಠಾಂಗಾರನು ತಮಗೆ ದ್ರೋಹಮಾಡಿದಕಾಲದಲ್ಲಿ ನಮ್ಮ ದುರದೃಷ್ಟದಿಸೆಯಿಂದ ತಾವು ಹೊರಟು ಹೋಗುತ್ತಿರಲಾಗಿ ಜೀವಿಸಿದ್ದಾಗ್ಯೂ ತಮ್ಮ ಸಾನ್ನಿಧ್ಯವಿಲ್ಲದುದರಿಂದ ಮೃತಪ್ರಾಯನಾದ ನಾನು ಸರ್ವಪ್ರಕಾರದಿಂದಲೂ ಬೇರೆಗತಿಯಿಲ್ಲದುದರಿಂದ ಮರಣವನ್ನು ಹೊಂದುವುದೇ ಯುಕ್ತವೆಂದಾಲೋಚಿಸಿದೆನು. ಎಂಬದಾಗಿ ನಂದಾಢ್ಯನು ಆಗಮನ ವೃತ್ತಾಂತವಂ ಕ್ರಮವಾಗಿ ಹೇಳಲಾರಂಭಿಸಿದನು ॥ ೧೪ ॥

ಶ್ಲೋಕ ॥ ವಿದ್ಯಾವಿದಿತ ವೃತ್ತಾನ್ತಾ
ಕಥಂ ವೃತ್ತಾ ಪ್ರಜಾಪತೀ ।
ಇತ್ಯಾಲೋಚ್ಯೈವ ಸಂಸ್ಥಾನೇ
ಬೋಧೋ ಮೇ ಸಮಜಾಯತ ॥೧೫॥

ಟೀ ॥ ವಿದ್ಯಾವಿದಿತವೃತ್ತಾಂತಾ-ವಿದ್ಯಾ-ವಿದ್ಯೆಯಿಂದ, ವಿದಿತ-ತಿಳಿಯಲ್ಪಟ್ಟ, ವೃತ್ತಾಂತಾ-ಸಮಾಚಾರವುಳ್ಳ, ಪ್ರಜಾಪತೀ-ನಮ್ಮತ್ತಿಗೆಯಾದ ಗಂಧರ್ವದತ್ತೆಯು, ಕಥಂ-ಹೇಗೆ, ವೃತ್ತಾ-ಇರುವಳೋ?, ಇತಿ-ಈಪ್ರಕಾರ, ಆಲೋಚ್ಯೈವ-ಆಲೋಚಿಸಿಯೇ, ಸಂಸ್ಥಾನೇ-ಮರಣದಲ್ಲಿ, ಮೇ-ನನಗೆ, ಬೋಧಃ-ಜ್ಞಾನವು, ಸಮಜಾಯತ-ಉಂಟಾಯಿತು.

ತಾತ್ಪರ್ಯ ॥ ನಂದಾಢ್ಯನು ಹೇಳುತ್ತಾನೆ.— ನಮ್ಮ ಅತ್ತಿಗೆಯು ವಿದ್ಯಾಧರಪುತ್ರಿಯಾದುದರಿಂದ ದೇಶಾಂತರಗತರಾಗಿದ್ದಾಗ್ಯೂ ವಿದ್ಯಾಬಲದಿಂದ ತಮ್ಮ ವೃತ್ತಾಂತವಂ ತಿಳಿಯಬಲ್ಲಳು. ಆದುದರಿಂದ ಆಕೆಯು ಯಾವಸ್ಥಿತಿಯಲ್ಲಿರುವಳು ? ಹೋಗಿನೋಡಿ ತಿಳಿದು ನಂತರ ಮರಣವಂ ಪೊಂದುವೆನೆಂದೆಣಿಸಿ; ಅಷ್ಟರಲ್ಲೇ ಈಜ್ಞಾನವಂಹೊಂದಿದೆನು.॥೧೫॥

ಶ್ಲೋಕ ॥ ಏವಂ ಭಾವಿ ಭವದ್ದೃಷ್ಟಿ
ಶಂಭರತ್ವಾದಹಂ ಪುನಃ ।
ಪ್ರಜಾವತೀ ಗೃಹಂ ಪ್ರಾಪ್ಯ
ಸವಿಷಾದಮುಪಾಸ್ಥಿಷಿ ॥೧೬॥

ಟೀ॥ ಏವಂ-ಈ ಪ್ರಕಾರ, ಭಾವಿಭವದ್ದೃಷ್ಟಿಸಂಭರತ್ವಾತ್-ಭಾವಿ-ಮುಂದಕ್ಕೆ ಉಂಟಾಗತಕ್ಕದ್ದಾದ, ಭವತ್-ತಮ್ಮ, ದೃಷ್ಟಿ-ದರ್ಶನದ, ಸಂ-ಸುಖವನ್ನು (ಅ ತಮ್ಮ ದರ್ಶನಸುಖಕ್ಕೆ ಕಾರಣವಾದ ಭಾಗ್ಯವನ್ನು), ಭರತ್ವಾತ್-ಧರಿಸಿರೋಣದರ ದೆಸೆಯಿಂದ, ಅಹಂಪ್ರಸಹ-ನಾನಾದರೋ, ಪ್ರಜಾವತೀಗೃಹಂ- ನಮ್ಮ ಅತ್ತಿಗೆಯಾದ ಗಂಧರ್ವದತ್ತೆಯ ಮನೆಯನ್ನು, ಪ್ರಾಪ್ಯ-ಹೊಂದಿ, ಸವಿಷಾದಂ(ಯಥಾತಥಾ)-ದುಃಖದಿಂದೊಡಗೂಡಿರೋಣ ಹೇಗೋಹಾಗೆ, ಅವಾಸ್ಥಿಷಿ-ತಲೆಯಂ ಬೊಗ್ಗಿಸಿಕೊಂಡು ನಿಂತೆನು.

ತಾತ್ಪರ್ಯ॥ ನಂದಾಢ್ಯನು ಹೇಳುತ್ತಾನೆ.— ತಮ್ಮ ದರ್ಶನಸುಖವನ್ನನುಭವಿಸುವ ಭಾಗ್ಯವಿರೋಣದರಿಂದ ನಾನಾದರೋ ಅತ್ತಿಗೆಯ ಮನೆಯನ್ನು ಹೊಂದಿ, ವ್ಯಸನಾಕ್ರಾಂತನಾಗಿ ತಲೆಯನ್ನು ಬಗ್ಗಿಸಿ ನಿಂತುಕೊಂಡೆನು. ( ಗಂಧರ್ವದತ್ತಾ ದರ್ಶನವಂ ಮಾಡದೆ ಮೃತನಾಗಿದ್ದ ಪಕ್ಷಕ್ಕೆ ತಮ್ಮ ದರ್ಶನ ಸುಖವು ದುರ್ಲಭವಾಗುತ್ತಿತ್ತೆಂದಭಿಪ್ರಾಯವು)॥೧೬

ಶ್ಲೋಕ॥ ಸ್ವಾಮಿನಿ ಸ್ವಾಮಿಹೀನಾನಾಂ
ಕುತಸ್ತ್ರೀಣಾಂ ಸುಖಾಸಿಕಾ।
ಇತಿವಕ್ತುಮುಪಕ್ರಾಂತೇ
ಹೃದಯಜ್ಞಾತು ಸಾಭ್ಯಧಾತ್॥೧೭॥

ಟೀ॥ ಹೇ ಸ್ವಾಮಿನಿ-ಎಲೌ ಸ್ವಾಮಿಪತ್ನಿಯಾದವಳೇ!, ಸ್ವಾಮಿಹೀನಾನಾಂ-ಪತಿಸಾನ್ನಿಧ್ಯವಿಲ್ಲದವರಾಗಿ ಪತಿವ್ರತೆಯರಾಗಿರುವ, ಸ್ತ್ರೀಣಾಂ-ಹೆಂಗಸರಿಗೆ, ಸುಖಾಸಿಕಾ-ಸುಖಸ್ಥಿತಿಯು, ಕುತಃ-ಯಾವಕಾರಣದ ದೆಸೆಯಿಂದ ಉಂಟಾದೀತು? ಇತಿ-ಹೀಗೆಂದು, ವಕ್ತುಂ-ಹೇಳಲೋಸುಗ, ಮಯಿ-ನಾನು, ಉಪಕ್ರಾಂತೇ(ಸತಿ)-ಪ್ರಾರಂಭಿಸುತ್ತಿರಲಾಗಿ, ಹೃದಯಜ್ಞಾತು- ಮನೋಭಿಪ್ರಾಯವನ್ನು ತಿಳಿದಿರುವ, ಸಾತು-ಆ ನಮ್ಮತ್ತಿಗೆಯಾದರೋ, ಅಭ್ಯಧಾತ್-ಹೇಳಿದಳು.

ತಾತ್ಪರ್ಯ॥ ನಂದಾಢ್ಯನು ಹೇಳುತ್ತಾನೆ.— ಎಲೌ ಸ್ವಾಮಿಪತ್ನಿಯೇ! ಪತಿಯು ದೇಶಾಂತರದಲ್ಲಿರ-ವಾಗ್ಯೆ ಪತಿವ್ರತಾಸ್ತ್ರೀಯರು ನಿಶ್ಚಿಂತರಾಗಿ ಸುಖಸ್ಥಿತಿಯುಳ್ಳರುವುದುಂಟೆ? ಎಂದು ಕೇಳಬೇಕೆಂದು ಪ್ರಯತ್ನಿಸುವಷ್ಟರಲ್ಲಿಯೇ ಆಕೆಯು ನನ್ನ ಮನೋಭಿಪ್ರಾಯವ ತಿಳಿದು ಹೇಳಿದಳು. ॥ ೧೭ ॥

ಶ್ಲೋಕ॥ ಅಂಗ ಕಿಂ ಖಿದ್ಯಸೇ ಜ್ಯಾಯಾ-
ನನುಪದ್ರವವಿವ ತೇ ।
ವಯಮೇವಮಹಾಪಾಪಾ
ಮಧ್ಯೇ ದುಃಖಾಬ್ಧಿ ಪಾತಿತಾಃ ॥ ೧೪ ॥

ಟೀ॥ ಅಂಗ-ಎಲೈ ಮೈದುನನೇ!, ಕಿಂ-ಏತಕ್ಕೋಸುಗ, ಖಿದ್ಯಸೆ-ವ್ಯಸನ ಪಡುತ್ತೀಯೆ ?, ತೆ-ನಿನ್ನ, ಜ್ಯಾಯಾನ್-ಅಣ್ಣನವರು, ಅನುಪದ್ರವವಿವ-ಯಾವ ಬಾಧೆಯೂ ಇಲ್ಲದೆ ಸುಖದಿಂದಿರುವರು., ಮಧ್ಯೇದುಃಖಾಬ್ಧಿ-ದುಃಖವೆಂಬಸಮುದ್ರ ದ ಮಧ್ಯದಲ್ಲಿ, ಪಾತಿತಾಃ-ತಳ್ಳಲ್ಪಟ್ಟ, ವಯಮೇವ-ನಾವುಗಳೇ, ಮಹಾಪಾಪಾಃ-ಮಹಾಪಾಪಿಷ್ಠರು.,

ತಾತ್ಪರ್ಯ॥ ಎಲೈ ಮೈದುನನೇ! ಏತಕ್ಕೋಸುಗ ವ್ಯಸನಪಡುತ್ತೀಯೆ ? ನಿಮ್ಮಣ್ಣನವರು ಯಾವ ಉಪದ್ರವವೂ ಇಲ್ಲದೆ ಸುಖದಿಂದಿರುವರು. ಮಹಾಪಾಪಿಷ್ಠರಾದ ನಾವೇ ದುಃಖವೆಂಬ ಸಮುದ್ರದ ಮಧ್ಯದಲ್ಲಿ ತಳ್ಳಲ್ಪಟ್ಟಿರುವೆವು ಎಂಬದಾಗಿ ಗಂಧರ್ವದತ್ತೆಯು ನಂದಾಢ್ಯನಿಗೆ ಹೇಳಿದ ವೃತ್ತಾಂತವಂ ಇಲ್ಲಿ ಜೀವಂಧರ ಸ್ವಾಮಿಗೆ ನಂದಾಢ್ಯನು ಹೇಳಿದನು. ॥ ೧೪ ॥

ಶ್ಲೋಕ॥ ಪ್ರತಿದೇಶಂ ಪ್ರತಿಗ್ರಾಮಂ
ಪ್ರತಿಗೃಹ್ಯೈವ ಮಹ್ಯತೇ ।
ವಿಪಚ್ಛ ಸಂಪದೇ ಹಿ ಸ್ಯಾ-
ದ್ಭಾಗ್ಯಂ ಯದಿ ಪಚೇಳಿಮಮ್ ॥ ೧೫ ॥

ಟೀ॥ ಪ್ರತಿದೇಶಂ-ಪ್ರತಿದೇಶದಲ್ಲಿಯೂ, ಪ್ರತಿಗ್ರಾಮಂ-ಪ್ರತಿ ಗ್ರಾಮದಲ್ಲಿಯೂ, ಪ್ರತಿಗೃಹ್ಯೈವ-ಪ್ರತಿಗ್ರಹವನ್ನು ಮಾಡಿಯೇ (ಉತ್ತಮೋತ್ತಮ ವಸ್ತುವನ್ನಂಗೀಕರಿಸಿರುವವರಾಗಿಯೇ), ಮಹ್ಯತೇ-ಪೂಜಿಸಲ್ಪಡುತ್ತಾರೆ., ಭಾಗ್ಯಂ-ಪೂರ್ವಪುಣ್ಯವು, ಪಚೇಳಿಮಂ ಯದಿ-ಪರಿಪಕ್ವವಾಗುತಲಿದ್ದಲಾಗಿ, ವಿಪಚ್ಛ-ವಿಪತ್ತೂ ಕೂಡ, ಸಂಪದೇ-ಸಂಪದಕ್ಕೋಸುಗ, ಸ್ಯಾದ್ಧಿ-ಆಗುತ್ತದೆಯಲ್ಲವೆ?.

ತಾತ್ಪರ್ಯ॥ ನಿಮ್ಮಣ್ಣನವರು ಪ್ರತಿದೇಶದಲ್ಲಿಯೂ, ಪ್ರತಿಗ್ರಾಮದಲ್ಲಿಯೂ, ಕನ್ಯಾ ಸ್ವೀಕಾರವನ್ನು ಮಾಡುವರಾಗಿಯೇ ( ನೂತನನೂ

ತನವಿವಾಹವನ್ನಂಗೀಕರಿಸುವರಾಗಿಯೇ) ಪೂಜಿಸಲ್ಪಡುತ್ತಾರೆ. ಒಳ್ಳೇ ಅದೃಷ್ಟವು ಫಲವನ್ನು ಕೊಡುವುದಕ್ಕೆ ಸಿದ್ಧವಾಗಿರುತ್ತಿರಲಾಗಿ ಮನುಷ್ಯನಿಗೆ ಪ್ರಾಪ್ತವಾದ ವಿಪತ್ತೂಕೂಡ ಸಂಪತ್ತಿಗೇನೇ ಕಾರಣವಾಗುವುದಲ್ಲವೆ? (ಆದಕಾರಣ ಮಹಾಭಾಗ್ಯಶಾಲಿಯಾದ ನಿಮ್ಮಣ್ಣನವರಿಗೆ ಬಂದ ವಿಪತ್ತೂಕೂಡ ಉತ್ತರೋತ್ತರ ಸಂಪದಭಿವೃದ್ಧಿಗೇನೇಕಾರಣವಾಗಿರುವುದೆಂದಭಿಪ್ರಾಯವು.) ॥ ೧೯ ॥

ಶ್ಲೋಕ॥ ದ್ರಷ್ಟುಮಿಚ್ಛಸಿ ಚೇದ್ವತ್ಸ
ತಜ್ಜನಂ ತವ ಪೂರ್ವಜಮ್ ।
ಕಿನ್ನು ತಾಮ್ಯಸಿ ಗಮ್ಯೇತ
ಕ್ವನು ಪಾಪಾ ಹಿ ಭಾಮಿನೀ ॥೨೦॥

ಟೀ॥ ಹೇ ವತ್ಸ-ಎಲೈ ಮೊಗುವೇ!, ತವ-ನಿನಿಗೆ, ಪೂರ್ವಜಂ-ಅಣ್ಣನಾದ, ತಜ್ಜನಂ-ಆ ಜನವನ್ನು, ದ್ರಷ್ಟುಂ-ದರ್ಶನಮಾಡಲೋಸುಗ, ಇಚ್ಛಸಿಚೇತ್-ಅಪೇಕ್ಷಿಸಿದೆಯೇ ಆದರೆ, ಕಿನ್ನು-ಏತಕ್ಕೋಸುಗ, ತಾಮ್ಯಸಿ- ಬಳಲುತ್ತೀಯೆ?, ಗಮ್ಯೇತ-ಹೋಗಲ್ಪಡಲಿ., ಭಾಮಿನೀ-ಸ್ತ್ರೀಯು, ಪಾಪಾಹಿ- ಪಾಪಿಷ್ಠಳಲ್ಲವೆ?, ಕ್ವನು-ಹೇಗೆ ಸ್ವತಂತ್ರಳಾಗುವಳು?.

ತಾತ್ಪರ್ಯ॥ ಎಲೈ ಮೊಗುವೇ! ನಿಮ್ಮಣ್ಣನವರನ್ನು ನೋಡಲೋಸುಗ ಅಪೇಕ್ಷಿಸಿದೆಯೇ ಆದರೆ ಏತಕ್ಕೋಸುಗ ಚಿಂತಿಸುತ್ತೀಯೆ? ಅವರಿರುವಸ್ಥಳಕ್ಕೆ ಹೊರಟುಹೋಗು. ಸ್ತ್ರೀಜನ್ಮವೇ ಪಾಪಿಷ್ಠಜನ್ಮವಾದುದರಿಂದಲೂ, ಯಾವುದರಲ್ಲಿಯೂ ಸ್ವತಂತ್ರಳಲ್ಲವಾದುದರಿಂದಲೂ, ನಾನು ಬರೋಣವೆಂದರೆ ನನಗೆ ಯೋಗ್ಯತೆಯಿಲ್ಲವು. ಅಂದರೆ.- ಪತಿಯ ಅಪ್ಪಣೆಯಿಲ್ಲದೆ ಬರಲು ಹೆಂಗಸಾದ ನಾನು ಸ್ವತಂತ್ರಳಲ್ಲವು. (ನೀನು ಹೋಗಬಹುದೆಂದಭಿಪ್ರಾಯವು.) ॥೨೦॥

ಶ್ಲೋಕ॥ ಇತ್ಯುಕ್ತ್ವಾ ಶಾಯಯಿತ್ವಾ ಚ
ತಂವತ್ಸ್ಯಂ ಸಾಭಿಮಂತ್ರಣಮ್ ।

ಮಾಮತ್ರ ಭವತೀ ಚಾತ್ರ
ಸಪತ್ರಂ ಪ್ರಾಹಿಣೋದಿತಿ ॥೨೧॥

ಟೀ ॥ ಇತಿ-ಈ ಪ್ರಕಾರ, ಉಕ್ತ್ವಾ-ಹೇಳಿ, ಅತ್ರಭವತೀ - ಪೂಜ್ಯಳಾದವ ಮ್ಮತ್ತಿಗೆಯೂ, ಸಾಭಿಮಂತ್ರಣಂ(ಯಥಾಭವತಿತಥಾ)-ಅಭಿಮಂತ್ರಣದಿಂದೊಡ ಗೂಡಿರೋಣಹೇಗೊಹಾಗೆ, ಮಾಂ-ನನ್ನನ್ನು, ಶಯ್ಯಾಯಾಂ - ಹಾಸಿಗೆಯಲ್ಲಿ, ಶಾಯಯಿತ್ವಾ ಚ-ಮಲಗಿಸಿಯೂ, ಅತ್ರ-ಇಲ್ಲಿಗೆ, ಸಪತ್ರಂ (ಯಥಾತಥಾ)- ಪತ್ರದಿಂದೊಡಗೂಡಿರೋಣ ಹೇಗೋಹಾಗೆ, ಪ್ರಾಹಿಣೋತ್- ಕಳುಹಿಸಿದಳು., ಇತಿ-ಹೀಗೆಂದು, ಆಹ-ಹೇಳಿದನು.

ತಾತ್ಪರ್ಯ ॥ ನಂದಾಢ್ಯನು ಹೇಳುತ್ತಾನೆ.— ಈಪ್ರಕಾರ ನಮ್ಮ ತ್ತಿಗೆಯು ನನ್ನನ್ನು ಕುರಿತು ಹೇಳಿ ಹಾಸಿಗೆಯಲ್ಲಿ ಮಲಗಿಸಿ, ವಿದ್ಯೆಯಿಂ ದ ಅಭಿಮಂತ್ರಿಸಿ, ಒಂದು ಕ್ಷೇಮಸಮಾಚಾರ ಪತ್ರಿಕೆಯಂ ಕೊಟ್ಟು ನ ನ್ನನ್ನು ಕಳುಹಿಸಿದಳೆಂಬದಾಗಿ ಜೀವಂಧರಕುಮಾರನಿಗೆಹೇಳಿದನು.॥೨೧

ಶ್ಲೋಕ॥ ಅಖಿದ್ಯತ ತತಸ್ಸ್ವಾಮೀ
ಸದಯೈರನುಜೋದಿತೈಃ ।
ಸ್ನೇಹಪಾಶೋ ಹಿ ಜೀವಾನಾ-
ಮಾಸಂಸಾರಂ ನ ಮುಂಚತಿ ॥ ೨೨ ॥

ಟೀ ॥ ತತಃ-ಅನಂತರದಲ್ಲಿ, ಸ್ವಾಮೀ-ಜೀವಂಧರಸ್ವಾಮಿಯು, ಸದಯೈಃ- ದ ಯಾರಸದಿಂದೊಡಗೂಡಿರುವ, ಅನುಜೋದಿತೈಃ-ತಮ್ಮನಾದ ನಂದಾಢ್ಯನ ವಚನ ಗಳಿಂದ, ಅಖಿದ್ಯತ-ವ್ಯಸನಪಟ್ಟನು., ಜೀವಾನಾಂ-ಪ್ರಾಣಿಗಳಿಗೆ, ಸ್ನೇಹಪಾಶಃ— ಸ್ನೇಹ-ದೇಹಾನುಬಂಧಿಗಳಾದ ಪತ್ನೀ ಪುತ್ರಾದಿಗಳಲ್ಲಿರುವ ಪ್ರೀತಿಯೆಂಬ, ಪಾಶಃ- ಬಂಧವು, ಆಸಂಸಾರಂ- ಸಂಸಾರವಿರುವ ಪರ್ಯಂತವೂ, ನಮುಂಚತಿ ಹಿ - ಬಿಡು ವುದಿಲ್ಲವಷ್ಟೆ ?.

ತಾತ್ಪರ್ಯ ॥ ಅನಂತರದಲ್ಲಿ, ಜೀವಂಧರಸ್ವಾಮಿಯು ತಮ್ಮನಾದ ನಂದಾಢ್ಯನಿಂದ ಹೇಳಲ್ಪಟ್ಟ, ದಯೆಯನ್ನುಂಟುಮಾಡತಕ್ಕುದಾಗಿರುವ ಆ ಮಾತುಗಳಂ ಕೇಳಿ, ವ್ಯಸನಾಕ್ರಾಂತನಾದನು. ಪ್ರಾಣಿಗಳಿಗೆ ಈ ದೇ ಹಸಂಬಂಧವಿರುವ ಪರ್ಯಂತವೂ, ತನ್ನ ಪತ್ನೀ ಪುತ್ರಾದಿವಿಷಯಕವಾದ ಪ್ರೀತಿಯೆಂಬ ಪಾಶವು ಬಿಟ್ಟದ್ದಿಲ್ಲವಷ್ಟೆ? ॥ ೨೨ ॥

ಶ್ಲೋಕ॥ ಗುಣಮಾಲಾ ವ್ಯಥಾ ಶಂಸಿ
ಪತ್ರಂ ಚಾಯಮವಾಚಯತ್ ।
ಚತುರಾಣಾಂ ಸ್ವಕಾರ್ಯೋಕ್ತಿ-
ಸ್ಸ್ವಮುಖಾನ್ನ ಹಿ ವರ್ತತೇ ॥ ೨೩ ॥

ಟೀ॥ ಅಯಂ-ಈ ಜೀವಂಧರಸ್ವಾಮಿಯು, ಗುಣಮಾಲಾವ್ಯಥಾಶಂಸಿ– ಗುಣಮಾಲಾ-ಗುಣಮಾಲೆಯ, ವ್ಯಥಾ-ದುಃಖವನ್ನು, ಶಂಸಿ- ಸೂಚಿಸುತ್ತಿರುವ, ಪತ್ರಂ ಚ-ಕ್ಷೇಮಸಮಾಚಾರಪತ್ರಿಕೆಯನ್ನುಕೂಡ, ಅವಾಚಯತ್-ಓದಿಸಿದನು., ಚತುರಾಣಾಂ-ಬುದ್ಧಿಶಾಲಿಗಳಿಗೆ, ಸ್ವಕಾರ್ಯೋಕ್ತಿಃ– ಸ್ವ-ತನ್ನ, ಕಾರ್ಯ- ಕೆಲಸದ, ಉಕ್ತಿಃ-ಹೇಳಿಕೊಳ್ಳೋಣವು, ಸ್ವಮುಖಾತ್-ತನ್ನ ಮುಖದ ದೆಸೆಯಿಂದ, ನವರ್ತತೇಹಿ-ಉಂಟಾಗುವುದಿಲ್ಲವಷ್ಟೆ ?

ತಾತ್ಪರ್ಯ॥ಆ ಜೀವಂಧರಸ್ವಾಮಿಯು ಗುಣಮಾಲೆಯ ವ್ಯಸನವಂ ಸೂಚಿಸುತ್ತಿರುವಂತೆ ಗುಣಮಾಲೆಯು ತಾನೇಬರದಂತೆ ಅವಳಹೆಸರನ್ನಿಟ್ಟು ತನ್ನ ದುಃಖವಂ ಸೂಚಿಸಿ ಬರೆದು ಗಂಧರ್ವದತ್ತಾದೇವಿ ಕಳುಹಿಸಿದ ಪತ್ರಿಕೆಯನ್ನು ಓದಿಸಿದನು. ಬುದ್ಧಿಶಾಲಿಗಳು ತಮ್ಮಭಿಪ್ರಾಯವಂ ತಾವೇ ತಿಳಿಸರು. ಮತ್ತೊಬ್ಬರ ನೆವದಿಂದಲ್ಲವೆ ತಿಳಿಸುವರು ? ಆದಕಾರಣ ಗಂಧರ್ವದತ್ತೆಯು ಗುಣಮಾಲೆಯ ಹೆಸರಿನಿಂ ಪತ್ರಿಕೆಯಂಬರೆದಳು.॥೨೩

ಶ್ಲೋಕ॥ ಅನ್ಯಾಪದೇಶಸಂದೇಶಾ-
ತ್ಖೇಚರ್ಯಾಂ ಖೇದವಾನಭೂತ್ ।
ವಿದ್ವೇಷಃ ಪಕ್ಷಪಾತಶ್ಚ
ಪ್ರತಿಪಾತ್ರಂ ಹಿ ಭಿದ್ಯತೇ ॥೨೪॥

ಟೀ॥ ಸಃ- ಆ ಜೀವಂಧರಸ್ವಾಮಿಯು, ಅನ್ಯಾಪದೇಶಸಂದೇಶಾತ್– ಅನ್ಯ-ಮತ್ತೊಬ್ಬರ, ಅಪದೇಶ-ನೆಪವುಳ್ಳ, ಸಂದೇಶಾತ್-ಹೇಳಿಕಳುಹಿಸಿದ ಮಾತಿನ ದೆಸೆಯಿಂದ, ಖೇಚರ್ಯಾಂ-ವಿದ್ಯಾಧರ ಪುತ್ರಿಯಾದ ಗಂಧರ್ವದತ್ತೆಯ ವಿಷಯದಲ್ಲಿ, ಖೇದವಾನ್(ಸನ್)-ಚಿಂತಾಕ್ರಾಂತನಾಗಿ, ಅಭೂತ್-ಆದನು., ವಿದ್ವೇಷಃ- ವಿದ್ವೇಷವೂ, ಪಕ್ಷಪಾತಶ್ಚ- ಪ್ರೀತಿಯೂ ಇವುಗಳೂಕೂಡ, ಪ್ರತಿಪಾತ್ರಂ-ಪ್ರತಿಯೊಂದು

ಮನುಷ್ಯನಲ್ಲಿಯೂ (ಆ ರಾಗದ್ವೇಷಗಳಿಗೆ ತಕ್ಕ ವಸ್ತುವಿನಲ್ಲಿಯೂ ಎಂದರ್ಥವು. ), ಭಿದ್ಯತೇ ಹಿ-ಭೇದವನ್ನು ಹೊಂದುತ್ತದೆಯಲ್ಲವೆ?.

ತಾತ್ಪರ್ಯ॥ ಜೀವಂಧರಸ್ವಾಮಿಯು ಗುಣಮಾಲೆಯು ನೆಪದಿಂ ತನ್ನ ದುಃಖವಂತಿಳಿಸುವುದಕ್ಕೋಸುಗ ಹೇಳಿ ಕಳುಹಿಸಿರುವ ಆ ಮಾತಿ ನಡೆಸೆಯಿಂದ ವಿದ್ಯಾಧರಪುತ್ರಿಯಾದ ಗಂಧರ್ವದತ್ತೆಯವಿಷಯದೊಳು ಚಿಂತಾಕ್ರಾಂತನಾದನು. ಪ್ರಾಣಿಗಳಿಗೆ ರಾಗದ್ವೇಷಗಳು ಆಯಾಯಸ್ಥಾನದಲ್ಲಿಯೇ ಭೇದವನ್ನುಹೊಂದುವುದಲ್ಲವೆ? ಆಯಾಯ ವಸ್ತುವಿನ ಗುಣದೋಷಗಳಿಗನುಸಾರವಾಗಿಯೇ ಪ್ರೀತಿಯೂ, ದ್ವೇಷವೂ ಉಂಟಾಗುವುದಷ್ಟೆ? ಇದರಿಂದ ಗಂಧರ್ವದತ್ತೆಯಲ್ಲಿ ಅತಿ ಪ್ರೀತಿಯೂ, ಗುಣಮಾಲೆಯಲ್ಲಿ ದ್ವೇಷವೂ, ಜೀವಂಧರಸ್ವಾಮಿಗಿರುವುದೆಂಬ ತಾತ್ಪರ್ಯವಲ್ಲವು. ಗುಣಾತಿಶಯದಿಂದ ಗಂಧರ್ವದತ್ತೆಯಲ್ಲಿ ಅತ್ಯಂತ ಪ್ರೀತಿಯೂ, ಗೌರವವೂ, ಗುಣಮಾಲೆಯಲ್ಲಿ ಸಾಮಾನ್ಯಪ್ರೀತಿಯೂ, ಅವರವರಗುಣ ತಾರತಮ್ಯಕ್ಕೆ ತಕ್ಕಹಾಗೆ ವುಂಟಾಯಿತುದಭಿಪ್ರಾಯವು. ॥ ೭೪ ॥

ಶ್ಲೋಕ॥ ಪ್ರಿಯಾಶೋಕಶ್ರುತೇರ್ಜಾತಃ
ಶೋಕೋಪ್ಯೇತಸ್ಯ ನಾಸ್ಫುರತ್ ।
ನ ಹಿ ಪ್ರಸಾದ ಖೇದಾಭ್ಯಾಂ
ವಿಕ್ರಿಯಂತೇವಿವೇಕಿನಃ ॥ ೭೫ ॥

ಟೀ॥ ಪ್ರಿಯಾಶೋಕಶ್ರುತೇಃ- ಪ್ರಿಯಾ-ಹೆಂಡತಿಯಾದ ಗಂಧರ್ವದತ್ತೆಯ, ಶೋಕ- ದುಃಖದ, ಶ್ರುತೇಃ- ಕೇಳೋಣದರ ದೆಸೆಯಿಂದ, ಜಾತಃ-ಉಂಟಾದ, ಶೋಕೋಪಿ- ದುಃಖವೂಕೂಡ, ಏತಸ್ಯ-ಈ ಜೀವಂಧರಸ್ವಾಮಿಗೆ, ನಾಸ್ಫುರತ್- ಪ್ರಕಾಶಿಸಲಿಲ್ಲವು., ವಿವೇಕಿನಃ-ವಿವೇಕಿಗಳು, ಪ್ರಸಾದಖೇದಾಭ್ಯಾಂ-ಪ್ರಸಾದ ಪ್ರಸನ್ನತೆಯೂ ( ಸಂತೋಷವೂ ), ಖೇದಾಭ್ಯಾಂ-ವ್ಯಸನವೂ ಇವುಗಳಿಂದ, ನವಿಕ್ರಿಯಂತೆ- ವಿಕಾರವನ್ನುಹೊಂದುವುದಿಲ್ಲವಷ್ಟೆ?.

ತಾತ್ಪರ್ಯ॥ ಹೆಂಡತಿಯಾದ ಗಂಧರ್ವದತ್ತೆಯ ದುಃಖವಂ ಕೇಳೋಣದರದೆಸೆಯಿಂದ ಈ ಜೀವಂಧರಸ್ವಾಮಿಗೆ ಉಂಟಾದ ಶೋಕವೂಕೂಡ ಹೊರಗೆ ಪ್ರಕಾಶಿಸಲಿಲ್ಲವು. ( ಗೂಢನಾಗಿದ್ದುದೇಹೊರತು ನೋಡು

ವನರಿಗೆ ತೋರುವಹಾಗೆ ಮುಖದಲ್ಲಿ ಬಳಲಿಕೆ ಮುಂತಾದ ವಿಕಾರವು
ಉಂಟಾಗಲಿಲ್ಲವು. ದೀನಮುಖನಾಗದಂತೆ ಒಂದೇಪ್ರಕಾರ ಮುಖಭಾ
ವಾದಿಗಳನ್ನುಳ್ಳವನಾಗಿದ್ದನು. ಎಂದರ್ಥವು) ವಿವೇಕಿಗಳು ಸಂತು
ಷ್ಟರಾದರೆ ಮುಖದಲ್ಲಿ ವಿಶೇಷ ಉಲ್ಲಾಸವನ್ನು, ದುಃಖಪ್ರಾಪ್ತವಾದರೆ
ವಿಶೇಷ ದೀನಭಾವವನ್ನೂ, ಪ್ರಕಾಶಪಡಿಸುವದಿಲ್ಲವಷ್ಟೆ? ಸುಖದುಃಖ
ಗಳಲ್ಲಿ ಯಾವುದು ಪ್ರಾಪ್ತವಾದಾಗ್ಯೂ, ಒಂದೇಸ್ವಭಾವವುಳ್ಳವರಲ್ಲವೆ?
ಇದನ್ನಲ್ಲವೆ ಪಂಡಿತರು ಗಾಂಭೀರ್ಯಗುಣವೆಂದು ಹೇಳುವರು. ॥ ೨೫॥

ಶ್ಲೋಕ ॥ ವೈವಾಹಿಕಗೃಹಸ್ಥಾ ಅ-
ಪ್ಯಾತಸ್ಥುರನುಜಂ ಭೃಶಮ್ ।
ಬಂಧೋರ್ಬಂಧೌ ಚ ಬಂಧೋರ್ಹಿ
ಬಂಧುತಾ ಚೇದವಂಚಿತಾ ॥ ೨೬॥

ಟೀ ॥ ವೈವಾಹಿಕಗೃಹಸ್ಥಾ ಅಪಿ- ಮಾವನ ಮನೆಯವರಾದ ಬಂಧು ಜನ
ಳೂಕೂಡ, ಅನುಜಂ- ತಮ್ಮನಾದ ನಂದಾಢ್ಯನನ್ನು, ಭೃಶಂ- ಬಹಳವಾಗಿ, ಆ
ಸ್ಥುಃ-ಸತ್ಕರಿಸಿದರು., ಬಂಧೋಃ-ಬಂಧುವಿನ ವಿಷಯದಲ್ಲಿ, ಬಂಧುತಾ-ಬಂಧುತ
ವು, ಅವಂಚಿತಾಚೇತ್-ನಿರ್ವಂಚನೆಯಾಗಿದ್ದರೆ, ಬಂಧೋಃ-ಬಂಧುವಿನ, ಬಂ
ಧೌ ಚ- ಬಂಧುವಿನಲ್ಲಿಯೂ ಕೂಡ, ಸ್ಯಾದ್ಧಿ - ನಿರ್ವಂಚನೆಯಾಗಿಯೇ ಉಂಟಾ
ದೀತಲ್ಲವೆ?.

ತಾತ್ಪರ್ಯ॥ ಜೀವಂಧರಸ್ವಾಮಿಯ ಮಾವನಮನೆಯವರಾದ ಬಂಧು
ಜನಗಳೂಕೂಡ ಅಳಿಯ ನತಮ್ಮನಾದ ನಂದಾಢ್ಯನನ್ನು ಸತ್ಕರಿಸಿದರು
ಬಂಧುವಿನ ವಿಷಯದಲ್ಲಿ ಬಂಧುತ್ವವು ನಿರ್ವಂಚನೆಯಾಗಿದ್ದರೆ ಅವನಬಂ
ಧುವಿನಲ್ಲಿಯೂಕೂಡ ನಿರ್ವಂಚನೆಯಾಗಿಯೇ ಉಂಟಾದೀತಲ್ಲವೆ?॥ ೨೬

ಶ್ಲೋಕ॥ ಅವಸ್ಕಂದಾದ್ಗವಾಂ ಗೋಪಾ
ಅಥಾಕ್ರೋಶನ್ನೃಪಾಂಗಣೇ ।
ಪೀಡಾಯಾಂ ತು ಭೃಶಂ ಜೀವಾ
ಅಪೇಕ್ಷಂತೇ ಹಿ ರಕ್ಷಕಾನ್ ॥ ೨೭ ॥

ಟೀ ॥ ಅಥ-ಅನಂತರದಲ್ಲಿ, ಗೋಪಾಃ-ಗೊಲ್ಲರು, ಗವಾಂ-ಗೋವುಗಳ, ಅವಸ್ಕಂದಾತ್-ಅಪಹಾರದದೆಸೆಯಿಂದ, ನೃಪಾಂಗಣೇ-ರಾಜಾಂಗಣದಲ್ಲಿ (ಅರಮನೆಯ ಹೊರಗಡೆಅಂಗಳದಲ್ಲಿ), ಆಕ್ರೋಶಾತ್-ವ್ಯಸನದಿಂದ ಹೇಳಿಕೊಂಡರು., ಪೀಡಾಯಾಂ (ಸತ್ಯಾಂ) ತು-ಉಪದ್ರವವು ಉಂಟಾಗುತ್ತಿರಲಾಗಿಯೇ (ಚೋರಬಾಧೆಯುಂಟಾಗುತ್ತಿರಲಾಗಿಯೇ), ಜೀವಾಃ-ಪ್ರಾಣಿಗಳು, ಭೃಶಂ-ಬಹಳವಾಗಿ, ರಕ್ಷಕಾತ್-ರಕ್ಷಿಸುವವರನ್ನು, ಅಪೇಕ್ಷಂತೇಹಿ-ಅಪೇಕ್ಷಿಸುತ್ತಾರೆಯಲ್ಲವೆ?.

ತಾತ್ಪರ್ಯ ॥ ಅಷ್ಟರಲ್ಲಿ ಕೆಲವರು ಗೊಲ್ಲರು ತಮ್ಮ ಗೋವುಗಳನ್ನು ಚೋರರು ಅಪಹರಿಸಿಕೊಂಡು ಹೋದರೆಂದು ಜೀಮೂತರಸ್ವಾಮಿಯುಮಾವನಾದ ದೃಢಮಿತ್ರ ಮಹಾರಾಜನ ಸಮೀಪದಲ್ಲಿ ಬಹಳ ದುಃಖಿತರಾಗಿ ದೂರುಹೇಳಿಕೊಂಡರು. (ಪ್ರಾಣಿಗಳಿಗೆ ಚೋರಾದ್ಯುಪದ್ರವಗಳುಂಟಾದಲ್ಲವೆ ರಕ್ಷಕನಾದ ಪ್ರಭುವನ್ನಪೇಕ್ಷಿಸುವರು?) ॥ ೨೩ ॥

ಶ್ಲೋಕ॥ ಸಾನುಕ್ರೋಶಂ ತದಾಕ್ರೋಶಂ
ಕ್ಷಮಾಧೀಶೋ ನ ಚ ಕ್ಷಮೇ ।
ಪಾತಾಪಾಯಾನ್ನಚೇತ್ಪಾಯಾ-
ತ್ಕುತೋ ಲೋಕವ್ಯವಸ್ಥಿತಿಃ ॥೨೪॥

ಟೀ ॥ ಸಾನುಕ್ರೋಶಂ-ದಯೆಯೊಡನೆ ಕೂಡಿಕೊಂಡಿರುವ, ತದಾಕ್ರೋಶಂ-ಆ ಗೊಲ್ಲರ ಆಕ್ರೋಶವಚನವನ್ನು, ಕ್ಷಮಾಧೀಶಃ-ದೃಢಮಿತ್ರಮಹಾರಾಜನು, ನಚ ಕ್ಷಮೇ-ಸಹಿಸಲಿಲ್ಲವು., ಪಾತಾ-ರಕ್ಷಕನಾದ ರಾಜನು, ಅಪಾಯಾತ್-ವಿಪತ್ತಿನ ದೆಸೆಯಿಂದ, ನಪಾಯಾಚ್ಚೇತ್-ರಕ್ಷಿಸದೇ ಹೋದಪಕ್ಷದಲ್ಲಿ, ಲೋಕವ್ಯವಸ್ಥಿತಿಃ-ಲೋಕಮರ್ಯಾದೆಯು, ಕುತಃ-ಯಾವಕಾರಣದ ದೆಸೆಯಿಂದುಂಟಾದೀತು?.

ತಾತ್ಪರ್ಯ ॥ ದೃಢಮಿತ್ರ ಮಹಾರಾಜನು ಅತ್ಯಂತ ದೀನರಾಗಿ ಹೇಳಿಕೊಳ್ಳುವ ಆ ಗೊಲ್ಲರ ಕೂಗನ್ನು ಕೇಳಿ ಸಹಿಸಲಿಲ್ಲವು. (ಆಕ್ಷಣವೆ ಶತ್ರುಗಳಂ ಜಯಿಸಿ ಗೋಧನವು ತುದುಕೊಟ್ಟು ಗೊಲ್ಲರದುಃಖವು ಸಮಾಧಾನವಾಡಬೇಕೆಂದು ಅಭಿಪ್ರಾಯಪಟ್ಟನು.) ರಕ್ಷಕನಾದ ರಾಜನು ಪ್ರಜೆಗಳಿಗೆ ಬಂದ ವಿಪತ್ತನ್ನು ಪರಿಹರಿಸಿ ರಕ್ಷಿಸದೇ ಉಪೇಕ್ಷಿಸಿದನೇ ಆದರೆ, ಲೋಕಮರ್ಯಾದೆಯು ಹೇಗೆ ಉಂಟಾದೀತು? ॥ ೨೪ ॥

ಶ್ಲೋಕ ॥ ಸ್ವಾಮೀ ಶ್ವಶುರರುದ್ಧೋಪಿ
ಗೋಮೋಚನಕೃತೇ ಯಯೌ ।
ಪರಿಭವೋ ನ ಸೋಢವ್ಯೋ
ಶಕ್ತೈಶ್ಶಕ್ತೈಸ್ತು ಕಿಂ ಪುನಃ ॥ ೨೯ ॥

ಟೀ ॥ ಸ್ವಾಮೀ-ಜೀವಂಧರಸ್ವಾಮಿಯು, ಶ್ವಶುರರುದ್ಧೋಪಿ-ಶ್ವಶುರ- ಮಾವನಿಂದ, ರುದ್ಧೋಪಿ-ತಡೆಯಲ್ಪಟ್ಟವನಾದಾಗ್ಯೂ, ಗೋಮೋಚನಕೃತೇ-ಚೋರರವಶದಿಂದ ಗೋಧನವಂ ಬಿಡಿಸಲೋಸುಗ, ಯಯೌ-ಹೊರಟುಹೋದನು., ಪರಿಭವಃ-ಅವಮಾನವು, ಅಶಕ್ತೈಃ-ಶಕ್ತಿಯಿಲ್ಲದವರಿಂದಲೂಕೂಡ, ನಸೋಢವ್ಯಃ-ಸಹಿಸಲಶಕ್ಯವು., ಶಕ್ತೈಸ್ತು-ಸಮರ್ಥರಿಂದಲೋ ಅಂದರೆ, ಕಿಂ ಪುನಃ - ಹೇಳತಕ್ಕದ್ದೇನು ?.

ತಾತ್ಪರ್ಯ ॥ ಜೀವಂಧರಸ್ವಾಮಿಯು ತನ್ನ ಮಾವನವರಾದ ದೃಢಮಿತ್ರ ಮಹಾರಾಜನಿಂದ ತಡೆಯಲ್ಪಟ್ಟವನಾದಾಗ್ಯೂಕೂಡ, ಗೋಧನವಂ ಬಿಡಿಸಿಕೊಂಡು ಬರಲೋಸುಗ ಹೊರಟು ಹೋದನು. ಅವಮಾನವು ಅಶಕ್ತರಿಂದಲೂಕೂಡ ಸಹಿಸಲಶಕ್ಯವಲ್ಲವು ? ಹೀಗಿರುವಲ್ಲಿ, ಸಮರ್ಥರು ಪರರಿಂದುಂಟಾದ ಅವಮಾನವಂ ಹೇಗೆ ಸಹಿಸಿಕೊಂಡು ಸುಮ್ಮನಿರುವರು ? ॥ ೨೯ ॥

ಶ್ಲೋಕ ॥ ದಸ್ಯವೋಪಿ ಗವಾಂ ತತ್ರ
ಮಿತ್ರಾಣ್ಯೇವಾಭವನ್ವಿಭೋಃ ।
ವಿಧೋಗವೇಷಿಭಿರ್ಭಾಗ್ಯೇ
ರತ್ನಂಚಾಪೀಹ ಲಭ್ಯತೇ ॥ ೩೦ ॥

ಟೀ ॥ ತತ್ರ-ಅಲ್ಲಿ, ಗವಾಂ-ಗೋವುಗಳ, ದಸ್ಯವೋಪಿ - ಚೋರರಾದವರೂಕೂಡ, ವಿಭೋಃ-ಪ್ರಭುವಾದ ಜೀವಂಧರಸ್ವಾಮಿಗೆ, ಮಿತ್ರಾಣ್ಯೇವ-ಸ್ನೇಹಿತರಾಗಿಯೇ, ಅಭವನ್-ಆದರು., ವಿಧೋಗವೇಷಿಭಿಃ-ವಿಧಃ-ಸೌದೆಯನ್ನು, ಗವೇಷಿಭಿಃ- ಹುಡುಕುವವರಿಂದ, ಇಹ- ಈಲೋಕದಲ್ಲಿ, ರತ್ನಂಚಾಪಿ- ರತ್ನವೂಕೂಡ, ಲಭ್ಯತೇ-ಹೊಂದಲ್ಪಡುತ್ತದೆ.

ತಾತ್ಪರ್ಯ ॥ ಅಲ್ಲಿ ಹೋಗಿ ನೋಡುತ್ತಿರಲಾಗಿ, ಆ ಗೋವುಗಳನ್ನು

ಅಪಹರಿಸಿದಚೋರರೂಕೂಡ ಜೀವಂಧರಸ್ವಾಮಿಗೆ ಮಿತ್ರರಾಗಿಯೇ ಇದ್ದರು. ( ತನ್ನ ಬಾಲ್ಯಪ್ರಭೃತಿ ಮಿತ್ರರಾದವರೇ ಜೀವಂಧರಸ್ವಾಮಿಯನ್ನು ದರ್ಶನಮಾಡಲೋಸುಗ ಈಗೋವುಗಳ ಅಪಹಾರರೂಪವಾದ ಉಪಾಯವಂ ಮಾಡಿದರೆಂಬಭಿಪ್ರಾಯವು. ) ಒಳ್ಳೇ ಅದೃಷ್ಟವು ಇರುತ್ತಿರಲಾಗಿ ಕಾಡಿನಲ್ಲಿ ಸೌದೆಯನ್ನು ಹುಡುಕುತಿರುವವನಿಗೆ ರತ್ನವೂಕೂಡ ದೊರಕುವುದಷ್ಟೆ ? ( ಹಾಗೆ ಜೀವಂಧರಸ್ವಾಮಿಯಂ ಹುಡುಕಲೋಸುಗಬಂದ ಜನೂರುಮಂದಿ ಬಾಲ್ಯಮಿತ್ರರಿಗೆ ರತ್ನದಂತೆ ಜೀವಂಧರಕುಮಾರನು ದೊರೆತನೆಂಬಭಿಪ್ರಾಯವು. ) ॥ ೩೦ ॥

ಶ್ಲೋಕ॥ ಸಮೋಭೂತ್ಸ್ವಾಮಿಮಿತ್ರೇಷು
　　ಸ್ನೇಹಶ್ಚಾನ್ಯೋನ್ಯವೀಕ್ಷಣಾತ್ ।
　　ಏಕಕೋಟಿಗತ ಸ್ನೇಹೋ
　　ಜಡಾನಾಂ ಖಲು ಚೇಷ್ಟಿತಮ್ ॥ ೩೧ ॥

ಟೀ॥ ಸ್ವಾಮಿಮಿತ್ರೇಷು–ಸ್ವಾಮಿ-ಜೀವಂಧರಸ್ವಾಮಿಯು, ಮಿತ್ರೇಷು-ಸ್ನೇಹಿತರಲ್ಲಿ, ಅನ್ಯೋನ್ಯವೀಕ್ಷಣಾತ್– ಅನ್ಯೋನ್ಯ- ಒಬ್ಬರಿಗೊಬ್ಬರ, ವೀಕ್ಷಣಾತ್-ನೋಡೋಣವರದೆಸೆಯಿಂದ, ಸ್ನೇಹಶ್ಚ-ಸ್ನೇಹವೂಕೂಡ, ಸಮ(ಸ್ಸಕ)-ಸಮಾನವಾಗಿ, ಅಭೂತ್-ಉಂಟಾಯಿತು., ಏಕಕೋಟಿಗತಸ್ನೇಹಃ- ಒಂದೇ ಸ್ಥಾನವಲ್ಲಿರುವ, (ಒಂದೇ ವಿಷಯದಲ್ಲಿರುವ ) ಪ್ರೀತಿಯು, ಜಡಾನಾಂ-ಮೂರ್ಖರ, ಚೇಷ್ಟಿತಂ ಖಲು-ಕೃತ್ಯವಲ್ಲವೆ?.

ತಾತ್ಪರ್ಯ ॥ ಪರಸ್ಪರವಾಗಿ ನೋಡೋಣದಿಂದ ಜೀವಂಧರಸ್ವಾಮಿಗೆ ಮಿತ್ರರೊಳೆಲ್ಲರಲ್ಲಿಯೂ ಒಂದೇ ಪ್ರಕಾರವಾದ ಪ್ರೀತಿಯು ಉಂಟಾದುದು. ಕೆಲವರಲ್ಲಿ ಪ್ರೀತಿಯೂ, ಕೆಲವರಲ್ಲಿ ಸ್ನೇಹವಿಲ್ಲದೆ ಇರೋಣವೂಕೂಡ ಮೂರ್ಖರಕೃತ್ಯವೇ ಹೊರತು ಪ್ರಾಜ್ಞರಿಗೆ ಯೋಗ್ಯವಲ್ಲವಷ್ಟೆ ? ॥೩೧॥

ಶ್ಲೋಕ॥ ಜಾವಹಾತ್ತರಿ ಚಮತ್ಕಾರೋ
　　ರಾಜ್ಞೋಭೂನ್ಮಿತ್ರವೀಕ್ಷಣಾತ್ ।

ಕೃತಿನೋಪಿ ನಗಣ್ಯಾ ಹಿ
ವೀತಸ್ಫೀತ ಪರಿಚ್ಛದಾಃ ॥೩೦॥

ಟೀ ॥ ಮಿತ್ರವೀಕ್ಷಣಾತ್–ಮಿತ್ರ-ಸ್ನೇಹಿತರ, ವೀಕ್ಷಣಾತ್- ನೋಡೋಣವ ರಿಸೆಯಿಂದ, ರಾಜ್ಞಃ-ದೊರೆಯಾದ ದೃಢಮಿತ್ರ ಮಹಾರಾಜನಿಗೆ, ಜಾಮಾತರಿ-ಅಳಿಯನಾದಜೀವಂಧರಸ್ವಾಮಿಯಲ್ಲಿ, ಚಮತ್ಕಾರಃ-ವೈಲಕ್ಷಣ್ಯಜ್ಞಾನವು, ಅಭೂತ್-ಉಂಟಾದುದು., ಕೃತಿನೋಪಿ-ಪುಣ್ಯಶಾಲಿಗಳಾದಾಗ್ಯೂ, (ಸಮರ್ಥರಾದಾಗ್ಯೂ), ವೀತಸ್ಫೀತಪರಿಚ್ಛದಾಃ– ವೀತ-ಹೋಗಿರುವ, ಸ್ಫೀತ- ಸಂಪೂರ್ಣವಾದ, ಪರಿಚ್ಛದಾಃ-ಪರಿಜನ ಪರಿಗ್ರಹಾದಿಗಳುಳ್ಳವರು, ನಗಣ್ಯಾಹಿ- ಗೌರವಯೋಗ್ಯ ರಾಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ದೃಢಮಿತ್ರಮಹಾರಾಜನಿಗೆ, ಜೀವಂಧರಸ್ವಾಮಿಯ ಸ್ನೇಹಿತರನ್ನುನೋಡಿ, ತನ್ನಳಿಯನು ಸಾಧಾರಣನಲ್ಲವು. ಅಷ್ಟುಮಂದಿ ಶೂರಮಿತ್ರರಿರುವಲ್ಲಿ ಇವನು ಮಹಾರಾಜಕುಮಾರನಾಗಿರಬಹುದೆಂದು ಅಳಿಯನಲ್ಲಿ ವಿಶೇಷಗೌರವಜ್ಞಾನಉಂಟಾದುದು. ಎಂತಾದಪುಣ್ಯಶಾಲಿಯಾಗಿ, ಎಷ್ಟು ಸಮರ್ಥನಾದಾಗ್ಯೂ ಪರಿಜನಗಳೂ, ತಕ್ಕ ಉಪಕರಣಗಳೂ, ಇವುಗಳಿಲ್ಲದಪಕ್ಷಕ್ಕೆ ಅವರಿಗೆ ಗಣ್ಯತೆಯು ಇಲ್ಲವಷ್ಟೆ? ಮನುಷ್ಯನ ಮಹಿಮೆಯು ಪರಿಜನ ಪರಿಗ್ರಹಾದಿಗಳಾದ ಹೊರಗಿನ ಆಡಂಬರದಿಂದ ವ್ಯಕ್ತವಾಗುವುದೇಹೊರತು ಸರ್ವಪರಿಗ್ರಹಗಳನ್ನೂ ಪರಿತ್ಯಜಿಸಿ ಏಕಾಕಿಯಾಗಿದ್ದಲ್ಲಿ ಅವನ ಅಂತರ್ಗತಮಹಿಮೆಯಂ ಈ ಮೂಢಲೋಕವು ತಿಳಿಯಲಾರದೆಂದಭಿಪ್ರಾಯವು. ॥೩೦॥

ಶ್ಲೋಕ ॥ ಸಮಿತಾಪರಜೋಹೃಷ್ಯ-
ದತಿಮಾತ್ರಮಸೌ ಕೃತೀ ।
ಏಕೀಚ್ಛಾನಾಮು ತುಚ್ಛಾನಾಂ
ನ ಹ್ಯನ್ಯತ್ಸಂಗಮಾತ್ಸುಖಮ್ ॥೩೧॥

ಟೀ ॥ ಕೃತೀ-ಪುಣ್ಯಶಾಲಿಯಾದ, ಅಸೌ-ಈ ಜೀವಂಧರಸ್ವಾಮಿಯು, ಸಮಿತಾಪರಜ(ಸ್ಸಕ್)-ಸ್ನೇಹಿತರೊಡನೆಯೂ, ತಮ್ಮನಾದ ನಂದಾಢ್ಯ ನೊಡನೆಯೂ ಕೂಡಿದಂಥಾವನಾಗಿ, ಅತಿಮಾತ್ರಂ-ಬಹಳವಾಗಿ, ಅಹೃಷ್ಯತ್-ಸಂತೋಷಿಸಿದನು.,

ಏಕೇಚ್ಛಾನಾಂ-ಒಂದೇ ಪ್ರಕಾರವಾದ ಅಭಿಪ್ರಾಯವುಳ್ಳ, ಅತುಚ್ಛಾನಾಂ- ಉತ್ತಮಪುರುಷರಿಗೆ, ಸಂಗಮಾತ್-ಪರಸ್ಪರವಾಗಿ ಸೇರಿರುವಿಕೆಗಿಂತಲೂ, ಅನ್ಯತ್- ಮತ್ತೊಂದು, ಸುಖಂ-ಸೌಖ್ಯವು, ನಾಸ್ತಿಹಿ-ಇಲ್ಲವಷ್ಟೆ ?.

ತಾತ್ಪರ್ಯ || ಮಹಾಪುಣ್ಯಶಾಲಿಯಾಗಿ ಸಮರ್ಥನಾದ ಈ ಜೀವಂಧರಸ್ವಾಮಿಯು ತನ್ನ ಪ್ರಿಯಮಿತ್ರರೊಡನೆಯೂ, ತಮ್ಮನೊಡನೆಯೂ ಕೂಡಿ ಬಹಳವಾಗಿ ಸಂತೋಷಿಸಿದನು. ಒಂದೇಪ್ರಕಾರ ಅಭಿಪ್ರಾಯವುಳ್ಳಮಹನೀಯರಾದವರಿಗೆ ಪರಸ್ಪರವಾಗಿ ಕೂಡಿರುವುದಕ್ಕಿಂತಲೂ ಮತ್ತೊಂದು ಸುಖಕರವಾದ ಕೆಲಸವುಂಟೆ? (ಸಮಸುಖದುಃಖವುಳ್ಳ ಪ್ರಿಯಮಿತ್ರರು ಪರಸ್ಪರವಾಗಿ ಒಂದೇ ಸ್ಥಲದಲ್ಲಿ ವಾಸಮಾಡುವುದಕ್ಕಿಂತಲೂ ಮತ್ತೆಯಾವುದನ್ನೂ ಸುಖವನ್ನಾಗಿ ಭಾವಿಸುವುದಿಲ್ಲವೆಂದಭಿಪ್ರಾಯವು.) ||೩೩||

ಶ್ಲೋಕ|| ಅಯಥಾಪುರಸಮ್ಮಾನಾ-
ತ್ಸಮಶೇತ ಸಖೀನಸೌ ।
ವಿಶೇತೇ ಹಿ ವಿಶೇಷಜ್ಞಾ-
ವಿಶೇಷಾಕಾರ ವೀಕ್ಷಣಾತ್ ।೩೪।

ಟೀ || ಅಸೌ- ಈ ಜೀವಂಧರಸ್ವಾಮಿಯು, ಅಯಥಾಪುರಸಮ್ಮಾನಾತ್– ಅಯಥಾಪುರ-ಪೂರ್ವದಂತೆಇಲ್ಲದೆ ವಿಶೇಷಬಹುಮಾನದಿಂದ, ಸಮ್ಮಾನಾತ್- ಸಮ್ಮಾನಮಾಡೋಣದರ ದೆಸೆಯಿಂದ, ಸಖೀನ್-ಸ್ನೇಹಿತರನ್ನುಕುರಿತು, ಸಮಶೇತ-ಸಂಶಯಪಟ್ಟನು , ವಿಶೇಷಜ್ಞಾಃ–ವಿಶೇಷ-ವಿಶೇಷವನ್ನು, ಜ್ಞಾಃ-ತಿಳಿದವನು, ವಿಶೇಷಾಕಾರವೀಕ್ಷಣಾತ್-ವಿಶೇಷ-ವಿಶೇಷವಾದ, ಆಕಾರ-ಇಂಗಿತದ, ವೀಕ್ಷಣಾತ್-ನೋಡುವುದರ ದೆಸೆಯಿಂದ, ವಿಶೇತೇಹಿ-ಸಂಶಯಪಡುತ್ತಾನಲ್ಲವೆ ?.

ತಾತ್ಪರ್ಯ || ಈ ಜೀವಂಧರಸ್ವಾಮಿಯು ಮಿತ್ರರನ್ನು ಕುರಿತು ಪೂರ್ವದಲ್ಲಿದ್ದಮಿತ್ರಭಾವಪ್ರಯುಕ್ತವಾದಸರಸನಡತೆಗಿಂತಲೂ ಬೇರೆಯಾಗಿ ಬಹುಮಾನಪೂರ್ವಕವಾಗಿರುವ ಸ್ನೇಹಿತರ ಸನ್ಮಾನವಂನೋಡಿ ಸಂದೇಹಪಟ್ಟನು. ನನ್ನನ್ನು ಇಷ್ಟು ಗೌರವದಿಂದ ಭಾವಿಸುವುದಕ್ಕೆ ಏನೋಕಾರಣವಿರಬಹುದೆಂದಾಲೋಚಿಸಿದನು. ) ವಿಶೇಷವನ್ನು ತಿಳಿದ

ವರು ವಿಶೇಷವಾದ ಇಂಗಿತವನ್ನು ನೋಡಿ ಸಂದೇಹಪಡುವುದು ಸಹಜ ವಷ್ಟೆ? ಮೂಢರಿಗೆ ಇಂಗಿತದಿಂದಭಾವನು ತಿಳಿಯಲಶಕ್ಯವೆಂದಭಿಪ್ರಾಯವು.) ॥೩೪॥

ಶ್ಲೋಕ ॥ ರಹಸ್ಯೇಥ ವಯಸ್ಯೇಷು
ತನ್ನಿದಾನಮಚೋದಯತ್ ।
ಏಕಕಂಠೇಷು ಜಾತಾ ಹಿ
ಬಂಧುತಾ ವ್ಯವತಿಷ್ಠತೇ ॥೩೫॥

ಟೀ ॥ ಅಥ-ಅನಂತರದಲ್ಲಿ, (ಸಃ-ಆಜೀವಂಧರಸ್ವಾಮಿಯು) ರಹಸ್ಯೇ-ಏಕಾಂತದಲ್ಲಿ, ವಯಸ್ಯೇಷು-ಸ್ನೇಹಿತರಲ್ಲಿ, ತನ್ನಿದಾನಂ-ಆ ಪ್ರಕಾರವಾದ ವಿಶೇಷ ಸನ್ಮಾನಕ್ಕೆ ಕಾರಣವನ್ನು, ಅಚೋದಯತ್-ಕೇಳಿದನು., ಏಕಕಂಠೇಷು-ಒಂದೇ ಕತ್ತುಳ್ಳವರಲ್ಲಿ, (ಶರೀರಮಾತ್ರಬೇರೆಯಾಗಿದ್ದಾಗ್ಯೂ ಒಂದೇ ಹೃದಯವುಳ್ಳ ಪರಮ ಮಿತ್ರರಲ್ಲಿ), ಜಾತಾ-ಉಂಟಾಗಿರುವ, ಬಂಧುತಾ-ಪ್ರೀತಿಯು, ವ್ಯವತಿಷ್ಠತೇಹಿ-ಒಂದೇಪ್ರಕಾರವಾಗಿದೆಯಲ್ಲವೆ?.

ತಾತ್ಪರ್ಯ॥ ಅನಂತರದಲ್ಲಿ ಜೀವಂಧರಸ್ವಾಮಿಯು ಏಕಾಂತದಲ್ಲಿ ಸ್ನೇಹಿತರನ್ನು ಕುರಿತು ಪೂರ್ವಕ್ರಮವಂ ಬಿಟ್ಟು, ಈ ಪ್ರಕಾರ ನನ್ನನ್ನು ಗೌರವದಿಂನೋಡುವದಕ್ಕೇನುಕಾರಣವೆಂದು ಅದರ ಮೂಲಕಾರಣವಂ ಪ್ರಶ್ನೆಮಾಡಿದನು. ಏಕಕಂಠವುಳ್ಳವರೆಂದರೆ (ಮನೋವಾಕ್ಕಾಯಗಳಲ್ಲಿ ಒಂದೇಪ್ರಕಾರ ನಡತೆಯುಳ್ಳ ಪ್ರಿಯಮಿತ್ರರಲ್ಲಿರುವ ಬಂಧುತ್ವವು (ಪ್ರೀತಿಯು) ಯಾವಾಗಲೂ ಏಕರೀತಿಯಾಗಿರುವುದೇ ಹೊರತು ವ್ಯತ್ಯಾಸವಾಗುವುದಿಲ್ಲವಷ್ಟೆ? ॥೩೫॥

ಶ್ಲೋಕ॥ ಮುಖ್ಯಂ ಸಖ್ಯಂಗತಸ್ತೇಷಾ-
ಮಾಚಖ್ಯೌ ಪಂಕಜಾನನಃ ।
ಸಜ್ಜನಾನಾಂ ಹಿ ಶೈಲೀಯಂ
ಸಕ್ರಮಾರಂಭಶಾಲಿತಾ ॥೩೬॥

ಟೀ ॥ ತೇಷಾಂ-ಆ ಸ್ನೇಹಿತರ ಮಧ್ಯದಲ್ಲಿ, ಮುಖ್ಯಂ - ಪ್ರಧಾನವಾದ, ಸಖ್ಯಂ-ಸ್ನೇಹವನ್ನು, ಗತಃ-ಹೊಂದಿರುವ,ಪಂಕಜಾನನಃ-ಪದ್ಮಾಸ್ಯನು, ಆಚಖ್ಯೌ

ಹೇಳಿದನು., ಸಕ್ರಮಾರಂಭಶಾಲಿತಾ-ಮೊದಲನೆಯವನಿಂದ ಕ್ರಮವಾಗಿ ಹೇಳು ವುದಕ್ಕು ಪಕ್ರಮಿಸೋಣವೆಂಬ, ಅಯಂ-ಈ ಕ್ರಮವು, ಸಜ್ಜನಾನಾಂ- ಸತ್ಪುರುಷ ರ, ಶೈಲೀಹಿ-ಸ್ವಭಾವವಲ್ಲವೆ?.

ತಾತ್ಪರ್ಯ ॥ ಆ ಸ್ನೇಹಿತರ ಮಧ್ಯದಲ್ಲಿ ಮುಖ್ಯಸ್ನೇಹಿತನಾಗಿರುವ ಪದ್ಮಾಸ್ಯನು ಸಮಸ್ತವನ್ನೂ ಹೇಳಿದನು. ಕ್ರಮದೊಡನೆ ಕೂಡಿಕೊಂಡಿರುವ ಪ್ರಾರಂಭದಿಂದ ಪ್ರಕಾಶಿಸುವಿಕೆಯು (ಬಂದು ಸಮೂಹದಲ್ಲಿ ಎಲ್ಲರೂ ಹೇಳಲಾರಂಭಿಸದುತೆಪ್ರಧಾನನಾದ ಒಬ್ಬನು ಆರಂಭಿಸಿಹೇಳುವಿಕೆಯು ಸತ್ಪುರುಷರ ಸ್ವಭಾವವಲ್ಲವೆ? ) ॥೩೬॥

ಶ್ಲೋಕ॥ ಸ್ವಾಮಿನ್ ಸ್ವಾಮಿವಿಯೋಗೇಪಿ
ಯುಕ್ತಾ ದಗ್ಧಾಸುಭಿರ್ವಯಮ್ |
ಅಸ್ತೋಕ ಭಾವಿ ಭಾಗ್ಯೇನ
ಹಸ್ತಗ್ರಾಹಂ ಗ್ರಹಾದಿವ ॥ ೩೭ ॥

ಟೀ ॥ ಹೇ ಸ್ವಾಮಿನ್-ಎಲೈ ಜೀವಂಧರಸ್ವಾಮಿಯೆ !, ಸ್ವಾಮಿ ವಿಯೋಗೇಪಿ-ಸ್ವಾಮಿ-ಪ್ರಭುವಾದ ತಮ್ಮ, ವಿಯೋಗೇಪಿ-ವಿರಹದಲ್ಲಿಯೂಕೂಡ, ದಗ್ಧಾಸುಭಿಃ-ಅತ್ಯಂತ ನೀಚವಾದ (ಕ್ರೂರವಾದ) ಪ್ರಾಣಗಳೊಡನೆ, ಯುಕ್ತಾಃ - ಕೂಡಿಕೊಂಡಿರುವ, ವಯಂ-ನಾವು, ಅಸ್ತೋಕಭಾವಿಭಾಗ್ಯೇನ-ಅಸ್ತೋಕ - ಅಧಿಕವಾದ, ಭಾವಿ-ಮುಂದೆ ಉಂಟಾಗತಕ್ಕುದಾದ, ಭಾಗ್ಯೇನ- ಅದೃಷ್ಟದಿಂದ, ಹಸ್ತಗ್ರಾಹಂಗ್ರಹಾದಿವ-ಕೈಹಿಡಿದುಎಳತರೋಣವರವೆಸೆಯಿಂದಲೋಪಾದಿಯಲ್ಲಿ.

ತಾತ್ಪರ್ಯ ॥ ಎಲೈ ಸ್ವಾಮಿಯೇ! ಪ್ರಭುವಾದ ತಮ್ಮವಿಯೋಗದೆಶೆಯಲ್ಲಿಯೂ ಕೂಡ ಹೋಗದೇ ಇದ್ದ ಈ ಅತಿಕಠಿನವಾದ ಪ್ರಾಣಗಳೊಡನೆ ಕೂಡಿದ್ದನಾವೂ ಕೂಡ ಉತ್ತರತ್ರ ತಮ್ಮನ್ನು ದರ್ಶನಮಾಡುವುದಕ್ಕೆ ಯೋಗ್ಯವಾದ ಮಹಾದೃಷ್ಟದಿಂದ ಕೈಹಿಡಿದು ಎಳೆದು ತಂದಂತೆ ಇಲ್ಲಿಗೆ ಬಂದು ಸೇರಿದೆವು ಎಂದು ಪದ್ಮಾಸ್ಯನು ಜೀವಂಧರಸ್ವಾಮಿಯನ್ನು ಕುರಿತು ಹೇಳಿದನು. ॥೩೭॥

ಶ್ಲೋಕ ॥ ಸೋಶ್ವಾಸಾಶ್ಚ ತತೋ ದೇವ್ಯಾ
ದತ್ತಹಸ್ತಾವಲಂಬನಾಃ |

ಪ್ರಾಸ್ಥಿಷ್ಮ ಹಿ ಧುರಂ ಪ್ರಾಪ್ತಾ
ವಯಮಶ್ವೀಯಪಣಿನಾಮ್ ॥ ೩೪ ॥

ಟೀ ॥ ಸಾಶ್ವಾಸಾಶ್ಚ-ಸಮಾಧಾನದೊಡನೆಕೂಡಿದವರಾಗಿಯೂ, ತತಃ- ಅನಂತರದಲ್ಲಿ, ದೇವ್ಯಾ-ಸ್ವಾಮಿಪತ್ನಿಯಾದ ಗಂಧರ್ವದತ್ತಾದೇವಿಯಿಂದ, ದತ್ತಹಸ್ತಾವಲಂಬನಾ-ದತ್ತ-ಕೊಡಲ್ಪಟ್ಟ, ಹಸ್ತ-ಕೈಯಿಯ, ಅವಲಂಬನಾಃ-ಆಶ್ರಯವುಳ್ಳವರಾಗಿಯೂ ಇರುವ, ವಯಂ-ನಾವು, ಅಶ್ವೀಯಪಾಣಿನಾಂ-ಕುದುರೆಯನ್ನು ಮಾರುವವರ್ತಕರ, ಧುರಂ-ರೀತಿಯನ್ನು (ವೇಷವನ್ನು), ಪ್ರಾಪ್ತಾ(ಸ್ಸಂತಃ)- ಹೊಂದಿದವರಾಗಿ, ಪ್ರಾಸ್ಥಿಷ್ಮಹಿ-ಹೊರಟೆವು.

ತಾತ್ಪರ್ಯ ॥ ಪದ್ಮಾಸ್ಯನು ಹೇಳುತ್ತಾನೆ;-ಅನಂತರದಲ್ಲಿ, ಗಂಧರ್ವದತ್ತಾದೇವಿಯಿಂದ ಅಭಯಪ್ರದಾನಮಾಡಲ್ಪಟ್ಟನಾವು ಸಮಾಧಾನವನ್ನು ಹೊಂದಿದ ಮನಸ್ಸುಳ್ಳವರಾಗಿ ಕುದುರೆಯ ವ್ಯಾಪಾರಿಗಳ ವೇಷವಂ ಧರಿಸಿ ತಮ್ಮದರ್ಶನಕ್ಕೋಸುಗ ಹೊರಟೆವು. ॥೩೪॥

ಶ್ಲೋಕ॥ ಅತಿಲಂಘ್ಯ ಮಹಾಧ್ವಾನ-
ಮಧ್ವಶ್ರಮವಿಹಾನಯೇ ।
ದಂಡಕಾರಣ್ಯವಿಖ್ಯಾತಂ
ತಾಪಸಾಶ್ರಮ(ಯ)ಮಾಶ್ರಿತಾಃ ॥ ೩೫ ॥

ಟೀ ॥ ಮಹಾಧ್ವಾನಂ-ಬಹುದೂರಮಾರ್ಗವನ್ನು, ಅತಿಲಂಘ್ಯ-ಅತಿಕ್ರಮಿಸಿ, ಅಧ್ವಶ್ರಮವಿಹಾನಯೇ-ಅಧ್ವ- ಮಾರ್ಗದಲ್ಲಿ ಪ್ರಯಾಣದಿಂದುಂಟಾದ, ಶ್ರಮ-ಶ್ರಮದ, ವಿಹಾನಯೇ-ಪರಿಹಾರಕ್ಕೋಸುಗ, ದಂಡಕಾರಣ್ಯವಿಖ್ಯಾತಂ-ದಂಡಕಾರಣ್ಯ-ದಂಡಕಾರಣ್ಯವೆಂದು, ವಿಖ್ಯಾತಂ-ಪ್ರಸಿದ್ಧವಾದ, ತಾಪಸಾಶ್ರಮಂ- ಮುನಿಗಳ ಆಶ್ರಮವನ್ನು, (ತಾಪಸಾಶ್ರಯಂ-ಮುನಿಗಳ ಸ್ಥಾನವನ್ನು), ಆಶ್ರಿತಾಃ ಹೊಂದಿದೆವು.

ತಾತ್ಪರ್ಯ ॥ ನಾವು ಬಹುದೂರ ಮಾರ್ಗವನ್ನತಿಕ್ರಮಿಸಿ ಮಾರ್ಗದೊಳುಂಟಾದ ಶ್ರಮಪರಿಹಾರಕ್ಕೋಸುಗ ದಂಡಕಾರಣ್ಯವೆಂದು ಪ್ರಖ್ಯಾತ ಪ್ರದೇಶದಲ್ಲಿರುವ ಒಂದು ತಪೋವನವನ್ನು ಹೊಂದಿದೆವು. ಎಂದು ಪದ್ಮಾಸ್ಯನು ಹೇಳುತ್ತಾನೆ. ॥೩೫॥

ಶ್ಲೋಕ ॥ ದರ್ಶಂದರ್ಶಂ ತತೋ ದೃಶ್ಯಂ
ವಿಹರಂತೋಽತ್ರ ವಿಶ್ವತಃ ।
ಅಪಶ್ಯಾಮ ಕ್ವಚಿತ್ಕಾಂಚಿತ್
ಪುಣ್ಯತಃ ಪುಣ್ಯಮಾತರಮ್ ॥ ೪೦ ॥

ಟೀ ॥ ತತಃ-ಅನಂತರದಲ್ಲಿ, ದೃಶ್ಯಂ-ನೋಡುವುದಕ್ಕೆ ಯೋಗ್ಯವಾದ ವಸ್ತುವನ್ನು, ದರ್ಶಂದರ್ಶಂ-ನೋಡಿನೋಡಿ, ಅತ್ರ-ಈ ದಂಡಕಾರಣ್ಯದಲ್ಲಿ, ವಿಶ್ವತಃ-ನಾಲಕುಕಡೆಯೂ, ವಿಹರಂತಃ-ಸಂಚರಿಸುತ್ತಲಿರುವ, ವಯಂ-ನಾವು, ಪುಣ್ಯತಃ-ಸುಕೃತಪರಿಪಾಕದಿಂದ, ಕ್ವಚಿತ್-ಒಂದಾನೊಂದುಸ್ಥಾನದಲ್ಲಿ, ಕಾಂಚಿತ್- ಒಬ್ಬಾಳೊಬ್ಬ, ಪುಣ್ಯಮಾತರಂ-ಪುಣ್ಯಪುರುಷನಿಗೆ ತಾಯಿಯಾದ ತಪಸ್ವಿನಿಯನ್ನು ( ಪುಣ್ಯಕ್ಕೇನೆ ತಾಯಿಯಾದವಳನ್ನು ಅಥವಾ ಪುಣ್ಯಾತ್ಮಳಾದ ತಾಯಿಯನ್ನು), ಅಪಶ್ಯಾಮ-ನೋಡಿದೆವು.

ತಾತ್ಪರ್ಯ ॥ ಅನಂತರದಲ್ಲಿ, ನೋಡುವುದಕ್ಕೆಯೋಗ್ಯವಾದ ವಸ್ತುವನ್ನು ನೋಡಿನೋಡಿ ಆ ದಂಡಕಾರಣ್ಯದಲ್ಲಿ ಸರ್ವತ್ರಸಂಚರಿಸುತ್ತಿರುವ ನಾವು ಒಂದಾನೊಂದು ಸ್ಥಳದೊಳು ಪ್ರತಕೀಲೆಯಾಗಿರುತ್ತಿರುವ ಆದುದರಿಂದಲೇ ಪುಣ್ಯಕ್ಕೆ ತಾಯಿಯೋಪಾದಿಯಲ್ಲಿಯೂ, ಅಥವಾ ಪುಣ್ಯವೇ ತಾಯಿಯಾಗಿ ಹುಟ್ಟಿದೆಯೋ ಎಂಬಂತೆಯೂ ಇರುವ ಒಬ್ಬ ಪುಣ್ಯಪುರುಷನ ತಾಯಿಯನ್ನು ದರ್ಶನಮಾಡಿದೆವು. ಎಂದು ಪದ್ಮಾಸ್ಯನು ಹೇಳುತ್ತಾನೆ. ॥೪೦॥

ಶ್ಲೋಕ॥ ತನ್ಮಾತ್ರಾ ದೃಷ್ಟಮಾತ್ರೇಣ
ಕುತ್ರತ್ಯಾ ಇತಿ ಚೋದಿತಾಃ ।
ವಯಮಪ್ಯುತ್ತರಂ ವಕ್ತು-
ಮುಪಕ್ರಮ್ಯ ಯಥಾಕ್ರಮಮ್ ॥ ೪೧ ॥

ಟೀ ॥ ತನ್ಮಾತ್ರಾ-ಆ ತಾಯಿಯಿಂದ, ದೃಷ್ಟಮಾತ್ರೇಣ-ನೋಡಲ್ಪಟ್ಟಮಾತ್ರದಿಂದಲೇ, ಕುತ್ರತ್ಯಾಃ-ನೀವು ಎಲ್ಲಿಯವರು?, ಇತಿ-ಹೀಗೆಂದು, ಚೋದಿತಾಃ ಪ್ರಶ್ನೆಮಾಡಲ್ಪಡಲು, ವಯಮಪಿ-ನಾವೂಕೂಡ, ಉತ್ತರಂ-ಪ್ರತ್ಯುತ್ತರವನ್ನು, ವ

ಕ್ತುಂ-ಹೇಳಲೋಸುಗ, ಯಥಾಕ್ರಮಂ-ಕ್ರಮಪ್ರಕಾರವಾಗಿ, ಉಪಕ್ರಮ್ಯ-ಪ್ರಾರಂಭಿಸಿ;

ತಾತ್ಪರ್ಯ ॥ ಪದ್ಮಾಸ್ಯನು ಹೇಳುತ್ತಾನೆ;—ಆ ತಾಯಿಯಿಂದ ನೋಡಿದಮಾತ್ರಕ್ಕೆ ನೀವು ಎಲ್ಲಿಯವರು? ಎಂದು ಪ್ರಶ್ನೆಮಾಡಲ್ಪಡಲು ನಾವೂ ಕೂಡ ಕ್ರಮಪ್ರಕಾರವಾಗಿ ಉತ್ತರವಂ ಹೇಳಲೋಸುಗ ಪ್ರಾರಂಭಿಸಿದೆವು. ಏನೆಂದರೆ.—॥೪೧॥

ಶ್ಲೋಕ ॥ ಅಸ್ತಿ ರಾಜಪುರೇ ಕಶ್ಚಿ-
ದ್ವೈದುಷಾಣಾಮಪಶ್ಚಿಮಃ ।
ವಿಶಾಂ ಚ ಜೀವಕಾಖ್ಯೋಯ-
ಮೇತಜ್ಜೀವಾತುಕಾ ವಯಮ್ ॥ ೪೨ ॥

ಟೀ॥ ರಾಜಪುರೇ-ರಾಜಪುರೀ ಪಟ್ಟಣದಲ್ಲಿ, ವೈದುಷಾಣಾಂ-ವಿದ್ವಾಂಸರಿಗೂ ವಿಶಾಂಚ-ವೈಶ್ಯರಿಗೂಕೂಡ,ಅಪಶ್ಚಿಮಃ-ಮೊದಲನೆಯವನಾದ(ಅಗ್ರಗಣ್ಯನಾದ) ಜೀವಕಾಖ್ಯಃ-ಜೀವಕಸ್ವಾಮಿಯೆಂಬ ನಾಮಧೇಯವುಳ್ಳ,ಕಶ್ಚಿತ್-ಒಬ್ಬಾನೊಬ್ಬ ಅಯಂ-ಈ ಪ್ರಸಿದ್ಧ ಪುರುಷನು, ಅಸ್ತಿ-ಇರುತಲಿದಾನೆ, ವಯಂ-ನಾವು, ಏತಜ್ಜೀವಾತುಕಾಃ-ಈ ಜೀವಕಸ್ವಾಮಿಯನ್ನೇ!ಜೀವನೌಷಧವನ್ನಾಗಿಉಳ್ಳವರು(ಇವನಿಂದಲೇ ನಾವುಜೀವಿಸಿರುವೆವೆಂದರ್ಥವು).

ತಾತ್ಪರ್ಯ ॥ ಪದ್ಮಾಸ್ಯನುಹೇಳುತ್ತಾನೆ.— ರಾಜಪುರೀಪಟ್ಟಣದಲ್ಲಿ ವಿದ್ವಾಂಸರಿಗೆ ಅಗ್ರಗಣ್ಯನಾಗಿಯೂ, ವೈಶ್ಯಶ್ರೇಷ್ಠನಾಗಿಯೂ, ಜೀವಕನೆಂದು ನಾಮಧೇಯವುಳ್ಳವನಾಗಿಯೂ, ಇರುವ ಒಬ್ಬಾನೊಬ್ಬ ಈ ಪುರುಷನು ಇರುತ್ತಲಿದ್ದಾನೆ. ನಾವೆಲ್ಲರೂ ಆ ಮಹಾತ್ಮನಿಂದ ಜೀವಿಸುತ್ತೀವೆ. (ಇವನು ನಮಗೆ ಪ್ರಾಣಸ್ಥಾನೀಯನೆಂದರ್ಥವು.) ॥೪೨॥

ಶ್ಲೋಕ ॥ ಕಾಷ್ಠಾಂಗಾರರಾಜ್ಯೇಯಃ ಕೋಪಿ
ಕೋಪಾದೇನಮನೇನಸಮ್ ।
ಹನ್ತುಂ ಕಿಲೇತ್ಯವೋಚಾನು
ಮೂರ್ಛಿತಾ ಸಾ ಚ ಶೇತುಷೀ ॥೪೩॥

ಟೀ॥ ಕಾಷ್ಠಾಂಗಾರಾಖ್ಯಃ-ಕಾಷ್ಠಾಂಗಾರನೆಂಬ ನಾಮಧೇಯವುಳ್ಳ, ಕೋಪಿ-ಒಬ್ಬನು, ಅನೇನಸಂ-ನಿರಪರಾಧಿಯಾದ, ಏನಂ-ಇವನನ್ನು, ಕೋಪಾತ್-ಕೋಪದದೆಸೆಯಿಂದ, ಹನ್ತುಂ-ಕೊಲ್ಲಲೋಸುಗ, ಇತಿ-ಹೀಗೆಂದು, ಅಶ್ರೌಷ್ಮ ಕಿಲ-ಕೇಳಿದೆವಲ್ಲವೆ?, ಸಾಪಿ-ಆ ತಾಯಿಯುಕೂಡ, ಮೂರ್ಛಿತಾ(ಸತೀ)- ಮೂರ್ಛಿತಳಾಗಿ, ಪೇತುಷೀ-ಬಿದ್ದಳು.

ತಾತ್ಪರ್ಯ ॥ ಪದ್ಮಾಸ್ಯನು ಹೇಳುತ್ತಾನೆ.-ಕಾಷ್ಠಾಂಗಾರನೆಂದು ನಾಮಧೇಯವುಳ್ಳ ಒಬ್ಬನು ನಿರಪರಾಧಿಯಾದ ಈ ಜೀವಕಸ್ವಾಮಿಯನ್ನು ಕೋಪದದೆಸೆಯಿಂದ ಕೊಲ್ಲಲೋಸುಗ, ಎಂದು ಹೇಳಿ, ಮೇಲೆ ಹೇಳುವಷ್ಟರಲ್ಲಿಯೇ ಆ ತಾಯಿಯೂ ಮೂರ್ಛಾಕ್ರಾಂತಳಾಗಿ ಬಿದ್ದಳು. (ಜೀವಕಸ್ವಾಮಿಯ ಶ್ರೇಯಃಪ್ರಾರ್ಥನೆಯನ್ನು ಉದ್ದೇಶಿಸಿ ಜೀವಿಸಿರುವಳಾದುದರಿಂದ ಅವನ ವಿಷಯದಲ್ಲಿ ಅಮಂಗಳವಾಕ್ಯವನ್ನು ಕೇಳಿದ ಮಾತ್ರಕ್ಕೇನೆ ಮೂರ್ಛೆಯಂ ಹೊಂದಿದ ದರಿಂದ ಆ ತಾಯಿಯ ಪುತ್ರವಾತ್ಸಲ್ಯವು ಪ್ರಕಾಶಪಡಿಸಲ್ಪಟ್ಟಿತೆಂದಭಿಪ್ರಾಯವು. ( ಕೋಪಿ ) ಎಂಬ ಸರ್ವನಾಮಶಬ್ದದಿಂದ ಅಜ್ಞಾತಕುಲಗೋತ್ರನಾದ ಆ ಪಾಪಿಯ ನಾಮೋಚ್ಚಾರಣವೂ ಕೂಡ ಪಾಪಾವಹವೆಂದು ಭಾವವು, ) ॥೪೩॥

ಶ್ಲೋಕ॥ ಹನ್ತ ಹನ್ತ ಹತೋ ನಾಯ-
ಮಮ್ಬೇತ್ಯಭಿಹಿತಾ ಮಯಾ ।
ಪಿಹಿತಾಸು ಪ್ರಯಾಣಾಸೂ
ಪ್ರಾಲಪೀಲ್ಲಬ್ಧಚೇತನಾ ॥ ೪೪ ॥

ಟೀ॥ ಹನ್ತಹನ್ತ-ಕಷ್ಟಕಷ್ಟ!!, ಹೇ ಅಂಬ-ಎಲೌ ತಾಯಿಯೇ!, ಅಯಂ, ಈ ಜೀವಕಸ್ವಾಮಿಯು, ನಹತಃ-ಕೊಲ್ಲಲ್ಪಡಲಿಲ್ಲವು., ಇತಿ-ಈ ಪ್ರಕಾರವಾಗಿ, ಮಯಾ-ನನ್ನಿಂದ, ಅಭಿಹಿತಾ-ಹೇಳಲ್ಪಟ್ಟ, ಸಾ-ಆತಾಯಿಯು, ಲಬ್ಧಚೇತನಾ(ಸತೀ). ಲಬ್ಧ-ಪಡೆಯಲ್ಪಟ್ಟ, ಚೇತನಾ(ಸತೀ)-ಜ್ಞಾನವುಳ್ಳವಳಾಗಿಯೂ, ಪಿಹಿತಾಸುಪ್ರಯಾಣಾ(ಸತೀ)-ಪಿಹಿತ-ತಡೆಯಲ್ಪಟ್ಟ, ಅಸು-ಪ್ರಾಣಗಳ, ಪ್ರಯಾಣಾ(ಸತೀ)-ಪ್ರಯಾಣವುಳ್ಳವಳಾಗಿಯೂ, ಪ್ರಾಲಪೀತ್-ಪ್ರಲಾಪವಂ ಮಾಡಿದಳು (ಅತ್ತಳು).

ತಾತ್ಪರ್ಯ ॥ ಕಷ್ಟ ಕಷ್ಟ!! ಈ ಜೀವಂಧರಸ್ವಾಮಿಯು ಕೊಲ್ಲಲ್ಪಡಲಿಲ್ಲವು. ಎಂದು ತ್ವರೆಯಾಗಿ ನನ್ನಿಂದ ಹೇಳಲ್ಪಡಲು, ಆ ತಾ

ಯಿಯು ಜ್ಞಾನವನ್ನುಹೊಂದಿ ಹೋಗುವಂಥಾ ಪ್ರಾಣಗಳನ್ನು ತಡೆದುಕೊಂಡವಳಾಗಿ ಬಹುವಿಧವಾಗಿ ಹಂಬಲಿಸಿ ರೋದನವಂ ಮಾಡಿದಳು॥

ಶ್ಲೋಕ॥ ಅಂಭೋದಾಳೀವದಂಭೋಳಿ-
ಮಮೃತಂ ಚ ಮುಮೋಚ ಸಾ ।
ದೇವೀಸಮಂ ಪ್ರಲಾಪೇನ
ದೇವೋದಂತಮಿದಂ ತಯಾ ॥೪೫॥

ಟೀ॥ **ಸಾ** ದೇವೀ-ಆ ತಾಯಿಯು, ಅಂಭೋದಾಳೀ-ಮೇಘಪಂಕ್ತಿಯು, ದಂಭೋಳಿಂ-ಸಿಡಿಲನ್ನು, ಅಮೃತಂಚೇವ- ನೀರನ್ನೂಕೂಡ ಹೇಗೆ ವರ್ಷಿಸುವುದೋ, ತಥಾ-ಹಾಗೆ, ಪ್ರಲಾಪೇನ ಸಮಂ- ಬಹಳವಾಗಿ ಹಂಬಲಿಸಿ ಅಳೋಣದರೊಡನೆ ಕೂಡ, ದೇವೋದನ್ತಂ-ದೇವ-ಸ್ವಾಮಿಯಾದತಮ್ಮ, ಉದನ್ತಂ-ವೃತ್ತಾಂತವನ್ನು-ಇದಂ ತಯಾ-ಇದು ಹೀಗೆಂದುಸ್ಪಷ್ಟವಾಗಿ (ಯಥಾಸ್ಥಿತವಾಗಿ) ಹೇಳೋಣದರಿಂದ, ಮುಮೋಚ-ಹೊರಪಡಿಸಿದಳು.

ತಾತ್ಪರ್ಯ ॥ ಪದ್ಮಾಸ್ಯನು ಹೇಳುತ್ತಾನೆ.—ಮೇಘಗಳ ಪರಂಪರೆಯು ಸಿಡಿಲನ್ನೂ, ನಂತರ ಮಳೆಯನ್ನೂ ಸುರಿಸುವಂತೆ, ಆ ದೇವಿಯು ಸಿಡಿಲಿನೋಪಾದಿಯಲ್ಲಿ ಅತ್ಯಂತ ಅಧೈರ್ಯವನ್ನುಂಟುಮಾಡುವ ಹಾಗೆ ಮೊದಲು ಅತ್ತು ಇದು ಹೀಗೆಂದು ಸ್ವಾಮಿಯಾದ ತಮ್ಮ ಉತ್ಪತ್ತ್ಯಾದಿವೃತ್ತಾಂತಗಳನ್ನು ಯಥಾಕ್ರಮವಾಗಿ ಹೇಳಿದಳು. (ಆ ಮಹಾತಾಯಿಯಿಂದ ಹೇಳಲ್ಪಟ್ಟ ತಮ್ಮ ವೃತ್ತಾಂತವು ಅನಾವೃಷ್ಟಿಯಿಂದ ಬಳಲುತ್ತಿರುವಪ್ರಾಣಿಗಳಿಗೆ ಮಳೆಯು ಯಾವಪ್ರಕಾರ ಆನಂದಕರವಾಗಿ ಪ್ರಾಣಧಾರಕವಾಗಿದೆಯೋ ಅದರಂತೆ, ನಮ್ಮ ಪ್ರಾಣಗಳಂ ರಕ್ಷಿಸುವಂಥಾದ್ದಾಗಿತ್ತೆಂದಭಿಪ್ರಾಯವು. ) ॥೪೫॥

ಶ್ಲೋಕ॥ ತನ್ಮುಖಾತ್ತಾದಿವೋತ್ಪನ್ನಾಂ
ರತ್ನವೃಷ್ಟಿಂ ತಪೋನ್ನತಿಮಃ[6]।
ಉಪಲಭ್ಯ ಪರಾಂ ಲಬ್ಧ-
ಮನುನ್ಯಾಸಮಿವ ತನ್ಮಹೀಪಃ[5] ॥೪೬॥

ಟೀ ॥ ತನ್ಮುಖಾತ್–ತತ್-ಆ ತಾಯಿಯ, ಮುಖಾತ್-ಮುಖವಚನವದೆಸೆಯಿಂದ, ಖಾತ್-ಆಕಾಶವದೆಸೆಯಿಂದ, ಉತ್ಪನ್ನಾಂ-ಉಂಟಾದ, ರತ್ನವೃಷ್ಟಿನಿವಸ್ಥಿತಾಂ-ರತ್ನದಮಳೆಯೋಪಾದಿಯಲ್ಲಿರುವ, ತವ-ನಿನ್ನಯ, ಉನ್ನತಿಂ- ರಾಜಪುತ್ರನಾಗಿರೋಣವರಿಂದುಂಟಾದ ಉತ್ಕರ್ಷವನ್ನು, ಉಪಲಭ್ಯ-ತಿಳಿದು, ವಯಂ-ನಾವು, ತನ್ಮಹೀಂ-ಆ ತಮ್ಮ ಪಿತೃಸಂಬಂಧವಾದ ಭೂಮಿಯನ್ನು, ಲಬ್ಧಾಂ(ಸತೀಂ)-ಪಡೆಯಲ್ಪಟ್ಟದ್ದನ್ನಾಗಿ, ಅವಮನ್ಯಾಮಹೇ-ತಿಳಿಯುತ್ತೇವೆ.

ತಾತ್ಪರ್ಯ ॥ ಆಕಾಶದಿಂದುಂಟಾದ ರತ್ನವೃಷ್ಟಿಯಂತೆ ತಮ್ಮ ತಾಯಿಯ ಮುಖದಿಂದ ಹೇಳಲ್ಪಟ್ಟ ತಮ್ಮ ಉತ್ಕರ್ಷವನ್ನು (ರಾಜಪುರೀ ಪಟ್ಟಣಕ್ಕೆ ಪ್ರಭುವಾಗಿದ್ದ ಸತ್ಯಂಧರಮಹಾರಾಜನ ಪ್ರಿಯಪುತ್ರನೆಂಬ ವೃತ್ತಾಂತವನ್ನು) ತಿಳಿದು, ಆ ತಮ್ಮ ತಂದೆಯಿಂದ ಸಂಪಾದಿಸಲ್ಪಟ್ಟ ಆ ರಾಜಪುರೀ ಪ್ರಭುತ್ವವನ್ನು ತಮ್ಮಿಂದ ಪಡೆಯಲ್ಪಟ್ಟದ್ದನ್ನಾಗಿಯೇ ತಿಳಿದೆವು. (ತಮ್ಮ ಮಹಿಮೆಯಂ ತಿಳಿದಿರುವ ನಾವು ಅನಾಯಾಸದಿಂದ ಶೀಘ್ರವಾಗಿಯೇ ಆ ರಾಜಲಕ್ಷ್ಮಿಯು ತಮ್ಮನ್ನು ಹೊಂದುವಳೆಂದು ತಿಳಿದೆವೆಂಬಭಿಪ್ರಾಯವು.) ॥೪೬॥

ಶ್ಲೋಕ ॥ ದೇವವೈಭವ ಸಂಕೀರ್ತ್ಯ
ತತೋ ದೇವೀಂ ಪುನಃಪುನಃ ।
ಆಶ್ವಾಸ್ಯಾಪೃಚ್ಛ್ಯ ತದ್ದೇಶಾ-
ದಿಮಂ ದೇಶಂ ಗತಾ ಇತಿ ॥೪೭॥

ಟೀ ॥ ವಯಂ-ನಾವು, ದೇವವೈಭವಸಂಕೀರ್ತ್ಯ– ದೇವ-ಸ್ವಾಮಿಯಾದ ತಮ್ಮ, ವೈಭವ-ಮಾಹಾತ್ಮ್ಯವ, ಸಂಕೀರ್ತ್ಯ-ಹೇಳೋಣವರಿಂದ, ತತಃ-ಅನಂತರದಲ್ಲಿ, ದೇವೀಂ-ಆ ತಮ್ಮ ತಾಯಿಯಾದ ಮಹಾದೇವಿಯನ್ನು, ಪುನಃಪುನಃ- ಬಾರಿಬಾರಿಗೂ, ಆಶ್ವಾಸ್ಯ-ಸಮಾಧಾನಪಡಿಸಿ, ಆಪೃಚ್ಛ್ಯ- ಕೇಳಿಕೊಂಡು, ತದ್ದೇಶಾತ್-ಆ ದಂಡಕಾರಣ್ಯದ ಆಶ್ರಮದದೆಸೆಯಿಂದ, ಇಮಂ ದೇಶಂ-ಈ ಪ್ರದೇಶವನ್ನು, ಗತಾಃ-ಹೊಂದಿದೆವು., ಇತಿ-ಈ ಪ್ರಕಾರ, ಪಂಕಜಾನನಃ-ಪದ್ಮಾಸ್ಯನು, ಆಹ-ಹೇಳಿದನು.

ತಾತ್ಪರ್ಯ॥ ನಾವೂ ಕೂಡ ಸ್ವಾಮಿಯಾದ ತಮ್ಮ ಮಹಿಮೆಯನ್ನು ಹೇಳಿ, ಆ ತಾಯಿಯನ್ನು ಬಾರಿಬಾರಿಗೂ ಸಮಾಧಾನಪಡಿಸಿ, ಅನಂತರ

ದಲ್ಲಿ ಆ ದಂಡಕಾರಣ್ಯದ ಆಶ್ರಮದದೆಶೆಯಿಂದ ಹೊರಟು ಈ ಸ್ಥಾನವ
ನ್ನು (ತಮ್ಮ ಸಾನ್ನಿಧ್ಯವನ್ನು) ಹೊಂದಿದೆವೆಂಬದಾಗಿ ಪದ್ಮಾಸ್ಯನು ಜೀ
ವಂಧರಸ್ವಾಮಿಗೆ ಸಮಗ್ರವಾಗಿ ತಾಯಿಯ ವೃತ್ತಾಂತವನ್ನು ಹೇಳಿ
ಮೊದಲಿಗಿಂತಲೂ ಈಗ ನಾವು ತಮ್ಮಲ್ಲಿ ವಿಶೇಷ ಬಹುಮಾನವನ್ನಿಡುವು
ದಕ್ಕೆ ಕಾರಣವಾದದ್ದು ತಾವು ರಾಜಪುತ್ರನಾಗಿರೋಣವೇಯೇ. ಎಂ
ಬದಾಗಿ ಇದುವರೆಗೂ ನಡೆದ ಸಮಸ್ತ ಸಮಾಚಾರವಂ ತಿಳಿಸುವ ನೆವ
ದಿಂದ ಸೂಚಿಸಿದನು. ॥೪೩॥

ಶ್ಲೋಕ॥ ಮಾತುರ್ಜೀವನ್ಮೃತಿಜ್ಞಾನಾ-
ತ್ತತ್ವಜ್ಞಸ್ಸೋಽಪ್ಯಖಿದ್ಯತ ।
ಜೀವಾನಾಂ ಜನನೀ ಸ್ನೇಹೋ
ನ ಹ್ಯನ್ಯೈಃ ಪ್ರತಿಹನ್ಯತೇ ॥೪೪॥

ಟೀ ॥ ತತ್ತ್ವಜ್ಞಃ-ತತ್ತ್ವಜ್ಞಾನಿಯಾದ, ಸೋಪಿ- ಆ ಜೀವಂಧರಸ್ವಾಮಿ
ಯೂಕೂಡ, ಮಾತುಃ-ತಾಯಿಯ, ಜೀವನ್ಮೃತಿಜ್ಞಾನಾತ್-ಜೀವಿಸಿದ್ದಾಗ್ಯೂ ಮ
ರಣಸಮಾನಮದರ್ಶೆಯನ್ನು ಹೊಂದಿರುತ್ತಾಳೆಂಬ ತಿಳುವಳಿಕೆಯುದೆಸೆಯಿಂದ, ಅ
ಖಿದ್ಯತ-ದುಃಖಿಸಿದನು., ಜೀವಾನಾಂ-ಪ್ರಾಣಿಗಳಿಗೆ, ಜನನೀಸ್ನೇಹಃ-ಜನನೀ- ತಾ
ಯಿಯಲ್ಲಿರುವ, ಸ್ನೇಹಃ-ಶರೀರಸಂಬಂಧಪ್ರಯುಕ್ತವಾದ ಪ್ರೀತಿಯು, ಅನ್ಯೈಃ-
ಬೇರೆ ಯಾವುದರಿಂದಲೂ, ನಪ್ರತಿಹನ್ಯತೇಹಿ-ಹೋಗಲಾಡಿಸಲ್ಪಡುವುದಿಲ್ಲವಷ್ಟೆ?

ತಾತ್ಪರ್ಯ ॥ ತತ್ತ್ವಜ್ಞಾನಿಯಾದ (ಧರ್ಮಾಧರ್ಮಸುಖದುಃಖಾದಿಗ
ಳ ಸ್ವರೂಪವಂ ತಿಳಿದಿರುವ) ಆ ಜೀವಂಧರಸ್ವಾಮಿಯು ತನ್ನ ತಾಯಿ
ಯು ಜೀವಿಸಿದ್ದಾಗ್ಯೂ ಮರಣಸಮಾನವಾದ ದುರ್ದಶೆಯನ್ನು ಹೊಂ
ದಿರುವಳೆಂದು ತಿಳಿದು, ಬಹಳವಾಗಿವ್ಯಸನಪಟ್ಟನು. ಪ್ರಾಣಿಗಳಗೆ ತಾ
ಯಿಯಲ್ಲಿರುವ ಶರೀರಸಂಬಂಧ ಪ್ರಯುಕ್ತವಾದ ಪ್ರೀತಿಯು ಮತ್ತೆಯಾ
ವುದರಿಂದಲೂ ಹೋಗಲಾಡಿಸಲಶಕ್ಯವಷ್ಟೆ? ॥೪೪॥

ಶ್ಲೋಕ ॥ ಅನ್ವೇರಿಷ್ಟ ಚ ತಾಂ ದೃಷ್ಟುಂ
ಕೌರವ್ಯೋ ಗುರು ಗೌರವಃ ।

ಅಂಬಾಮದೃಷ್ಟಪೂರ್ವಾಂ ಚ
ದ್ರಷ್ಟುಂ ಕೋನಾಮ ನೇಚ್ಛತಿ ॥೪೯॥

ಟೀ ॥ ಗುರುಗೌರವಃ-ಗುರು-ತಾಯಿತಂದೆಯೇ ಮೊದಲಾದ ಗುರುಜನದಲ್ಲಿ, ಗೌರವಃ-ಪೂಜ್ಯತಾಬುದ್ಧಿಯುಳ್ಳ, ಕೌರವಃ-ಕುರುವಂಶೋತ್ಪನ್ನನಾದ ಜೀವಂಧರ ಸ್ವಾಮಿಯು, ತಾಂ-ಆ ತಾಯಿಯನ್ನು, ದ್ರಷ್ಟುಂ- ನೋಡಲೋಸುಗ, ಅತ್ವರಿಷ್ಟ ಚ-ಬಹಳ ತ್ವರೆಪಟ್ಟನು., ಅದೃಷ್ಟಪೂರ್ವಾಂ-ಪೂರ್ವದಲ್ಲಿ ಯಾವಾಗಲೂ ನೋಡಲ್ಪಡದೇ ಇರುವ, ಅಂಬಾಂ ಚ-ತಾಯಿಯನ್ನು ಕೂಡ, ದ್ರಷ್ಟುಂ-ನೋಡಲೋಸುಗ, ಕೋನಾಮ-ಯಾವನುತಾನೇ, ನೇಚ್ಛತಿ-ಇಚ್ಛಿಸುವುದಿಲ್ಲವು?.

ತಾತ್ಪರ್ಯ॥ ಮಾತಾಪಿತೃಪ್ರಭೃತಿಗಳಾದ ಗುರುಜನದಲ್ಲಿ ಗೌರವ ವುಳ್ಳ ಕುರುವಂಶೋತ್ಪನ್ನನಾದ ಆ ಜೀವಂಧರಸ್ವಾಮಿಯು ಆ ತಾಯಿ ಯನ್ನು ದರ್ಶನಮಾಡಲೋಸುಗ ಬಹಳ ತ್ವರೆಪಟ್ಟನು. (ಅಂದರೆ - ಎಷ್ಟು ಹೊತ್ತಿಗೆ ನೋಡುವೆನೆಂದು ಬಹಳ ಕುತೂಹಲಚಿತ್ತನಾಗಿದ್ದನು) ಪೂರ್ವದಲ್ಲಿ ಯಾವಾಗಲೂ ನೋಡಲ್ಪಡದೇ ಇರುವ ತಾಯಿಯನ್ನು ನೋಡಲೋಸುಗ ಯಾರುತಾನೇ ತ್ವರೆಪಡುವುದಿಲ್ಲವು? ॥೪೯॥

ಶ್ಲೋಕ॥ ವ್ಯಸ್ಮಾರಿ ಮಾತರಿಸ್ನೇಹಾ-
ನ್ಮಾನ್ಯೇ ನಾನ್ಯದಶೇಷತಃ ।
ರಾಗದ್ವೇಷೋಪಿ ತೇನೈವ
ಬಲಿಷ್ಠೇನ ಹಿ ಬಾಧ್ಯತೇ ॥೫೦॥

ಟೀ ॥ ಮಾತರಿ-ತಾಯಿಯಲ್ಲಿರುವ, ಸ್ನೇಹಾತ್-ಪ್ರೀತಿಯುದೆಸೆಯಿಂದ, ಮಾನ್ಯೇನ-ಪೂಜ್ಯನಾದ ಜೀವಂಧರ ಸ್ವಾಮಿಯಿಂದ, ಅನ್ಯತ್ - ಉಳಿದ ಸಮಸ್ತಕೃತ್ಯವೂ, ಅಶೇಷತಃ-ಸಾಕಲ್ಯವಾಗಿ, ವ್ಯಸ್ಮಾರಿ - ಮರೆಯಲ್ಪಟ್ಟಿತು., ರಾಗದ್ವೇಷೋಪಿ-ರಾಗದೊಡನೆಕೂಡಿದ್ವೇಷವೂಕೂಡ (ರಾಗದ್ವೇಷಗಳೆರಡೂಕೂಡ), ಬಲಿಷ್ಠೇನ-ಪ್ರಬಲವಾದ, ತೇನೈವ-ಆ ರಾಗದ್ವೇಷದಿಂದಲೇಯೇ, ಬಾಧ್ಯತೇಹಿ- ಬಾಧಿಸಲ್ಪಡುತ್ತದೆಯಲ್ಲವೆ?.

ತಾತ್ಪರ್ಯ ॥ ತಾಯಿಯಲ್ಲಿ ಉಂಟಾದ ಪ್ರಬಲವಾದ ಭಕ್ತಿಯದೆಸೆಯಿಂದ ಪೂಜ್ಯನಾದ ಆ ಜೀವಂಧರಕುಮಾರನಿಂದ ಉಳಿದ ಸಮಸ್ತವೂ ಮರೆಯಲ್ಪಟ್ಟಿತು. ಪ್ರಬಲವಾದ ರಾಗದ್ವೇಷಗಳಿಂದ ಸಾಮಾ

ನ್ಯವಾದ ರಾಗದ್ವೇಷಗಳು ಅಡಗಿಸಲ್ಪಡುವುದಲ್ಲವೆ? (ಮೊದಲಿದ್ದ
ರಾಗದ್ವೇಷಗಳಿಗಿಂತಲೂ, ಬಲಿಷ್ಠವಾದ ಮತ್ತೊಂದರ ವಿಷಯವಾದ
ರಾಗದ್ವೇಷಗಳುಂಟಾದರೆ ಮೊದಲಿದ್ದ ರಾಗದ್ವೇಷಗಳು ಮರೆಯಲ್ಪ
ಡುವುದು ಲೋಕದಲ್ಲಿ ಸ್ವಭಾವಸಿದ್ಧವೆಂದಭಿಪ್ರಾಯವು.) ॥೫೦॥

ಶ್ಲೋಕ॥ ಅನ್ವಜಿಜ್ಞಪದಾತ್ಮೀಯಾಂ
ಗತಿಂ ಭಾರ್ಯಾಂ ಪರಾನಪಿ ।
ಆವಶ್ಯಕೇಽಪಿ ಬನ್ಧೂನಾಂ
ಪ್ರಾತಿಕೂಲ್ಯಂ ಹಿ ಶಲ್ಯಕೃತ್ ॥೫೧॥

ಟೀ॥ ಸಃ-ಆ ಜೀವಂಧರಸ್ವಾಮಿಯು, ಆತ್ಮೀಯಾಂ-ತನ್ನಸಂಬಂಧಿಯಾದ
ಗತಿಂ-ಗಮನವನ್ನು (ಪ್ರಯಾಣವನ್ನು), ಭಾರ್ಯಾಂ- ಹೆಂಡತಿಯಾದ ಕನಕಮಾ
ಲೆಯನ್ನು ಕುರಿತು, ಪರಾನಪಿ-ಇತರರಾದ ಅತ್ತೆಮಾವನವರು ಮೊದಲಾದ ಬಂಧುಗ
ನ್ನು ಕುರಿತು, ಅನ್ವಜಿಜ್ಞಪತ್- ತಿಳಿಸಿ ಸಮ್ಮತಿಪಡಿಸಿಕೊಂಡನು., ಆವಶ್ಯಕೇ-
ಆವಶ್ಯವಾಗಿಮಾಡತಕ್ಕದ್ದಾದ ಕೆಲಸದಲ್ಲಿಯೂಕೂಡ, ಬಂಧೂನಾಂ- ಬಂಧುಜನ
ಳ, ಪ್ರಾತಿಕೂಲ್ಯಂ-ವಿರೋಧವು, ಶಲ್ಯಕೃದ್ಧಿ-ಮನಸ್ಸಿನಲ್ಲಿ ಒಂದು ಕೊರತೆಯನ
ಉಂಟುಮಾಡತಕ್ಕದ್ದಲ್ಲವೆ?.

ತಾತ್ಪರ್ಯ॥ ಆ ಜೀವಂಧರಸ್ವಾಮಿಯು ತನ್ನ ಪ್ರಯಾಣವನ
ಹೆಂಡತಿಗೂ, ಅತ್ತೆ ಮಾವ ಭಾವಮೈದುನರು ಮೊದಲಾದ ಸಮ
ಬಂಧುಗಳಿಗೂ ತಿಳಿಸಿ, ಅವರವರ ಸಮ್ಮತಿಯಂಪಡೆದನು. ಅತ್
ತ ಆವಶ್ಯಕವಾದ ಕೆಲಸದಲ್ಲಿಕೂಡ ಬಂಧುಗಳನ್ನನುಕೂಲಪಡಿಸಿಕೊ
ವುದುಚಿತವೇ ಹೊರತು ಅವರ ವಿರೋಧವು ಮನಸ್ಸಿಗೆ ಶಲ್ಯಪ್ರಾಯ
ಗಿ ಚಿಂತೆಗೇನೇ ಕಾರಣವಾಗುವುದಷ್ಟೆ? ॥೫೧॥

ಶ್ಲೋಕ॥ ಅನುನೀಯಾನುಗಾನ್ ಬನ್ಧೂನ್
ಪ್ರಸಭಂ ಪ್ರಯಯೌ ತತಃ ।
ಅನುನಯೋ ಹಿ ಮಾಹಾತ್ಮ್ಯಂ
ಮಹತಾಮುಪಬೃಂಹಯೇತ್ ॥೫೨॥

ಟೀ॥ (ಸ್ಕಃ-ಆ ಜೀವಂಧರಕುಮಾರನು,) ಅನುಗಾನ್- ಅನುಸರಿಸಿ ಹಿಂದೆಬರುತ್ತಿರುವ, ಬಂಧೂನ್-ಬಂಧುಗಳನ್ನು, ಅನುನೀಯ-ಸಮಾಧಾನಪಡಿಸಿ, ತತಃ-ಅಲ್ಲಿಂದ ಪ್ರಸಭಂ-ಬಲಾತ್ಕಾರದಿಂದ, ಪ್ರಯಯೌ- ಹೊರಟುಹೋದನು., ಅನುನಯಃ-ಸಮಾಧಾನಪಡಿಸೋಣದ, ಮಹತಾಂ-ಮಹಾತ್ಮರ, ಮಾಹಾತ್ಮ್ಯಂ - ಮಹಿಮೆಯನ್ನು, ಉಪಬೃಂಹಯೇದ್ಧಿ-ಪ್ರಕಟೀಕರಿಸುತ್ತದೆಯಲ್ಲವೆ?.

ತಾತ್ಪರ್ಯ॥ ಜೀವಂಧರಸ್ವಾಮಿಯು ತನ್ನೊಡನೆಕೂಡ ಬರುತ್ತಿರುವ ಬಂಧುಗಳನ್ನು ಬಹಳವಾಗಿ ಸಮಾಧಾನಪಡಿಸಿ, ಬಲಾತ್ಕಾರದಿಂದ ಅಲ್ಲಿಂದ ಮುಂದಕ್ಕೆ ಪ್ರಯಾಣವಂ ಬೆಳೆಸಿದನು. ಸಮಾಧಾನಪಡಿಸೋಣವು ಮಹಾತ್ಮರ ಮಾಹಾತ್ಮ್ಯಕ್ಕುಚಿತವೇ ಹೊರತು ಅನಾದರಿಸೋಣವೂ, ಕೋಪಿಸಿಕೊಳ್ಳೋಣವೂ ಮೊದಲಾದವು ನ್ಯಾಯವಲ್ಲವಷ್ಟೆ? ॥೫೨॥

ಶ್ಲೋಕ॥ ಪ್ರಸವಿತ್ರೀಂ ತತಃ ಪ್ರೇಕ್ಷ್ಯ
ಪ್ರೇಮಾನ್ಧೋಽಭೂದವಂಧ್ಯಧೀಃ ।
ತತ್ತ್ವಜ್ಞಾನ ತಿರೋಭಾವೇ
ರಾಗಾದಿ ಹಿ ನಿರಂಕುಶಮ್ ॥೫೩॥

ಟೀ॥ ಅವಂಧ್ಯಧೀಃ-ಸಫಲವಾದ ಬುದ್ಧಿಯುಳ್ಳ ಆ ಜೀವಂಧರಸ್ವಾಮಿಯು, ತತಃ-ಅನಂತರದಲ್ಲಿ, ಪ್ರಸವಿತ್ರೀಂ-ತಾಯಿಯನ್ನು, ವೀಕ್ಷ್ಯ-ನೋಡಿ, ಪ್ರೇಮಾಂಧ(ಸ್ಸನ್)-ಪ್ರೀತಿಯಿಂದ ಮೂಢನಾಗಿ, ಅಭೂತ್- ಆದನು. ತತ್ತ್ವಜ್ಞಾನ ತಿರೋಭಾವೇ(ಸತಿ)-ತತ್ತ್ವಜ್ಞಾನದ ತಿರಸ್ಕೃತಿಯುಂಟಾಗುತಲಿರಲಾಗಿ ( ತತ್ತ್ವಜ್ಞಾನವು ಪ್ರಕಾಶಿಸದೇ ಇರುತಿರಲಾಗಿ), ರಾಗಾದಿ-ರಾಗವೇ ಮೊದಲಾದದ್ದು, ನಿರಂಕುಶಂ ಹಿ-ತಡೆಯಿಲ್ಲದೆ ಪ್ರಕಾಶಿಸುತ್ತದೆಯಷ್ಟೆ ?.

ತಾತ್ಪರ್ಯ॥ ಅನಂತರದಲ್ಲಿ, ಸಫಲವಾದ ಬುದ್ಧಿಯುಳ್ಳ ಜೀವಂಧರಸ್ವಾಮಿಯು ತಾಯಿಯನ್ನು ದರ್ಶನಮಾಡಿ ಪ್ರೀತಿಯಿಂದ ಪರವಶನಾಗಿ (ಯಾವುದೂತೋರದೇ ಇರುವವನಾಗಿ) ಆದನು. ತತ್ತ್ವಜ್ಞಾನವು ಮರೆಸಲ್ಪಡುತ್ತಿರಲಾಗಿ ರಾಗದ್ವೇಷಾದಿಗಳು ತಲೆಯೆತ್ತುವುದಲ್ಲವೆ? (ತತ್ತ್ವಜ್ಞಾನವು ಸ್ಫುರಿಸುತ್ತಿರುವವರೆಗೂ, ರಾಗಾದಿಗಳು ಉಂಟಾಗುವದಕ್ಕವಕಾಶವಿಲ್ಲವೆಂದಭಿಪ್ರಾಯವು.) ॥೫೩॥

ಶ್ಲೋಕ॥ ಜಾತಜಾತಕ್ಷಣತ್ಯಾಗಾ-
ಜ್ಜಾತಂ ದುರ್ಜಾತ ಮಕ್ಷಿಣೋತ್ |
ಸುತವೀಕ್ಷಣತೋ ಮಾತಾ
ಸುತ ಪ್ರಾಣಾ ಹಿ ಮಾತರಃ ॥೫೪॥

ಟೀ ॥ ಮಾತಾ-ತಾಯಿಯು, ಸುತವೀಕ್ಷಣತಃ-ಸುತ-ಮಗನ, ವೀಕ್ಷಣತಃ
ನೋಡೋಣವರಪೆಸೆಯಿಂದ, ಜಾತಜಾತಕ್ಷಣತ್ಯಾಗಾತ್-ಜಾತ-ಮೊಗುವಿನ, ಜಾ
ತಕ್ಷಣ-ಉತ್ಪತ್ತಿ ಕ್ಷಣದಲ್ಲಿ, ತ್ಯಾಗಾತ್-ಬಿಡೋಣವರಪೆಸೆಯಿಂದ, ಜಾತಂ-ಉಂಟಾ
ದ, ದುರ್ಜಾತಂ-ದುಃಖಸಮೂಹವನ್ನು, ಅಕ್ಷಿಣೋತ್-ನಾಶಮಾಡಿದಳು(ಬಿಟ್ಟಳು)
ಮಾತರಃ-ಮಕ್ಕಳನ್ನುಪಡೆದತಾಯಿಯವರು, ಸುತಪ್ರಾಣಾಹಿ- ಸುತ-ಮಕ್ಕಳೇ
ಪ್ರಾಣಾಹಿ-ಪ್ರಾಣವಾಗುಳ್ಳವರಲ್ಲವೆ?.

ತಾತ್ಪರ್ಯ ॥ ಆ ತಾಯಿಯಾದ ವಿಜಯಾಮಹಾದೇವಿಯೂಕೂಡ
ಮಗನನ್ನು ನೋಡೋಣವರಪೆಸೆಯಿಂದ ಮೊಗುವಾದ ಜೀವಂಧರಸ್ವಾಮಿ
ಯನ್ನು ಉತ್ಪತ್ತಿಕ್ಷಣದಲ್ಲಿಯೇ ಪರಿತ್ಯಾಗಮಾಡಿದುದರಿಂದುಂಟಾಗಿದ್ದ
ಕ್ಲೇಶಗಳನ್ನೆಲ್ಲಾ ಬಿಟ್ಟಳು. ಲೋಕದಲ್ಲಿ ಮಕ್ಕಳನ್ನು ಪಡೆದ ತಾಯಿ
ಯವರು ಮಕ್ಕಳೇ ಪ್ರಾಣವಾಗಿ ವುಳ್ಳವರಲ್ಲವೆ? (ಮಕ್ಕಳು ಹೆತ್ತತಾಯಿ
ಗೆ ಬಹಿಶ್ಚರಪ್ರಾಣದಂತೆ ಅತ್ಯಂತಪ್ರಿಯವಾದುದರಿಂದ ಅವರ ಸುಖದುಃ
ಖಗಳೇ ತಮ್ಮ ಸುಖದುಃಖಗಳೆಂದು ತಿಳಿದು, ಸರ್ವದಾ ಅವರ ಶ್ರೇಯ
ಪ್ರಾರ್ಥನೆಯುಂಮಾಡಿಕೊಂಡು, ಎಷ್ಟು ಕಷ್ಟದಶೆಬಂದಾಗ್ಯೂ ಆ ಪು
ರಿಗೋಸುಗ ಜೀವಿಸಿರುವರೆಂದಭಿಪ್ರಾಯವು.) ॥೫೪॥

ಶ್ಲೋಕ॥ ಸೂನೋರ್ವೀಕ್ಷಣತಸ್ತೃಪ್ತಾ
ಕ್ಷೋಣೀಶಂ ತಮಿಯೇಷ ಸಾ।
ಲಾಭಂ ಲಾಭಮಭೀಪ್ಸ್ಯಾ-
ನ್ನ ಹಿ ತೃಪ್ತಿಃ ಕದಾಚನ ॥೫೫॥

ಟೀ ॥ ಸೂನೋಃ-ಮಗನ, ವೀಕ್ಷಣತಃ-ನೋಡೋಣವರ ಪೆಸೆಯಿಂದ,
ತೃಪ್ತಾ-ತೃಪ್ತಿಯನ್ನು ಹೊಂದಿರುವ, ಸಾ-ಆ ವಿಜಯಾದೇವಿಯು, ತಂ- ಆ ಜೀವಂ
ಕುಮಾರನನ್ನು, ಕ್ಷೋಣೀಶಂ(ಸನ್ತಂ)- ಅರಸನನ್ನಾಗಿ, ಇಯೇಷ- ಅಪೇಕ್ಷಿಸಿದ

ಲಾಭಂ-ಲಾಭವನ್ನು, ಸುಖಿ-ಸುಖಿವು ಲಭಿಸುತ್ತಾ-ಲಭಿಸುತ್ತಾ, ಮುಂದುಮುಂದಕ್ಕೆ, ಇಚ್ಛಾ-ಇಚ್ಛೆಯು (ಆಶೆಯು), ಸ್ಯಾತ್-ಉಂಟಾಸುವುದು, ಕದಾಚನ - ಯಾವಾಗಲೂ, ತೃಪ್ತಿಃ-ತೃಪ್ತಿಯು, ನಹಿ-ಇಲ್ಲವಷ್ಟೆ?.

ತಾತ್ಪರ್ಯ॥ ಆ ಜೀವಂಧರಸ್ವಾಮಿಯ ತಾಯಿಯಾದ ವಿಜಯಾಮಹಾದೇವಿಯು ಮಗನನ್ನು ನೋಡಿ ಬಹಳ ಸುತುಷ್ಟಳಾಗಿ, ಅನಂತರದಲ್ಲಿ ಈ ಜೀವಂಧರಕುಮಾರನು ತನ್ನ ತಂದೆಯರಾಜ್ಯವಂ ಪುನಃ ಪಡೆದು ರಾಜ್ಯಪರಿಪಾಲನೆಗೈವುದಂ ನೋಡುವೆನೇ ಎಂದು ಇಚ್ಛೈಸಿದಳು. (ಲೋಕದಲ್ಲಿ ಪ್ರಾಣಿಗಳಿಗೆ ಒಂದು ಶ್ರೇಯಃ ಪ್ರಾಪ್ತಿಯಾಗುತ್ತಿರಲಾಗಿ. ಮತ್ತೊಂದು ಉತ್ಕೃಷ್ಟಶ್ರೇಯಸ್ಸು ಬಂದೀತೇ ಎಂಬ ಉತ್ತರೋತ್ತರ ಹೆಚ್ಚು ಹೆಚ್ಚಾದ ಸುಖಪ್ರಾಪ್ತಿಯನ್ನಪೇಕ್ಷಿಸುವುದು ಸ್ವಭಾವವಾಗಿದೆಯೇ ಹೊರತು ಒಂದು ಇಷ್ಟಾರ್ಥಸಿದ್ಧಿಯಾದಮಾತ್ರಕ್ಕೇನೆ ತೃಪ್ತಿ ಹೊಂದುವುದಿಲ್ಲವೇ ಇಲ್ಲವೆಂದಭಿಪ್ರಾಯವು.) ॥೫೫॥

> ಶ್ಲೋಕ॥ ಗಚ್ಛೇತ್ಪಿತುಃ ಪದಂತೇ ಸ್ಯಾ-
> ದಂಗಪುತ್ರೇತ್ಯಚೋದಯತ್ ।
> ಸಾಮಗ್ರೀ ವಿಕಲಂ ಕಾರ್ಯಂ
> ನ ಹಿ ಲೋಕೇ ವಿಲೋಕಿತಮ್ ॥೫೬॥

ಟೀ॥ ಅಂಗ-ಎಲೈ, ಪುತ್ರ-ಮಗನೇ, ತೇ-ನಿನ್ನ, ಪಿತುಃ- ತಂದೆಯ, ಪದಂ-ಸ್ಥಾನವನ್ನು (ಧೊರೆತನವನ್ನು), ಗಚ್ಛೇತ್- ಹೊಂದಬೇಕು., ಸ್ಯಾತ್-ಆದೀತೇ?, ಲೋಕೇ-ಲೋಕದಲ್ಲಿ, ಕಾರ್ಯಂ-ಯಾವ ಕೆಲಸವೂ, ಸಾಮಗ್ರೀ ವಿಕಲಂ(ಸತ್)- ಸಾಮಗ್ರೀ-ತಕ್ಕ ಉಪಕರಣಗಳಿಂದ, ವಿಕಲಂ-ಶೂನ್ಯವಾಗಿ, ನವಿಲೋಕಿತಂ ಹಿ-ನೋಡಲ್ಪಟ್ಟಿಲ್ಲವಷ್ಟೆ?, ಇತಿ-ಹೀಗೆಂದು, ಅಚೋದಯತ್-ಕೇಳಿದಳು.

ತಾತ್ಪರ್ಯ॥ ಎಲೈ ಮಗನೇ! ನಿನ್ನ ತಂದೆಯ ರಾಜ್ಯಾಧಿಪತ್ಯವು ನಿನಗೆ ಬರಬೇಕೆಂದು ಅಪೇಕ್ಷಿಸುತ್ತೇನೆ. ಮಹಾಶತ್ರು ಹಸ್ತಗತವಾದ ರಾಜ್ಯವು, ಸೈನ್ಯಸಂಪತ್ತೂ, ಸಹಾಯ ಸಂಪತ್ತೂ, ಮೊದಲಾದ ಅನೇಕ ಉಪಕರಣಗಳಿಂ ಸಾಧಿಸತಕ್ಕದ್ದಾದುದರಿಂದ ಯಾವ ಸಹಾಯವೂ ಇಲ್ಲದ ನಮಗೆ ಹೇಗೆ ಸಾಧ್ಯವಾದೀತು? ಲೋಕದಲ್ಲಿ ಉಪಕರಣವಿಲ್ಲದೇ

ಕಾರ್ಯಸಿದ್ಧಿಯು ನೋಡಲ್ಪಟ್ಟಿಲ್ಲವಷ್ಟೆ? ಎಂಬದಾಗಿ ವಿಜಯಾಮಹಾ ದೇವಿಯು ಮಗನಾದ ಜೀವಂಧರಕುಮಾರನನ್ನು ವ್ಯಸನದೊಡಗೂಡಿದ ವಳಾಗಿ ಪ್ರಶ್ನೆಮಾಡಿದಳು. ॥೫೬॥

ಶ್ಲೋಕ॥ ಅಂಬ ಕಿಂ ಬತ ಖೇದೇನ
ಬಾಢಂ ಸ್ಯಾದಿತಿ ಸೋಭ್ಯಧಾತ್ |
ಮುಗ್ಧೇಷ್ವತಿ ವಿದಗ್ಧಾನಾಂ
ಯುಕ್ತಂ ಹಿ ಬಲಕೀರ್ತನಮ್ ॥೫೭॥

ಟೀ ॥ ಹೇ ಅಂಬ-ಎಲೈ ತಾಯಿಯೇ !, ಬತ-ಕಷ್ಟವು !!, ಖೇದೇನ- ದುಃಖ ದಿಂದ, ಕಿಂ-ಏನು ಪ್ರಯೋಜನವು ?, ಬಾಢಂ-ನಿಶ್ಚಯುವಾಗಿ, ಸ್ಯಾತ್-ಆದೀತು?, ಇತಿ-ಈ ಪ್ರಕಾರ, ಸಃ-ಆ ಜೀವಂಧರಸ್ವಾಮಿಯು, ಅಭ್ಯಧಾತ್-ಹೇಳಿದನು., ಮು ಗ್ಧೇಷು-ಮೂಢರಲ್ಲಿ, ಅತಿವಿದಗ್ಧಾನಾಂ-ಅತ್ಯಂತ ಬುದ್ಧಿಶಾಲಿಗಳಾದ ಸಮರ್ಥರಿಗೆ, ಬಲಕೀರ್ತನಂ—ಬಲ-ತಮ್ಮ ಪರಾಕ್ರಮದ, ಕೀರ್ತನಂ-ಶ್ಲಾಘನೆಯು, ಯುಕ್ತಂ ಹಿ- ನ್ಯಾಯುವೇ ಅಲ್ಲವೆ?.

ತಾತ್ಪರ್ಯ ॥ ಎಲೆ ತಾಯಿಯೆ ! ಕಷ್ಟ !! ದುಃಖದಿಂದೇನು ಪ್ರ ಯೋಜನವು? ಸತ್ಯವಾಗಿಯೂ ನಿನ್ನಿಷ್ಟಾರ್ಥವು ಸಿದ್ಧಿಸುತ್ತದೆಯೆಂ ದು ಜೀವಂಧರಸ್ವಾಮಿಯು, ತಾಯಿಗೆ ಅತಿಧೀರನಾಗಿ ನುಡಿದನು ಹೇಳಿದನು. ಮೂಢರಲ್ಲಿ ವಿವೇಕಿಗಳಾಗಿಯೂ, ಸಮರ್ಥರಾಗಿಯೂ ಇರುವಂಥಾವರು ತಮ್ಮ ಪರಾಕ್ರಮವನ್ನು ತಾವೇ ಶ್ಲಾಘಿಸಿಕೊಳ್ಳದಿದ್ದರೆ ಅವರು ನಂಬಲಾರರಾದುದರಿಂದ ಉತ್ತಮ ಪುರುಷರಿಗೆ ಇಂಥಾ ಆತ್ಮ ಶ್ಲಾಘೆಯು ದೋಷವಲ್ಲವು. ॥೫೭॥

ಶ್ಲೋಕ॥ ಪುತ್ರವಾಕ್ಯೇನ ಹಸ್ತಸ್ಥಾಂ
ಮೇನೇ ಮಾತಾ ಚ ಮೇದಿನೀಮ್ |
ಮುಗ್ಧಾಃ ಶ್ರುತಮನಿಶ್ಚಾಯ್ಯ
ನ ಹಿ ಯುಕ್ತಿವಿತರ್ಕಿಣಃ ॥ ೫೮ ॥

ಟೀ ॥ ಮಾತಾ-ತಾಯಿಯಾದ ವಿಜಯಾಮಹಾದೇವಿಯೂ ಕೂಡ, ಪುತ್ರ-

ಗನಾದ ಜೀವಂಧರ ಸ್ವಾಮಿಯು, ವಾಕ್ಯೇನ-ಮಾತಿನಿಂದ, ಮೇದಿನೀಂ - ಭೂಮಿಯು
ನ್ನು, ಹಸ್ತಸ್ಥಾಂ(ಸತೀಂ)-ಕೈಯಲ್ಲಿರುವುದನ್ನಾಗಿಯೇ, ಮೇನೇ-ತಿಳಿದಳು., ಮು
ಗ್ಧಾಃ-ಮೂಢರು, ಶ್ರುತವಿನಿಶ್ಚಾಯ್ಯಾಃ-ಶ್ರುತ-ಕೇಳಲ್ಪಟ್ಟ ಮಾತಿನಿಂದ, ವಿನಿಶ್ಚಾ
ಯ್ಯಾಃ-ನಂಬತಕ್ಕವರು., ಯುಕ್ತಿವಿತರ್ಕಿಣಃ(ಸ್ವಂತಃ)-ಯುಕ್ತಿ- ಯುಕ್ತಿಗಳಿಂದ,
ವಿತರ್ಕಿಣಃ(ಸ್ವಂತಃ)-ವಿಚಾರಮಾಡುವವರಾಗಿ, ನಹಿ-ಅಲ್ಲವಷ್ಟೆ?.

ತಾತ್ಪರ್ಯ ॥ ಆ ತಾಯಿಯಾದ ವಿಜಯಾ ಮಹಾದೇವಿಯೂ ಕೂ
ಡ ಮಗನ ಮಾತಿನಿಂದ ಭೂಮಿಯನ್ನು ಕೈಯಲ್ಲಿರುವುದನ್ನಾಗಿಯೇ
ನಂಬಿದಳು. ಮೂಢರಾದವರು, ಹೇಳಿದ ಮಾತನ್ನು ನಂಬುವರೇ ಹೊ
ರತು ಊಹಾ ಪೋಹ ವಿಚಾರ ಮಾಡತಕ್ಕವರಲ್ಲವಷ್ಟೆ? ॥೫೮॥

ಶ್ಲೋಕ ॥ ಅಪಾಯಸ್ಥಾನಮಸ್ತೋಕಂ
ದೂರಕ್ಷಂ ವ್ಯಾಹರದ್ವಿಭೋಃ ।
ಅಮಿತ್ರಂ ಹಿ ಕಳತ್ರಂ ಚ
ಕ್ಷತ್ರಿಯಾಣಾಂ ಕಿಮನ್ಯತಃ ॥ ೫೯ ॥

ಟೀ ॥ ಮಾತಾ-ತಾಯಿಯಾದ ಆ ವಿಜಯಾಮಹಾದೇವಿಯು, ವಿಭೋಃ-ಸಮ
ರ್ಥನಾದ (ಪ್ರಭುವಾದ) ಜೀವಂಧರಸ್ವಾಮಿಗೆ, ರಾಜ್ಯಂ-ರಾಜ್ಯವನ್ನು, ಅಸ್ತೋಕಂ-
ಬಹಳವಾಗಿ, ಅಪಾಯಸ್ಥಾನಂ(ಸತ್)-ಅಪಾಯ-ಅಪಾಯಗಳಿಗೆ, ಸ್ಥಾನಂ(ಸತ್)-
ಆಸ್ಪದವನ್ನಾಗಿಯೂ, ದೂರಕ್ಷಂ(ಸತ್)-ರಕ್ಷಿಸಲಸಾಧ್ಯವನ್ನಾಗಿಯೂ, ವ್ಯಾಹರ
ತ್-ಹೇಳಿದಳು., ಕ್ಷತ್ರಿಯಾಣಾಂ-ಕ್ಷತ್ರಿಯರಿಗೆ (ರಾಜರಿಗೆ), ಕಳತ್ರಂ ಚ-ಹೆಂಡತಿ
ಯೂ ಕೂಡ, ಅಮಿತ್ರಂಹಿ-ಶತ್ರುವಲ್ಲವೆ?. ಅನ್ಯತಃ-ಇತರರಿಂದ, ಕಿಂ - ಏನು ಪ್ರ
ಯೋಜನವು? (ಅಪಾಯ ಸಂಭವಿಸುತ್ತೆಂಬ ವಿಷಯದಲ್ಲಿ ಹೇಳತಕ್ಕದ್ದೇನು?).

ತಾತ್ಪರ್ಯ॥ ತಾಯಿಯಾದ ವಿಜಯಾಮಹಾದೇವಿಯು ಮಗನನ್ನು ಈ
ಗಲೇ ಭೂಮಿಯನ್ನಾಳುವವನಂತೆ ಭಾವಿಸಿ, ರಾಜ್ಯ ರಕ್ಷಣೋಪಾಯವಂ
ಹೇಳುತ್ತಾಳೆ.-ಏನೆಂದರೆ.-ರಾಜ್ಯವು ಅನೇಕ ಅಪಾಯಗಳಿಗೆ ಸ್ಥಾನವಾ
ದದ್ದು. (ಅನೇಕರು ಆಶೆಪಡತಕ್ಕ ವಸ್ತುವಾದುದರಿಂದ ಒಬ್ಬನ ರಾಜ್ಯ
ವಂ ಮತ್ತೊಬ್ಬ ರಾಜನು ಅಪಹರಿಸಲೋಸುಗ ದ್ರೋಹಚಿಂತೆಯಂ ಮಾ
ಡುತ್ತಾನೆಂದರ್ಥವು.) ಆದುದರಿಂದಲೇ ರಾಜ್ಯ ರಕ್ಷಣವು ಬಹು ಕಷ್ಟವು!!
ಕ್ಷತ್ರಿಯರಿಗೆ ಹೆಂಡತಿಯೂ ಕೂಡ ಶತ್ರುವೇಯು. (ಎಂಥಾ ಆಶ್ಚರ್ಯವನ್ನೂ

ನಂಬಕೂಡದೆಂದಭಿಪ್ರಾಯವು.) ಉಳಿದಮಾತುಗಳಿಂದೇನುಪ್ರಯೋಜನವು?. (ಬುದ್ಧಿಶಾಲಿಯಾದ ನಿನಗೆ ವಿಶೇಷವಾಗಿ ಹೇಳತಕ್ಕದ್ದೇನಿದೆ ಹೀಗೆ ಅಪಾಯಸಂಭವಿಸದಂತೆ ರಕ್ಷಿಸಬೇಕೋ ಹಾಗೆ ಬಹಳ ಜಾಗರೂಕನಾಗಿ ರಾಜ್ಯವಂ ಪರಿಪಾಲಿಸೆಂದಭಿಪ್ರಾಯವು.) ॥೪೯॥

ಶ್ಲೋಕ॥ ಕರ್ತವ್ಯಂ ಚ ತತೋ ಮಾತ್ರಾ
ಮಂತ್ರಿತಂ ತೇನ ಮಂತ್ರಿಣಾ ।
ವಿಚಾರ್ಯೈವೇತರೈಃ ಕಾರ್ಯಂ
ಕಾರ್ಯಂ ಸ್ಯಾತ್ಕಾರ್ಯವೇದಿಭಿಃ ॥ ೫೦ ॥

ಟೀ॥ ತತಃ-ಅನಂತರದಲ್ಲಿ, ಕರ್ತವ್ಯಂ ಚ- ಮಾಡುವುದಕ್ಕೆ ಯೋಗ್ಯವಾದ, ಕೆಲಸವೂ ಕೂಡ, ಮಂತ್ರಿಣಾ-ಮಂತ್ರಾಲೋಚನೆಯಲ್ಲಿ ಸಮರ್ಥನಾದ, ತೇನ-ಆ ಜೀವಂಧರಸ್ವಾಮಿಯಿಂದ, ಮಾತ್ರಾ-ತಾಯಿಯೊಡನೆ, ಮಂತ್ರಿತಂ-ಆಲೋಚಿಸಲ್ಪಟ್ಟಿತು., ಕಾರ್ಯಂ-ಮಾಡುವುದಕ್ಕೆ ಯೋಗ್ಯವಾದ ಕೆಲಸವು, ಕಾರ್ಯವೇದಿಭಿಃ- ಮಾಡತಕ್ಕ ಕೆಲಸದ ಉಪಾಯವನ್ನು ತಿಳಿದವರಾದ, ಇತರೈಃ- ಬೇರೆಯಾದ ಆಪ್ತರೊಡನೆ, ವಿಚಾರ್ಯೈವ-ಆಲೋಚಿಸಿಯೇ, ಕಾರ್ಯಂ(ಸತ್)-ಮಾಡುವುದಕ್ಕೆ ಯೋಗ್ಯವಾದಂಥಾದ್ದಾಗಿ, ಸ್ಯಾತ್-ಆಗುವುದು.

ತಾತ್ಪರ್ಯ ॥ ಆ ಮಂತ್ರಾಲೋಚನೆಯಲ್ಲಿ ಸಮರ್ಥನಾದಜೀವಂಧರಕುಮಾರನು, ಅನಂತರದಲ್ಲಿ ಮಾಡತಕ್ಕಕೆಲಸವನ್ನೂಕೂಡ ತಾಯಿಯೊಡನೆ ಆಲೋಚಿಸಿದನು. ಕಾರ್ಯಸಾಧನೆಗೆ ತಕ್ಕ ಉಪಾಯವಂ ಬಲ್ಲವರು ಆಪ್ತರಾದ ಇತರರೊಡನೆ ಆಲೋಚಿಸಿಯೇ ತಕ್ಕ ಪ್ರಯತ್ನವಂ ಮಾಡುವರೇ ಹೊರತು ನಾವೇ ಬುದ್ಧಿಶಾಲಿಗಳು, ಇತರರೊಡನೆ ಏತಕ್ಕೆ ಆಲೋಚನೆಮಾಡಬೇಕೆಂದು ಉಪೇಕ್ಷಿಸುವುದಿಲ್ಲವಷ್ಟೆ? (ತಾನೆಷ್ಟು ಪ್ರಾಜ್ಞನಾದಾಗ್ಯೂ ಕಾರ್ಯಜ್ಞರೊಡನೆ ಆಲೋಚಿಸಿಯೇ ಬುದ್ಧಿಶಾಲಿಗಳು ಕಾರ್ಯವಂಸಾಧಿಸುವರೆಂದಭಿಪ್ರಾಯವು.)(ಆದುದರಿಂದ ಕಾಷ್ಠಾಂಗಾರನಿಂದ ಸತ್ಯಂಧರಮಹಾರಾಜನಿಗೆ ಸಂಭವಿಸಿದ ಅಪಾಯವನ್ನನುಭವಿಸಿದವಳಾಗಿಯೂ ರಾಜ್ಯತಂತ್ರ ನಿಪುಣೆಯಾಗಿಯೂ ಇರೋಣದರಿಂದ ತಾಯಿಯೊಡನೆ ಆಲೋಚಿಸಿದನೆಂದು ಭಾವವು.) ॥೫೦॥

ಶ್ಲೋಕ॥ ಪ್ರಾಹಿಣೋತ್ಪ್ರಸವಿತ್ರೀಂ ತಾಂ
ಮಾತುಲಸ್ಯಾಂತಿಕಂ ಕೃತೀ।
ನ ಹಿ ಮಾತುಸ್ಸಜೀವೇನ
ಸೋಢವ್ಯಾ ಸ್ಯಾದ್ದುರಾಸಿಕಾ ॥ ೬೧ ॥

ಟೀ॥ ಕೃತೀ-ಪುಣ್ಯಶಾಲಿಯಾದ (ಸಮರ್ಥನಾದ)ಜೀವಂಧರ ಸ್ವಾಮಿಯು, ಪ್ರಸವಿತ್ರೀಂ-ತಾಯಿಯಾದ, ತಾಂ-ಆ ವಿಜಯಾಮಹಾದೇವಿಯನ್ನು, ಮಾತುಲಸ್ಯ-ಸೋದರಮಾವನ, ಅಂತಿಕಂ-ಸಮೀಪವನ್ನು ಕುರಿತು, ಪ್ರಾಹಿಣೋತ್- ಕಳುಹಿಸಿದನು., ಸಜೀವೇನ-ಜೀವಿಸಿರುವ ಪುತ್ರನಿಂದ, ಮಾತುಃ-ತಾಯಿಯ, ದುರಾಸಿಕಾ- ದುರ್ದಶೆಯು, ಸೋಢವ್ಯಾ(ಸತೀ)-ಸಹಿಸಲೋಸುಗ ಯೋಗ್ಯವಾದುದಾಗಿ, ನಸ್ಯಾದ್ಧಿ- ಆಗುವುದಿಲ್ಲವಷ್ಟೆ?.

ತಾತ್ಪರ್ಯ ॥ ಮಹಾ ಸಮರ್ಥನಾದ ಜೀವಂಧರಸ್ವಾಮಿಯು ತಾಯಿಯಾದ ವಿಜಯಾಮಹಾದೇವಿಯನ್ನು ತನ್ನ ಸೋದರಮಾವನ ಸಮೀಪವನ್ನು ಕುರಿತು ಕಳುಹಿಸಿದನು. ಜೀವದೊಡನೆ ಕೂಡಿರುವಮಗನು ತಾಯಿಯ ದುರ್ದಶೆಯನ್ನು ಹೇಗೆ ಸಹಿಸಬಹುದು? ಮಗನಾದವನು ಜೀವಿಸಿರುವ ಕಾಲದಲ್ಲಿಯೇ ತಾಯಿಯು ಬಹಳ ಕಷ್ಟಪಡುತ್ತಿದ್ದರೆ ಅಂಥಾ ಕಷ್ಟವಂ ಬಿಡಿಸದ ಮಗನು ಜೀವಿಸಿದ್ದರೂ ಮೃತಪ್ರಾಯನೆಂದಭಿಪ್ರಾಯವು.) ॥೬೧॥

ಶ್ಲೋಕ॥ ತತಃ ಸಪರಿತೋಷೋಽಯಂ
ಪರಿವ್ರಾಜಕಪಾರ್ಶ್ವತಃ ।
ನಿಕಷಾ ಸ್ವಪುರಂ ಪ್ರಾಪ್ಯ
ತದಾರಾಮೇ ನಿಷಣ್ಣವಾನ್ ॥ ೬೨ ॥

ಟೀ॥ ತತಃ-ಅನಂತರದಲ್ಲಿ, ಅಯಂ-ಈ ಜೀವಂಧರ ಸ್ವಾಮಿಯು, ಸಪರಿತೋಷ (ಸ್ಸನ್)-ಸಂತೋಷದೊಡನೆ ಕೂಡಿದವನಾಗಿ, ಪರಿವ್ರಾಜಕಪಾರ್ಶ್ವತಃ_ಪರಿವ್ರಾಜಕ-ದಂಡಕಾರಣ್ಯವಾಸಿಗಳಾದ ತಪಸ್ವಿಗಳ, ಪಾರ್ಶ್ವತಃ-ಸಮೀಪದದೆಸೆಯಿಂದ, ಸ್ವಪುರಂನಿಕಷಾ-ತನ್ನ ಪಟ್ಟಣದ ಸಮೀಪವನ್ನು, ಪ್ರಾಪ್ಯ-ಹೊಂದಿ, ತದಾರಾಮೇ-ಆ ಪಟ್ಟಣದ ಸಮೀಪದಲ್ಲಿರುವ ಉದ್ಯಾನವನದಲ್ಲಿ, ನಿಷಣ್ಣವಾನ್- ಕುಳಿತುಕೊಂಡನು.

ತಾತ್ಪರ್ಯ॥ ಅನಂತರದಲ್ಲಿ ತನ್ನ ತಾಯಿಯು ದುರ್ದಶೆಯಂಬಿಟ್ಟು ತೌರುಮನೆಯಂ ಸೇರಿ ಸ್ವಸ್ಥಚಿತ್ತಳಾಗಿರುವುದರಿಂದ ಸಂತುಷ್ಟನಾದ ಜೀವಂಧರಕುಮಾರನು ಆ ದಂಡಕಾರಣ್ಯವಾಸಿಗಳಾದ ತಪಸ್ವಿಗಳ ಸಮೀಪವಂಬಿಟ್ಟು ತನ್ನ ಪಟ್ಟಣವಾದ ರಾಜಪುರೀಪಟ್ಟಣದ ಸಮೀಪವನ್ನು ಹೊಂದಿ ಅಲ್ಲಿರುವ ಉದ್ಯಾನವನದಲ್ಲಿ ಸುಖದಿಂದ ಕಾಳೆತು ಕೊಂಡನು ॥೬೨॥

ಶ್ಲೋಕ॥ ತತ್ರ ಮಿತ್ರಾಣ್ಯವಸ್ಥಾಪ್ಯ
ವ್ಯಹರತ್ಪರಿತಃ ಪುರೀಂ ।
ವಿಶೃಂಖಲಾ ನ ಹಿ ಕ್ವಾಪಿ
ತಿಷ್ಠಂತೀಂದ್ರಿಯದಂತಿನಃ ॥ ೬೩ ॥

ಟೀ ॥ ತತ್ರ-ಆ ಉದ್ಯಾನವನದಲ್ಲಿ, (ಸಃ-ಆ ಜೀವಂಧರಕುಮಾರನು,) ಮಿತ್ರಾಣಿ ಸ್ನೇಹಿತರನ್ನು, ಅವಸ್ಥಾಪ್ಯ-ಸ್ಥಾಪಿಸಿ, ಪುರೀಂಪರಿತಃ-ರಾಜಪುರೀಪಟ್ಟಣದ ಸುತ್ತಲೂ, ವ್ಯಹರತ್-ಸಂಚರಿಸಿದನು., ವಿಶೃಂಖಲಾ-ತಡೆಯಿಲ್ಲದೇ ಇರುವ, ಇಂದ್ರಿಯದಂತಿನಃ-ಇಂದ್ರಿಯ-ನೇತ್ರವೇ ಮೊದಲಾದ ಇಂದ್ರಿಯಗಳೆಂಬ, ದಂತಿನಃ-ಆನೆಗಳು, ಕ್ವಾಪಿ-ಎಲ್ಲಿಯೂ, ನತಿಷ್ಠಂತಿಹಿ-ಸ್ಥಿರವಾಗಿ ನಿಲ್ಲುವುದಿಲ್ಲವಷ್ಟೆ?.

ತಾತ್ಪರ್ಯ॥ ಜೀವಂಧರಕುಮಾರನು ಆ ರಾಜಪುರೀಪಟ್ಟಣದ ಸಮೀಪದಲ್ಲಿರುವ ಉದ್ಯಾನವನದಲ್ಲಿ ಸ್ನೇಹಿತರನ್ನು ಸ್ಥಾಪಿಸಿ ಅಂದರೆ (ಅಲ್ಲಿಯೇ ಇರುವಂತೇಹೇಳಿ) ಪಟ್ಟಣದ ನಾಲ್ಕು ಕಡೆಯೂ ಸಂಚರಿಸಿದನು. ತಡೆಯಿಲ್ಲದೆ ಇರುವ ಆನೆಗಳಂತೆ ಇರುವ ಪಂಚೇಂದ್ರಿಯಗಳು ಯಾವಾಗಲೂ ರೂಪಾದಿ ವಿಷಯಗಳನ್ನವಗಾಹಿಸುತ್ತಿರುವುದೇ ಸ್ವಭಾವವೇಹೊರತು ನಿಶ್ಚಂಚಲವಾಗಿ ಕ್ಷಣವೂ ಇರುವುದಿಲ್ಲವಷ್ಟೆ॥೬೩॥

ಶ್ಲೋಕ॥ ತತೋ ರಾಜಪುರೀಂ ವೀಕ್ಷ್ಯ
ಸುತರಾಮುತ್ಪತತ್ಸುಧೀಃ ।
ಮುಮುತ್ಸ್ವಧೀ ಕೃತೋ ಮೋಹಃ
ಸವಿಶೇಷೋ ಹಿ ದೇಹಿನಾಮ್ ॥ ೬೪ ॥

ಟೀ ॥ ತತಃ-ಅನಂತರದಲ್ಲಿ, ಸುಧೀಃ-ವಿದ್ವಾಂಸನಾದ ಜೀವಂಧರಸ್ವಾಮಿಯ

ರಾಜಪುರೀಂ-ರಾಜಪುರೀ ಪಟ್ಟಣವನ್ನು, ವೀಕ್ಷ್ಯ-ನೋಡಿ, ಸುತರಾಂ-ಬಹಳವಾಗಿ ಅತೃಪತ್-ಸಂತೋಷಿಸಿದನು., ಮಮತ್ವಧೀಕೃತಃ-ಮಮತ್ವಧೀ - ನನ್ನದೆಂಬ ಅಭಿಮಾನದಿಂದ, ಕೃತಃ-ಮಾಡಲ್ಪಟ್ಟ, ಮೋಹಃ-ಪ್ರೀತಿಯು, ದೇಹಿನಾಂ-ಪ್ರಾಣಿಗಳಿಗೆ, ಸವಿಶೇಷೋ ಹಿ-ವಿಶೇಷದಿಂದೊಡಗೂಡಿದುದಲ್ಲವೆ?.

ತಾತ್ಪರ್ಯ ॥ ಬಹಳ ಬುದ್ಧಿಶಾಲಿಯಾದ ಜೀವಂಧರಸ್ವಾಮಿಯು ಅನಂತರದಲ್ಲಿ ರಾಜಪುರೀಪಟ್ಟಣವನ್ನುನೋಡಿ ಬಹಳವಾಗಿ ತೃಪ್ತಿಪಟ್ಟನು. ಪ್ರಾಣಿಗಳಿಗೆ ನನ್ನದೆಂಬ ಅಭಿಮಾನದಿಂದುಂಟಾದ ವ್ಯಾಮೋಹವು ವಿಶೇಷದೊಡಗೂಡಿದುದಲ್ಲವೆ? ಜೀವಂಧರಸ್ವಾಮಿಗೆ ತನ್ನತಂದೆಯರಾಜ್ಯವೆಂಬ ಅಭಿಮಾನವು ಈಪಟ್ಟಣವು ವಿಶೇಷವಾಗಿ ನೋಡುವಂತೆಮಾಡಿತೆಂದಭಿಪ್ರಾಯವು. ॥೬೪॥

ಶ್ಲೋಕ॥ ಕ್ರೀಡನ್ತೀ ಕಾಪಿ ಹರ್ಮ್ಯಾಗ್ರಾತ್
ಪಾತಯಾಮಾಸ ಕಂದುಕಮ್ ॥
ಸಂಪದಾಮಾಪದಾಂ ಚಾಪ್ತಿ-
ರ್ವ್ಯಾಜೇನೈವ ಹಿ ಕೇನಚಿತ್ ॥ ೬೫ ॥

ಟೀ॥ ಕ್ರೀಡಂತೀ-ಆಡುತಲಿರುವ, ಕಾಪಿ-ಓರ್ವಸ್ತ್ರೀಯು, ಹರ್ಮ್ಯಾಗ್ರಾತ್-ಉಪ್ಪರಿಗೆಯಮೇಲ್ಭಾಗದಲ್ಲಿಂದ, ಕಂದುಕಂ- ಒಂದು ಚೆಂಡನ್ನು, ಪಾತಯಾಮಾಸ-ಕೆಳಕ್ಕೆ ಹಾಕಿದಳು., ಸಂಪದಾಂ-ಸಂಪತ್ತೂ, ಆಪದಾಂ ಚ-ಆಪತ್ತೂ ಇವುಗಳ, ಆಪ್ತಿಃ-ಪ್ರಾಪ್ತಿಯು, ಕೇನಚಿದ್ವ್ಯಾಜೇನೈವ-ಯಾವುದಾದರೂ ಒಂದುನೆಪದಿಂದಲೇ ಉಂಟಾದೀತಲ್ಲವೆ?.

ತಾತ್ಪರ್ಯ ॥ ಆ ರಾಜಪುರೀಪಟ್ಟಣದಲ್ಲಿ ಬಂದು ಉಪ್ಪರಿಗೆಯಲ್ಲಿ ಆಡುತ್ತಿದ್ದ ಓರ್ವ ಕನ್ನಿಕೆಯ ಚೆಂಡು ಕೆಳಗೆ ಬಿದ್ದಿತು. ಸಂಪತ್ಪ್ರಾಪ್ತಿಯಾಗತಕ್ಕದ್ದಾಗಿದ್ದರೂ ವಿಪತ್ಪ್ರಾಪ್ತಿಯಾಗುವದಾಗಿದ್ದರೂ ಯಾವದಾದರೂ ಒಂದು ನೆಪದಿಂದ ಬರುವುದೇ ಹೊರತು ಯಾವನೆಪವೂ ಇಲ್ಲದೇ ಸಂಪತ್ತಾಗಲಿ, ವಿಪತ್ತಾಗಲಿ ಪ್ರಾಪ್ತವಾಗುವುದಿಲ್ಲವಷ್ಟೆ? ॥೬೫॥

ಶ್ಲೋಕ॥ ಉತ್ಪತ್ಯಗೃಹ್ಣತೀಂ ಸೂತ್ರಾಂ
ದೃಷ್ಟ್ವಾ ಸ ಮುಹ್ಯದಬಾಹ್ಯಧೀಃ ।

ವಶಿನಾಂ ಹಿ ಮನೋವೃತ್ತಿಃ
ಸ್ಥಾನಏವ ಹಿ ಜಾಯತೇ ॥ ೬೬ ॥

ಟೀ ॥ ಅಬಾಹ್ಯಧೀಃ-ಹೊರಗಿನವಿಷಯದಲ್ಲಿ ಬುದ್ಧಿಇಲ್ಲದೇ ಇರುವ ಜಿತೇಂದ್ರಿಯನಾದ ಜೀವಂಧರಸ್ವಾಮಿಯು, ಉದ್ವಕ್ತ್ರ(ಸ್ತ್ರಕ್)-ಉತ್-ಮೇಲಕ್ಕೆ ಎತ್ತಲ್ಪಟ್ಟ, ವಕ್ತ್ರ(ಸ್ರ)ಃ-ಮುಖವುಳ್ಳವನಾಗಿ, ತಸ್ಯಾಂ-ಆ ಷೋಡಶಾಬ್ದಸ್ತ್ರೀ, ಸುತ್ಯಾಂ-ಹದಿನಾರು ವಯಸ್ಸುಳ್ಳ ಸ್ತ್ರೀಯನ್ನು, ದೃಷ್ಟ್ವಾ-ನೋಡಿ, ಅಮುಹ್ಯತ್-ಮೋಹಪಟ್ಟನು, ವಶಿನಾಂ-ಜಿತೇಂದ್ರಿಯರ, ಮನೋವೃತ್ತಿಃ-ಮನೋವ್ಯಾಪಾರವು (ಇಚ್ಛೆಯು), ಸ್ಥಾನಏವ-ಯೋಗ್ಯವಾದ ಸ್ಥಾನದಲ್ಲಿಯೇ, ಜಾಯತೇ ಹಿ- ಉಂಟಾಗುತ್ತದೆಯಲ್ಲವೆ?.

ತಾತ್ಪರ್ಯ ॥ ಜೀವಂಧರಕುಮಾರನು ತಲೆಯೆತ್ತಿ ಆ ಸ್ತ್ರೀಯನ್ನು ನೋಡಿ ಜಿತೇಂದ್ರಿಯನಾದಾಗ್ಯೂ ವ್ಯಾಮೋಹಪಟ್ಟನು. ಜಿತೇಂದ್ರಿಯರಿಗೆ ಯೋಗ್ಯಸ್ಥಾನದಲ್ಲಿ ಮನಸ್ಸು ಪ್ರವರ್ತಿಸುವುದೇ ಹೊರತು ಅಯೋಗ್ಯಸ್ಥಾನದಲ್ಲಿ (ಪಾಪಸಂಭವಿಸತಕ್ಕ ಸ್ಥಾನದಲ್ಲಿ) ಇಚ್ಛೆಯುಂಟಾಗಲಾರದೆಂದಭಿಪ್ರಾಯವು. ಪೂರ್ವಭವಕರ್ಮಾನುಗುಣವಾಗಿ ತನಗೇ ಸೇರತಕ್ಕ ಸ್ತ್ರೀಯೆ ಮೊದಲಾದ ವಸ್ತುವಿನಲ್ಲಿಯೇ ಸತ್ಪುರುಷರ ಮನಸ್ಸು ಪ್ರವರ್ತಿಸುವುದೆಂದು ಭಾವವು.॥೬೬॥

ಶ್ಲೋಕ ॥ ತನ್ಮೋಹಾದಯಮಧ್ಯಾಸ್ತ
ತತ್ಸೌಧಾಗ್ರವಿತರ್ದಿಕಾಮ್ ।
ಅಂಜಸಾ ಕೃತಪುಣ್ಯಾನಾಂ
ನ ಹಿ ವಾಂಛಾಪಿ ವಂಚಿತಾ ॥ ೬೭ ॥

ಟೀ ॥ ಅಯಂ-ಈ ಜೀವಂಧರಕುಮಾರನು, ತನ್ಮೋಹಾತ್-ತತ್-ಆ ಸ್ತ್ರೀಯಲ್ಲಿ, ಮೋಹಾತ್-ಪ್ರೀತಿಯಾಸೆಯಿಂದ, ತತ್ಸೌಧಾಗ್ರವಿತರ್ದಿಕಾಂ-ತತ್-ಆ ಕನ್ನಿಕಾಗೃಹದ, ಸೌಧಾಗ್ರ-ಉಪ್ಪರಿಗೆಯಲ್ಲಿರುವ, ವಿತರ್ದಿಕಾಂ-ಜಗಲಿಯಲ್ಲಿ, ಅಧ್ಯಾಸ್ತ-ಕುಳಿತುಕೊಂಡನು., ಕೃತಪುಣ್ಯಾನಾಂ-ಕೃತ-ಮಾಡಲ್ಪಟ್ಟ, ಪುಣ್ಯಾನಾಂ-ಪುಣ್ಯವುಳ್ಳವರ, ವಾಂಛಾಪಿ-ಇಚ್ಛೆಯುಕೂಡ, ಅಂಜಸಾ-ಶೀಘ್ರವಾಗಿ, ನವಂಚಿತಾ ಹಿ-(ವ್ಯರ್ಥವಾಗುವುದಿಲ್ಲವಷ್ಟೆ?) ಫಲಿಸುತ್ತದೆಯಲ್ಲವೆ?.

ತಾತ್ಪರ್ಯ ॥ ಈ ಜೀವಂಧರಕುಮಾರನು ಆ ಸ್ತ್ರೀಯಲ್ಲಿರು

ವ್ಯಾಮೋಹದಿಂದ ಆ ಉಪ್ಪರಿಗೆಯೊಳಿರುವ ಜಗಲಿಯಲ್ಲಿ ಕುಳಿತುಕೊಂಡ ನು. ಪುಣ್ಯಶಾಲಿಗಳ ಇಚ್ಛೆಯು ಶೀಘ್ರವಾಗಿ ಫಲಿಸುವುದಷ್ಟೆ?॥೬೭॥

ಶ್ಲೋಕ॥ ವೈಶ್ಯೇಶಃ ಕೋಽಪಿ ತಂ ಪಶ್ಯನ್
ವ್ಯಾಜಹ್ರೇ ವಿಕಸನ್ಮುಖಃ ।
ಚಿರಕಾಙ್ಕ್ಷಿತ ಸಂಪ್ರಾಪ್ತ್ಯಾ
ಪ್ರಸೀದನ್ತಿ ಹಿ ದೇಹಿನಃ ॥ ೬೮ ॥

ಟೀ ॥ ಕೋಽಪಿ-ಒಬ್ಬಾನೊಬ್ಬ, ವೈಶ್ಯೇಶಃ-ವೈಶ್ಯಶ್ರೇಷ್ಠನು, ತಂ-ಆ ಜೀವಂಧರಕುಮಾರನನ್ನು, ಪಶ್ಯನ್(ಸನ್)-ನೋಡುವವನಾಗಿ, ವಿಕಸನ್ಮುಖ(ಸ್ಸನ್) - ವಿಕಸತ್-ಉಲ್ಲಾಸವನ್ನು ಹೊಂದುತಿರುವ, ಮುಖ(ಸ್ಸನ್)-ಮುಖವುಳ್ಳವನಾಗಿ, ವ್ಯಾಜಹ್ರೇ-ಹೇಳಿದನು., ದೇಹಿನಃ-ಪ್ರಾಣಿಗಳು, ಚಿರಕಾಂಕ್ಷಿತಸಂಪ್ರಾಪ್ತ್ಯಾ-ಚಿರಕಾಂಕ್ಷಿತ-ಬಹುಕಾಲದಿಂದ ಅಪೇಕ್ಷಿಸಲ್ಪಟ್ಟಫಲದ, ಸಂಪ್ರಾಪ್ತ್ಯಾ- ಸಿದ್ಧಿಯಿಂದ, ಪ್ರಸೀದಂತಿ ಹಿ-ಸಂತುಷ್ಟರಾಗುತ್ತಾರಲ್ಲವೆ?.

ತಾತ್ಪರ್ಯ॥ ಒಬ್ಬ ವೈಶ್ಯಶ್ರೇಷ್ಠನು ಆ ಜೀವಂಧರಕುಮಾರನನ್ನು ನೋಡಿ ಹರ್ಷಿತನಾಗಿ ಹೇಳಿದನು. ಲೋಕದಲ್ಲಿ ಪ್ರಾಣಿಗಳು ಬಹುಕಾಲದಿಂದ ಅಪೇಕ್ಷಿಸಲ್ಪಟ್ಟದ್ದ ಫಲವು ಪ್ರಾಪ್ತವಾಗುತ್ತಿರಲಿಕ್ಕಾಗಿ ಬಹಳ ಸಂತೋಷಿಸುವರಷ್ಟೆ?॥೬೮॥

ಶ್ಲೋಕ॥ ಭದ್ರ ಸಾಗರದತ್ತೋಽಹಂ
ಭವತ್ಯೇಷ ಮಮಾಲಯಃ ।
ವಿಮಲಾ ಕಮಲೋದ್ಭೂತಾ
ಸುತಾ ಸೂತ್ಯಾ ಚ ಸಾಭವತ್ ॥ ೬೯ ॥

ಟೀ ॥ ಹೇ ಭದ್ರ-ಎಲೈ ಮಂಗಳಸ್ವಭಾವನಾದವನೇ !, ಅಹಂ-ನಾನು, ಸಾಗರದತ್ತಃ-ಸಾಗರದತ್ತನೆಂದು ನಾಮಧೇಯವುಳ್ಳವನು., ಏಷಃ-ಇದು, ಮಮ-ನನ್ನ, ಆಲಯ(ಸ್ಸನ್)-ಗೃಹವಾಗಿ, ಭವತಿ- ಆಗುತ್ತಲಿದೆ., ಕಮಲೋದ್ಭೂತಾ- ಕಮಲಾ-ಕಮಲಾಎಂಬುವಳಲ್ಲಿ, ಉದ್ಭೂತಾ-ಹುಟ್ಟಿದಂಥಾ, ವಿಮಲಾ - ವಿಮಲಾ ಎಂದು ನಾಮಧೇಯವುಳ್ಳ, ಸುತಾ-ಮಗಳು, ಸಾಚ-ಆ ವಿಮಲೆಯುಕೂಡ, ಸೂತ್ಯಾ(ಸತೀ)- ವಿವಾಹಯೋಗ್ಯವಯಸ್ಸುಳ್ಳವಳಾಗಿ, ಅಭವತ್-ಆದಳು.

ತಾತ್ಪರ್ಯ ॥ ಶ್ರೇಷ್ಠಿಯು ಹೇಳುತ್ತಾನೆ--ಎಲೈಮಂಗಳಸ್ವಭಾವನೇ! ನಾನು ಸಾಗರದತ್ತನೆಂಬ ನಾಮಧೇಯವುಳ್ಳವನು; ಇದು ನನ್ನ ಮನೆಯು; ಕಮಲಾಯೆಂಬುವಳ ಮಗಳು ವಿಮಲಾಯೆಂದು ನಾಮಧೇಯವುಳ್ಳವಳು; ಆ ವಿಮಲೆಯೆಂಬ ನನ್ನ ಪುತ್ರಿಯು ವಿವಾಹ ಯೋಗ್ಯವಯಸ್ಸುಳ್ಳವಳಾದಳು ॥೬೯॥

ಶ್ಲೋಕ॥ ರತ್ನಜಾಲಮವಿಕ್ರೀತಂ
ವಿಕ್ರಿಯೇತ ಯದಾಗಮೇ ।
ಭಾವಿಜ್ಞಾಸ್ತಂ ಪತಿಂ ತಸ್ಯಾಃ
ಸ್ಸಮುತ್ಪತ್ತಾವಜೀಗಣನ್ ॥ ೭೦ ॥

ಟೀ ॥ ಭಾವಿಜ್ಞಾಃ- ಭಾವಿ-ಉತ್ತರೋತ್ತರ ಬಂದಾಗತಕ್ಕ ಫಲವನ್ನು, ಜ್ಞಾಃ-ತಿಳಿದಿರುವ ಜೋಯಿಸರು, ಯದಾಗಮೇ(ಸತಿ)- ಯತ್-ಯಾವನ, ಆಗಮೇ(ಸತಿ)-ಬರುತ್ತಿರಲಾಗಿ, ಅವಿಕ್ರೀತಂ-ಮಾರಲ್ಪಡದೇಇರುವ, ರತ್ನಜಾಲಂ-ರತ್ನಗಳಸಮೂಹವು, ವಿಕ್ರಿಯೇತ-ಮಾರಲ್ಪಟ್ಟಿತೋ, ತಂ-ಆಪುರುಷನನ್ನು, ತಸ್ಯಾಃ-ಆವಿಮಲೆಗೆ, ಪತಿಂ(ಸನ್ತಂ)-ಪತಿಯುನ್ನಾಗಿ(ಗಂಡನನ್ನಾಗಿ), ಸಮುತ್ಪತ್ತೌ-ಆ ಕನ್ನಿಕೆಯ ಜನನಕಾಲದಲ್ಲಿ, ಅಜೀಗಣನ್-ತಿಳಿದರು.

ತಾತ್ಪರ್ಯ ॥ ಸಾಗರದತ್ತಶ್ರೇಷ್ಠಿಯು ಹೇಳುತ್ತಾನೆ.—ಈ ಕನ್ನಿಕೆಯ ಜನನಕಾಲದಲ್ಲಿ ಜೋಯಿಸರು ಹೇಳುತ್ತಾರೆ. ಏನೆಂದರೆ— ಯಾವ ಪುರುಷನು ಬರುತ್ತಿರಲಿಕ್ಕಾಗಿ ಬಹು ದಿವಸದಿಂದ ಮಾರಲ್ಪಡದೆ ಇರುವ ರತ್ನಗಳ ರಾಶಿಯು ಮಾರಲ್ಪಟ್ಟೀತೋ ಆ ಪುರುಷನಿಗೆ ಈ ಕನ್ನಿಕೆಯು ಪತ್ನಿಯಾಗುವಳು ಎಂಬದಾಗಿ ಹೇಳಿದರು ॥೭೦॥

ಶ್ಲೋಕ ॥ ಭವತ್ಯತ್ರ ಪ್ರವಿಷ್ಟೇ ಚ
ದೃಷ್ಟಮೇತದಲಂಪರೈಃ ।
ಭಾಗ್ಯಾ(ಧಿಕಂ)ಧಿಕಾಂ ಭವಾನೇವ
ಯೋಗ್ಯಃ ಪರಿಣಯೇದಿತಿ ॥ ೭೧ ॥

ಟೀ ॥ ಭವತಿ-ತಾವು, ಅತ್ರ-ಇಲ್ಲಿಗೆ, ಪ್ರವಿಷ್ಟೇ(ಸತಿ)- ಪ್ರವೇಶಿಸುತ್ತಿರಲಾಗಿ, ಏತತ್-ಈ ಜೋಯಿಸರು ಹೇಳಿದ್ದ ರತ್ನವಿಕ್ರಯವು, ದೃಷ್ಟಂಚ-ನೋಡಲ್ಪಟ್ಟಿತು.

ಪರೈಃ-ಉಳಿದವರುಗಳಿಂದ, ಅಲಂ-ಸಾಕು., ಭಾಗ್ಯಾಧಿಕಾಂ-ಭಾಗ್ಯದಿಂದ ಅಧಿಕಳಾದ ಇವಳನ್ನು, ಯೋಗ್ಯಃ-ಯೋಗ್ಯರಾದ, ಭವಾನೇವ-ಪೂಜ್ಯರಾದ ತಾವೇ, ಪರಿಣಯೇತ್-ಮದುವೆಯನ್ನುಮಾಡಿಕೊಳ್ಳಬೇಕು., ಇತಿ-ಹೀಗೆಂದು, ಸಃ- ಆ ಸಾಗರದತ್ತನು, ಆಹ-ಹೇಳಿದನು.

ತಾತ್ಪರ್ಯ ॥ ತಾವು ಇಲ್ಲಿಗೆ ದಯಮಾಡಿಸುತ್ತಿರಲಿಕ್ಕಾಗಿ ಜೋಯಿಸರು ಹೇಳಿದ ಪ್ರಕಾರ ರತ್ನ ವಿಕ್ರಯವು ನನ್ನಿಂದ ಪ್ರತ್ಯಕ್ಷವಾಗಿ ನೋಡಲ್ಪಟ್ಟಿತು. ಆದಕಾರಣ ಮಹಾಭಾಗ್ಯಶಾಲಿಯಾದ ಈ ವಿಮಲೆಯೆಂಬ ನನ್ನ ಕನ್ನಿಕೆಯನ್ನು ತಾವೇ ವಿವಾಹಮಾಡಿಕೊಳ್ಳಲೋಸುಗ ಯೋಗ್ಯರು ಎಂಬದಾಗಿ ಸಾಗರದತ್ತಶ್ರೇಷ್ಠಿಯು ಜೀವಂಧರಕುಮಾರನನ್ನು ಕುರಿತು ಹೇಳಿದನು. ॥೨೦॥

ಶ್ಲೋಕ॥ ತನ್ನಿರ್ಬನ್ಧಾದಯಂ ಚಾಭೂ-
ದನುಮನ್ತಾ ತಥಾವಿಧೌ ।
ವಾಂಛಿತೇರ್ಥೇಽಪಿ ಕಾತರ್ಯಂ
ವಶಿನಾಂ ನ ಹಿ ದೃಶ್ಯತೇ ॥ ೨೧ ॥

ಟೀ ॥ ತನ್ನಿರ್ಬಂಧಾತ್-ತತ್-ಆ ಸಾಗರದತ್ತನ, ನಿರ್ಬಂಧಾತ್-ನಿರ್ಬಂಧದ ದೆಸೆಯಿಂದ, ಅಯಂ ಚ-ಈ ಜೀವಂಧರಕುಮಾರನೂಕೂಡ, ತಥಾ-ಆ ಪ್ರಕಾರವಾದ, ವಿಧೌ-ಮದುವೆಯವಿಷಯದಲ್ಲಿ, ಅನುಮಂತಾ(ಸನ್)-ಸಮ್ಮತಿಸಿದವನಾಗಿ, ಅಭೂತ್-ಆದನು., ವಶಿನಾಂ-ಜಿತೇಂದ್ರಿಯರಿಗೆ, ವಾಂಛಿತಾರ್ಥೇಽಪಿ-ವಾಂಛಿತ-ಅಪೇಕ್ಷಿಸಲ್ಪಟ್ಟ, ಅರ್ಥೇಽಪಿ-ಫಲದಲ್ಲಿಯೂಕೂಡ, ಕಾತರ್ಯಂ-ಭೀತಿಯು, ನದೃಶ್ಯತೇ ಹಿ-ಕಾಣಲ್ಪಡುವುದಿಲ್ಲವಷ್ಟೆ?.

ತಾತ್ಪರ್ಯ ॥ ಆ ಸಾಗರದತ್ತಶ್ರೇಷ್ಠಿಯ ನಿರ್ಬಂಧದ ದೆಸೆಯಿಂದ ಈ ಜೀವಂಧರಕುಮಾರನೂಕೂಡ ಆ ವಿಮಲೆಯವಿವಾಹದಲ್ಲಿ ಸಮ್ಮತಿಸಿದನು. ಜಿತೇಂದ್ರಿಯರಿಗೆ ತಮಗಿಷ್ಟವಲ್ಲದ ಕೆಲಸದಲ್ಲಿ ಮನಸ್ಸು ಭಯಪಡುವುದೇಹೊರತು, ಇಷ್ಟವಾದ ಕೆಲಸದಲ್ಲಿಯೂ ಭೀತಿಯುಂಟೆ?॥೨೧

ಶ್ಲೋಕ॥ ಅಥ ಸಾಗರದತ್ತೇನ
ದತ್ತಾಂ ಸತ್ಯಂಧರಾತ್ಮಜಃ ।

ವ್ಯವಹದ್ವಿಮಲಾಂ ಕನ್ಯಾಂ
ಹವ್ಯವಾಹ ಸಮಕ್ಷಕಮ್ ‖ ೭೩ ‖

ಟೀ ‖ ಅಥ-ಅನಂತರದಲ್ಲಿ, ಸಾಗರದತ್ತೇನ- ಸಾಗರದತ್ತಶ್ರೇಷ್ಠಿಯಿಂದ, ದತ್ತಾಂ-ಕೊಡಲ್ಪಟ್ಟ, ವಿಮಲಾಂ-ವಿಮಲೆಯೆಂಬ, ಕನ್ಯಾಂ-ಕನ್ನಿಕೆಯನ್ನು, ಸತ್ಯಂಧರಾತ್ಮಜಃ-ಸತ್ಯಂಧರಮಹಾರಾಜನ ಮಗನಾದ ಜೀವಂಧರಕುಮಾರನು, ಹವ್ಯವಾಹಸಮಕ್ಷಕಂ (ಯಥಾತಥಾ)- ಅಗ್ನಿಸಾಕ್ಷಿಯಾಗಿರೋಣಹೇಗೋ ಹಾಗೆ, ವ್ಯವಹತ್-ವಿವಾಹಮಾಡಿಕೊಂಡನು.

ತಾತ್ಪರ್ಯ‖ ಅನಂತರದಲ್ಲಿ ಸತ್ಯಂಧರಮಹಾರಾಜನ ಮಗನಾದ ಜೀವಂಧರಸ್ವಾಮಿಯು ಸಾಗರದತ್ತಶ್ರೇಷ್ಠಿಯಿಂದ ಕೊಡಲ್ಪಟ್ಟ ವಿಮಲೆಯೆಂಬ ಆ ಕನ್ನಿಕೆಯನ್ನು ಅಗ್ನಿಸಾಕ್ಷಿಯಾಗಿರೋಣ ಹೇಗೋ ಹಾಗೆ ಅಂದರೆ (ಶಾಸ್ತ್ರೋಕ್ತ ಪ್ರಕಾರವಾಗಿ) ವಿವಾಹ ಮಾಡಿಕೊಂಡನು.

ಇಂತು ಜೀವಂಧರಕುಮಾರನು ಕನಕಮಾಲಾವಿವಾಹಾನಂತರ ಆಕೆಯೊಳಾಸಕ್ತಚಿತ್ತನಾಗಿ ಭಾವಮೈದುನರಲ್ಲತ್ಯಂತವಾತ್ಸಲ್ಯದಿಂ ಬಹುಕಾಲ ಅಲ್ಲಿಯೇ ವಾಸ ಮಾಡಿಕೊಂಡಿರಲು, ಓರ್ವಸ್ತ್ರೀಯು ತಮ್ಮನಾದ ನಂದಾಢ್ಯನ ಆಗಮನವಂ ತಿಳಿಸಲು, ತಮ್ಮನೇವೊಡಲಾದ ಪ್ರಿಯಬಂಧುಜನರಕುಶಲಪ್ರಶ್ನೆಯ ಮಧ್ಯದೊಳು ತಾಯಿಯಾದ ವಿಜಯಾಮಹಾದೇವಿಯ ವೃತ್ತಾಂತಮಂ ಕೇಳ್ದತ್ಯಂತವ್ಯಸನಮಂತಾಳ್ದು, ಮಿತ್ರವರ್ಗಸಹಿತನಾಗಿ ಮಾತೃದರ್ಶನಮಂ ಗೈದು, ದುಃಖಿಸುವ ತಾಯಿಯಂ ಸಮಾಧಾನಪಡಿಸಿ, ಸೋದರಮಾವನ ಸಮೀಪವನ್ನೈದಿಸಿ, ಆ ದಂಡಕಾರಣ್ಯದಿಂ ಮಿತ್ರವರ್ಗದೊಡನೆ ಪೊರಮಟ್ಟು ರಾಜಪುರೀಪಟ್ಟಣದ ಸಮೀಪದಲ್ಲಿರುವ ಉದ್ಯಾನದೊಳು ಮಿತ್ರರನ್ನಿರಿಸಿ, ಆ ರಾಜಪುರೀ ಪೊಳಲಂ ಪ್ರವೇಶಿಸಿ ರಾಜಬೀದಿಯೊಳು ಪೋಗುತಿರಲು, ಸೌಧಾಗ್ರದೊಳು ಕಂದುಕ ಕ್ರೀಡಾಪರಳಾದ ವಿಮಲೆಯೆಂಬ ಕನ್ನಿಕೆಯಂ ವೀಕ್ಷಿಸಿ, ವಿವಾಹಮಾಡಿಕೊಂಡನೆಂಬಲ್ಲಿಗೆ,

ಶ್ರೀಮದ್ವಾದೀಭಸಿಂಹಸೂರಿ ಎಂಬ ಮಹಾಕವಿಯಿಂ ವಿರಚಿತಮಾದ
ಕ್ಷತ್ರಚೂಡಾಮಣಿಮಹಾಕಾವ್ಯದೊಳು ಎಂಟನೆಯ ಲಂಬನು
ಸಮಾಪ್ತಮಾದುದು.

---



ಶ್ರೀರಸ್ತು.

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ,

# ನವಮೋಲಂಬಃ.

ಶ್ಲೋಕ॥ ಅಥ ವ್ಯೂಢಾಮತಿಸ್ನಿಗ್ಧಾಂ
ಗಾಢಸ್ನೇಹೋನ್ವಭೂದಿಮಾಮ್ ।
ವಾಂಛಿತಾಯದಿ ವಾಂಛೇಯುಃ
ಸಸಾರೈರೇವ ಸಂಸೃತಿಃ ॥ ೧ ॥

ಟೀ॥ ಅಥ-ಅನಂತರದಲ್ಲಿ, ವ್ಯೂಢಾಂ-ಮದುವೆಮಾಡಿಕೊಳ್ಳಲ್ಪಟ್ಟ, ಅತಿಸ್ನಿಗ್ಧಾಂ-ಅತ್ಯಂತಪ್ರಿಯಳಾದ, ಇಮಾಂ-ಈ ವಿಮಲೆಯನ್ನು, ಸಃ-ಆ ಜೀವಂಧರಸ್ವಾಮಿಯು, ಗಾಢಸ್ನೇಹ(ಸ್ಸನ್)– ಗಾಢ-ದೃಢವಾದ (ಅಧಿಕವಾದ), ಸ್ನೇಹ(ಸ್ಸನ್)-ಪ್ರೀತಿಯುಳ್ಳವನಾಗಿ, ಅನ್ವಭೂತ್-ಅನುಭವಿಸಿದನು., ವಾಂಛೇಯುರ್ಯದಿ– ಅಪೇಸಿದುದೇ ಆದರೆ, ವಾಂಛಿತಾ-ಅಪೇಕ್ಷಿಸಲ್ಪಟ್ಟ, ಸಂಸೃತಿಃ-ಸಂಸಾರವು, ಸಸಾರೈವ-ಸಾರದೊಡಗೂಡಿದುದೇ ಅಲ್ಲವೆ?.

ತಾತ್ಪರ್ಯ ॥ ಅನಂತರದಲ್ಲಿ, ವಿವಾಹ ಮಾಡಿಕೊಳ್ಳಲ್ಪಟ್ಟ ಆ ವಿಮಲೆಯೆಂಬುವಳನ್ನು ಅತ್ಯಂತಪ್ರೀತಿಯುಳ್ಳವನಾಗಿಅನುಭವಿಸಿದನು. ಅಪೇಕ್ಷಿಸಿದುದೇ ಆದರೆ ಸಂಸಾರವೂಕೂಡ ಸಾರದೊಡಗೂಡಿದುದಾಗಿಯೇ ಆಗುವುದಷ್ಟೆ? ॥೧॥

ಶ್ಲೋಕ॥ ತತೋನುಸೀಯತಾಂ ಹಿತ್ವಾ
ಸಮಿತ್ರೈಃ ಸ್ವಮಗಚ್ಛತ ।
ಅನ್ಯರೋಧೋ ನ ಹಿ ಕ್ವಾಪಿ
ವರ್ತತೇ ವಶಿನಾಂ ಮನಃ ॥ ೨ ॥

ಟೀ॥ ತತಃ-ಅನಂತರದಲ್ಲಿ, ತಾಂ-ಆ ವಿಮಲೆಯನ್ನು, ಅನುಸೀಯ-ಸಮಾಧಾನಪಡಿಸಿ, ಹಿತ್ವಾ-ಬಿಟ್ಟು, ಸಃ-ಆ ಜೀವಂಧರ ಕುಮಾರನು, ಮಿತ್ರೈಃ-ಸ್ನೇಹಿತರೊ

ಡನೆ, ಸಮಗಚ್ಛತ-ಸೇರಿದನು., ವಶಿನಾಂ-ಜಿತೇಂದ್ರಿಯರ, ಮನಃ-ಮನಸ್ಸು, ಅನ್ಯರೋಧಿ (ಸತ್)-ಬೇರೆಜನದಿಂದ ತಡೆಯುಳ್ಳದ್ದಾಗಿ, ಕ್ವಾಪಿ-ಎಲ್ಲಿಯೂ, ನವರ್ತತೇಹಿ-ಇರುವುದಿಲ್ಲವಷ್ಟೆ ?.

ತಾತ್ಪರ್ಯ ॥ ಅನಂತರದಲ್ಲಿ ಆ ವಿಮಲೆಯನ್ನು ಸಮಾಧಾನಪಡಿಸಿ ಅವಳನ್ನು ಬಿಟ್ಟು ತನ್ನ ಸ್ನೇಹಿತರೊಡನೆ ಜೀವಂಧರ ಕುಮಾರನು ಸೇರಿದನು. ಜಿತೇಂದ್ರಿಯರ ಮನಸ್ಸು ಇತರರಿಂದ ತಡೆಯಲ್ಪಟ್ಟು ತಮಗಿಷ್ಟವಾದ ಕೆಲಸಪಡೆಸೆಯಿಂದ ಹಿಂದಿರುಗುವುದಿಲ್ಲವಷ್ಟೆ? (ಮನಸ್ಸನ್ನು ಸ್ವಾಧೀನಪಡಿಸಿಕೊಂಡಿರುವ ವಿವೇಕಿಗಳು ಯಾರುತಡೆದರೂ ತಾವು ಅಪೇಕ್ಷಿಸಿರುವ ಕೆಲಸವಂ ಬಿಡರೆಂಬಭಿಪ್ರಾಯವು.)॥೨॥

ಶ್ಲೋಕ॥ ವರಚಿಹ್ನಂ ತಮಾಲೋಕ್ಯ
ಬಹ್ವಮನ್ಯಂತ ಬಾಂಧವಾಃ ।
ಐಹಿಕಾತಿಶಯಪ್ರೀತಿ-
ರತಿಮಾತ್ರಾ ಹಿ ದೇಹಿನಾಮ್ ॥ ೩ ॥

ಟೀ ॥ ಬಾಂಧವಾಃ-ಬಂಧುಜನಗಳು, ವರಚಿಹ್ನಂ– ವರ- ಮದುವೆಗಂಡಾದ ವರನ, ಚಿಹ್ನಂ-ಗುರುತುಗಳುಳ್ಳ, ತಂ-ಆ ಜೀವಂಧರಸ್ವಾಮಿಯನ್ನು, ಆಲೋಕ್ಯ-ನೋಡಿ, ಬಹ್ವಮನ್ಯಂತ-ಶ್ಲಾಘಿಸಿದರು , ದೇಹಿನಾಂ-ಪ್ರಾಣಿಗಳಿಗೆ, ಐಹಿಕಾತಿಶಯಪ್ರೀತಿಃ_ಐಹಿಕ-ಈ ಲೋಕಸಂಬಂಧಿಯಾದ, ಅತಿಶಯ-ಅತಿಶಯದಲ್ಲಿ, ಪ್ರೀತಿಃ-ಪ್ರೀತಿಯು, ಅತಿಮಾತ್ರಾಹಿ-ಅಪರಿಮಿತವಾದದ್ದಲ್ಲವೆ?.

ತಾತ್ಪರ್ಯ॥ ಅರಿಸಿನ ಧೋತ್ರವನ್ನುಟ್ಟು ಕಂಕಣ ಹಸ್ತನಾಗಿ ಮದುವೆ ಗುರುತಿನ ಚಿಹ್ನೆಗಳೊಡಗೂಡಿ ಬರುವ ಜೀವಂಧರಸ್ವಾಮಿಯನ್ನು ಬಂಧುಜನಗಳು ನೋಡಿ ಬಹಳವಾಗಿ ಶ್ಲಾಘಿಸಿದರು. ಪ್ರಾಣಿಗಳಿಗೆ ಈ ಲೋಕಸಂಬಂಧಿಯಾದ ಫಲದ ಅತಿಶಯದಲ್ಲಿರುವ ಪ್ರೀತಿಯು ಪರಿಮಿತಿಯನ್ನು ಮೀರಿರುವದಲ್ಲವೆ ? ॥೩॥

ಶ್ಲೋಕ॥ ಅಬ್ರವೀದಸ್ಯ ಸೋತ್ಪ್ರಾಸಂ
ಬುದ್ಧಿಷೇಣ ವಿದೂಷಕಃ ।
ಬಹುದ್ವಾರಾ ಹಿ ಜೀವಾನಾಂ
ಪರಾರಾಧನ ದೀನತಾ ॥ ೪ ॥

ಟೀ ॥ ಬುದ್ಧಿಷೇಣವಿದೂಷಕಃ–ಬುದ್ಧಿಷೇಣ- ಬುದ್ಧಿಷೇಣನೆಂಬ, ವಿದೂಷಕಃ-ಹಾಸ್ಯಗಾರನು (ಪರಿಹಾಸವೇ ಸ್ವಭಾವವಾಗಿವುಳ್ಳವನು), ಸೋತ್ಪ್ರಾಸಂ(ಸುಭಾಷಿತಂ)-ಪರಿಹಾಸದೊಡನೆಕೂಡಿರೋಣ ಹೇಗೋಹಾಗೆ, ಅಸ್ಯ- ಈ ಜೀವಂಧರಸ್ವಾಮಿಯುವಿಷಯದಲ್ಲಿ, ಅಬ್ರವೀತ್-ಹೇಳಿದನು., ಜೀವಾನಾಂ- ಪ್ರಾಣಿಗಳಿಗೆ, ಪರಾರಾಧನದೀನತಾ–ಪರ-ಇತರರ, ಆರಾಧನ-ಪೂಜಿಸೋಣದಲ್ಲಿ, ದೀನತಾ - ದೀನಭಾವವು, ಬಹುದ್ವಾರಾಹಿ-ನಾನಾಮುಖವಾಗಿಧೆಯಲ್ಲವೆ ?.

ತಾತ್ಪರ್ಯ ॥ ಈ ಜೀವಂಧರಕುಮಾರನಿಗೆ ಸ್ನೇಹಿತನಾದ ಬುದ್ಧಿಷೇಣನೆಂಬ ಹಾಸ್ಯಗಾರನು ಪರಿಹಾಸದೊಡಗೂಡಿರೋಣ ಹೇಗೋಹಾಗೆ ಜೀವಂಧರಕುಮಾರನು ಕುರಿತು ಒಂದು ಮಾತನ್ನಾಡಿದನು. ಪ್ರಾಣಿಗಳಿಗೆ ಪರರನ್ನು ಸಂತೋಷಪಡಿಸತಕ್ಕ ಉಪಾಯಗಳು ನಾನಾ ಬಗೆಯಾಗಿವೆಯಲ್ಲವೆ? ( ಆಶ್ರಿತಜನಗಳು ಪ್ರಭುವಿನಚಿತ್ತವನ್ನೊಲಿಸುವುದಕ್ಕೆ ಒಬ್ಬೊಬ್ಬರೊಂದೊಂದುಪಾಯವಂ ಬಲ್ಲವರಲ್ಲವೆ? ಪರಚಿತ್ತಾನುವರ್ತನೆಯು ನಾನಾವಿಧವಾಗಿದೆಯೆಂದಭಿಪ್ರಾಯವು) ॥೪॥

ಶ್ಲೋಕ ॥ ಸುಲಭಾಃ ಖಲು ದೌರ್ಭಾಗ್ಯಾ-
ದನ್ಯೋಪೇಕ್ಷಿತ ಕನ್ಯಕಾಃ ।
ವ್ಯೂಢಾಯಾಂ ಸುರಮಂಜರ್ಯಾಂ
ಪೌರೋಭಾಗ್ಯಂ ಭವೇದಿತಿ ॥ ೫ ॥

ಟೀ ॥ ಅನ್ಯೋಪೇಕ್ಷಿತಕನ್ಯಕಾಃ–ಅನ್ಯ-ಇತರರಿಂದ, ಉಪೇಕ್ಷಿತ- ಉಪೇಕ್ಷಿಸಲ್ಪಟ್ಟ, ಕನ್ಯಕಾಃ-ಕನ್ನಿಕೆಗಳು,ದೌರ್ಭಾಗ್ಯಾತ್-ದುರದೃಷ್ಟವಶದಿಂದ, ಸುಲಭಾಃ ಖಲು-ಶ್ರಮವಿಲ್ಲದೆ ದೊರಕುತ್ತವೆಯಲ್ಲವೆ?. ಸುರಮಂಜರ್ಯಾಂ-ಸುರಮಂಜರಿಯು, ವ್ಯೂಢಾಯಾಂ(ಸತ್ಯಾಂ)-ವಿವಾಹಮಾಡಿಕೊಳ್ಳಲ್ಪಡುತಲಿರಲಾಗಿ, ಪೌರೋಭಾಗ್ಯಂ-ಸೌಭಾಗ್ಯವು(ಒಳ್ಳೇಅದೃಷ್ಟಶಾಲಿಗಳೊಳಗ್ರಗಣ್ಯಾನೆನಿಸುವಿಕೆಯು), ಭವೇತ್-ಉಂಟಾದೀತು?, ಇತಿ-ಹೀಗೆಂದು, ಆಹ-ಹೇಳಿದನು.

ತಾತ್ಪರ್ಯ ॥ ಯಾರೂ ವಲ್ಲದೆ ಬಿಟ್ಟಿರುವ ಕನ್ನಿಕೆಯರು ಲೋಕದಲ್ಲಿ ದುರದೃಷ್ಟದಿಂದ ಬೇಕಾದಷ್ಟು ದೊರಕುತ್ತವೆ. ಸುರಮಂಜರಿಯು ವಿವಾಹಮಾಡಿಕೊಳ್ಳಲ್ಪಡುತ್ತಿರಲಿಕ್ಕಾಗಿ ಎಲ್ಲರಿಗಿಂತಲೂ ಉತ್ಕೃ

ಷ್ಟಭಾಗ್ಯಶಾಲಿಯೆನಿಸುವೆ. ಎಂದು ಬುದ್ಧಿಷೇಣನು ಜೀವಂಧರಕುಮಾರನಂ ಕುರಿತು ಪರಿಹಾಸದಿಂದ ಪೇಳಿದನು.) ॥೫॥

ಶ್ಲೋಕ ॥ ತದ್ವಾಕ್ಯಾದಯಮುದ್ವೋಢು-
ಮವಾಂಛತ್ತಾಂಚ ಮಾನಿನೀಮ್ ।
ಹೇತುಚ್ಛಲೋಪ(ಪಾ)ಲಂಭೇನ
ಜೃಂಭತೇ ಹಿ ದುರಾಗ್ರಹಃ ॥ ೬ ॥

ಟೀ ॥ ಅಯಂ-ಈ ಜೀವಂಧರಸ್ವಾಮಿಯು, ತದ್ವಾಕ್ಯಾತ್– ತತ್-ಆ ಬುದ್ಧಿಷೇಣನ, ವಾಕ್ಯಾತ್- ವಚನಪದೆಸೆಯಿಂದ, ಮಾನಿನೀಂ - ಗಂಡಸರಲ್ಲಿ ದ್ವೇಷವುಳ್ಳ, ತಾಂಚ-ಆ ಸುರಮಂಜರಿಯನ್ನು ಕೂಡ, ಉದ್ವೋಢುಂ - ವಿವಾಹಮಾಡಿಕೊಳ್ಳಲೋಸುಗ, ಅವಾಂಛತ್-ಇಚ್ಛೈಯಿಸಿದನು., ಹೇತುಚ್ಛಲೋಪಲಂಭೇನ – ಹೇತು-ಕಾರಣದ (ಮತ್ತೊಂದು ಪ್ರಯೋಜನಕ್ಕೆ), ಛಲ-ನೆಪದ, ಉಪಲಂಭೇನ- ಪ್ರಾಪ್ತಿಯಿಂದ ಉಂಟಾದ, (ಉಪಾಲಂಭೇನ-ತಿರಸ್ಕಾರದಿಂದ,) ದುರಾಗ್ರಹಃ-ದುಷ್ಟ ಆಗ್ರಹವು (ಹಠವು), ಜೃಂಭತೇಹಿ- ವೃದ್ಧಿಹೊಂದುತ್ತದೆಯಲ್ಲವೆ?.

ತಾತ್ಪರ್ಯ ॥ ಆ ಜೀವಂಧರಕುಮಾರನು ಆ ಬುದ್ಧಿಷೇಣನ ಪರಿಹಾಸವಚನದ ದೆಸೆಯಿಂದ ಪುರುಷರಲ್ಲಿ ಮಹಾ ದ್ವೇಷವುಳ್ಳ ಆ ಸುರಮಂಜರಿಯನ್ನು ಮದುವೆಮಾಡಿಕೊಳ್ಳಲೋಸುಗ ಇಚ್ಛೈಸಿದನು. ಕಾರಣವಾದ ನೆಪವುಳ್ಳ ತಿರಸ್ಕಾರದಿಂದ ದುರಾಗ್ರಹವು ವೃದ್ಧಿಹೊಂದುವುದಲ್ಲವೆ? (ಹೇತುಚ್ಛಲೋಪಾಲಂಭೇನಎಂಬದಾಗಿಪಾಠಾಂತರವಿದ್ದಲ್ಲಿ ಈತಾತ್ಪರ್ಯ) ಲೋಕದಲ್ಲಿ ಒಂದು ಪ್ರಯೋಜನಕ್ಕೋಸುಗ ಮಿತ್ರರು ಒಂದುನೆಪದಿಂದ ತಿರಸ್ಕಾರಮಾಡೋಣದರಿಂದ, ಆ ತಿರಸ್ಕಾರವಂ ಸಹಿಸಲಾರದೆ ಜರಿಯಲ್ಪಟ್ಟವನು ಹಠದಿಂದ ಹೇಗಾದರೂ ಆಗ್ರಹ ಉಂಟಾಗಿ ಆ ಪ್ರಯೋಜನನಂ ಸಾಧಿಸಿದಲ್ಲದೆ ಬಿಡುವುದಿಲ್ಲವಷ್ಟೆ? ॥೬॥

ಶ್ಲೋಕ॥ ತತ್ರಾಪ್ಯುಪಯಿಕಂ ಭೂಯೋ
ಯಕ್ಷಮಂತ್ರಂ ವ್ಯಚೀಚರತ್ ।
ಅನುಪಾಯಾದುಪಾಯಾದ್ಧಿ
ನಾಂಛತಾಪ್ತಿರ್ಮನೀಷಿಣಾಮ್ ॥ ೭ ॥

ಟೀ॥ (ಸಃ-ಆ ಜೀವಂಧರಕುಮಾರನು,) ತತ್ರಾಪಿ-ಆ ಸುರಮಂಜರೀವಿವಾಹ ವಿಷಯದಲ್ಲಿಯೂಕೂಡ, ಭೂಯಃ-ಬಹಳವಾಗಿ, ಉಪಯುಕ್ತಂ-ಉಪಯುಕ್ತವಾದ, ಯಕ್ಷಮಂತ್ರಂ-ಯಕ್ಷ-ಸುದರ್ಶನಯಕ್ಷನಿಂದುಪದೇಶಿಸಲ್ಪಟ್ಟ, ಮಂತ್ರಂ-ಕಾಮರೂಪಮಂತ್ರವನ್ನು, ಸ್ಮರತಿಸ್ಮ-ಸ್ಮರಿಸಿದನು. (ಯಕ್ಷಮಂತ್ರಂ-ಸುದರ್ಶನ ಯಕ್ಷನಿಂದುಪದೇಶಿಸಲ್ಪಟ್ಟ ಮಂತ್ರವನ್ನು, ಭೂಯಃ-ಬಹಳವಾಗಿ, ಉಪಯುಕ್ತಂ (ಸನ್ತಂ)-ಉಪಯುಕ್ತವಾದ್ದಾಗಿ, ಸ್ಮರತಿಸ್ಮ-ಸ್ಮರಿಸಿದನೆಂತಲೂ ಅನ್ವಯವು) ಮನೀಷಿಣಾಂ-ಬುದ್ಧಿಶಾಲಿಗಳಿಗೆ, ಅನಪಾಯಾತ್-ಅಪಾಯವಿಲ್ಲದಿರುವ, ಉಪಾಯಾತ್-ಉಪಾಯವಿಶೇಷದಿಂದ, ವಾಂಛಿತಾರ್ಥಾಪ್ತಿಃ-ವಾಂಛಿತ-ಇಷ್ಟಾರ್ಥದ, ಆಪ್ತಿಃ-ಪ್ರಾಪ್ತಿಯುಂಟಾಗುವುದಲ್ಲವೆ?.

ತಾತ್ಪರ್ಯ ॥ ಜೀವಂಧರಕುಮಾರನು ಅತ್ಯಂತ ದುರ್ಘಟವಾದ ಸುರಮಂಜರೀ ವಿವಾಹಕ್ಕೆ ತಕ್ಕ ಉಪಾಯವು ಯಾವುದೆಂದಾಲೋಚಿಸಿ, ಪೂರ್ವದಲ್ಲಿ, ಶ್ವಾನಜನ್ಮದಲ್ಲಿದ್ದು ತನ್ನ ಪ್ರಾಣೋತ್ಕ್ರಮಣ ಸಮಯದಲ್ಲಿ ಪರಮದಯಾಳುವಾದ ಜೀವಂಧರಕುಮಾರನಿಂದುಪದೇಶಿಸಲ್ಪಟ್ಟ ಪಂಚ ಪರಮೇಷ್ಠಿ ಮಹಾ ಮಂತ್ರಪ್ರಭಾವದಿಂದ ದೇವತ್ವವುಪಡೆದು ಸುದರ್ಶನಯಕ್ಷನೆನಿಸಿದ ಪರಮಮಿತ್ರನಿಂದುಪದೇಶಿಸಲ್ಪಟ್ಟಿರುವ ಮಂತ್ರವನ್ನು ಇದಕ್ಕೆ ತಕ್ಕ ಉಪಾಯವೆಂದು ನಿರ್ಣಯಿಸಿದನು. ಬುದ್ಧಿಶಾಲಿಗಳಿಗೆ ಅಪಾಯವಿಲ್ಲದ ಉಪಾಯದಿಂದಲಲ್ಲವೆ ಕಾರ್ಯಸಿದ್ಧಿಯಾಗುವುದು? ॥೭॥

ಶ್ಲೋಕ॥ ವಾರ್ಧಕಂ ತತ್ರ ಚೋಪಾಯ-
ಮುಪಾಯಜ್ಞೋಯಮೂಹತ ।
ಕರುಣಾಮಾತ್ರಪಾತ್ರಂ ಹಿ
ಬಾಲವೃದ್ಧಾಷ್ಟದೇಹಿನಾಮ್[6] ॥ ೮ ॥

ಟೀ॥ ಉಪಾಯಜ್ಞಃ-ಉಪಾಯವನ್ನು ತಿಳಿದಿರುವ, ಅಯಂ- ಈ ಜೀವಂಧರಸ್ವಾಮಿಯು, ತತ್ರಚ-ಆ ಸುರಮಂಜರೀ ವಿವಾಹವಿಷಯದಲ್ಲಿಯೂಕೂಡ, ವಾರ್ಧಕಂ-ಮುಪ್ಪನ್ನು, ಉಪಾಯಂ(ಸಂತಂ)- ಉಪಾಯವನ್ನಾಗಿ, ಊಹತ- ಊಹಿಸಿದನು., ಬಾಲಾಃ-ಮಕ್ಕಳೂ, ವೃದ್ಧಾಃ-ಮುದುಕರೂಕೂಡ, ದೇಹಿನಾಂ-ಪ್ರಾಣಿ

ಗಳಿಗೆ, ಕರುಣಾಮಾತ್ರಪಾತ್ರಂಹಿ-ಕರುಣಾಮಾತ್ರ-ಕರುಣೆಗೇನೇ, ಪಾತ್ರಂಹಿ-ವಿ ಷಯೀಭೂತರಲ್ಲವೆ ?.

ತಾತ್ಪರ್ಯ॥ ಉಪಾಯವನ್ನು ತಿಳಿದಿರುವ ಜೀವಂಧರಸ್ವಾಮಿಯು ಸುರಮಂಜರೀ ವಿವಾಹ ವಿಷಯದಲ್ಲಿ ಮುಪ್ಪಿನವಯಸ್ಸನ್ನು ಒಳ್ಳೇಉಪಾಯವನ್ನಾಗಿ ಊಹಿಸಿದನು. ಮಕ್ಕಳೂ, ವೃದ್ಧರೂ ಇವರುಗಳು ಪ್ರಾಣಿದಯೆಗೆ ಯೋಗ್ಯರೇ ಹೊರತು ಧಿಕ್ಕರಿಸಲೋಸುಗ ಯೋಗ್ಯರಲ್ಲವಷ್ಟೆ? (ಅತ್ಯಂತ ವೃದ್ಧರೂಪದಿಂ ಪ್ರವೇಶಿಸಿದರೆ ಸುರಮಂಜರೀ ಮನೆಯಂ ಪ್ರವೇಶಿಸಬಹುದೇ ಹೊರತು ಯೌವನಸ್ಥನಾಗಿ ಪ್ರವೇಶಿಸಲಶಕ್ಯವೆಂದು ಊಹಿಸಿ ಯಕ್ಷನಿಂದುಪದೇಶಿಸಲ್ಪಟ್ಟಿರುವ ಮೂರುಮಂತ್ರಗಳಲ್ಲಿ ಕಾಮರೂಪಮಂತ್ರವಂ ಭಾವಿಸಿದನೆಂದಭಿಪ್ರಾಯವು.) ಮುದುಕರು ಅಪರಾಧಪಟ್ಟರೂ ಲೋಕದಲ್ಲಿ ಪ್ರಾಣಿಗಳು ದಯೆಯಿಂದ ಕ್ಷಮಿಸುವರೇ ಹೊರತು ನಿಗ್ರಹಿಸಲಾರರಲ್ಲವೆ?॥೪॥

ಶ್ಲೋಕ॥ ವಾರ್ಧಕಂ ತತ್ಕ್ಷಣೇ ಚಾಸ್ಯ
ಮನ್ತ್ರಮಾಹಾತ್ಮ್ಯತೋ ಭವತ್ ।
ಅನವದ್ಯಾಸತೀ ವಿದ್ಯಾ
ಫಲಮೂಕಾ ಹಿ ಕಿಂ ಭವೇತ್ ॥ ೯॥

ಟೀ॥ ವಾರ್ಧಕಂ-ವೃದ್ಧರೂಪವು, ತತ್ಕ್ಷಣೇಚ-ಆ ಕ್ಷಣದಲ್ಲಿಯೇ, ಅಸ್ಯ-ಈ ಜೀವಂಧರಸ್ವಾಮಿಗೆ, ಮಂತ್ರಮಾಹಾತ್ಮ್ಯತಃ-ಮಂತ್ರ-ಮಂತ್ರದ, ಮಾಹಾತ್ಮ್ಯತಃ-ಮಹಿಮೆಯುದೆಸೆಯಿಂದ, ಅಭವತ್-ಉಂಟಾಯಿತು., (ತಥಾಹಿ-ಹಾಗೆಯೇ ಸರಿ;) ಅನವದ್ಯಾ-ನಿರ್ದೋಷವಾದ, ಸತೀ-ಶ್ರೇಷ್ಠವಾದ, ವಿದ್ಯಾ-ವಿದ್ಯೆಯು, ಫಲಮೂಕಾ(ಸತೀ)-ವ್ಯರ್ಥವಾಗಿ, ಭವೇತ್ಕಿಂ-ಆದೀತೇ ಏನು ?.

ತಾತ್ಪರ್ಯ॥ ಜೀವಂಧರಸ್ವಾಮಿಯು ಆ ಯಕ್ಷೋಪದೇಶ ಮಂತ್ರವನ್ನು ಧ್ಯಾನಿಸಿದವನಾಗಲು, ಆ ಕ್ಷಣದಲ್ಲಿಯೇ ತನ್ಮಂತ್ರ ಮಾಹಾತ್ಮ್ಯದೆಸೆಯಿಂದ ವೃದ್ಧರೂಪವುಂಟಾದುದು. ನಿರ್ದೋಷವಾದ ವಿದ್ಯೆಯು ಫಲವಾಗುವುದೇ ಹೊರತು ಎಂದಿಗೂ ನಿಷ್ಫಲವಾಗಲಾರದಷ್ಟೆ? ಅದಕ್ಕಾ

ಈ ನಿರ್ದೋಷವಾದ ಆ ಮಂತ್ರವು ಜೀವಂಧರಸ್ವಾಮಿಗೆ ತತ್ಕ್ಷಣವೇ ಆ ಕಾಲಕ್ಕೆಉಚಿತವಾದ ವೃದ್ಧರೂಪವನ್ನುಂಟುಮಾಡಿತು. ॥೯॥

ಶ್ಲೋಕ॥ ವಿಜಹಾರ ಪುನಶ್ಚಾಯಂ
ವರ್ಷೀಯಾನ್ಪರಿತಃ ಪುರೀಮ್ ।
ಅನ್ಯೈರಶಂಕನೀಯಾ ಹಿ
ವೃತ್ತಿರ್ನೀತಿಜ್ಞ ಗೋಚರಾ ॥ ೧೦ ॥

ಟೀ ॥ ವರ್ಷೀಯಾನ್- ವೃದ್ಧನಾದ, ಅಯಂ - ಈ ಜೀವಂಧರಸ್ವಾಮಿಯು, ಪುನಶ್ಚ-ತಿರಿಗಿಯೂಕೂಡ, ಪುರೀಂ ಪರಿತಃ-ರಾಜಪುರೀಪಟ್ಟಣದ ಸುತ್ತಲೂ, ವಿಜಹಾರ-ವಿಹರಿಸಿದನು., ನೀತಿಜ್ಞಗೋಚರಾ– ನೀತಿಜ್ಞ- ನೀತಿಯನ್ನು ತಿಳಿದವನಿಗೆ, ಗೋಚರಾ-ತಿಳಿಯಲ್ಪಟ್ಟಿರುವ, ವೃತ್ತಿಃ-ಕೆಲಸವು, ಅನ್ಯೈಃ- ನೀತಿಯನ್ನರಿಯದ ಮೂಢರಿಂದ, ಅಶಂಕನೀಯಾ ಹಿ-ಸಂದೇಹಪಡುವುದಕ್ಕೆ ಕೂಡ ಕಾರಣವಾಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ಅನಂತರದಲ್ಲಿ ವೃದ್ಧನಾದ ಜೀವಂಧರಸ್ವಾಮಿಯು ಪಟ್ಟಣದಸುತ್ತಲೂ ಮರಳಿಯೂ ಸಂಚರಿಸಿದನು. ನೀತಿಯನ್ನು ತಿಳಿದವನು ಒಂದು ಕಾರ್ಯಸಾಧನೆಗೋಸ್ಕರ ಮಾಡುವ ಉಪಾಯಕೆಲಸವನ್ನು ಇತರರು ಎಷ್ಟು ಬುದ್ಧಿಶಾಲಿಗಳಾದಾಗ್ಯೂ ಸಂದೇಹಿಸಲು ಕೂಡ ಶಕ್ತರಲ್ಲವಷ್ಟೆ? (ನೀತಿಜ್ಞರು ಉಪಾಯ ಪ್ರಯೋಗದಲ್ಲಿ ಅಷ್ಟು ಸಮರ್ಥರೆಂದಭಿಪ್ರಾಯವು.) ॥೧೦॥

ಶ್ಲೋಕ॥ ಪ್ರವಯೋವಿಪ್ರವೇಷಂ ತಂ
ವೀಕ್ಷಮಾಣಾ ವಿವೇಕಿನಃ ।
ವಿಷಯೇಷು ವ್ಯರಜ್ಯನ್ತ
ವಾರ್ಧಕಂ ಹಿ ವಿರಕ್ತಯೇ ॥ ೧೧ ॥

ಟೀ ॥ ಪ್ರವಯೋವಿಪ್ರವೇಷಂ-ವೃದ್ಧಬ್ರಾಹ್ಮಣವೇಷವುಳ್ಳ, ತಂ-ಆ ಜೀವಂಧರಸ್ವಾಮಿಯನ್ನು, ವೀಕ್ಷಮಾಣಾಃ-ನೋಡುತಲಿರುವ, ವಿವೇಕಿನಃ-ವಿವೇಕಿಗಳು,

ವಿಷಯೇಷು-ಭೋಗೋಪಭೋಗಪದಾರ್ಥಗಳಲ್ಲಿ, ವೈರಜ್ಯಂತ-ವೈರಾಗ್ಯವಂ ಧರಿಸಿದರು., ವಾರ್ಧಕಂ-ಮುಪ್ಪಿನಅವಸ್ಥೆಯು, ವಿರಕ್ತಯೇ ಹಿ- ವೈರಾಗ್ಯಕ್ಕೋಸುಗ ಕಾರಣವಾಗುವುದಲ್ಲವೆ ?.

ತಾತ್ಪರ್ಯ॥ ಅತ್ಯಂತ ವೃದ್ಧಬ್ರಾಹ್ಮಣವೇಷವಂ ಧರಿಸಿರುವ ಆ ಜೀವಂಧರಕುಮಾರನನ್ನು ನೋಡಿದ ವಿವೇಕಿಗಳು ಭೋಗೋಪಭೋಗ ಪದಾರ್ಥಗಳಲ್ಲಿ ಆಶೆಯುಂ ತೊರೆದರು. ವೃದ್ಧಾಪ್ಯದೆಶೆಯು ವೈರಾಗ್ಯಕ್ಕೆ ಕಾರಣವಾಗುವುದಲ್ಲವೆ? (ಮುಪ್ಪಿನ ಕಾಲದಲ್ಲಲ್ಲವೆ? ಎಂಥಾವರಿಗೂ ವೈರಾಗ್ಯ ಉಂಟಾಗುವುದೆಂದರ್ಥವು)॥೧೧॥

ಶ್ಲೋಕ॥ ಮಕ್ಷಿಕಾಪಕ್ಷತೋಽಪ್ಯಚ್ಛೇ
ಮಾಂಸಾಚ್ಛಾದನ ಚರ್ಮಣಿ ।
ಲಾವಣ್ಯಂ ಭ್ರಾಂತಿರಿತ್ಯತ್ರ-
ಮೂಢೇಭ್ಯೋ ವಕ್ತಿವಾರ್ಧಕಮ್ ॥ ೧೨ ॥

ಟೀ ॥ ಮಕ್ಷಿಕಾಪಕ್ಷತೋಽಪಿ-ಮಕ್ಷಿಕಾ-ನೊಣದ, ಪಕ್ಷತಃ-ರೆಕ್ಕೆಗಿಂತಲೂ, ಅಚ್ಛೇ-ಅತ್ಯಂತಸೂಕ್ಷ್ಮವಾಗಿರುವ (ತೆಳ್ಳಗಿರುವ, ಅತಿಸಿಲುವಾಗಿರುವ), ಮಾಂಸಾಚ್ಛಾದನಚರ್ಮಣಿ-ಮಾಂಸ-ಮಾಂಸಪಿಂಡವಾದದೇಹಕ್ಕೆ, ಆಚ್ಛಾದನ-ಹೊದಿಕೆಯಾದ, ಚರ್ಮಣಿ-ಚರ್ಮದಲ್ಲಿ, ಲಾವಣ್ಯಂ-ಸೌಂದರ್ಯವು,ಭ್ರಾಂತಿರಿತಿ-ಭ್ರಮೆಯೆಂದು, ವಾರ್ಧಕಂ-ಮುಪ್ಪಿನ ವಯಸ್ಸು, ಮೂಢೇಭ್ಯಃ- ಮೂಢರಿಗೋಸುಗ, ವಕ್ತಿಹಿ- ಹೇಳಲ್ಪಡುತ್ತದೆಯಲ್ಲವೆ?.

ತಾತ್ಪರ್ಯ ॥ ನೊಣದ ರೆಕ್ಕೆಗಿಂತಲೂ ಅತಿ ಸಿಲುವಾ(ನವುರಾ) ಗಿರುವ, ಮಾಂಸ ಪಿಂಡರೂಪವಾದ ಈ ದೇಹಕ್ಕೆ ಹೊದಿಕೆಯಾದ ಚರ್ಮದಲ್ಲಿ ಸೌಂದರ್ಯವು ಭ್ರಾಂತಿಯೆಂದು ಈ ಮುಪ್ಪಿನ ದುರವಸ್ಥೆಯು ಸೌಂದರ್ಯದಿಂ ಮೋಹಪಡುವ ಮೂರ್ಖರಿಗೆ ಸೂಚಿಸುತ್ತದೆ. (ವಸ್ತು ಸ್ವಭಾವವ ಚೆನ್ನಾಗಿನೋಡಲು ಮಾಂಸ ಪಿಂಡಕ್ಕೆ ಹೊದಿಕೆಯಾದ ಚರ್ಮದಲ್ಲಿ ಅತಿ ಸಿಲುವಾಗಿರುವುದರಿಂದ ತೋರುವ ಥಳಥಳಿಕೆಯೇ ಸೌಂದರ್ಯವೆಂಬುದೇ ಹೊರತು ಮಲಮಯವಾದ ಪಿಂಡರೂಪದೇಹದಲ್ಲಿ ಆಶೆಪಡುವುದಕ್ಕೆ ಯೋಗ್ಯವಾದ ಉತ್ಕೃಷ್ಟಗುಣವು ಯಾವುದೂ ಇಲ್ಲವೆಂದಭಿಪ್ರಾಯವು

ಶ್ಲೋಕ॥ ಪ್ರತಿಕ್ಷಣ ವಿನಾಶೀದ-

ಮಾಯುಃ ಕಾಯಮಹೋ! ಜಡಾಃ ।

ನೈವ ಬುಧ್ಯಾಮಹೇ ಕಿನ್ತು

ಕಾಲಮೇವ ಕ್ಷಯಾತ್ಮಕಮ್ ॥ ೧೩ ॥

ಟೀ॥ ಜಡಾಃ-ಮೂಢರಾದ, ವಯಂ-ನಾವು, ಪ್ರತಿಕ್ಷಣವಿನಾಶಿ-ಪ್ರತಿಕ್ಷಣ-ಪ್ರತಿಯೊಂದುಕ್ಷಣದಲ್ಲಿಯೂ, ವಿನಾಶಿ-ನಾಶವನ್ನು ಹೊಂದುತಲಿರುವ, ಇದಮಾಯುಃ-ಈ ಆಯುಸ್ಸನ್ನೂ, ಕಾಯಂ-ಶರೀರವನ್ನೂ, ನೈವಬುಧ್ಯಾಮಹೇ - ತಿಳಿಯುವುದಿಲ್ಲವು, ಅಹೋ-ಆಶ್ಚರ್ಯವು !!, ಕಿಂತು-ಮತ್ತೇನೆಂದರೆ.—, ಕಾಲಮೇವ-ಕಾಲವನ್ನೇ, ಕ್ಷಯಾತ್ಮಕಂ(ಸಂತಂ)- ಕ್ಷಯವೇ ಸ್ವಭಾವವಾಗುಳ್ಳದ್ದನ್ನಾಗಿ, (ಬುಧ್ಯಾಮಹೇ ತಿಳಿಯುತ್ತೇವೆ).

ತಾತ್ಪರ್ಯ ॥ ವೃದ್ಧಬ್ರಾಹ್ಮಣವೇಷವಂ ಧರಿಸಿರುವ ಜೀವಂಧರಕುಮಾರನಂನೋಡಿ, ವೈರಾಗ್ಯಶಾಲಿಗಳಾದ ಪಟ್ಟಣವಾಸಿಗಳಾಗಿರುವ ಜನಗಳು ಭಾವಿಸುತ್ತಾರೆ. ಏನೆಂದರೆ.—ಈ ಲೋಕದಲ್ಲಿ ಮೂಢರಾದನಾವು ಪ್ರತಿಯೊಂದುಕ್ಷಣದಲ್ಲಿಯೂ ನಾಶವನ್ನು ಹೊಂದುತಲಿರುವ ಆಯುಸ್ಸನ್ನೂ, ನಮ್ಮದೇಹವನ್ನೂ ಕೂಡ ಪ್ರತಿಯೊಂದುಕ್ಷಣದಲ್ಲಿಯೂ ನಾಶವನ್ನು ಹೊಂದತಕ್ಕ ಸ್ವಭಾವವುಳ್ಳದ್ದೆಂದು ತಿಳಿಯುವುದಿಲ್ಲವು. ನಿತ್ಯವಾದ ಕಾಲವನ್ನು ಕ್ಷಯಿಸುವ ಸ್ವಭಾವವುಳ್ಳದ್ದೆಂದು ತಿಳಿಯುತ್ತೇವೆ. ಇದು ಆಶ್ಚರ್ಯವು!! (ಅನಿತ್ಯವಾದ ಆಯುಸ್ಸನ್ನೂ, ಶರೀರವನ್ನೂ ನಿತ್ಯವೆಂತಲೂ, ನಿತ್ಯವಾದಕಾಲವನ್ನು ಅನಿತ್ಯವೆಂತಲೂ ಈ ಮೂಢವಾದ ಸಂಸಾರಿಲೋಕವು ತಿಳಿಯುವುದೆಂದಭಿಪ್ರಾಯವು )!! ೧೩ ॥

ಶ್ಲೋಕ॥ ಹಸ್ತಲೋಕೋ ವಯಸ್ಯನ್ತ್ಯೇ

ಕಿಮನ್ಯೈರಪಿ ಪಾತಕಮ್ ।

ಮನ್ಯನ್ತೇ ನ ತೃಣಾಯಾಪಿ

ನೃತಿಶ್ಲಾಘ್ಯಾ ಹಿ ವಾರ್ಧಕಾತ್ ॥ ೧೪॥

ಟೀ ॥ ಅಯಂಲೋಕಃ-ಈ ಲೋಕವು, ಅಂತ್ಯೇ-ಕಡೆಯದಾದ, ವಯಸಿ- ವಯಸ್ಸಿನಲ್ಲಿ, (ವಾರ್ಧಕವಯಸ್ಸಿನಲ್ಲಿ), ಮಾತರಮಪಿ-ತಾಯಿಯನ್ನೂಕೂಡ, ತೃಣಾಯಾಪಿ ಹುಲ್ಲಿಗೆ ಸಮಾನವಾಗಿಯೂ ಕೂಡ, ನಮನ್ಯಂತೇ-ಎಣಿಸುವುದಿಲ್ಲವು., ವಾರ್ಧಕಾತ್- ಮುಪ್ಪಿನ ವಯಸ್ಸಿಗಿಂತಲೂ, ಮೃತಿಃ-ಮರಣವು, ಶ್ಲಾಘ್ಯಾ ಹಿ-ಶ್ಲಾಘ್ಯವಲ್ಲವೆ ?.

ತಾತ್ಪರ್ಯ ॥ ಈ ಲೋಕದಜನವು ಮುಪ್ಪಿನ ವಯಸ್ಸಿನಲ್ಲಿ ತಾಯಿಯನ್ನು ಕೂಡ ತೃಣದಂತೆ ಅನಾದರಿಸುವುದು. ಆದುದರಿಂದ ಮುಪ್ಪಿನ ವಯಸ್ಸಿನಲ್ಲಿ ಬದುಕಿರುವುದಕ್ಕಿಂತಲೂ ಸಾಯುವುದು ಮೇಲು ಎಂದು ತಿಳಿದು ವಿವೇಕಿಗಳಾದ ಜನಗಳು ವೈರಾಗ್ಯವು ಭಾವಿಸಿದರು.॥೧೪॥

ಶ್ಲೋಕ॥ ಇತ್ಯಾದ್ಯೂಹಂ ಚ ಹಾಸಂ ಚ
ಜನಯನ್ಪ್ರಾಜ್ಞಬಾಲಯೋಃ |
ಅಗಾರಂ ಸುರಮಂಜರ್ಯಾ
ವರ್ಷೀಯಾನ್ಪ್ರಸಾಸದತ್ ॥ ೧೫ ॥

ಟೀ ॥ ವರ್ಷೀಯಾನ್ಪ್ರಸ್ಸ - ವೃದ್ಧನಾದ ಜೀವಂಧರಸ್ವಾಮಿಯಾದರೋ, ಪ್ರಾಜ್ಞಬಾಲಯೋಃ-ಪ್ರಾಜ್ಞ-ವಿವೇಕಿಗಳೂ, ಬಾಲಯೋಃ ಮೂಢರೂ (ಹುಡುಗರೂ)ಇವರುಗಳಿಗೆ, ಇತ್ಯಾದ್ಯೂಹಂ ಚ-ಇದೇ ಮೊದಲಾದ ಊಹೆಯನ್ನೂ, ಹಾಸಂಚ-ಪರಿಹಾಸವನ್ನೂಕೂಡ, ಜನಯನ್ಸ -ಉಂಟುಮಾಡುವವನಾಗಿ, ಸುರಮಂಜರ್ಯಾಃ-ಸುರಮಂಜರಿಯ, ಅಗಾರಂ-ಗೃಹವನ್ನು, ಆಸದತ್-ಹೊಂದಿದನು.

ತಾತ್ಪರ್ಯ॥ ಮಹಾವೃದ್ಧನಾಗಿರುವ ಜೀವಂಧರಸ್ವಾಮಿಯಾದರೋ ವಿವೇಕಿಗಳಿಗೆ ವೈರಾಗ್ಯ ಹೇತುವಾದ ಶರೀರದ ಹೇಯತ್ವವೇ ಮೊದಲಾದವುಗಳ ಊಹೆಯನ್ನು ಪೂರ್ವೋಕ್ತಪ್ರಕಾರ ಉಂಟುಮಾಡುವವನಾಗಿಯೂ, ಮೂಢರಿಗೂ ಬಾಲರಿಗೂ ಪರಿಹಾಸವನ್ನುಂಟುಮಾಡುವವನಾಗಿಯೂ, ಸುರಮಂಜರಿಯ ಮನೆಯು ಪ್ರವೇಶಿಸಿದನು. (ಈ ಮುಪ್ಪಿನ ಅವಸ್ಥೆಯು ಮೂಢರಿಗೂ,ಬಾಲರಿಗೂ ಪರಿಹಾಸಕರವಾಗಿದೆ. ವಿವೇಕಿಗಳಿಗೆ ವೈರಾಗ್ಯಕ್ಕೂ,ಕರುಣೆಗೂ ಕಾರಣವಾಗಿದೆ ಎಂದಭಿಪ್ರಾಯವು.) ॥೧೫॥

ಶ್ಲೋಕ॥ ಪೃಷ್ಟೋ ದೌವಾರಿಕಸ್ತ್ರೀಭಿ-
ರಾಜಸ್ಯ ಫಲಮಾಗತೇಃ।
ಕುಮಾರೀತೀರ್ಥಮಾತ್ಮಾರ್ಥಂ*ಮಾತ್ರಾರ್ಥಂ
ನ ಹ್ಯಸತ್ಯಂ ಸತಾಂ ವಚಃ ॥ ೧೭ ॥

ಟೀ॥ ಸಃ- ಆ ವೃದ್ಧನಾಗಿರುವ ಜೀವಂಧರಕುಮಾರನು, ದೌವಾರಿಕಸ್ತ್ರೀಭಿಃ-ಬಾಗಿಲುಕಾಯುತ್ತಲಿರುವ ಸ್ತ್ರೀಯರಿಂದ, ಆಗತೇಃ-ಬರೋಣದ, ಫಲಂ- ಫಲವನ್ನು (ಪ್ರಯೋಜನವನ್ನು), ಪೃಷ್ಟ(ಸ್ಸನ್)-ಪ್ರಶ್ನೆಮಾಡಲ್ಪಟ್ಟವನಾಗಿ, ಆತ್ಮಾರ್ಥಂ-ಎನಗೋಸುಗ, ಕುಮಾರೀತೀರ್ಥಂ-ಕುಮಾರಿಯಾದ ಸುರಮಂಜರಿ ಎಂಬ ಮಹಾ ಪತಿವ್ರತೆಯು, ಫಲಂ-ಪ್ರಯೋಜನವು., *ಇತಿ-ಹೀಗೆಂದು, ಅಜಲ್ಪ-ಹೇಳಿದನು., ಸತಾಂ-ಸತ್ಪುರುಷರ, ವಚಃ- ವಚನವು, ಅಸತ್ಯಂ(ಸತ್)-ಸುಳ್ಳುಮಾತಾಗಿ, ನಹಿ-ಆಗುವುದಿಲ್ಲವಷ್ಟೆ?.

ತಾತ್ಪರ್ಯ॥ ಆ ವೃದ್ಧವೇಷವಂಧರಿಸಿರುವ ಜೀವಂಧರಕುಮಾರನು, ಬಾಗಿಲು ಕಾಯುತ್ತಲಿರುವ ದಾದಿಯರಾದ ಹೆಂಗಸರಿಂದ ಇಲ್ಲಿಬರುವುದಕ್ಕೇನುಪ್ರಯೋಜನವು? (ಏತಕ್ಕೋಸುಗ ಇಲ್ಲಿಗೆ ಬಂದೆ!) ಎಂದು ಪ್ರಶ್ನೆ ಮಾಡಲ್ಪಟ್ಟವನಾಗಿ, ನನಿಗೇನೇಕನ್ಯಾದಾನವು ಮಾಡಬೇಕೆಂದು ಅಪೇಕ್ಷಿಸಿ ಬಂದೆನೆಂತಲೂ, ಮಹಾಪತಿವ್ರತೆಯಾದ ಸುರಮಂಜರಿಯು ನನಿಗೆ ಫಲವಾಗಲೆಂತಲೂ, ಅಭಿಪ್ರಾಯಗರ್ಭಿತವಾಗಿ ಹೇಳಿದನು. ಸತ್ಪುರುಷರು ಸುಳ್ಳುಹೇಳುವುದಿಲ್ಲವಷ್ಟೆ? ॥೧೭॥

ಶ್ಲೋಕ॥ ಅಹಸನ್ನಥ ತದ್ವಾಕ್ಯಾ-
ದಂಗನಾ ಅಪ್ಯಸಂಗತಾತ್ ।

---

*ಕುಮಾರೀತೀರ್ಥಮಾತ್ರಾರ್ಥಂ ಎಂಬ ಪಾಠದಲ್ಲಿ ಕೌಮಾರವಯಸ್ಸುಳ್ಳವಳಾಗಿ ವಿವಾಹಯೋಗ್ಯಳಾದ ಸುರಮಂಜರಿಗೆ ಉಪದೇಶಿಸುತ್ತೀಸುಗವೇ, ಮತ್ತು, ಕುಮಾರೀತೀರ್ಥ ಮಾತ್ರಾರ್ಥಂ ಎಂದು ಪಾಠಾಂತರವು. ಧನಂಜಯ ನಿಘಂಟು॥ ತೀರ್ಥಂ ಪ್ರವಚನೇ ಪಾತ್ರೇ ಲಬ್ಧಾಮ್ನಾಯೇ ವಿದಾಂವರೇ। ಪುಣ್ಯಾರಣ್ಯೇ ಜಲೋತ್ತಾರೇ ಮಹಾಪಾತ್ರೇ ಮಹಾಮುನೌ ॥ ಮತ್ತು, ಮಹಾಮುನಿಯಂತೆ ಪೂಜ್ಯಳಾದ ಪತಿವ್ರತೆಯಾಗಿರುವ ಸುರಮಂಜರಿಯನ್ನು ಫಲಂ(ಸತ್)-ಹೊಂದುವನಾಗಿ,

ಅವಿವೇಕಿಜನಾನಾಂ ಹಿ
ಸತಾಂ ವಾಕ್ಯಮಸಂಗತಮ್ ॥ ೧೭ ॥

ಟೀ ॥ ಅತ್ರ-ಅಸ್ಮಿನ್ನವಸರದಲ್ಲಿ, ಅಂಗನಾಃ ಅಪಿ- ಹೆಂಗಸರೂ ಕೂಡ, ಅಸಂಗತತ್ವಾತ್- ಅಸಂಬದ್ಧವಾದಂಥ, ತದ್ವಾಕ್ಯಾತ್-ಆ ವೃದ್ಧಬ್ರಾಹ್ಮಣವೇಷಧಾರಿಯ ಮಾತಿನ ದೆಸೆಯಿಂದ, ಅಹಸನ್-ನಕ್ಕರು; ಅವಿವೇಕಿಜನಾನಾಂ- ಮೂಢಜನಗಳಿಗೆ, ಸತಾಂ - ಸತ್ಪುರುಷರ, ವಾಕ್ಯಂ-ಮಾತು, ಅಸಂಗತಂ ಹಿ-ಅಸಂಗತವಾಗಿ ತೋರುತ್ತದೆಯಲ್ಲವೆ ?.

ತಾತ್ಪರ್ಯ ॥ ಆ ವೃದ್ಧಬ್ರಾಹ್ಮಣನ ಅಸಂಗತವಾದ ಮಾತನ್ನು ಕೇಳಿ, ದ್ವಾರಪಾಲಿಕೆಯರಾದ ಆ ಹೆಂಗಸರೂ ಕೂಡ ನಕ್ಕರು. ಅವಿವೇಕಿಗಳಾದ ಜನಗಳಿಗೆ ಸತ್ಪುರುಷರ ಮಾತೂ ಕೂಡ ಅಸಂಗತವಾಗಿ ತೋರುವುದಲ್ಲವೆ? ॥೧೭॥

ಶ್ಲೋಕ॥ ಅರುದ್ಧಃ ಕೃಪಯಾ ತಾಭಿ-
ರಗಾಹಿಷ್ಟ ಚ ತದ್ಗೃಹಮ್ ।
ಸರ್ವಥಾ ದಗ್ಧಬೀಜಾಭಾಃ
ಕುತ್ರೋ ಜೀವಂತಿ ನಿರ್ಘೃಣಾಃ ॥ ೧೮ ॥

ಟೀ ॥ (ಸಃ-ವೃದ್ಧನಾದ ಜೀವಂಧರಕುಮಾರನು), ಕೃಪಯಾ- ದಯೆಯಿಂದ, ತಾಭಿಃ-ಆ ಬಾಗಿಲುಕಾಯುವ ಹೆಂಗಸರಿಂದ, ಅರುದ್ಧ(ಸ್ಸನ್)-ತಡೆಯಲ್ಪಡದೆ ಇರುವವನಾಗಿ, ತದ್ಗೃಹಂ-ಆ ಸುರಮಂಜರಿಯ ಮನೆಯನ್ನು, ಅಗಾಹಿಷ್ಟ ಚ- ಪ್ರವೇಶಿಸಿಯೂ-ಪ್ರವೇಶಿಸಿದನು., ಸರ್ವಥಾ-ಸರ್ವಪ್ರಕಾರದಿಂದಲೂ, ದಗ್ಧಬೀಜಾಭಾಃ ದಗ್ಧ-ಸುಡಲ್ಪಟ್ಟ, ಬೀಜ-ಬೀಜಕ್ಕೆ, ಆಭಾಃ- ಸಮಾನರಾದ, ನಿರ್ಘೃಣಾಃ- ನಿರ್ದಯರಾದವರು, ಕುತಃ- ಯಾವಕಾರಣದೆಸೆಯಿಂದ (ಏತಕೋಸುಗ), ಜೀವಂತಿ ಬದುಕುತ್ತಾರೆ?.

ತಾತ್ಪರ್ಯ ॥ ಆ ವೃದ್ಧಬ್ರಾಹ್ಮಣ ವೇಷಧಾರಿಯಾದ ಜೀವಂಧರಕುಮಾರನು, ಆ ಪಹರೆಯವರಾದ ದ್ವಾರಪಾಲಿಕೆಯರಿಂದ ತಡೆಯಲ್ಪಡದೆ ಇರುವವನಾಗಿ, ಆ ಸುರಮಂಜರೀ ಮನೆಯನ್ನು ಪ್ರವೇಶಿಸಿದನು. ಸರ್ವಪ್ರಕಾರದಲ್ಲಿಯೂ, ದಯಾರಹಿತರಾದವರು ಸುಡಲ್ಪಟ್ಟ ಬೀಜವು ಪೈರಿಯಾಗುವುದಕ್ಕೂ ಉಪಯೋಗವಿಲ್ಲದೇ ಫಲಹೇತುವಾದ ಅಂಕುರಿಸು

ಶಕ್ತಿಯು ನಷ್ಟವಾದುದಾಗಿ ಹೋಗುವುದೋ ಹಾಗೆ ಪರೋಪಕಾರಶೂನ್ಯರಾಗಿ ಈ ಲೋಕದಲ್ಲಿ ಏತಕ್ಕೋಸುಗ ಜೀವಿಸುವರೋ? (ಅಂಥಾ ದಯಾರಹಿತರು ಇದ್ದರೂ ಸತ್ತವರಂತೆಯೇ ನಿಷ್ಪ್ರಯೋಜನವಾದವರೆಂದಭಿಪ್ರಾಯವು.) ಪ್ರಾಣಿಗಳಲ್ಲಿ ದಯಾಶಾಲಿಗಳೇ ಧರ್ಮಿಷ್ಠರೆನಿಸುವರು. ದಯೆಯಿಲ್ಲದವನು ಇದ್ದರೂ ಸತ್ತರೂ ಸಮಾನನೇ ಎಂದು ಮುಖ್ಯಾಭಿಪ್ರಾಯವು. ||೧೮||

ಶ್ಲೋಕ || ಅಭ್ಯಧುಸ್ಸುರಮಂಜರ್ಯಾ-
ಸ್ಸುಂದರ್ಯಸ್ಸಭಯಾ ಇದಮ್ |
ಸಭಯಸ್ನೇಹಸಾಮರ್ಥ್ಯ-
ಸ್ವಾಮ್ಯಧೀನಾ ಹಿ ಕಿಙ್ಕರಾಃ || ೧೯ ||

ಟೀ || ಸುಂದರ್ಯಃ-ಸ್ತ್ರೀಯರು, ಸಭಯಾಃ(ಸ್ಸತ್ಯಃ)-ಭಯದೊಡನೆ ಕೂಡಿದವರಾಗಿ, ಇದಂ-ಈ ವೃತ್ತಾಂತವನ್ನು, ಸುರಮಂಜರ್ಯಾಃ- ಸುರಮಂಜರಿಗೆ, ಅಭ್ಯಧುಃ-ಹೇಳಿದರು., ಕಿಂಕರಾಃ-ಭೃತ್ಯರು, ಸಭಯಸ್ನೇಹಸಾಮರ್ಥ್ಯಾಃ- ಭಯವೂ, ಪ್ರೀತಿಯೂ, ಸಾಮರ್ಥ್ಯವೂ ಇವುಗಳುಳ್ಳವರಾಗಿಯೂ, ಸ್ವಾಮ್ಯಧೀನಾಃ-ಸ್ವಾಮಿ-ಪ್ರಭುವಿಗೆ, ಅಧೀನಾಃ-ವಿಧೇಯರಾಗಿಯೂ ಇರುವಂಥಾವರಲ್ಲವೆ ?.

ತಾತ್ಪರ್ಯ || ದ್ವಾರಪಾಲಿಕೆಯರಾದ ಸ್ತ್ರೀಯರು ಭೀತಿಯೊಡಗೂಡಿದವರಾಗಿ ಸುರಮಂಜರಿಗೆ ಈ ವೃದ್ಧಬ್ರಾಹ್ಮಣನ ವೃತ್ತಾಂತವನ್ನು ಹೇಳಿದರು. ಭೃತ್ಯರು ಪ್ರಭುವಿನಲ್ಲಿ ಭಯದೊಡನೆಯೂ, ಪ್ರೀತಿಯೊಡನೆಯೂ, ಸಾಮರ್ಥ್ಯದೊಡನೆಯೂ ಕೂಡಿದವರಾಗಿ ಪ್ರಭುವಿಗೆ ಅಧೀನರಾಗಿಯೂ ಇರುವರಷ್ಟೆ ? ||೧೯||

ಶ್ಲೋಕ|| ಪುರುಷದ್ವೇಷಿಣೀ ಸಾಪಿ
ವರ್ಷೀಯಾಂಸಂ ನ್ಯಶಾಮಯತ್ |
ಭವಿತವ್ಯಾನುಕೂಲಂ ಹಿ
ಸಫಲಂ ಕರ್ಮದೇಹಿನಾಮ್ || ೨೦ ||

ಟೀ || ಪುರುಷದ್ವೇಷಿಣೀ-ಪುರುಷ-ಗಂಡಸರನ್ನು, ದ್ವೇಷಿಣೀ-ದ್ವೇಷಿಸುವವಳು, ಸಾಪಿ-ಆ ಸುರಮಂಜರಿಯೂ ಕೂಡ, ವರ್ಷೀಯಾಂಸಂ- ವೃದ್ಧನಾದ ಬ್ರಾಹ್ಮಣನ

ನನ್ನು, ನ್ಯಶಾಮಯತ್-ನೋಡಿದಳು., ದೇಹಿನಾಂ-ಪ್ರಾಣಿಗಳಿಗೆ, ಕರ್ಮ-ಕೃತ್ಯವು, ಭವಿತವ್ಯಾನುಕೂಲಂ(ಸತ್)- ಅದೃಷ್ಟಾನುಸಾರವಾಗಿ, ಸಫಲಂಹಿ- ಫಲದೊಡನೆ ಕೂಡಿದಂಥಾದ್ದಾಗುವುದಲ್ಲವೆ ?.

ತಾತ್ಪರ್ಯ ॥ ಗಂಡಸರಲ್ಲಿ ದ್ವೇಷವುಳ್ಳ ಆ ಸುರಮಂಜರಿಯೂ ಕೂಡ ವೃದ್ಧವೇಷವಂಧರಿಸಿರುವ ಜೀವಂಧರಸ್ವಾಮಿಯನ್ನು ನೋಡಿದಳು. ಪ್ರಾಣಿಗಳು ಮಾಡುವ ಕೆಲಸವು ಅದೃಷ್ಟಾನುಗುಣವಾಗಿಯೇ ಸಫಲವಾಗುತ್ತದೆಯಲ್ಲವೆ? (ಗಂಡಸು ಜಾತಿಯಲ್ಲಿಯೇ ದ್ವೇಷವುಳ್ಳವಳಾಗಿದ್ದರೂ ಕೂಡ, ಸುರಮಂಜರಿಯು ಜೀವಂಧರಸ್ವಾಮಿಯಂ ನೋಡುವುದಕ್ಕೆ ಕಾರಣವಾದುದು. ಉತ್ತರತ್ರ ಜೀವಂಧರಸ್ವಾಮಿಯನ್ನೇ ವಿವಾಹಮಾಡಿಕೊಳ್ಳುವುದಕ್ಕೆ ಯೋಗ್ಯವಾದ ಪೂರ್ವಪುಣ್ಯವೇ ಹೊರತು ಮತ್ತೆ ಯಾವುದೂ ಕಾರಣವಲ್ಲವೆಂದಭಿಪ್ರಾಯವು) ॥ ೨೦ ॥

ಶ್ಲೋಕ ॥ ಬುಭುಕ್ಷಿತಂ ತಮಾಲಕ್ಷ್ಯ
ಭೋಜಯಾಮಾಸ ಸಾ ಸತೀ ।
ಅನ್ತಸ್ತತ್ತ್ವಸ್ಯ ಯಾಥಾತ್ಮ್ಯೇ
ನ ಹಿ ವೇಷೋ ನಿಯಾಮಕಃ ॥೨೧॥

ಟೀ ॥ ಸತೀ-ಉತ್ತಮಸ್ತ್ರೀಯಾದ, ಸಾ-ಆ ಸುರಮಂಜರಿಯು, ತಂ-ಆ ವೃದ್ಧನನ್ನು, ಬುಭುಕ್ಷಿತಂ(ಸನ್ತಂ)- ಹಸಿದಿರುವವನನ್ನಾಗಿ, ಆಲಕ್ಷ್ಯ - ತಿಳಿದು, ಭೋಜಯಾಮಾಸ - ಭೋಜನಮಾಡಿಸಿದಳು., ಅನ್ತಃ - ಒಳಗಿರುವ (ಮನಸ್ಸಿನಲ್ಲಿರುವ), ತತ್ತ್ವಸ್ಯ-ಅಭಿಪ್ರಾಯದ, ಯಾಥಾತ್ಮ್ಯೇ- ವಾಸ್ತವಸ್ಥಿತಿಯಲ್ಲಿ, ವೇಷಃ-ವೇಷವು, ನನಿಯಾಮಕೋಹಿ-ನಿಯಾಮಕವಲ್ಲವಷ್ಟೆ ?.

ತಾತ್ಪರ್ಯ ॥ ಶ್ರೇಷ್ಠಳಾದ ಆ ಸುರಮಂಜರಿಯು, ಆ ವೃದ್ಧನನ್ನು ಹಸಿದಿರುವನನ್ನಾಗಿ ತಿಳಿದು, ಭೋಜನಮಾಡಿಸಿದಳು. ಮೇಲಿರುವ ವೇಷವಂನೋಡಿ ಮನೋಭಿಪ್ರಾಯವನ್ನು ನಿರ್ಣಯಿಸಲು ಶಕ್ಯವಲ್ಲವಷ್ಟೆ ?॥೨೧॥

ಶ್ಲೋಕ ॥ ಭುಕ್ತ್ವಾಥ ವಾರ್ಧಕೇನೈವ
ಸುಷ್ವಾಪ ತಲಿಮೇ ಕೃತೀ ।

ಯೋಗ್ಯಕಾಲ ಪ್ರತೀಕ್ಷಾ ಹಿ
ಪ್ರೇಕ್ಷಾಪೂರ್ವ ವಿಧಾಯಿನಃ ॥ ೨೨ ॥

ಟೀ ॥ ಕೃತೀ-ಸಮರ್ಥನಾದ ಜೀವಂಧರಸ್ವಾಮಿಯು, ಭುಕ್ತ್ವಾ- ಭೋಜನ ಮಾಡಿ, ಅಥ-ಅನಂತರದಲ್ಲಿ, ವಾರ್ಧಕೇನೈವ- ಮುಪ್ಪಿನಿಂದುಂಟಾದ ಆಯಾಸದಿಂದ ಲೇ, ತಲಿಮೇ-ಶಯನದಲ್ಲಿ (ಮಂಚದಲ್ಲಿ), ಸುಷ್ವಾಪ-ಮಲಗಿದನು., ಪ್ರೇಕ್ಷಾಪೂರ್ವವಿಧಾಯಿನಃ–ಪ್ರೇಕ್ಷಾಪೂರ್ವ-ಬುದ್ಧಿಪೂರ್ವಕವಾಗಿ, ವಿಧಾಯಿನಃ- ಕೆಲಸವನ್ನು ಮಾಡುವವರು, ಯೋಗ್ಯಕಾಲಪ್ರತೀಕ್ಷಾ ಹಿ–ಯೋಗ್ಯ-ಉಚಿತವಾದ, ಕಾಲ- ಕಾಲವನ್ನು, ಪ್ರತೀಕ್ಷಾಹಿ-ನಿರೀಕ್ಷಿಸುತ್ತಾರಲ್ಲವೆ?.

ತಾತ್ಪರ್ಯ ॥ ವೃದ್ಧವೇಷಧಾರಿಯಾದ ಸಮರ್ಥನಾದ ಜೀವಂಧರಸ್ವಾಮಿಯು ಭೋಜನಾನಂತರದಲ್ಲಿ, ಮುಪ್ಪಿನ ವಯಸ್ಸಾದುದರಿಂದ ಮಂಚದೊಳು ಆಯಾಸಗೊಂಡು ಮಲಗಿದನು. ಬುದ್ಧಿಪೂರ್ವಕವಾಗಿ ಕೆಲಸವನ್ನು ಸಾಧಿಸುವವರು ಉಚಿತಕಾಲವಂ ನಿರೀಕ್ಷಿಸುವರಲ್ಲವೆ? ॥ ೨೨ ॥

ಶ್ಲೋಕ ॥ ಭುವನಮೋಹನಂ ಗಾನ-
ಮತಾನೀದಥ ಗಾನವಿತ್ ।
ಪರಸ್ಪರಾತಿಶಾಯೀ ಹಿ
ಮೋಹಃ ಪಂಚೇಂದ್ರಿಯೋದ್ಭವಃ ॥ ೨೩ ॥

ಟೀ ॥ ಅಥ-ಅನಂತರದಲ್ಲಿ, ಗಾನವಿತ್- ಸಂಗೀತಶಾಸ್ತ್ರಪಾರಂಗತನಾದ ಜೀವಂಧರಸ್ವಾಮಿಯು, ಭುವನಮೋಹನಂ–ಭುವನ-ಲೋಕಕ್ಕೆ, ಮೋಹನಂ-ಮೋಹಕರವಾದ, ಗಾನಂ-ಸಂಗೀತವನ್ನು, ಅತಾನೀತ್-ಮಾಡಿದನು., ಪಂಚೇಂದ್ರಿಯೋದ್ಭವಃ-ನೇತ್ರವೇ ಮೊದಲಾದ ಇಂದ್ರಿಯಗಳೈದರಿಂದ ಉತ್ಪನ್ನವಾದ, ಮೋಹಃ-ಮೋಹವು, ಪರಸ್ಪರಾತಿಶಾಯೀಹಿ- ಒಂದಕ್ಕಿಂತಲೂ ಮತ್ತೊಂದು ಅತಿಶಯವಾಗಿರುತ್ತದೆಯಲ್ಲವೆ?.

ತಾತ್ಪರ್ಯ ॥ ಸಂಗೀತಶಾಸ್ತ್ರದಲ್ಲಿ ಪಾರಂಗತನಾದ ಆ ಜೀವಂಧರಸ್ವಾಮಿಯು, ಲೋಕಕ್ಕೆ ಮೋಹಕರವಾದ (ಜಗನ್ಮೋಹಕರವಾದ) ಗಾನವನ್ನು ಹಾಡಿದನು. ಚಕ್ಷುರಾದಿ ಇಂದ್ರಿಯಗಳಿಂದುಂಟಾಗುವ ಸುಖವು ಒಂದಕ್ಕಿಂತಲೂ ಮತ್ತೊಂದು ಅತಿಶಯವಾಗಿದೆಯಲ್ಲವೆ? (ಜಾ

ಪರಸಗಂಧಸ್ಪರ್ಶಶಬ್ದಗಳೆಂಬ ವಿಷಯಾನುಭವದಿಂದುಂಟಾಗುವ ಸುಖವು ಒಂದಕ್ಕಿಂತಲೂ ಮತ್ತೊಂದು ಚಿತ್ತಾಕರ್ಷಕವಾಗಿಯೇ ಇದೆಯಲ್ಲವೆ? ಎಂದಭಿಪ್ರಾಯವು.) ॥೨೩॥

ಶ್ಲೋಕ ॥ ಗಾನಕೌಶಲತಸ್ಸೈನಂ
ಶಕ್ತಿಮನ್ತಮಮನ್ಯತ ।
ವಿಶೇಷಜ್ಞಾ ಹಿ ಬುಧ್ಯಂತೇ
ಸದಸನ್ತೌ ಕುತಶ್ಚನ ॥ ೨೪ ॥

ಟೀ ॥ ಸಾ-ಆ ಸುರಮಂಜರಿಯು, ಗಾನಕೌಶಲತಃ-ಗಾನ-ಸಂಗೀತದ, ಕೌಶಲತಃ-ನಿಪುಣತೆಯುದೆಸೆಯಿಂದ, ಏನಂ- ಈ ವೃದ್ಧನಾದ ಜೀವಂಧರ ಕುಮಾರನನ್ನು, ಶಕ್ತಿಮಂತಂ(ಸನ್ತಂ)-ಸಮರ್ಥನನ್ನಾಗಿ, ಅಮನ್ಯತ-ತಿಳಿದಳು, ವಿಶೇಷಜ್ಞಾಃ-ವಿಶೇಷವನ್ನು ತಿಳಿದಿರುವವರು, ಕುತಶ್ಚನ-ಯಾವಕಾರಣದದೆಸೆಯಿಂದಲೋ, ಸದಸಂತೌ-ಸತ್-ಒಳ್ಳೆಯದು, ಅಸಂತೌ- ಕೆಟ್ಟದ್ದು ಇವುಗಳನ್ನು, ಬುಧ್ಯಂತೇ ಹಿ- ತಿಳಿಯುತ್ತಾರಲ್ಲವೆ?.

ತಾತ್ಪರ್ಯ ॥ ಆ ಸುರಮಂಜರಿಯು, ಗಾನದಲ್ಲಿರುವ ಸಾಮರ್ಥ್ಯದ ದೆಸೆಯಿಂದಲೇ ಇವನು ಸಾಮಾನ್ಯನಲ್ಲವು. ಇವನಿಗೆ ಇದೇಪ್ರಕಾರ ಅನೇಕವಿದ್ಯೆಗಳಲ್ಲಿ ಶಕ್ತಿ ಇರಬಹುದೆಂದು ಊಹಿಸಿದಳು. ವಿಶೇಷವನ್ನು ತಿಳಿಯುವಂಥಾವರು ಯಾವುದಾದರೂ ಒಂದುಕಾರಣಾಂತರದದೆಸೆಯಿಂದ (ಚಿಹ್ನೆಯಿಂದ)ಇದು ಉತ್ಕೃಷ್ಟವಾದದ್ದು, ಇದು ಅಪಕೃಷ್ಟವಾದದ್ದು ಎಂದು ತಿಳಿಯುವರಲ್ಲವೆ?॥೨೪॥

ಶ್ಲೋಕ॥ ತತಸ್ತತ್ಕಾರ್ಯಮಸ್ಯಸ್ಯಾ-
ತ್ಸಾಪರಾಭೂತ್ಪರೀಕ್ಷಿತುಮ್ ।
ಸ್ವಕಾರ್ಯೇಷು ಹಿ ತಾತ್ಪರ್ಯಂ
ಸ್ವಭಾವಾದೇವ ದೇಹಿನಾಮ್ ॥ ೨೫ ॥

[illegible] ತನ್ನ ಕೆಲಸವನ್ನು ಕೂಡ, ಅಸ್ಯಾತ್ [illegible] ವಿಕ್ಷಿಪ್ತವಾದಲೋಸುಗ, ಸಾದ [illegible] ಅವಳು, ದೇಹಿನಾಂ-ಪ

ಣಿಗಳಿಗೆ, ಸ್ವಭಾವಾದೇವ-ಸ್ವಭಾವದ ದೆಸೆಯಿಂದಲೇ, ಸ್ವಕಾರ್ಯೇಷು-ತಮ್ಮತಮ್ಮ ಕೆಲಸಗಳಲ್ಲಿ, ತಾತ್ಪರ್ಯಂಹಿ-ಅಭಿಪ್ರಾಯವಲ್ಲವೆ?.

ತಾತ್ಪರ್ಯ॥ ಅನಂತರದಲ್ಲಿ ಆ ಸುರಮಂಜರಿಯು ತನ್ನ ಕಾರ್ಯವನ್ನು ಕೂಡ ಈ ವೃದ್ಧನದೆಸೆಯಿಂದ ಪರೀಕ್ಷಿಸಲೋಸುಗ ಆದರದೊಡಗೂಡಿದವಳಾದಳು. ಪ್ರಾಣಿಗಳಿಗೆ ಸ್ವಭಾವದದೆಸೆಯಿಂದಲೇ ತಮ್ಮ ತಮ್ಮ ಕೆಲಸದಲ್ಲಿ ತಾತ್ಪರ್ಯವಲ್ಲವೆ? (ಈ ಲೋಕವು ಸ್ವಾಭಾವಿಕವಾಗಿ ಸ್ವಪ್ರಯೋಜನಪರವೆಂದಭಿಪ್ರಾಯವು.)॥೨೫॥

ಶ್ಲೋಕ॥ ಗಾನವಚ್ಛಕ್ತಿರನ್ಯತ್ರ
ಕಿಮಸ್ತೀತ್ಯನ್ವಯುಂಕ್ತ ಸಾ ।
ಯಾಚ್ಞಾಯಾಂ ಫಲಮೂಕಾಯಾಂ
ನ ಹಿ ಜೀವನ್ತಿ ಮಾನಿನಃ ॥ ೨೬ ॥

ಟೀ॥ ಸಾ-ಸುರಮಂಜರಿಯು, ಗಾನವತ್-ಸಂಗೀತಶಾಸ್ತ್ರದಲ್ಲಿಯೋಪಾದಿಯಲ್ಲಿ, ಅನ್ಯತ್ರ-ಇತರವಿದ್ಯೆಗಳಲ್ಲಿಯೂ, ಶಕ್ತಿಃ-ಸಾಮರ್ಥ್ಯವು, ಅಸ್ತಿಕಿಂ-ಇದೆಯೋ ಏನು?, ಇತಿ-ಹೀಗೆಂದು, ಅನ್ವಯುಂಕ್ತ-ಪ್ರಶ್ನೆಮಾಡಿದಳು., ಯಾಚ್ಞಾಯಾಂ-ಪ್ರಾರ್ಥನೆಯು, ಫಲಮೂಕಾಯಾಂ(ಸತ್ಯಾಂ)-ನಿಷ್ಫಲವಾಗುತ್ತಿರಲಾಗಿ, ಮಾನಿನಃ-ಮಾನಶಾಲಿಗಳು, ನಜೀವಂತಿ ಹಿ-ಜೀವಿಸುವುದಿಲ್ಲವಷ್ಟೆ?.

ತಾತ್ಪರ್ಯ ॥ ಆ ಸುರಮಂಜರಿಯು, ಆ ವೃದ್ಧನನ್ನು ಕುರಿತು ತಮಗೆ ಗಾನವಿದ್ಯೆಯಲ್ಲಿ ಶಕ್ತಿಯಿರುವಂತೆ ಇತರವಿಷಯಗಳಲ್ಲಿಯೂ ಶಕ್ತಿ ಇರುವುದೇ ಏನು? ಎಂದು ಪ್ರಶ್ನೆಮಾಡಿದಳು. ಲೋಕದಲ್ಲಿ ತಮ್ಮಲ್ಲಿ ಮಾಡುವ ಪ್ರಾರ್ಥನೆಯು ನಿಷ್ಫಲವಾಗುತ್ತಿರಲಾಗಿ ಮಾನಶಾಲಿಗಳು ಜೀವಿಸುವುದಿಲ್ಲವಷ್ಟೆ? (ತಮ್ಮಲ್ಲಿ ಪ್ರಾರ್ಥನೆ ಮಾಡಿದವರಿಗೆ ಫಲವನ್ನೇ ಉಂಟುಮಾಡುವರೆಂದಭಿಪ್ರಾಯವು.)॥೨೬॥

ಶ್ಲೋಕ॥ ಬಾಢಮಸ್ತಿ ಸಮಸ್ತೇಷ್ವಿ-
ತ್ಯಬ್ರವೀತ್ಸ್ವಾರ್ಥನೈಪುಣಃ ।
ಉಕ್ತಿಚಾತುರ್ಯತೋ ದಾರ್ಢ್ಯ-
ಮುಕ್ತಾರ್ಥ್ಯೇಪಿ ವಿಶೇಷತಃ ॥ ೨೭ ॥

ಟೀ ॥ ಪ್ರೌಢನೈಪುಣಃ-ಪ್ರೌಢ-ಅಧಿಕವಾದ, ನೈಪುಣಃ- ನಿಪುಣತೆಯುಳ್ಳ ಜೀವಂಧರಸ್ವಾಮಿಯು, ಬಾಢಂ-ಹಾಗೆಯೇಸರಿ; ಸಮಸ್ತೇಽಪಿ-ಸಮಸ್ತವಿಷಯದಲ್ಲಿಯೂ, ಶಕ್ತಿಃ-ಸಾಮರ್ಥ್ಯವು, ಅಸ್ತಿ-ಇರುತಲಿದೆ., ಇತಿ-ಈ ಪ್ರಕಾರ, ಅಬ್ರವೀತ್-ಹೇಳಿದನು., ಉಕ್ತಿಚಾತುರ್ಯತಃ-ಉಕ್ತಿ-ಮಾತಿನ, ಚಾತುರ್ಯತಃ- ಚಮತ್ಕಾರವದೆಸೆಯಿಂದ, ಉಕ್ತಾರ್ಥೇಽಪಿ-ಹೇಳಲ್ಪಟ್ಟ ಅರ್ಥದಲ್ಲಿಯೂಕೂಡ, ವಿಶೇಷತಃ-ವಿಶೇಷವಾಗಿ, ದಾರ್ಢ್ಯಂ-ಬಹಳ ನಂಬಿಕೆಯು, ಭವೇತ್ಹಿ-ಉಂಟಾಗುವುದಲ್ಲವೆ ?.

ತಾತ್ಪರ್ಯ॥ ಅತ್ಯಂತ ಚತುರನಾದ ಜೀವಂಧರಸ್ವಾಮಿಯು ಸಮಸ್ತ ವಿಷಯದಲ್ಲಿಯೂ ಸಾಮರ್ಥ್ಯವಿರುವುದೆಂದು ಸುರಮಂಜರಿಗೆ ನಂಬಿಕೆಯುಂಟಾಗುವಂತೆ ದೃಢವಾಗಿ ಹೇಳಿದನು. ಲೋಕದಲ್ಲಿ ಹೇಳಲ್ಪಟ್ಟ ಅರ್ಥದಲ್ಲಿ ಕೇಳಿದವರಿಗೆ ಅತ್ಯಂತನಂಬಿಕೆಯುಂಟಾಗುವುದಕ್ಕೆ ಹೇಳೋಣದರಲ್ಲಿರುವ ಚಾತುರ್ಯವೂ ಒಂದು ಕಾರಣವಲ್ಲವೆ? ॥೨೭॥

ಶ್ಲೋಕ॥ ಅಭೀಪ್ಸಿತ ವರಪ್ರಾಪ್ತಾ-
ವುಪಾಯಂ ಸಾಪ್ಯಯಾಚತ ।
ರಾಗಾಂಧೇನ ಹಿ ಜಾಗರ್ತಿ
ಯಾಚ್ಞಾ ದೈನ್ಯ ವಿತರ್ಕಣಮ್ ॥ ೨೮ ॥

ಟೀ ॥ ಸಾಪಿ-ಆ ಸುರಮಂಜರಿಯೂಕೂಡ, ಅಭೀಪ್ಸಿತವರಪ್ರಾಪ್ತೌ-ಅಭೀಪ್ಸಿತ-ಇಷ್ಟವಾದ, ವರ-ವರನ, ಪ್ರಾಪ್ತೌ-ಸಿದ್ಧಿಯಲ್ಲಿ, ಉಪಾಯಂ- ಉಪಾಯವನ್ನು, ಅಯಾಚತ-ಕೇಳಿದಳು., ರಾಗಾಂಧೇ-ಭೋಗೋಪಭೋಗೇಚ್ಛೆಯಿಂದಮೂಢವಾದ ಜನದಲ್ಲಿ, ಯಾಚ್ಞಾದೈನ್ಯವಿತರ್ಕಣಂ- ಯಾಚ್ಞಾ- ಕೇಳೋಣದರಲ್ಲುಂಟಾದ, ದೈನ್ಯ-ದೀನಭಾವದ, ವಿತರ್ಕಣಂ-ಊಹೆಯು, ನಜಾಗರ್ತಿಹಿ-ಪ್ರಕಾಶಿಸುವುದಿಲ್ಲವಷ್ಟೆ? (ತೋರುವುದಿಲ್ಲವಷ್ಟೆ?).

ತಾತ್ಪರ್ಯ ॥ ಆ ಸುರಮಂಜರಿಯೂ ಕೂಡ ತನಗಿಷ್ಟನಾದವರನ್ನು ಪಡೆಯುವುದಕ್ಕೆ ಉಪಾಯವೇನೆಂದು ಆ ಸಮರ್ಥನಾದ ವೃದ್ಧವೇಷಧರನಾದ ಜೀವಂಧರಸ್ವಾಮಿಯನ್ನು ಪ್ರಶ್ನೆಮಾಡಿದಳು. ರಾಗಕ್ರಾಂತರಾಗಿವಿವೇಕರಹಿತವಾದ ಜನವು ಕೇಳೋಣದರಲ್ಲಿರುವ ದೀನಭಾವವನ್ನುಕೂಡ ಪರ್ಯಾಲೋಚಿಸುವುದಿಲ್ಲವಷ್ಟೆ? ॥೨೮॥

ಶ್ಲೋಕ ॥ ಕಾಮಂ ಕಾಮಪ್ರದಂ ಸೋಯಂ
ಕಾಮದೇವ ಮುಪಾದಿಶತ್ ।
ಮನೀಷಿತಾನುಕೂಲಂ ಹಿ
ಪ್ರೀಣಯೇತ್ಪ್ರಾಣಿನಾಂ ಮನಃ ॥ ೨೯ ॥

ಟೀ ॥ ಸೋಯಂ- ಆ ಈ ವೃದ್ಧವೇಷಧಾರಿಯಾದ ಜೀವಂಧರಸ್ವಾಮಿಯು, ಕಾಮದೇವಂ-ಮನ್ಮಥನನ್ನು, ಕಾಮಂ-ಬಹಳವಾಗಿ, ಕಾಮಪ್ರದಂ (ಸನ್ತಂ)-ಇಷ್ಟಾರ್ಥವನ್ನು ಕೊಡುವವನನ್ನಾಗಿ, ಉಪಾದಿಶತ್- ಉಪದೇಶಿಸಿದನು., ಪ್ರಾಣಿನಾಂ-ಪ್ರಾಣಿಗಳ, ಮನಃ-ಮನಸ್ಸು, ಮನೀಷಿತಾನುಕೂಲಂ(ಸತ್)–ಮನೀಷಿತ-ಇಷ್ಟಾರ್ಥಕ್ಕೆ, ಅನುಕೂಲಂ(ಸತ್)-ಅನುಕೂಲವಾಗಿಯಾದರೆ, ಪ್ರೀಣಯೇದ್ಧಿ-ಪ್ರೀತಿಯನ್ನು ಹೊಂದುವುದಲ್ಲವೆ?.

ತಾತ್ಪರ್ಯ ॥ ಆ ಈ ವೃದ್ಧವೇಷವು ಧರಿಸಿರುವ ಜೀವಂಧರಸ್ವಾಮಿಯು ಆ ಸುರಮಂಜರಿಯನ್ನು ಕುರಿತು, ಕಾಮದೇವನು (ಮನ್ಮಥನು) ಅವಶ್ಯವಾಗಿ ನಿನ್ನ ಇಷ್ಟಾರ್ಥಸಿದ್ಧಿಯನ್ನುಂಟುಮಾಡುವನೆಂದು ಹೇಳಿದನು. ಸುರಮಂಜರಿಯೂ ಕೂಡ ಬಹಳವಾಗಿ ಸಂತೋಷಿಸಿದಳು. ಲೋಕದಲ್ಲಿ ತನ್ನ ಅಭಿಮತಾನುಸಾರವಾಗಿ ಉಪಾಯವನ್ನು ಹೇಳಿದರೆ ಪ್ರಾಣಿಗಳ ಮನಸ್ಸು ಪ್ರೀತಿಪಡುವುದಲ್ಲವೆ!॥೨೯॥

ಶ್ಲೋಕ ॥ ಮನೀಷಿತಂ ಚ ಹಸ್ತಸ್ಥಂ
ಮೇನೇ ಸಾ ಸುರಮಂಜರೀ ।
ಮನೋರಥೇನ ತೃಪ್ತಾನಾಂ
ಮೂಲಲಬ್ಧೌ ತು ಕಿಂ ಪುನಃ ॥ ೩೦ ॥

ಟೀ ॥ ಸಾ ಸುರಮಂಜರೀ-ಆ ಸುರಮಂಜರಿಯು, ಮನೀಷಿತಂಚ-ತನ್ನಿಷ್ಟಾರ್ಥವನ್ನು, ಹಸ್ತಸ್ಥಂ(ಸತ್)-ಕೈಯಲ್ಲಿರುವುದನ್ನಾಗಿ, ಮೇನೇ-ತಿಳಿದಳು., ಮನೋರಥೇನ- ಅಭಿಲಾಷೆ ಮಾತ್ರದಿಂದಲೇ, ತೃಪ್ತಾನಾಂ - ಸಂತುಷ್ಟರಾದವರಿಗೆ, ಮೂಲಲಬ್ಧೌ(ಸತ್ಯಾಂ)ತು- ಮೂಲಲಾಭವುಂಟಾಗುತ್ತಿರಲಾಗಿ, ಕಿಂಪುನಃ-ಹೇಳತಕ್ಕದ್ದೇನು?.

ತಾತ್ಪರ್ಯ ॥ ಆ ಸುರಮಂಜರಿಯು ತನ್ನಿಷ್ಟಾರ್ಥವನ್ನು ಕೈಯಲ್ಲಿರುವುದನ್ನಾಗಿಯೇ (ಫಲಿಸುವುದನ್ನಾಗಿಯೇ) ತಿಳಿದಳು. ಇಚ್ಛಾಮಾತ್ರದಿಂದಲೇ ತೃಪ್ತರಾಗಿರುವವರಿಗೆ ಮೂಲಕಾರಣವೊಂದು ದೊರೆತುದಾದರೆ ಅವರ ಸಂತೋಷವು ಬೇರೆ ಹೇಳಬೇಕೆ? ॥ ೩೦॥

ಶ್ಲೋಕ॥ ಅನ್ವೈಷೀತ್ತಾಮಸೌ ಪಶ್ಚಾ-
ತ್ಕಾಮಾಗಾರಂ ಯಥೇಪ್ಸಿತಮ್ ।
ವಿಚಾರಮೂಢಕೃತ್ಯಾನಾಂ
ವ್ಯಭಿಚಾರಃ ಕುತೋ ಭವೇತ್ ॥ ೩೧ ॥

ಟೀ ॥ ಅಸೌ-ಈ ವೃದ್ಧರೂಪಧರನಾದ ಜೀವಂಧರಸ್ವಾಮಿಯು, ಪಶ್ಚಾತ್-ಅನಂತರದಲ್ಲಿ, ತಾಂ-ಆ ಸುರಮಂಜರಿಯನ್ನು, ಯಥೇಪ್ಸಿತಂ- ಅವಳ ಇಷ್ಟಾನುಸಾರವಾಗಿ, ಕಾಮಗೃಹಂ-ಕಾಮದೇವಾಲಯವನ್ನು, ಅನ್ವೈಷೀತ್ - ಹೊಂದಿಸಿದನು., ವಿಚಾರಮೂಢಕೃತ್ಯಾನಾಂ—ವಿಚಾರ-ಪರ್ಯಾಲೋಚನೆಯಿಂದ, ರೂಢ-ನಿರ್ಣಯಿಸಲ್ಪಟ್ಟ, ಕೃತ್ಯಾನಾಂ-ಕೆಲಸವುಳ್ಳವರಿಗೆ (ಕಾರ್ಯಗಳಿಗೆ), ವ್ಯಭಿಚಾರಃ-ಫಲಸಿದ್ಧಿಯಿಲ್ಲದೇಹೋಗುವಿಕೆಯು, ಕುತಃ-ಯಾವಕಾರಣದಿಂದ, ಭವೇತ್- ಉಂಟಾದೀತು ?.

ತಾತ್ಪರ್ಯ ॥ ಅನಂತರದಲ್ಲಿ ಈ ವೃದ್ಧರೂಪಿಯಾಗಿರುವ ಜೀವಂಧರಕುಮಾರನು, ಅವಳ ಇಷ್ಟಾನುಸಾರವಾಗಿ ಕಾಮದೇವಾಲಯವನ್ನು ಹೊಂದಿಸಿದನು. ಚೆನ್ನಾಗಿ ಆಲೋಚಿಸಿ ನಿರ್ಣಯಿಸಲ್ಪಟ್ಟಕೆಲಸಗಳಿಗೆ ಅವಶ್ಯ ಫಲಸಿದ್ಧಿಯಾಗುವುದೇ ಹೊರತು ಯಾವಾಗಲೂ ನಿಷ್ಫಲವಾಗಲಾರದಲ್ಲವೆ ? ॥ ೩೧॥

ಶ್ಲೋಕ॥ ಕಾಮಂ ಸಾ ಪ್ರಾರ್ಥಯಾಮಾಸ
ಜೀವಕಸ್ವಾಮಿಕಾಮ್ಯಯಾ ।
ಜನ್ಮಾಂತರಾನುಬದ್ಧೌ ಹಿ
ರಾಗದ್ವೇಷೌ ನ ನಶ್ಯತಃ ॥ ೩೨ ॥

ಟೀ ॥ ಸಾ-ಆ ಸುರಮಂಜರಿಯು, ಜೀವಕಸ್ವಾಮಿಕಾಮ್ಯಯಾ—ಜೀವಕಸ್ವಾಮಿ-ಜೀವಂಧರಸ್ವಾಮಿಯ, ಕಾಮ್ಯಯಾ-ಇಚ್ಛೆಯಿಂದ, ಕಾಮಂ - ಮನ್ಮಥನನ್ನು

ಪ್ರಾರ್ಥಯಾಮಾಸ-ಅಪೇಕ್ಷಿಸಿದಳು, ಜನ್ಮಾಂತರಾನುಬದ್ಧೌ- ಜನ್ಮಾಂತರ- ಜನ್ಮಾಂತರದಲ್ಲಿ, ಅನುಬದ್ಧೌ-ಕಟ್ಟಲ್ಪಟ್ಟ, ರಾಗದ್ವೇಷೌ-ರಾಗದ್ವೇಷಗಳು, ನಶ್ಯತೋಃಹಿ-ನಾಶವನ್ನು ಹೊಂದುವುದಿಲ್ಲವಷ್ಟೆ?.

ತಾತ್ಪರ್ಯ॥ ಆ ಸುರಮಂಜರಿಯು, ಜೀವಂಧರಸ್ವಾಮಿಯನ್ನೇ ವಿವಾಹಮಾಡಿಕೊಳ್ಳುವೆನೇ ಹೊರತು ಇತರ ಪುರುಷನಮುಖವನ್ನು ಕೂಡ ನೋಡುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದಳಾದಕಾರಣ, ತನ್ನ ಇಚ್ಛಾನುಸಾರವಾಗಿಯೇ ಕಾಮದೇವನನ್ನು ಪ್ರಾರ್ಥಿಸಿದಳು. ಜನ್ಮಾಂತರದಲ್ಲಿದ್ದ ರಾಗದ್ವೇಷಗಳೇ ಈ ಜನ್ಮದಲ್ಲಿಯೂ ಉಂಟಾಗುವುವೇಹೊರತು ನಾಶವನ್ನು ಹೊಂದುವುದಿಲ್ಲವಷ್ಟೆ? ॥೨೮॥

ಶ್ಲೋಕ॥ ಲಬ್ಧೋ ವರ ಇತಿಪ್ರೋಕ್ತಂ
ಬುದ್ಧಿಷೇಣೇನ ಸಾ ಸತೀ ।
ಮನೋಭುವೋ ವಚೋ ಮೇನೇ
ಸ್ತ್ರೀಣಾಂ ಮೌಢ್ಯಂ ಹಿ ಭೂಷಣಮ್ ॥೩೩॥

ಟೀ॥ ಸತೀ-ಶ್ರೇಷ್ಠಳಾದ (ಪತಿವ್ರತೆಯಾದ), ಸಾ- ಆ ಸುರಮಂಜರಿಯು, ವರಃ-ವರನು, ಲಬ್ಧಃ-ಪಡೆಯಲ್ಪಟ್ಟನು., ಇತಿ-ಹೀಗೆಂದು, ಬುದ್ಧಿಷೇಣೇನ-ಬುದ್ಧಿಷೇಣನಿಂದ, ಪ್ರೋಕ್ತಂ-ಹೇಳಲ್ಪಟ್ಟ, ವಚಃ-ವಾಕ್ಯನ್ನು, ಮನೋಭುವಃ- ಮನ್ಮಥನ, ವಚಃ(ಸತ್)-ವಾಕ್ಯವನ್ನಾಗಿ, ಮೇನೇ-ತಿಳಿದಳು., ಸ್ತ್ರೀಣಾಂ-ಹೆಂಗಸರಿಗೆ, ಮೌಢ್ಯಂ-ಮೂಢತ್ವವು, ಭೂಷಣಂಹಿ-ಆಭರಣವಲ್ಲವೆ?.

ತಾತ್ಪರ್ಯ ॥ ಜೀವಂಧರಸ್ವಾಮಿಯ ಮಿತ್ರನಾದ ಬುದ್ಧಿಷೇಣನು ಕಾಮದೇವನ ಹಿಂಭಾಗದಲ್ಲಿ ಅಗೋಚರವಾಗಿದ್ದು, ನಿನಗೆ ಇಷ್ಟವಾದವರನು ನಿನ್ನಿಂದ ಪಡೆಯಲ್ಪಟ್ಟರುವನು ಎಂದು ಹೇಳಿದನು. ಆ ಮಾತನ್ನು ಸಾಕ್ಷಾತ್ ಕಾಮದೇವನ ಮಾತನ್ನಾಗಿಯೇ ಸುರಮಂಜರಿಯು ನಂಬಿದಳು. ಹೆಂಗಸರಿಗೆ ಮೂಢತ್ವವೇ ಆಭರಣವಲ್ಲವೆ? (ಆಭರಣದಂತೆ ಸ್ತ್ರೀಜಾತಿಸ್ವಭಾವವಾದ ಮೌಢ್ಯವೂ ಕೂಡ ಭ್ರಾಂತಿಹೇತುವೆಂದಭಿಪ್ರಾಯವು॥

ಶ್ಲೋಕ ॥ ಕುಮಾರಂ ದರ್ಶಿತಾಕಾರಂ
ದೃಷ್ಟ್ವಾ ಜಿಹ್ರಾಯ ತತ್ಕ್ಷಣೇ ।

ಮೃತಕಲ್ಪಾ ಹಿ ಕಲ್ಪಂತೇ
ನಿರ್ಲಜ್ಜಾ ನಿಷ್ಕೃಪಾಇವ ॥ ೩೪ ॥

ಟೀ ॥ ಸಾ- ಆ ಸುರಮಂಜರಿಯು, ದರ್ಶಿತಾಕಾರಂ—ದರ್ಶಿತ-ತೋರಿಸಲ್ಪಟ್ಟ, ಆಕಾರಂ-ಆಕಾರವುಳ್ಳ, ಕುಮಾರಂ-ಜೀವಂಧರಕುಮಾರನನ್ನು, ದೃಷ್ಟ್ವಾ-ನೋಡಿ, ತತ್ಕ್ಷಣೇ-ಆಕ್ಷಣದಲ್ಲಿಯೇ, ಜಿಹ್ರಾಯ-ನಾಚಿಕೆಪಟ್ಟಳು., ನಿರ್ಲಜ್ಜಾಃ-ನಾಚಿಕೆಯಿಲ್ಲದವರು, ನಿಷ್ಕೃಪಾಇವ-ದಯಾರಹಿತರೋಪಾದಿಯಲ್ಲಿ, ಮೃತಕಲ್ಪಾ (ಸ್ಸಂತಃ), ಮೃತಪ್ರಾಯರಾಗಿ, ಕಲ್ಪಂತೇಹಿ- ಆಗುತ್ತಾರೆಯಲ್ಲವೆ?.

ತಾತ್ಪರ್ಯ ॥ ಆ ಸುರಮಂಜರಿಯು, ಆಕಾರವನ್ನು ತೋರಿಸಿದಂಥ (ವೃದ್ಧಬ್ರಾಹ್ಮಣವೇಷವಂ ಬಿಟ್ಟು ಪೂರ್ವದಂತೆ ತನ್ನ ರೂಪವನ್ನೇ ಹೊಂದಿರುವ) ಜೀವಂಧರಕುಮಾರನನ್ನು ನೋಡಿ, ಆಕ್ಷಣದಲ್ಲಿಯೇ ನಾಚಿಕೆಪಟ್ಟಳು. ದಯಾರಹಿತರಾದ ಜನಗಳು ಹೇಗೆ ಮೃತಪ್ರಾಯರೋ ಹಾಗೆ ಲಜ್ಜಾರಹಿತರೂ ಮೃತಪ್ರಾಯರಲ್ಲವೆ? (ನಾಚಿಕೆಯಂ ಬಿಟ್ಟವರೂ, ಪ್ರಾಣಿದಯೆ ಯಿಲ್ಲದವರೂಕೂಡ ಇದ್ದರೂ ಸತ್ತವರೆಂತಲೇ ಅಭಿಪ್ರಾಯವು.) ॥ ೩೪ ॥

ಶ್ಲೋಕ॥ ಪತಿಕೃತ್ಯೇನ(*ಪ್ರತಿಕೃತ್ಯೇನ)ತಾಂ ಪತ್ನೀಂ
ಸುತರಾಂ ಸೋಽಪ್ಯತೋಷಯತ್ ।
ಸಂಸಾರೋಽಪಿ ಹಿ ಸಾರಸ್ಸ್ಯಾ-
ದ್ದಂಪತ್ಯೋರೇಕಕಂಠಯೋಃ ॥ ೩೫ ॥

ಟೀ ॥ ಸೋಽಪಿ-ಆ ಜೀವಂಧರಸ್ವಾಮಿಯೂಕೂಡ, ಪತಿಕೃತ್ಯೇನ-ಪತಿ-ಗಂಡನಿಗೆ ಯೋಗ್ಯವಾದ, ಕೃತ್ಯೇನ-ಕೆಲಸದಿಂದ, * ಪತ್ನೀಂ-ಹೆಂಡತಿಯಾದ, ತಾಂ-ಆ ಸುರಮಂಜರಿಯನ್ನು, ಸುತರಾಂ-ಬಹಳವಾಗಿ, ಅತೋಷಯತ್-ಸಂತೋಷಪಡಿಸಿದನು., ದಂಪತ್ಯೋಃ-ಪತಿಪತ್ನಿಯರು,ಏಕಕಂಠಯೋಃ(ಸ್ಸತೋಃ)-ಒಂದೇ ಕಂಠವುಳ್ಳವರಂತೆ (ಅತ್ಯಂತ ಪ್ರೀತಿಯುಳ್ಳವರಾಗಿರುತ್ತಿರಲಾಗಿ), ಸಂಸಾರೋಽಪಿ- ಸಂಸಾರವೂಕೂಡ, ಸಾರ(ಸ್ಸಕ)-ಶ್ರೇಷ್ಠವಾದದ್ದಾಗಿಯೇ, ಸ್ಯಾದ್ಧಿ-ಆದೀತಲ್ಲವೆ?.

ತಾತ್ಪರ್ಯ ॥ ಜೀವಂಧರಕುಮಾರನೂಕೂಡ ಹೆಂಡತಿಯಾದ ಸುರಮಂಜರಿಯನ್ನು, ಲೋಕದಲ್ಲಿ ಅತ್ಯಂತ ನಾಚಿಕೆಯುಳ್ಳ ಹೆಂಡತಿಯು

* ಪ್ರತಿಕೃತ್ಯೇನ- ನಾಚಿಕೆ [illegible] ಪ್ರತೀಕಾರದಿಂದ.

ನ್ನು ಗಂಡನು ಯಾವಯಾವ ಉಪಾಯಗಳಿಂದ ಸ್ವಾಧೀನಪಡಿಸಿಕೊಳ್ಳು ಪನೋ, ಆ ಪ್ರಕಾರ ನಾಚಿಕೆಯಂಬಿಡಿಸಿ ಬಹಳವಾಗಿ ಸಂತೋಷಪಡಿಸಿದನು. ದಂಪತಿಗಳಿಬ್ಬರೂ ಏಕಶರೀರನ್ಯಾಯದಿಂದ ಅತ್ಯಂತ ಅನುಕೂಲರಾಗಿರುತ್ತಿರಲಾಗಿ ಅಸಾರವಾದ ಸಂಸಾರವೂಕೂಡ ಸಾರವಾಗಿಯೇ ತೋರುವುದಷ್ಟೆ ? ॥ ೩೫ ॥

ಶ್ಲೋಕ॥ ತತಃ ಕುಬೇರಮಿತ್ರೇಣ
ದತ್ತಾಂ ತಾಂ ಸುರಮಂಜರೀಮ್ ।
ಸುಮತೇರಾತ್ಮಜಾಂ ಸೋಯ-
ಮುಪಯೇಮೇ ಯಥಾಕ್ರಮಮ್ ॥ ೩೬ ॥

ಟೀ॥ ತತಃ-ಅನಂತರದಲ್ಲಿ, ಕುಬೇರಮಿತ್ರೇಣ-ಕುಬೇರಮಿತ್ರನಿಂದ, ದತ್ತಾಂ-ಕೊಡಲ್ಪಟ್ಟ, ಸುಮತೇಃ- ಸುಮತಿ ಎಂಬುವಳಿಗೆ, ಆತ್ಮಜಾಂ-ಮಗಳಾದ, ತಾಂ-ಆ ಪ್ರಸಿದ್ಧಳಾದ, ಸುರಮಂಜರೀಂ-ಸುರಮಂಜರಿಯನ್ನು, ಸೋಯಂ- ಆ ಈ ಜೀವಂಧರಕುಮಾರನು, ಯಥಾಕ್ರಮಂ-ಶಾಸ್ತ್ರೋಕ್ತಪ್ರಕಾರವಾಗಿ, ಉಪಯೇಮೆ-ವಿವಾಹಮಾಡಿಕೊಂಡನು.

ತಾತ್ಪರ್ಯ॥ ಅನಂತರದಲ್ಲಿ ಆ ಈ ಜೀವಂಧರಸ್ವಾಮಿಯು ಸುಮತಿಯೆಂಬುವಳಿಗೆ ಮಗಳಾದ, ತಂದೆಯಾದ ಕುಬೇರಮಿತ್ರನಿಂದ ಕೊಡಲ್ಪಟ್ಟ ಆ ಸುರಮಂಜರಿಯನ್ನು ಶಾಸ್ತ್ರೋಕ್ತ ಪ್ರಕಾರವಾಗಿ ವಿವಾಹಮಾಡಿಕೊಂಡನು. ॥ ೩೬ ॥

ಇಂತು ಜೀವಂಧರಕುಮಾರನು ಅತಿಪ್ರಿಯಳಾದಾ ವಿಮಲಾದೇವಿಯಂ ವಿವಾಹಮಾಡಿಕೊಂಡನಂತರ ಬಹುಪ್ರೀತಿಯಿಂದ ಸುಖವನ್ನನುಭವಿಸಿ, ಬಳಿಕಲಾಕೆಯಂ ಸಮಾಧಾನಗೊಳಿಸಿ ಅಲ್ಲಿಯೇ ಬಿಟ್ಟು ಸ್ನೇಹಿತರೊಡನೆಸೇರಲು ಮದುವೆಗಂಡಿನ ಚಿಹ್ನೆಯೊಡಗೂಡಿದ ಆ ಜೀವಂಧರಕುಮಾರನಂ ನೋಡಿ ಬಂಧುಗಳೂ ಆತನಸಾಹಸಕ್ಕೆ ಬಹಳವಾಗಿ ಶ್ಲಾಘಿಸಲು, ಆ ಮಿತ್ರರಲ್ಲೋರ್ವ ಬುದ್ಧಿಷೇಣನೆಂಬ ಹಾಸ್ಯಗಾರನು ಪುರುಷರಲ್ಲಿಯೇದ್ವೇಷಿಯಾಗಿರುವ ಸುರಮಂಜರಿಯಂ ವಿವಾಹಮಾಡಿಕೊಂಡ ಹೊರತು ನಿನ್ನಪೌರುಷವು ಪ್ರಯೋಜನಕರವಲ್ಲವೆಂದು ಆ ಜೀವಂಧರಕುಮಾರನಂ

ಪರಿಹಾಸಮಾಡಲು ಜೀವಂಧರಕುಮಾರನಿಗೆ ಹಠವುಂಟಾಗಿ ಯಕ್ಷನಿಂದು ಪದೇಶಿಸಲ್ಪಟ್ಟಿದ್ದ ಕಾಮರೂಪ ಮಂತ್ರವಂಸ್ಮರಿಸಿ ಅತ್ಯಂತವೃದ್ಧರೂಪ ಧರನಾಗಿ ಸುರಮಂಜರೀಮನೆಯಂ ಪ್ರವೇಶಗೈದು ಅಲ್ಲಿಭೋಜನವಂಮಾ ಡಿ ಪವಡಿಸಿ,ರಾತ್ರಿಯೊಳು ದಿವ್ಯಸಂಗೀತದಿಂದಾಕೆಯಂ ಮೋಹಗೊಳಿಸಿ, ಆ ಸುರಮಂಜರಿಯು ತನಗೆ ಜೀವಂಧರಕುಮಾರನೇ ಪತಿಯಾಗುವಂತೆ ತಾವು ಉಪಾಯವಂಮಾಡಬೇಕೆಂದು ಪ್ರಾರ್ಥಿಸಲು ಆಕೆಯಂ ಕಾಮದೇ ವಾಲಯವಂ ಹೊಂದಿಸಿ ಆ ಸಮಯದೊಳ್ ದೇವರಹಿಂದೆ ಅವ್ರುತುಕೊಂಡಿ ರುವಬುದ್ಧಿಷೇಣನು ನಿನ್ನಇಷ್ಟವಾದ ವರನು ಸಿದ್ಧನಾಗಿರುವನೆಂದುಕೂ ಗಿಹೇಳಲು ಆ ಸುರಮಂಜರಿಯು ಆ ವಾಕ್ಯವಂ ಕಾಮದೇವನ ವಾಕ್ಯವೆಂ ತಲೇನಂಬಿ ನೋಡಲು ನಿಜರೂಪದಿಂ ದರ್ಶನಕೊಡುವ ಜೀವಂಧರಕು ಮಾರನುನೋಡಿ ನಾಚುವ ಆ ಸುರಮಂಜರಿಯ ನಾಚಿಕೆಯಂ ಚತುರಸ ಮಾಧಾನೋಕ್ತಿಗಳಿಂದಬಿಡಿಸಿ ತಾಯಿತಂದೆಗಳಾದ ಸುಮತಿ ಕುಬೇರದ ತ್ತಶ್ರೇಷ್ಠಿಗಳಾದಿವರೀರ್ವರಿಂದ ಶಾಸ್ತ್ರೋಕ್ತಪ್ರಕಾರವಾಗಿ ಕೊಡಲ್ಪ ಟ್ಟ ಆ ಸುರಮಂಜರಿಯಂ ವಿವಾಹ ಮಾಡಿಕೊಂಡನೆಂಬಲ್ಲಿಗೆ,

ಶ್ರೀಮದ್ವಾದೀಭಸಿಂಹಸೂರಿ ಎಂಬ ಮಹಾಕವಿಯಿಂ ವಿರಚಿತಮಾದ

ಕ್ಷತ್ರಚೂಡಾಮಣಿಮಹಾಕಾವ್ಯದೊಳುಏಂಭತ್ತನೆಯ

ಲಂಬವು ಸಮಾಪ್ತವಾದುದು.

---



ಶ್ರೀರಸ್ತು.

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ,

# ದಶಮೋ ಲಂಬಃ.

ಶ್ಲೋಕ॥ ಅಥ ಪಾಣಿಗೃಹೀತೀಂ ತಾಂ
ಬಹುಮೇನೇ ಬಹುಪ್ರಿಯಃ ।
ಬಹುಯತ್ನೋಪಲಬ್ಧೇ ಹಿ
ಪ್ರೇಮಬಂಧೋ ವಿಶಿಷ್ಯತೇ ‖ ೧ ‖

ಟೀ ‖ ಅಥ-ಅನಂತರದಲ್ಲಿ, ಬಹುಪ್ರಿಯಃ—ಬಹು-ಅನೇಕರಾದ, ಪ್ರಿಯಾಃ- ಪತ್ನಿಯರುಳ್ಳ ಜೀವಂಧರಸ್ವಾಮಿಯು, ಪಾಣಿಗೃಹೀತೀಂ-ಪತ್ನಿಯಾದ, ತಾಂ-ಆಸುರಮಂಜರಿಯನ್ನು, ಬಹುಮೇನೆ-ಬಹುಮಾನಿಸಿದನು., ಬಹುಯತ್ನೋಪಲಬ್ಧೇ—ಬಹು-ಬಹಳವಾದ, ಯತ್ನ-ಪ್ರಯತ್ನದಿಂದ, ಉಪಲಬ್ಧೇ-ಪಡೆಯಲ್ಪಟ್ಟವಸ್ತುವಿನಲ್ಲಿ, ಪ್ರೇಮಬಂಧಃ-ಪ್ರೀತಿಯಬಂಧನವು, (ಪ್ರೀತಿಯನ್ನಿಡೋಣವು), ವಿಶಿಷ್ಯತೇಹಿ-ವಿಶೇಷವಾಗಿ ಉಂಟಾಗುವುದಲ್ಲವೆ ?.

ತಾತ್ಪರ್ಯ ‖ ಅನಂತರದಲ್ಲಿ, ಅನೇಕ ಪ್ರಿಯಪತ್ನಿಯರುಳ್ಳ ಆ ಜೀವಂಧರಸ್ವಾಮಿಯು ಆ ಪತ್ನಿಯಾದ ಸುರಮಂಜರಿಯನ್ನು ಬಹುಮಾನಿಸಿದನು. ಬಹುಪ್ರಯತ್ನದಿಂದ ಪಡೆಯಲ್ಪಟ್ಟ ವಸ್ತುವಿನಲ್ಲಿ ಪ್ರೀತಿಯು ವಿಶೇಷವಾಗಿ ಉಂಟಾಗುವುದಲ್ಲವೆ ? ‖ ೧ ‖

ಶ್ಲೋಕ‖ ಕೃಚ್ಛ್ರೇಣಾರಾಧ್ಯತಾಂ ಭೂಯೋ
ಮಿತ್ರಾಣಾಂ ಪಾರ್ಶ್ವಮಾಶ್ರಿತಃ ।
ಸ್ವಾಪಿಸಾಚಿಖ್ಯಾ ಪ್ರತಿಕೂಲತ್ವಂ
ಕುಲಜಾನಾಂ ಕುತೋ ಭವೇತ್ ‖ ೨ ‖

ಟೀ‖(ಸಃ-ಆ ಜೀವಂಧರಸ್ವಾಮಿಯು,) ತಾಂ- ಆ ಸುರಮಂಜರಿಯನ್ನು, ಕೃಚ್ಛ್ರೇಣ-ಬಹುಪ್ರಯಾಸದಿಂದ, ಆರಾಧ್ಯ-ಸಮ್ಮತಪಡಿಸಿ, ಮಿತ್ರಾಣಾಂ-ಸ್ನೇಹಿತರ,

ಪಾರ್ಶ್ವಂ-ಸಮೀಪವನ್ನು, ಆಶ್ರಿತಃ-ಹೊಂದಿದನು., ಕುಲಜಾನಾಂ- ಸತ್ಕುಲ ಪ್ರ ಸೂತೆಯರಾದ ಸ್ತ್ರೀಯರಿಗೆ ( ಪತಿವ್ರತಾಸ್ತ್ರೀಯರಿಗೆ ), ಸ್ವಾಮೀಚ್ಛಾಪ್ರತಿ ಕೂಲತ್ವಂ-ಸ್ವಾಮಿ-ಪತಿಯ, ಇಚ್ಛಾ-ಇಚ್ಛೆಗೆ, ಪ್ರತಿಕೂಲತ್ವಂ-ವಿರೋಧವಾಗಿನ ಡೆಯೋಣವು, ಕುತಃ-ಯಾವಕಾರಣವದೆಸೆಯಿಂದ, ಭವೇತ್-ಉಂಟಾದೀತು ?.

ತಾತ್ಪರ್ಯ ॥ ಆ ಜೀವಂಧರಸ್ವಾಮಿಯು, ಅತ್ಯಂತ ಪ್ರಿಯಪತ್ನಿ ಯಾದ ಸುರಮಂಜರಿಯನ್ನು ಬಹುಪ್ರಯಾಸದಿಂದ ಸಮಾಧಾನಪಡಿಸಿ, ತನ್ನ ಸ್ನೇಹಿತರ ಸಮೀಪವನ್ನು ಹೊಂದಿದನು. ಪತಿವ್ರತೆಯರಾಗಿ ಸ ತ್ಕುಲಪ್ರಸೂತೆಯರಾದ ಸ್ತ್ರೀಯರು ಎಂದಿಗೂ ಪತಿಯಇಚ್ಛೆಗೆ ವಿರೋ ಧವಾಗಿ ನಡೆಯುದಿವುಲ್ಲವಷ್ಟೆ ? ॥ ೧ ॥

ಶ್ಲೋಕ॥ ಸಚಿತ್ರೀಯೈರ್ಮಿತ್ರೈಃ
ಪಿತ್ರೋರಂತಿಕಮಾಯಯೌ ।
ಆತ್ಮದುರ್ಲಭಮನ್ಯೇನ
ಸುಲಭಂ ಹಿ ವಿಲೋಭನಮ್ ॥ ೩ ॥

ಟೀ ॥ ಸಃ-ಆ ಜೀವಂಧರಕುಮಾರನು, ಚಿತ್ರೀಯೈಃ-ಆಶ್ಚರ್ಯಪಡುತಿರುವ, ಮಿ ತ್ರೈಃ-ಸ್ನೇಹಿತರೊಡನೆ, ಪಿತ್ರೋಃ-ತಾಯಿತಂದೆಗಳ, ಅಂತಿಕಂ-ಸಮೀಪವನ್ನು ಆಯಯೌ-ಹೊಂದಿದನು., ಆತ್ಮದುರ್ಲಭಂ-ಆತ್ಮ-ತನಗೆ, ದುರ್ಲಭಂ-ಪಡೆಯ ಶಕ್ಯವಾದ, ವಿಲೋಭನಂ-ಆಶೆಪಡುವುದಕ್ಕೆ ಯೋಗ್ಯವಾದ ವಸ್ತುವು, ಅನ್ಯೇನ ಶಕ್ತನಾದ ಮತ್ತೊಬ್ಬನಿಂದ, ಸುಲಭಂಹಿ-ಸುಖದಿಂದ ಪಡೆಯಲುಯೋಗ್ಯವಲ್ಲವೆ?

ತಾತ್ಪರ್ಯ ॥ ಆ ಜೀವಂಧರಸ್ವಾಮಿಯು, ಇತರರಿಂದ ಸಾಧಿಸಲ ಶಕ್ಯವಾದ ಸುರಮಂಜರೀ ವಿವಾಹವನ್ನೂ ಸಾಧಿಸಿದ ತನ್ನ ಸಾಹಸಕ್ಕೆ ಅತ್ಯಾಶ್ಚರ್ಯಪಡುತ್ತಿರುವ ಸ್ನೇಹಿತರೊಡನೆಕೂಡಿ, ತಾಯಿ ತಂದೆಗಳ ಸಮೀಪವನ್ನು ಹೊಂದಿದನು. ಲೋಕದಲ್ಲಿ ಉಪಾಯವರಿಯದವನಿ (ತನಗೆ) ದುರ್ಲಭವಾದವಸ್ತುವು ಇತರರಿಗೆ ಸುಲಭವಲ್ಲವೆ ? ಸ್ನೇಹಿತರಿ ಅಸಾಧ್ಯವಾಗಿ ತೋರಿದ ಸುರಮಂಜರೀ ವಿವಾಹವು, ಶಕ್ತನಾದ ಜೀವಂ ಧರಸ್ವಾಮಿಗೆ ಸಾಧ್ಯವಾಯಿತಷ್ಟೆ ? ಯಾವನಾದಾಗ್ಯೂ ( ತನಗೆ ಅಸಾ ಧ್ಯವಾದರೆ ಲೋಕಕ್ಕೇನೆ ಅಸಾಧ್ಯವೆಂದು ತಿಳಿಯಕೂಡದೆಂಬಭಿಪ್ರಾ ಯವು. ) ॥ ೩॥

ಪಿತ್ರೋರಪ್ಯತಿಮಾತ್ರೋಽಭೂ-
ತ್ಪುತ್ರಸ್ನೇಹೋಽಸ್ಯ ವೀಕ್ಷಣಾತ್ |
ಕಸ್ಯಾನಂದಕರೋ ನ ಸ್ಯಾ-
ತ್ಕೃತಾಂತಾಸ್ಯಾದುಪಾಗತಃ ॥ ೪ ॥

ಟೀ ॥ ಅಸ್ಯ-ಈ ಜೀವಂಧರಸ್ವಾಮಿಯ, ವೀಕ್ಷಣಾತ್-ನೋಡೋಣವರಿನೆಸೆಯಿಂದ, ಪಿತ್ರೋರಪಿ-ತಾಯಿತಂದೆಗಳಿಗೂಕೂಡ, ಅತಿಮಾತ್ರಃ- ಬಹಳವಾದ, ಪುತ್ರಸ್ನೇಹಃ- ಪುತ್ರವಾತ್ಸಲ್ಯವು, ಅಭೂತ್-ಉಂಟಾಯಿತು., ಕೃತಾಂತಾಸ್ಯಾತ್-ಕೃತಾಂತ-ಯಮನ, ಆಸ್ಯಾತ್-ಬಾಯಿಯಿಂದಸೆಯಿಂದ, ಉಪಾಗತಃ- ಬದುಕಿಬಂದಂಥಾವನು, ಕಸ್ಯ-ಯಾರಿಗೆ, ಆನಂದಕರ(ಸ್ಸನ್)- ಸಂತೋಷವನ್ನುಂಟುಮಾಡುವವನಾಗಿ, ನಸ್ಯಾತ್-ಆಗಲಾರನು?.

ತಾತ್ಪರ್ಯ ॥ ಈ ಜೀವಂಧರಸ್ವಾಮಿಯನ್ನು ನೋಡಿ, ತಾಯಿತಂದೆಗಳಾದ ಸುನಂದೆಯೂ, ಗಂಧೋತ್ಕಟಶ್ರೇಷ್ಠಿಯೂ ಇವರುಗಳಿಗೆ ಅತ್ಯಂತ ಸಂತೋಷವುಂಟಾದುದು. ಯಮನಬಾಯಿಗೆ ಪ್ರವೇಶಿಸಿ, ಹಿಂದಿರಿಗಿ ಬಂದಂಥಾವನನ್ನು ನೋಡಿ ಲೋಕದಲ್ಲಿ ಯಾರುತಾನೇ ವಿಶೇಷವಾಗಿಸಂತೋಷಪಡುವುದಿಲ್ಲವು?. (ಸಮಸ್ತರೂ ಬಹಳವಾಗಿ ಸಂತೋಷಿಸುವರೆಂದಭಿಪ್ರಾಯವು. ) ॥ ೪ ॥

ಶ್ಲೋಕ ॥ ತತೋ ಗಂಧರ್ವದತ್ತಾ ಚ
ಗುಣಮಾಲಾ ಚ ವಲ್ಲಭೇ ।
ಉಲ್ಲಾಘತಾಂ ಕ್ರಮಾನ್ನೀತೇ
ನೀತಿರೇಷಾ ಹಿ ಸಂಸ್ಕೃತೌ ॥ ೫ ॥

ಟೀ ॥ ತತಃ-ಅನಂತರದಲ್ಲಿ, ವಲ್ಲಭೇ-ಪತ್ನಿಯರಾದ, ಗಂಧರ್ವದತ್ತಾ ಚ- ಗಂಧರ್ವದತ್ತೆಯೂ, ಗುಣಮಾಲಾ ಚ- ಗುಣಮಾಲೆಯೂ ಇವರುಗಳು, ಉಲ್ಲಾಘತಾಂ-ಮನೋವ್ಯಥೆಯಂಬಿಡೋಣವನ್ನು (ಜೀವಂಧರಸ್ವಾಮಿಯ ಅಗಲುವಿಕೆಯಿಂದುಂಟಾದದುಃಖವಂಬಿಡೋಣವನ್ನು, ಕ್ರಮಾತ್-ಕ್ರಮವಾಗಿ, ನೀತೇ-ಐದಿಸಲ್ಪಟ್ಟರು., ಏಷಾ-ಇದು, ಸಂಸ್ಕೃತೌ-ಸಂಸಾರದಲ್ಲಿ, ನೀತಿಃ-ನೀತಿಯಲ್ಲವೆ [illegible]?.

ತಾತ್ಪರ್ಯ ॥ ಅನಂತರದಲ್ಲಿ, ಪತ್ನಿಯಾದ ಗಾಂಧರ್ವದತ್ತೆಯೂ, ಗುಣಮಾಲೆಯೂ ಇವರಿಬ್ಬರೂ ಕ್ರಮವಾಗಿ ಇದುವರೆಗೂ ಜೀವಂಧರ ಸ್ವಾಮಿಯನ್ನಗಲಿದುದರಿಂದಾದ ಮನೋವ್ಯಥೆಯಂ ಬಿಟ್ಟು ಸಂತು ಷ್ಟರಾದರು. ಸಂಸಾರದಲ್ಲಿ ಇದೇ ನೀತಿಯಲ್ಲವೆ? ( ಪತಿವ್ರತೆಯರಾ ದ ಸ್ತ್ರೀಯರಿಗೆ ಪತಿಯು ದೇಶಾಂತರವನ್ನೈದುತ್ತಿರಲಾಗಿ ಖಿನ್ನರಾ ಗೋಣವೂ. ಮನೆಗೆಬರುತ್ತಿರಲಾಗಿ ಸಂತುಷ್ಟರಾಗೋಣವೂ, ಲೋ ಕದಲ್ಲಿ ಸಂಸಾರಸಂಬಂಧಿಯಾದ ನೀತಿಯೆಂದಭಿಪ್ರಾಯವು.) ॥ ೫ ॥

ಶ್ಲೋಕ॥ ಅಥ ಗಂಧೋತ್ಕಟೇನಾಯಂ
ಮನ್ತ್ರಯಿತ್ವಾ ತತೋ ಯಯೌ ।
ವಿಧಿತ್ಸಿತೇಹ್ಯನಿಷ್ಪನ್ನೇ
ವಿರಮನ್ತಿ ನ ಪಂಡಿತಾಃ ॥ ೬ ॥

ಟೀ॥ ಅಥ-ಅನಂತರದಲ್ಲಿ, ಅಯಂ-ಈ ಜೀವಂಧರಸ್ವಾಮಿಯು, ಗಂಧೋತ್ಕ ಟೇನ-ಗಂಧೋತ್ಕಟಶ್ರೇಷ್ಠಿಯೊಡನೆ, ಮಂತ್ರಯಿತ್ವಾ-ಆಲೋಚಿಸಿ, ತತಃ-ಅಸ್ಥ ದದೆಸೆಯಿಂದ, ಯಯೌ-ಹೊರಟನು., ವಿಧಿತ್ಸಿತೇ-ಮಾಡಲೋಸುಗ ಇಚ್ಛಯಿಸಲ ಟ್ಟ ಕಾರ್ಯವು, ಅನಿಷ್ಪನ್ನೇ(ಸತಿ)- (ಸಿದ್ಧಿಸದೇಇರುತಿರಲಾಗಿ) ನೆರವೇರಿಸಲ್ಪಡದೇ ರುತಿರಲಾಗಿ, ಪಂಡಿತಾಃ-ವಿದ್ವಾಂಸರು (ವಿವೇಕಿಗಳು), ನವಿರಮಂತಿಹಿ- ಸುಮ್ಮ ಇರುವುದಿಲ್ಲವಷ್ಟೆ ?.

ತಾತ್ಪರ್ಯ ॥ ಅನಂತರದಲ್ಲಿ, ಜೀವಂಧರಕುಮಾರನು ಗಂಧೋತ್ಕ ಟಶ್ರೇಷ್ಠಿಯೊಡನೆ ಆಲೋಚಿಸಿ, ಅಲ್ಲಿಂದಹೊರಟನು. ಆವಶ್ಯಕವಾ ಮಾಡಬೇಕೆಂದು ನಿರ್ಣಯಿಸಲ್ಪಟ್ಟ ಕೆಲಸವನ್ನು ಮಾಡದೇ ಪಂಡಿ ರು ಸುಮ್ಮನೇಇರುವುದಿಲ್ಲವಷ್ಟೆ ? ( ಮೂರ್ಖರು ಕೆಲಸವನ್ನು ಸಾ ಲು ಶಕ್ತರಲ್ಲವಾದುದರಿಂದ ಕಾರ್ಯವು ಸಾಧಿಸಲರಿಯರು. ಪಂಡಿತ ಆಲೋಚಿಸಲ್ಪಟ್ಟ ಕಾರ್ಯವನ್ನವಶ್ಯವಾಗಿ ಸಾಧಿಸುವರು. ಬುದ್ಧಿಶಾ ಗಳು ಒಂದು ಕಾರ್ಯವಂ ಸಾಧಿಸಬೇಕೆಂದು ಇಚ್ಛೈಸಿದ್ದೇಆದರೆ ಕಾ ಸಿದ್ಧಿಯಾಗುವವರೆಗೂ ತಕ್ಕಪ್ರಯತ್ನವಂ ಮಾಡುತ್ತಿರುವರೇಹೊ ಎಂದಿಗೂ ನಿರುದ್ಯೋಗರಾಗಿಯೂ ಸೋಮಾರಿಗಳಾಗಿಯೂ ಇ ರರೆಂದಭಿಪ್ರಾಯವು.) ॥ ೬ ॥

ಶ್ಲೋಕ॥ ವಿದೇಹಾಖ್ಯೇ ತತೋ ದೇಶೇ
ಧರಣ್ಯಾಸ್ತಿಲಕೋಪಮಾಮ್ ।
ತಿಲಕಾಂತ ಧರಣ್ಯಾಖ್ಯಾಂ
ರಾಜಧಾನೀಮಶಿಶ್ರಯತ್ ॥ ೩ ॥

ಟೀ॥ ತತಃ-ಅನಂತರದಲ್ಲಿ, ಸಃ-ಆ ಜೀವಂಧರಸ್ವಾಮಿಯು, ವಿದೇಹಾಖ್ಯೇ-ವಿದೇಹ-ವಿದೇಹವೆಂದು, ಆಖ್ಯೇ-ನಾಮಧೇಯವುಳ್ಳ, ದೇಶೇ-ದೇಶದಲ್ಲಿ, ಧರಣ್ಯಾಃ-ಭೂಮಿಗೆ, ತಿಲಕೋಪಮಾಂ-ತಿಲಕಸಮಾನವಾದ, ತಿಲಕಾಂತಧರಣ್ಯಾಖ್ಯಾಂ-ತಿಲಕ-ತಿಲಕವೆಂಬಶಬ್ದವೇ, ಅಂತ-ಕೊನೆಯಲ್ಲಿವುಳ್ಳ, ಧರಣಿ-ಧರಣಿಎಂದು, ಆಖ್ಯಾಂ-ನಾಮಧೇಯವುಳ್ಳ, (ಧರಣೀತಿಲಕವೆಂದು ನಾಮಧೇಯವುಳ್ಳ), ರಾಜಧಾನೀಂ-ಪಟ್ಟಣವನ್ನು, ಅಶಿಶ್ರಯತ್-ಆಶ್ರಯಿಸಿದನು.

ತಾತ್ಪರ್ಯ॥ ಅನಂತರದಲ್ಲಿ ಜೀವಂಧರಸ್ವಾಮಿಯು, ವಿದೇಹವೆಂದು ನಾಮಧೇಯವುಳ್ಳ ದೇಶದಲ್ಲಿ ಭೂಮಿಗೆ ತಿಲಕದೋಪಾದಿಯಲ್ಲಿರುವ ಧರಣೀತಿಲಕವೆಂಬ ಪಟ್ಟಣವನ್ನು ಆಶ್ರಯಿಸಿದನು. ಈ ಪಟ್ಟಣಕ್ಕೆ ಧರಣೀತಿಲಕವೆಂಬ ನಾಮಧೇಯವು. (ಸ್ತ್ರೀಯ ಹಣೆಗೆ ತಿಲಕವು ಹೇಗೆ ಅಲಂಕಾರವಾಗಿದೆಯೋ ಹಾಗೆ ಈ ಭೂಮಿಯೆಂಬ ಸ್ತ್ರೀಗೆ ತಿಲಕದಂತೆ ಇರೋಣದರಿಂದ ಅನ್ವರ್ಥವಾಗಿ ಒಪ್ಪಿತೆಂದಭಿಪ್ರಾಯವು.)॥೩॥

ಶ್ಲೋಕ॥ ಮಹಿತೋ ಮಾತುಲೇನಾತ್ರ
ವಿದೇಹಾಧಿಪ ಭೂಭುಜಾ ।
ಭಾಗಿನೇಯೋ ಮಹಾಭಾಗೋ
ಮಹ್ಯಾಂ ಕೇನ ನ ಮಹ್ಯತೇ ॥ ೪ ॥

ಟೀ॥ ಅತ್ರ-ಈ ಧರಣೀತಿಲಕವೆಂಬ ಪಟ್ಟಣದಲ್ಲಿ, ಸಃ-ಆ ಜೀವಂಧರಸ್ವಾಮಿಯು, ಮಾತುಲೇನ-ಸೋದರಮಾವನಾದ, ವಿದೇಹಾಧಿಪಭೂಭುಜ-ವಿದೇಹದೇಶಾಧಿಪತಿಯಾದ ಗೋವಿಂದ ಮಹಾರಾಜನಿಂದ, ಮಹಿತಃ-ಪೂಜಿಸಲ್ಪಟ್ಟನು (ಬಹುಮಾನಿಸಲ್ಪಟ್ಟನು)., ಮಹಾಭಾಗಃ-ಮಹಾಭಾಗ್ಯಶಾಲಿಯಾದ, ಭಾಗಿನೇಯಃ-ಸೋದರಳಿಯನು, ಮಹ್ಯಾಂ-ಭೂಮಿಯಲ್ಲಿ, ಕೇನ-ಯಾರಿಂದ, ನಮಹ್ಯತೇ-ಪೂಜಿಸಲ್ಪಡುವುದಿಲ್ಲವು?.

ತಾತ್ಪರ್ಯ ॥ ಈಧರಣೀತಿಲಕಪಟ್ಟಣದಲ್ಲಿ ಜೀವಂಧರಕುಮಾರನು ಸೋದರಮಾವನಾದ ವಿದೇಹದೇಶಾಧಿಪತಿಯಾದ ಗೋವಿಂದಮಹಾರಾಜನಿಂದ ವಿಶೇಷವಾಗಿ ಸತ್ಕರಿಸಲ್ಪಟ್ಟನು. ಲೋಕದಲ್ಲಿ ಬಹಳ ಭಾಗ್ಯಶಾಲಿಯಾದ ಸೋದರಳಿಯನನ್ನು ಯಾರುತಾನೇ ಬಹುಮಾನಿಸುವುದಿಲ್ಲವು?. (ಎಲ್ಲರೂ ಮಹಾಭಾಗ್ಯಶಾಲಿಯಾದ ಸೋದರಳಿಯನನ್ನು ವಿಶೇಷವಾಗಿ ಸತ್ಕರಿಸಿ ಗೌರವಿಸುವರೆಂದಭಿಪ್ರಾಯವು.)॥ ೮ ॥

ಶ್ಲೋಕ ॥ ಆಸೀದ್ಗೋವಿಂದರಾಜೋಽಪಿ
ತದ್ರಾಜ್ಯಸ್ಥಾಪನೋದ್ಯತಃ ।
ಸ್ವಯಂ ಪರಿಣತೋ ದಂತೀ
ಪ್ರೇರಿತೋಽನ್ಯೇನ ಕಿಂ ಪುನಃ ॥೯॥

ಟೀ ॥ ಗೋವಿಂದರಾಜೋಽಪಿ-ಗೋವಿಂದಮಹಾರಾಜನೂಕೂಡ, ತದ್ರಾಜ್ಯಸ್ಥಾಪನೋದ್ಯತ(ಸ್ಸ್)-ತತ್-ಆ ಜೀವಂಧರಸ್ವಾಮಿಯ ಸಂಬಂಧಿಯಾದ ರಾಜಪುರೀಪಟ್ಟಣದ, ರಾಜ್ಯ-ಪ್ರಜಾಪರಿಪಾಲನಕಾರ್ಯದಲ್ಲಿ, ಸ್ಥಾಪನ-ಸ್ಥಾಪಿಸಲೋಸುಗ, ಉದ್ಯತ(ಸ್ಸ್)-ಉದ್ಯುಕ್ತನಾಗಿ, ಆಸೀತ್-ಆದನು., ಸ್ವಯಂ-ತಾನಾಗಿಯೇ, ಪರಿಣತಃ-ಮದಿಸಿರುವ (ತಿರ್ಯಗ್ದಂತಪ್ರಹಾರವಂ ಮಾಡುತ್ತಿರುವ), [ ನಿಘಂಟುಃ.— ತಿರ್ಯಗ್ದಂತಪ್ರಹಾರಸ್ತು ಗಜಃಪರಿಣತೋಮತಃ.] ದಂತೀ- ಪ್ರಶಸ್ತವಾದ ಕೊಂಬುಗಳುಳ್ಳ ಆನೆಯು, ಅನ್ಯೇನ-ಮತ್ತೊಬ್ಬನಿಂದ, ಪ್ರೇರಿತ (ಶ್ಚೇತ್)-ಪ್ರೇರಿಸಲ್ಪಟ್ಟರೆ, ಕಿಂಪುನಃ-ಹೇಳತಕ್ಕದ್ದೇನು ?.

ತಾತ್ಪರ್ಯ ॥ ಗೋವಿಂದರಾಜನೂಕೂಡ ಆ ಸೋದರಳಿಯನಾದ ಜೀವಂಧರಸ್ವಾಮಿಗೆ ಶತ್ರುಹಸ್ತಗತವಾಗಿರುವ ರಾಜ್ಯವಂ ಸಾಧಿಸಿ, ರಾಜಪುರೀಪಟ್ಟಣದಲ್ಲಿ ಪಟ್ಟಾಭಿಷೇಕವಂ ಮಾಡಬೇಕೆಂದು ಉದ್ಯುಕ್ತನಾದನು. ( ತಾನಾಗಿಮದಿಸಿರುವ ಆನೆಯು, ಕೊಂಬುಗಳಿಂದ ತನ್ನೆರಡುಪಾರ್ಶ್ವದಲ್ಲಿಯೂ ಇರುವ ಪ್ರಾಣಿಗಳಂ ಪ್ರಹರಿಸುತ್ತಿರುವಕಾಲದಲ್ಲಿ ಇತರರಿಂದಲೂ ಪ್ರೇರಿಸಲ್ಪಟ್ಟರೆ ಬೇಗ ನಾಶಮಾಡುವುದೋ ಹಾಗೆ ಮೊದಲಿಂದ ಕಾಷ್ಠಾಂಗಾರನಂ ನಾಶಮಾಡಲುದ್ಯೋಗಿಸಿದ್ದ ಗೋವಿಂದರಾಜನಿಗೆ ಜೀವಂಧರಸ್ವಾಮಿಯೂ ಸಮ್ಮತಿಸಿದುದು ಪರಮ ಸಹಾಯವಾಯಿತೆಂದಭಿಪ್ರಾಯವು.) ॥ ೯ ॥

ಶ್ಲೋಕ॥ ಮಂತ್ರಿಭಿರ್ಮಂತ್ರಶಾಲಾಯಾಂ
ಮಂತ್ರಯಾಮಾಸ ಮಂತ್ರವಿತ್ ।
ನ ಹ್ಯಮಂತ್ರ್ಯಂ ವಿನಿಶ್ಚೇಯಂ
ನಿಶ್ಚಿತೇ ನ ಹಿ ಮಂತ್ರಣಮ್ ॥೧೦॥

ಟೀ ॥ ಮಂತ್ರವಿತ್-ಮಂತ್ರಾಲೋಚನೆಯನ್ನು ತಿಳಿದಿರುವ ಗೋವಿಂದರಾಜನು, ಮಂತ್ರಶಾಲಾಯಾಂ-ಮಂತ್ರಾಲೋಚನೆಮಾಡತಕ್ಕ ಸ್ಥಾನದಲ್ಲಿ, ಮಂತ್ರಿಭಿಃ-ಮಂತ್ರಿಗಳೊಡನೆ, ಮಂತ್ರಯಾಮಾಸ-ಆಲೋಚಿಸಿದನು., ಅಮಂತ್ರ್ಯಂ-ಮಂತ್ರಾಲೋಚನೆಮಾಡಲ್ಪಡದೇಇರುವ (ಕಾರ್ಯವು) ಅರ್ಥವು, ನವಿನಿಶ್ಚೇಯಂ ಹಿ-ನಿಶ್ಚಯಿಸಲಶಕ್ಯವಷ್ಟೆ?, ನಿಶ್ಚಿತೇ-ನಿಶ್ಚಯಿಸಲ್ಪಟ್ಟಕಾರ್ಯದಲ್ಲಿ, ಮಂತ್ರಣಂ-ಆಲೋಚನೆಯು, ನಹಿ-ಇಲ್ಲವಷ್ಟೆ ?.

ತಾತ್ಪರ್ಯ ॥ ಮಂತ್ರಾಲೋಚನೆಯಲ್ಲಿ ಸಮರ್ಥನಾದ ಗೋವಿಂದರಾಜನು ಮಂತ್ರಾಲೋಚನೆಗೆ ಯೋಗ್ಯವಾದ ಆಸ್ಥಾನದಲ್ಲಿ ಮಂತ್ರಿಗಳೊಡನೆಕೂಡ ಮಂತ್ರಾಲೋಚನೆಯಂಮಾಡಿದನು. ಒಂದುಕೆಲಸವನ್ನು ಸಾಧಿಸಬೇಕಾದರೆ ಮೊದಲು ಮಂತ್ರಾಲೋಚನೆಮಾಡಿ, ಹೀಗೆಹೀಗೆಮಾಡಬೇಕೆಂದು ನಿಶ್ಚಯಿಸಿಕೊಂಡೇ ಪ್ರಯತ್ನಿಸಬೇಕಷ್ಟೆ ? ನಿಶ್ಚಯಿಸಲ್ಪಟ್ಟ ಕೆಲಸದಲ್ಲಿ ಮಂತ್ರಾಲೋಚನೆಮಾಡತಕ್ಕ ಆವಶ್ಯಕವೂಇಲ್ಲವಷ್ಟೆ! (ಆದುದರಿಂದ ಮುಂದೆಮಾಡತಕ್ಕ ಕಾರ್ಯವಂ ನಿರ್ಣಯಿಸಲೋಸುಗ ಮಂತ್ರಾಲೋಚನೆಯಂ ಮಾಡಿದರೆಂಬಭಿಪ್ರಾಯವು.) ॥ ೧೦ ॥

ಶ್ಲೋಕ॥ ಕಾಷ್ಠಾಂಗಾರಸ್ಯ ಸಂದೇಶಂ
ಸಚಿವೈಃ ಶುಶ್ರುವಾನಯಮ್ ।
ಜ್ಞಾತ್ವಾ ಹಿ ಹೃದಯಂ ಶತ್ರೋಃ
ಪ್ರಾರಬ್ಧವ್ಯಾಪ್ರತಿಕ್ರಿಯಾ ॥೧೧॥

ಟೀ ॥ ಅಯಂ-ಈ ಗೋವಿಂದರಾಜನು, ಸಚಿವೈಃ- ಮಂತ್ರಿಗಳಿಂದ, ಕಾಷ್ಠಾಂಗಾರಸ್ಯ-ಕಾಷ್ಠಾಂಗಾರನ, ಸಂದೇಶಂ-ಹೇಳಿಕಳುಹಿಸಿದ ಮಾತನ್ನು, ಶುಶ್ರುವಾನ್-ಕೇಳಿದನು., ಶತ್ರೋಃ-ಶತ್ರುವಿನ, ಹೃದಯಂ-ಮನಸ್ಸನ್ನು, ಜ್ಞಾತ್ವಾ-ತಿಳಿದು, ಪ್ರತಿಕ್ರಿಯಾ-ಪ್ರತೀಕಾರವು, ಪ್ರಾರಬ್ಧವ್ಯಾಹಿ-ಪ್ರಾರಂಭಿಸಲಿಕ್ಕೋಸುಗಯೋಗ್ಯವಲ್ಲವೆ ?.

ತಾತ್ಪರ್ಯ ॥ ಈ ಗೋವಿಂದರಾಜನು, ಕಾಷ್ಠಾಂಗಾರನು ಹೇಳಿಕಳುಹಿಸಿರುವ ಮಾತನ್ನು ಮಂತ್ರಿಗಳಿಂದ ಕೇಳಿದನು. ಲೋಕದಲ್ಲಿಶತ್ರುವಿನ ಅಭಿಪ್ರಾಯವನ್ನು ತಿಳಿದೇ ಉತ್ತರತ್ರ ಮಾಡತಕ್ಕಕೆಲಸಕ್ಕೆ ಪ್ರಯತ್ನಿಸುತ್ತಾರಲ್ಲವೆ ? ( ಆದುದರಿಂದ ಕಾಷ್ಠಾಂಗಾರನಿಗೆ ಹೇಳಿಕಳುಹಿಸಿ, ಗೋವಿಂದರಾಜನು ಆತನ ಅಭಿಪ್ರಾಯವು ಮಂತ್ರಿಗಳಮೂಲಕವಾಗಿ ತಿಳಿದನೆಂದಭಿಪ್ರಾಯವು. ) ೧೧ ॥

ಶ್ಲೋಕ॥ ಅಘೇನಾಹಮಪಖ್ಯಾತಿಂ
ರಾಜಘ್ನೇ ಮದಹಸ್ತಿನಿ ।
ಲಬ್ಧವಾನವಬುದ್ಧ್ಯೇತ
ಮಿಥ್ಯೇಯಂ ತತ್ತ್ವವೇದಿನಾ ॥ ೧೨॥

ಟೀ ॥ ಮದಹಸ್ತಿನಿ-ಮದಿಸಿದ ಆನೆಯು, ರಾಜಘ್ನೇ(ಸತಿ)- ಸತ್ಯಂಧರಮಹಾರಾಜನನ್ನು ಕೊಲ್ಲುತಿರಲಾಗಿ, ಅಘೇನ-ಜನ್ಮಾಂತರಪಾಪದಿಂದ, ಅಹಂ-ನಾನು, ಅಪಖ್ಯಾತಿಂ-ಅಪಯಶಸ್ಸನ್ನು, ಲಬ್ಧವಾನ್-ಹೊಂದಿದೆನು., ಇಯಂ- ಈ ಅಪಖ್ಯಾತಿಯು, ಮಿಥ್ಯಾ-ಯಥಾರ್ಥವಲ್ಲವೆಂಬುವುದು, ತತ್ತ್ವವೇದಿನಾ- ತತ್ತ್ವ-ವಸ್ತುಸ್ಥಿತಿಯನ್ನು, ವೇದಿನಾ-ತಿಳಿದವರಿಂದ, ಅವಬುದ್ಧ್ಯೇತ-ತಿಳಿಯಲ್ಪಟ್ಟೀತು?

ತಾತ್ಪರ್ಯ ॥ಕಾಷ್ಠಾಂಗಾರನು ಗೋವಿಂದರಾಜನಿಗೆ ಹೇಳಿಕಳುಹಿಸಿರುವ ಮತ್ತು ಏನೆಂದರೆ.-ಮದಿಸಿದಆನೆಯು ಸತ್ಯಂಧರಮಹಾರಾಜನನ್ನು ಸಂಹರಿಸಿತು. ಪೂರ್ವಭವದ ಪಾಪವಶದಿಂದ ಕಾಷ್ಠಾಂಗಾರನು ಸ್ವಾಮಿದ್ರೋಹಮಾಡಿದನೆಂಬ ಅಪಖ್ಯಾತಿಗೆ ನಾನು ಪಾತ್ರನಾದೆನು. ಇದರನಿಜಸ್ಥಿತಿಯನ್ನು ಆ ಕಾಲದಲ್ಲಿ ನೋಡಿದವರು ಬಲ್ಲರೇಹೊರತು ಈ ಅಪಖ್ಯಾತಿಯು ಸುಳ್ಳೆಂದು ಕೇಳಿದವರು ಹೇಗೆನಂಬುವರು. ಎಂಬದಾಗಿ ಕಾಷ್ಠಾಂಗಾರನು ವಂಚನೆಯುಮಾತನ್ನು ಹೇಳಿಕಳುಹಿಸಿದನು? ॥ ೧೨ ॥

ಶ್ಲೋಕ॥ ನಿಶ್ಶಲ್ಯೋಽಹಂ ಭವಾಮ್ಯೇವ
ಭವತ್ಯತ್ರ ಸಮಾಗತೇ ।
ದುರ್ಜನೇಽಪಿ ಹಿ ಸೌಜನ್ಯಂ
ಸುಜನೈರ್ಯನ್ನದೀ ಸಂಗಮಃ ॥೧೩॥

ಟೀ ॥ ಭವತಿ-ತಾವು, ಅತ್ರ-ಇಲ್ಲಿಗೆ, ಸಮಾಗತೇ (ಸತಿ)- ಬರುತ್ತಿರಲಾಗಿ, ಅಹಂ-ನಾನು, ನಿಶ್ಶಲ್ಯ(ಸ್ಯಕ್ತ)-ಹೋಗಲಾಡಿಸಲ್ಪಟ್ಟ ರಾಜದ್ರೋಹಿಯೆಂಬ ಎದೆಗೆ ನಾಟಿದ ಮೊಳೆಯುಂತಿರುವ, ಅಪಖ್ಯಾತಿಯುಳ್ಳವನಾಗಿ, ಭಾವ್ಯೇವ- ಆಗಿಯೇ ಆಗುತ್ತೇನೆ., ಸುಜನೈಃ-ಸತ್ಪುರುಷರೊಡನೆ, ಸಂಗಮೋಯದಿ ಸಂಬಂಧವುಂಟಾದುದೇಆದರೆ, ದುರ್ಜನೋಪಿ-ದುಷ್ಟಮನುಷ್ಯನಲ್ಲಿಯೂಕೂಡ, ಸೌಜನ್ಯಂ- ಸುಜನತ್ವವು, ಸ್ಯಾದ್ಧಿ-ಉಂಟಾದೀತಲ್ಲವೆ?.

ತಾತ್ಪರ್ಯ ॥ ಕಾಷ್ಠಾಂಗಾರನು ಹೇಳಿಕಳುಹಿಸಿರುವ ವಂಚನೆಯ ಮಾತುಏನೆಂದರೆ.—ತಾವು ಇಲ್ಲಿಗೆ ದಯಮಾಡಿದುದೇ ಆದರೆ, ನಾನು ಎದೆಯಲ್ಲಿ ನಾಟಿಕೊಂಡಿರುವ ಮೊಳೆಯಂತೆ, ಬಹುದುಃಖಕರವಾದ ರಾಜನನ್ನು ಕೊಂದನೆಂಬ ಅಪಖ್ಯಾತಿಯು ಬಿಟ್ಟವನಾಗಿಯೇ ಆಗುತ್ತೇನೆ. ಅದು ಹೇಗೆಂದರೆ.-- ಸತ್ಪುರುಷರೊಡನೆ ಸಮಾಗಮವುಂಟಾಗುತ್ತಿರಲಾಗಿ ದುರ್ಜನನಿಗೂ ಸುಜನನೆಂಬ ಕೀರ್ತಿಯು ಉಂಟಾಗುವುದಷ್ಟೆ ? ಆದುದರಿಂದ ತಾವು ದಯಮಾಡಿಸಿ ನನಿಗುಂಟಾಗಿರುವ ಅಪಖ್ಯಾತಿಯಂ ಹೋಗಲಾಡಿಸಬೇಕೆಂದು ಕಾಷ್ಠಾಂಗಾರನು ಗೋವಿಂದರಾಜನಿಗೆ ಹೇಳಿಕಳುಹಿಸಿದನು. ॥ ೧೩ ॥

ಶ್ಲೋಕ॥ ಇತ್ಯುಕ್ತ್ವಾ ನಿಶ್ಚಿತೋರಾತಿ-
ರತಿಸಂಧಿತ್ಸುರಂಜಸಾ ।
ಅಸತಾಂ ಹಿ ವಿನಮ್ರತ್ವಂ
ಧನುಷಾಮಿವ ಭೀಷಣಮ್ ॥೧೪॥

ಟೀ॥ ಅರಾತಿಃ ಶತ್ರುವಾದ ಕಾಷ್ಠಾಂಗಾರನು, ಇತಿ-ಈಪ್ರಕಾರ, ಉಕ್ತ್ವಾ-ಹೇಳಿ, ಅಂಜಸಾ-ಶೀಘ್ರನಾಗಿ, ಅತಿಸಂಧಿತ್ಸು(ಸ್ಸಕ್ತ)-ವಂಚಿಸಲೋಸುಗ ಇಚ್ಛೆಯುಳ್ಳವನಾಗಿ, ನಿಶ್ಚಿತಃ-ನಿಶ್ಚಯಿಸಿಕೊಂಡನು., ಅಸತಾಂ-ದುರ್ಜನರ, ವಿನಮ್ರತ್ವಂ-ಅತ್ಯಂತ ನಮ್ರತೆಯು, ಧನುಷಾಮಿವ-ಧನುಸ್ಸಿನ ನಮ್ರತೆಯೋಪಾದಿಯಲ್ಲಿ, ಭೀಷಣಂ ಹಿ-ಭಯಂಕರವಲ್ಲವೆ?.

ತಾತ್ಪರ್ಯ ॥ ಶತ್ರುವಾದ ಕಾಷ್ಠಾಂಗಾರನು ಗೋವಿಂದರಾಜನನ್ನು ವಂಚಿಸಲೋಸುಗ ನಿಶ್ಚಯಿಸಿಕೊಂಡು ಈ ಪೂರ್ವೋಕ್ತಪ್ರಕಾರವಾಗಿಹೇಳಿ ಕಳುಹಿಸಿದನು. ಲೋಕದಲ್ಲಿ ದುರ್ಜನರು ಅತ್ಯಂತವಿಧೇಯ

ರಾದರೆ, ಧನುಸ್ಸು ಎಷ್ಟು ಬಗ್ಗಿದರೆ ಅಷ್ಟು ಭಯಕ್ಕೇನೆ ಕಾರಣವಾಗುವಂತೆ ಭೀತಿಗೆ ಕಾರಣವಾಗುತ್ತಯೇ ಹೊರತು ನಂಬತಕ್ಕದ್ದಲ್ಲವಷ್ಟೆ? (ಗುರಿಯನ್ನು ಹೊಡೆಯುವುದಕ್ಕೇನೆ ಧನುಸ್ಸು ಹೇಗೆ ಬಗ್ಗುತ್ತದೆಯೋ ಹಾಗೆ ಶತ್ರುಹಾನಿಗೋಸುಗವೇ ದುರ್ಜನರು ಪರಮವಿಧೇಯತೆಯನ್ನಭಿನಯಿಸುವರೆಂದು ತಾತ್ಪರ್ಯವು.)॥ ೧೪ ॥

ಶ್ಲೋಕ॥ ವಿಪ್ರಲಂಭೋತ್ಸುಕೇ ಶತ್ರೌ
ಕಾರ್ಯಾಂಧೋಯಮತಪ್ಯತ ।
ದುರ್ಜನಾಗ್ರೇ ಹಿ ಸೌಜನ್ಯಂ
ಕರ್ದಮೇ ಪತಿತಂ ಪಯಃ ॥೧೫॥

ಟೀ ॥ ಶತ್ರೌ-ಶತ್ರುವಾದ ಕಾಷ್ಠಾಂಗಾರನು, ವಿಪ್ರಲಂಭೋತ್ಸುಕೇ(ಸತಿ)-ವಿಪ್ರಲಂಭ-ವಂಚನೆಯಲ್ಲಿ, ಉತ್ಸುಕೇ(ಸತಿ)-ಆಸಕ್ತನಾಗಿರುತ್ತಿರಲು, ಅಯಂ - ಈ ಗೋವಿಂದಮಹಾರಾಜನು, ಕಾರ್ಯಾಂಧ(ಸ್ಸನ್)- ಮುಂದೆ ಮಾಡುವ ಕೆಲಸವನ್ನರಿಯದೇ ಇರುವವನಾಗಿ, ಅತಪ್ಯತ-ಪರಿತಾಪಪಟ್ಟನು., ದುರ್ಜನಾಗ್ರೇ- ದುರ್ಜನ-ದುಷ್ಟರ, ಅಗ್ರೇ-ಮುಂದುಗಡೆಯಲ್ಲಿ (ವಿಷಯದಲ್ಲಿ), ಸೌಜನ್ಯಂ-ಒಳ್ಳೇ ನಡತೆಯು, ಕರ್ದಮೇ-ಕೆಸರಿನಲ್ಲಿ, ಪತಿತಂ-ಬಿದ್ದಂಥ, ಪಯೋಹಿ-ಹಾಲಲ್ಲವೆ ?.

ತಾತ್ಪರ್ಯ ॥ ಶತ್ರುವಾದ ಕಾಷ್ಠಾಂಗಾರನು ವಂಚಿಸಲೋಸುಗ ಆಸಕ್ತನಾಗಿರುತ್ತಿರಲಾಗಿ, ಉತ್ತರತ್ರ ಮಾಡತಕ್ಕ ಕೆಲಸವೇ ತೋರದೆ ಗೋವಿಂದರಾಜನು ಪರಿತಾಪವನ್ನು ಹೊಂದಿದನು. ದುರ್ಜನರ ಎದುರಿಗೆ ಸೌಜನ್ಯಗುಣವು ಕೆಸರಿನಲ್ಲಿಬಿದ್ದ ಹಾಲು ಹೇಗೆ ನಿಷ್ಫಲವಾಗುತ್ತದೆಯೋ ಆ ಪ್ರಕಾರ ನಿಷ್ಫಲವಾಗುವುದೆಂಬಭಿಪ್ರಾಯವು. ॥ ೧೫ ॥

ಶ್ಲೋಕ॥ ಆಹೂತಾಸ್ತೇನ ಸಾಕೂತಂ
ಗಚ್ಛಾಮಸ್ತೈಬ್ಬಲಾದ್ವಯಮ್ ।
ಇತ್ಯುಚ್ಚೈರ್ನಿಶ್ಚಿಕಾಯಾಸೌ
ಬಕಾಯಂತೇ ಹಿ ಜಿಷ್ಣವಃ ॥೧೬॥

ಟೀ ॥ ತೇನ-ಆ ಕಾಷ್ಠಾಂಗಾರನಿಂದ, ಸಾಕೂತಂ(ಯಥಾಸ್ಯಾತ್ತಥಾ)-ಬೇರೆ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡಿರೋಣವೆಂಬಹಾಗೆ, ಆಹೂತಾಃ-ಕರೆ

ಲ್ಪಟ್ಟವರಾದ, ವಯಂ-ನಾವು, ತಚ್ಛಲಾತ್-ಆ ವ್ಯಾಜದ(ನೆಪದ)ದೆಸೆಯಿಂದ, ಗಚ್ಛಾಮಃ-ಹೋಗೋಣ, ಇತಿ- ಈ ಪ್ರಕಾರ, ಅಸೌ-ಈ ಗೋವಿಂದ ಮಹಾರಾಜನು, ಉಚ್ಚೈಃ-ಪ್ರಕಾಶವಾಗಿ (ದೃಢವಾಗಿ), ನಿಶ್ಚಿಕಾಯ-ನಿರ್ಣಯಿಸಿದನು, ಜಿಷ್ಣವಃ- ಜಯಶೀಲರಾದವರು, ಬಕಾಯಂತೇ ಹಿ - ಬಕಪಕ್ಷಿಯೋಪಾದಿಯಲ್ಲಿ ಆಚರಿಸುತ್ತಾರಲ್ಲವೆ ?.

ತಾತ್ಪರ್ಯ !! ಗೋವಿಂದರಾಜನು ನಿರ್ಣಯಿಸುತ್ತಾನೆ.-- ಏನೆಂದರೆ.- ಮೋಸದಿಂದ ನಮ್ಮನ್ನು ಜಯಿಸಬೇಕೆಂದು ಮನಸ್ಸಿನಲ್ಲಿ ಬೇರೆಅಭಿಪ್ರಾಯವನ್ನಿಟ್ಟುಕೊಂಡು ಮೇಲಕ್ಕೆ ನಮಗೆ ಪರಮವಿಧೇಯನಾದಂತೆ ನಟನೆಮಾಡುವ ಆ ಕಾಷ್ಠಾಂಗಾರನಿಂದ ಕರೆಸಲ್ಪಟ್ಟ ನಾವೂಕೂಡ ಶತ್ರುವಾದ ಕಾಷ್ಠಾಂಗಾರನು ನಮ್ಮನ್ನು ಕರದದ್ದನ್ನೇ ನೆಪವನ್ನಾಗಿ ಮಾಡಿಕೊಂಡು ಹೋಗೋಣವೆಂದು ಪ್ರಕಾಶವಾಗಿ ( ದೃಢವಾಗಿ ) ನಿಶ್ಚಯಿಸಿದನು. ಜಯಶೀಲರಾದ ಪುರುಷರು ಬಕಪಕ್ಷಿಯೋಪಾದಿಯಲ್ಲಿ ಆಚರಿಸುತ್ತಾರಲ್ಲವೆ ? ( ಮೇಲೆ ಯಾವ ಪ್ರಯತ್ನವೂ ಇಲ್ಲದವರಂತೆ ತೋರ್ಪಡಿಸುವರಾಗಿ ಸಮಯಂವ ನಿರೀಕ್ಷಿಸುತ್ತಾರೆಯಲ್ಲವೆ ? )॥ ೧೬ ॥

ಶ್ಲೋಕ॥ ಕಾಷ್ಠಾಂಗಾರೇಣ ಸಂಜಾತಂ
ಸಖ್ಯಂ ಪ್ರಖ್ಯಾಪಯನ್ನಸೌ ।
ಡಿಂಡಿಮಂ ತಾಡಯಾಮಾಸ
ಗತೇರ್ವಾರ್ತಾ ಹಿ ಪೂರ್ವಗಾ ।೧೭॥

ಟೀ । ಅಸೌ-ಈ ಗೋವಿಂದರಾಜನು, ಕಾಷ್ಠಾಂಗಾರೇಣ- ಕಾಷ್ಠಾಂಗಾರನೊಡನೆ, ಸಂಜಾತಂ-ಉಂಟಾದ, ಸಖ್ಯಂ-ಸ್ನೇಹವನ್ನು, ಪ್ರಖ್ಯಾಪಯನ್(ಸನ್)- ಪ್ರಕಾಶಪಡಿಸುವವನಾಗಿ, ಡಿಂಡಿಮಂ-ಡಂಗುರವಾದ್ಯವನ್ನು, ತಾಡಯಾಮಾಸ- ಹೊಡೆಸಿದನು., ಗತೇಃ-ಪಯಣದ, ವಾರ್ತಾ-ಮಾತು, ಪೂರ್ವಗಾಹಿ- ಪ್ರಯಾಣಕ್ಕೆ ಮೊದಲೇನೇ ಉಂಟಾಗುವುದಲ್ಲವೆ?.

ತಾತ್ಪರ್ಯ ॥ ಈ ಗೋವಿಂದರಾಜನು ಕಾಷ್ಠಾಂಗಾರನೊಡನೆ ತನಗೆಉಂಟಾದ ಸ್ನೇಹವನ್ನು ಪ್ರಖ್ಯಾತಿಪಡಿಸುವವನಾಗಿ, ಡಂಗುರವಂಹೊಡೆಸಿದನು. ಲೋಕದಲ್ಲಿ ಪ್ರಯಾಣದಮಾತು ಮೊದಲು ವ್ಯಾಪಿಸುವದಾಗಿಯೂ, ಪ್ರಯಾಣವು ಅನಂತರವಾಗಿಯೂ ಅಲ್ಲವೆ ಕಾಣಲ್ಪಡುತ್ತದೆ?॥

ಶ್ಲೋಕ॥ ಚತುರಂಗಬಲಂ ಪಶ್ಚಾ-
ಚ್ಚತುರೋಽಯಂ ನ್ಯಶಾಮಯತ್ ।
ಆಲಂಬ್ಯಾತ್ಮಾರಿಗೃಹ್ಯಾನಾಂ
ಪ್ರಾಬಲ್ಯಂ ಹಿ ಮತೋ ವಿಧಿಃ ॥೧೮॥

ಟೀ॥ಚತುರಃ-ಸಮರ್ಥನಾದ, (ಬುದ್ಧಿಶಾಲಿಯಾದ)ಅಯಂ-ಈ ಗೋವಿಂದರಾಜನು, ಪಶ್ಚಾತ್-ಅನಂತರದಲ್ಲಿ, ಚತುರಂಗಬಲಂ-ಆನೆ ಕುದುರೆ ರಥ ಭಟರುಗಳೆಂಬ ನಾಲಕು ಪ್ರಕಾರವಾಗಿರುವ ಸೈನ್ಯವನ್ನು, ನ್ಯಶಾಮಯತ್ - ನೋಡಿದನು., ಆತ್ಮಾರಿಗೃಹ್ಯಾನಾಂ-ಆತ್ಮ-ತಾನೂ, ಅರಿ-ಶತ್ರುವೂ ಇವರುಗಳ, ಗೃಹ್ಯಾನಾಂ-ಪಕ್ಷದಸೈನ್ಯಗಳ, ಪ್ರಾಬಲ್ಯಂ-ಪ್ರಬಲವಾಗಿರೋಣವನ್ನು, ಆಲಂಬ್ಯ-ಆಶ್ರಯಿಸಿ (ತಿಳಿದು), ವಿಧಿಃ-ಉತ್ತರತ್ರ ಮಾಡತಕ್ಕುದಾದ ಕೆಲಸವು, ಮತಃ-ಇಷ್ಟವು.

ತಾತ್ಪರ್ಯ॥ ಸಮರ್ಥನಾದ ಈ ಗೋವಿಂದರಾಜನು ಅನಂತರದಲ್ಲಿ ತನ್ನ ಗಜರಥ ತುರಗಪದಾತಿಗಳೆಂಬ ನಾಲ್ಕುಪ್ರಕಾರವಾದ ಸೈನ್ಯವನ್ನೂ ನೋಡಿದನು. ಲೋಕದಲ್ಲಿ ಸ್ವ ಸೈನ್ಯ ಪರ ಸೈನ್ಯಗಳ ಬಲಾಬಲವನ್ನು ತಿಳಿದಲ್ಲವೆ ಮೇಲುಕೆಲಸಕ್ಕೆ ಪ್ರವರ್ತಿಸುವದು ? ( ಆದುದರಿಂದ ತನ್ನ ಸೈನ್ಯದ ಬಲಾಬಲವಂ ತಿಳಿಯಲೋಸುಗ ನೋಡಿದನೆಂದಭಿಪ್ರಾಯವು. ) ॥ ೧೮ ॥

ಶ್ಲೋಕ॥ ಪ್ರತಸ್ಥೇಽಥ ಸಲ್ಲಗ್ನೇ
ಪಾತ್ರದಾನಾದಿಪೂರ್ವಕಮ್ ।
ದಾನಪೂಜಾತಪಶ್ಶೀಲೈಃ
ಶಾಲಿನಾಂ ಕಿಂ ನಸಿಧ್ಯತಿ ॥೧೯॥

ಟೀ॥ ಅಥ-ಅನಂತರದಲ್ಲಿ, ಸಲ್ಲಗ್ನೇ-ಸತ್-ಶ್ರೇಷ್ಠವಾದ, ಲಗ್ನೇ- ಲಗ್ನದಲ್ಲಿ, ಸಃ-ಆ ಗೋವಿಂದರಾಜನು, ಪಾತ್ರದಾನಾದಿಪೂರ್ವಕಂ-ಪಾತ್ರ-ಸತ್ಪಾತ್ರದಲ್ಲಿ,ದಾನ-ದಾನಮಾಡೋಣವೇ, ಆದಿ-ಮೊದಲಾಗಿವುಳ್ಳ ಶುಭಕಾರ್ಯಗಳೇ, ಪೂರ್ವಕಂ-ಮೊದಲಿನಲ್ಲಿರುಳ್ಳೋಣಹೇಗೋಹಾಗೆ, ಪ್ರತಸ್ಥೇ-ಹೊರಟನು., ದಾನಪೂಜಾತಪಶ್ಶೀಲೈಃ-ದಾನ-ದಾನವೂ, ಪೂಜಾ-ಪೂಜೆಯೂ, ತಪಃ-ತಪಸ್ಸೂ, ಶೀಲೈಃ-ಸದಾಚಾರಗಳೂ ಇವುಗಳಿಂದ, ಶಾಲಿನಾಂ-ಪ್ರಕಾಶಿಸುವವರುಗಳಿಗೆ, ಕಿಂ-ಏನು(ಯಾವದು), ನಸಿಧ್ಯತಿ-ಸಿದ್ಧಿಸುವುದಿಲ್ಲವು ?

ತಾತ್ಪರ್ಯ॥ ಅನಂತರದಲ್ಲಿ, ಆ ಗೋವಿಂದನು ಮಹಾರಾಜನು ಸತ್ಪಾತ್ರದಾನವೂ, ಜಿನಪೂಜೆಯೂ, ಇವೇ ಮೊದಲಾದ ಮಂಗಳ ಕೃತ್ಯಗಳಂ ನೆರವೇರಿಸಿ, ಶ್ರೇಷ್ಠವಾದ ಲಗ್ನದಲ್ಲಿ ಹೊರಹೊರಟನು. ದಾನವೂ, ಪೂಜೆಯೂ, ತಪಸ್ಸೂ, ಸದ್ವೃತ್ತಗಳೂ, (ಸಚ್ಚಾರಿತ್ರ) ಇವುಗಳೇ ಸ್ವಭಾವವಾಗಿವುಳ್ಳ ಪುಣ್ಯಶಾಲಿಗಳಿಗೆ ಯಾವಕಾರ್ಯವು ತಾನೇ ಸಿದ್ಧಿಸುವುದಿಲ್ಲವು. (ಸಕಲಕಾರ್ಯವೂ ಸಿದ್ಧಿಸುವುದೆಂದಭಿಪ್ರಾಯವು. ॥ ೧೯ ॥

ಶ್ಲೋಕ॥ ಅಥ ರಾಜಪುರೀಂ ಪ್ರಾಪ್ಯ
ರಾಜಾ ಕೈಶ್ಚಿತ್ಪ್ರಯಾಣಕೈಃ ।
ನಿಕಷಾ ತತ್ಪುರೀಂ ಕ್ವಾಪಿ
ನಿಷಸಾದ ಮಹಾಬಲಃ ॥೨೦॥

ಟೀ ॥ ಅಥ-ಅನಂತರದಲ್ಲಿ, ರಾಜಾ-ದೊರೆಯು, ಕೈಶ್ಚಿತ್-ಕೆಲವು, ಪ್ರಯಾಣಕೈಃ-ಪ್ರಯಾಣಗಳಿಂದ, ರಾಜಪುರೀಂ-ರಾಜಪುರೀಪಟ್ಟಣವನ್ನು, ಪ್ರಾಪ್ಯ-ಹೊಂದಿ, ತತ್ಪುರೀಂನಿಕಷಾ-ಆ ರಾಜಪುರೀಪಟ್ಟಣದ ಸಮೀಪದಲ್ಲಿ, ಕ್ವಾಪಿ- ಒಂದಾನೊಂದೆಡೆಯೊಳು, ಮಹಾಬಲ(ಸ್ಸನ್)-ಮಹಾಸೈನ್ಯಸಮೇತನಾಗಿ, ನಿಷಸಾದ-ಇಳಿದನು.

ತಾತ್ಪರ್ಯ ॥ ಅನಂತರದಲ್ಲಿ ಮಹಾಸೈನ್ಯಸಮೇತನಾದ ಗೋವಿಂದರಾಜನು, ಕೆಲವು ಪ್ರಯಾಣಗಳಿಂದ ರಾಜಪುರೀಪಟ್ಟಣವನ್ನು ಹೊಂದಿಆಪಟ್ಟಣದಸಮೀಪದೊಳೊಂದುಸ್ಥಲದಲ್ಲಿ ಬಿಡಾರವಂಬಿಡಿಸಿದನು॥೨೦॥

ಶ್ಲೋಕ॥ ಪ್ರಾಭೃತಂ ಪ್ರಾಹಿಣೋತ್ತಸ್ಯ
ಕಾಷ್ಠಾಂಗಾರೋ ಮುದಾ ಮುಹುಃ ।
ಹನ್ತ ಕಾಪಟಿಕಾ ಲೋಕೇ
ಬುದ್ಧ್ಯಾಯನ್ತೇ ಹಿ ಮಾಯಯಾ ॥೨೧॥

ಟೀ ॥ ಕಾಷ್ಠಾಂಗಾರಃ-ಕಾಷ್ಠಾಂಗಾರನು, ತಸ್ಯ-ಆ ಗೋವಿಂದರಾಜನಿಗೆ, ಮುದಾ-ಸಂತೋಷದಿಂದ, ಮುಹುಃ-ಬಾರಿಬಾರಿಗೂ, ಪ್ರಾಭೃತಂ-ಕೈಗಾಣಿಕೆಯನ್ನು, ಪ್ರಾಹಿಣೋತ್-ಕಳುಹಿಸಿದನು., ಲೋಕೇ-ಲೋಕದಲ್ಲಿ, ಕಾಪಟಿಕಾಃ.

ಮೋಸಗಾರರು, ಮಾಯಯಾ-ವಂಚನೆಯಿಂದ, (ಪರಮಾರ್ಥಕ್ಷಣಿಕವಾದ ಪ್ರಪಂಚದಲ್ಲಿ ಸ್ಥಿರತ್ವಜ್ಞಾನವೆಂಬ ಅನಾದಿಸಿದ್ಧವಾದಅಜ್ಞಾನದಿಂದ), ಬುದ್ಧಾಯನ್ತೇಹಿ-( ವಿವೇಕಿಗಳೋಪಾದಿಯಲ್ಲಿ ) ಬೌದ್ಧರೋಪಾದಿಯಲ್ಲಿ ಆಚರಿಸುತ್ತಾರೆಯಲ್ಲವೆ ?, ಹನ್ತ-ಆಶ್ಚರ್ಯವು!!.

ತಾತ್ಪರ್ಯ ॥ ಕಾಷ್ಠಾಂಗಾರನು ಆ ಗೋವಿಂದರಾಜನಿಗೆ ಸಂತೋಷದಿಂದ ಬಾರಿಬಾರಿಗೂ ಕೈಗಾಣಿಕೆಯನ್ನು ಕಳುಹಿಸಿದನು. ಲೋಕದಲ್ಲಿ ಮೋಸಗಾರರೂ ಮಾಯೆಯಿಂದ ಬುದ್ಧಮತಸ್ಥರೋಪಾದಿಯಲ್ಲಿ ಯಥಾರ್ಥವಾಗಿ ಕ್ಷಣಿಕವಾದ ಪ್ರಪಂಚವು, ಅನಾದಿಸಿದ್ಧವಾದ ಸ್ಥಿರತ್ವ ಬುದ್ಧಿಯೆಂಬ ಒಂದು ಅಜ್ಞಾನದಬಲದಿಂದ ಸ್ಥಿರವೆಂದು ತೋರುತ್ತೆ ಎಂಬದಾಗಿ ಹೇಳುವ ಬೌದ್ಧರಂತೆ, ಆಚರಿಸುತ್ತಾರೆಯಲ್ಲವೆ? ಆಶ್ಚರ್ಯ !! ಮತ್ತು ಬುದ್ಧಾಯನ್ತೇಹಿ-ಅಂದರೆ, ಮಹಾಪ್ರಾಜ್ಞರೋಪಾದಿಯಲ್ಲಿ ಆಚರಿಸುತ್ತಾರೆಯಲ್ಲವೆ? ( ಮಹಾವಿವೇಕಿಗಳು ಹೇಗೆ ಕಾಲದೇಶೋಚಿತವಾಗಿ ಕಾರ್ಯಗಳಂ ನಡೆಸುವರೋಹಾಗೆವಂಚಕರು ನೀತಿಯನ್ನಭಿನಯಿಸುವರೆಂಬಭಿಪ್ರಾಯವು )॥೨೧॥

ಶ್ಲೋಕ॥ ಪ್ರತಿಪ್ರಾಭೃತಮೇತಸ್ಮೈ
ಪ್ರಾಹೈಷೀತ್ಸ್ವಾಮಿ ಮಾತುಲಃ ।
ಆಸಮೀಹಿತನಿಷ್ಪತ್ತೇ-
ರಾರಾಧ್ಯಾಃ ಖಲು ವೈರಿಣಃ ॥ ೨೨ ॥

ಟೀ ॥ ಸ್ವಾಮಿಮಾತುಲಃ-ಸ್ವಾಮಿ-ಜೀವಂಧರಸ್ವಾಮಿಗೆ, ಮಾತುಲಃ-ಸೋದರಮಾವನಾದ ಗೋವಿಂದ ರಾಜನು, ಏತಸ್ಮೈ- ಈ ಕಾಷ್ಠಾಂಗಾರನಿಗೋಸುಗ, ಪ್ರತಿಪ್ರಾಭೃತಂ-ಪ್ರತಿಯಾದ ಕೈಗಾಣಿಕೆಯನ್ನು, ಪ್ರಾಹೈಷೀತ್-ಕಳುಹಿಸಿದನು., ಆಸಮೀಹಿತನಿಷ್ಪತ್ತೇಃ- ಇಷ್ಟಸಿದ್ಧಿಯಾಗುವ ಪರ್ಯಂತವೂ, ವೈರಿಣಃ-ಶತ್ರುಗಳು, ಆರಾಧ್ಯಾಃ ಖಲು-ಪ್ರೀತಿಪಡಿಸಲೋಸುಗ ಯೋಗ್ಯರಲ್ಲವೆ ?.

ತಾತ್ಪರ್ಯ ॥ ಜೀವಂಧರಸ್ವಾಮಿಗೆ ಸೋದರಮಾವನಾದ ಗೋವಿಂದಮಹಾರಾಜನು, ಕಾಷ್ಠಾಂಗಾರನಿಗೋಸ್ಕರ ಪ್ರತಿಯಾದ ಕೈಗಾಣಿಕೆಯನ್ನು ಕಳುಹಿಸಿದನು. ಇಷ್ಟಾರ್ಥಸಿದ್ಧಿಪರ್ಯಂತವೂ ಶತ್ರುಗಳು ಪ್ರೀತಿಪಡಿಸಲೋಸುಗ ಯೋಗ್ಯರಲ್ಲವೆ ? ( ಲೋಕದಲ್ಲಿ ತನ್ನ ಕೆಲಸ

ವಾಗುವವರೆಗೂ ಶತ್ರುವನ್ನು ಕೂಡ ಸನ್ಮಾನಿಸುತ್ತಲೇ ಇರಬೇಕೆಂದ ಭಿಪ್ರಾಯವು. ) ॥ ೨೨ ॥

ಶ್ಲೋಕ॥ ಕನ್ಯಾಶುಲ್ಕ ತಯಾ ಲೋಕೇ
ಯನ್ತ್ರಭೇದಮಘೋಷಯತ್ ॥
ಉಪಾಯ ಪ್ರಷ್ಠರೂಢಾ ಹಿ
ಕಾರ್ಯನಿಷ್ಠಾ ನಿರಂಕುಶಾಃ ॥ ೨೩ ॥

ಟೀ ॥ ರಾಜಾ-ಗೋವಿಂದರಾಜನು, ಕನ್ಯಾಶುಲ್ಕ ತಯಾ-ಕನ್ಯಾ- ತನ್ನ ಮಗಳಿಗೆ, ಶುಲ್ಕ ತಯಾ-ವಿವಾಹಕ್ಕೆ(ಉಪಾಯ)ಸಾಧನವಾಗಿರೋಣದರಿಂದ, ಯನ್ತ್ರಭೇದಂ-ವರಾಹಯಂತ್ರವಂ ಭೇದಿಸೋಣವನ್ನು, ಲೋಕೇ-ಲೋಕದಲ್ಲಿ, ಅಘೋಷಯತ್-ಡಂಗುರವಂ ಹೊಡೆಸಿದನು., ಉಪಾಯಪ್ರಷ್ಠರೂಢಾಃ - ಶ್ರೇಷ್ಠವಾದ ಉಪಾಯವಂ ತಿಳಿದಂಥಾವರು, ಕಾರ್ಯನಿಷ್ಠಾನಿರಂಕುಶಾಹಿ-ಕಾರ್ಯ- ಉದ್ದೇಶಿಸಲ್ಪಟ್ಟಕೆಲಸದ, ನಿಷ್ಠಾ-ನಿರ್ವಾಹದಲ್ಲಿ, ನಿರಂಕುಶಾಹಿ-ತಡೆಯಿಲ್ಲದೆಯಿರುವಂಥಾವರಲ್ಲವೆ?.

ತಾತ್ಪರ್ಯ ॥ ಅನಂತರದಲ್ಲಿ ಗೋವಿಂದರಾಜನು, ತನ್ನ ಮಗಳಿಗೆ ಸ್ವಯಂವರವಂಮಾಡಿಸುತ್ತೇನೆಂತಲೂ. ಒಂದು ವರಾಹ ಯಂತ್ರವಂ ನಿರ್ಮಿಸಿ, ಈ ಯನ್ತ್ರವಂ ಭೇದಿಸುವವರಿಗೆ ತನ್ನ ಮಗಳಂ ವಿವಾಹಮಾಡಿಕೊಡುತ್ತೇನೆಂತಲೂ, ಲೋಕದಲ್ಲಿ ಡಂಗುರವಂ ಹೊಡೆಸಿದನು. ಲೋಕದಲ್ಲಿ ಶ್ರೇಷ್ಠವಾದ ಉಪಾಯದಲ್ಲಿ ಸಮರ್ಥರಾದವರು ತಡೆಯಿಲ್ಲದೇ ಉದ್ದೇಶಿಸಲ್ಪಟ್ಟಕೆಲಸವಂ ನಿರ್ವಹಿಸುತ್ತಾರಲ್ಲವೆ ? ॥೨೩॥

ಶ್ಲೋಕ॥ ಧನುರ್ಧರಾಶ್ಚ ಸಂಭೂತಾ-
ಸ್ತ್ರೈವರ್ಣಿಕ ಕುಲೋದ್ಭವಾಃ ।
ಹಾ ಮೋಹೋ ದೇಹಿನಾಮಾಸ್ಥಾ-
ಮಸ್ಥಾನೇಪಿ ಹಿ ಪಾತಯೇತ್॥ ೨೪ ॥

ಟೀ ॥ ತ್ರೈವರ್ಣಿಕಕುಲೋದ್ಭವಾಃ- ಬ್ರಹ್ಮಕ್ಷತ್ರವೈಶ್ಯರೆಂಬ ಈ ಮೂರುಕುಲಗಳಲ್ಲಿ ಉತ್ಪನ್ನರಾದ, ಧನುರ್ಧರಾಶ್ಚ-ಧನುರ್ಧರರಾದ ವೀರರೂಕೂಡ, ಸಂಭೂತಾಃ-ಸೇರಿದರು., ಮೋಹಃ-ಅಜ್ಞಾನವು, ದೇಹಿನಾಂ-ಪ್ರಾಣಿಗಳಿಗೆ, ಅಸ್ಥಾನೇ

ಪಿ-ದುರ್ಲಭವಿಷಯದಲ್ಲಿಯೂಕೂಡ, ಆಸ್ಥಾಂ-ಆಶೆಯನ್ನು, ಪಾತಯೇದ್ಧಿ-ಉಂಟು ಮಾಡುತ್ತದೆಯಲ್ಲವೆ?, ಹಾ-ಬಹಳ ಆಶ್ಚರ್ಯವು!!.

ತಾತ್ಪರ್ಯ ॥ ಗೋವಿಂದರಾಜನು ಕನ್ಯಾಸ್ವಯಂವರವು ಲೋಕ ಪ್ರಸಿದ್ಧವಾಗುತ್ತಿರಲಿಕ್ಕಾಗಿ, ಬ್ರಹ್ಮ, ಕ್ಷತ್ರ, ವೈಶ್ಯರೆಂಬ ಮೂರು ಕುಲೋತ್ಪನ್ನರಾದ ಧನುರ್ವಿದ್ಯಾಪಂಡಿತರಾದ ಶೂರರೂಕೂಡ ಬಂದುಸೇರಿದರು. ಅಜ್ಞಾನವೆಂಬದು ಪ್ರಾಣಿಗಳಿಗೆ ದುರ್ಲಭ ವಸ್ತುವಿನಲ್ಲಿಕೂಡ ಇಚ್ಛೆಯನ್ನುಂಟುಮಾಡುತ್ತದೆಯಲ್ಲವೆ ? ॥ ೧೪ ॥

ಶ್ಲೋಕ॥ ತತಶ್ಚಂದ್ರಕಯಂತ್ರಸ್ಥ-
ವರಾಹತ್ರಯ ಭೇದನೇ ।
(ನ ಶೇಕುಶ್ಚಾಪಿನಸ್ಸರ್ವೇ
ಕ್ವವಿದ್ಯಾಪಾರಗಾಮಿನೀ ॥ ೨೫ ॥)

ಟೀ ॥ ತತಃ-ಅನಂತರದಲ್ಲಿ, ಚಂದ್ರಕಯಂತ್ರಸ್ಥವರಾಹತ್ರಯಭೇದನೇ—ಚಂದ್ರಕ-ಚಂದ್ರನ ಆಕಾರದಂತೆ ಆಕಾರವುಳ್ಳ, ಯಂತ್ರ-ಯಂತ್ರದಲ್ಲಿ, ಸ್ಥ- ಇರುತ್ತಿರುವ, ವರಾಹ-ಹಂದಿಗಳ, ತ್ರಯ-ಮೂರರ, ಭೇದನೇ-ಹೊಡೆಯೋಣದರಲ್ಲಿ, ಸರ್ವೇ-ಸಮಸ್ತರಾದ, ಚಾಪಿನಃ-ಧನುರ್ಧರರಾದ, ಸರ್ವೇ-ಸಮಸ್ತರೂ, ನಶೇಕುಃ-ಸಮರ್ಥರಾಗಲಿಲ್ಲವು., ವಿದ್ಯಾ-ವಿದ್ಯೆಯು, ಕ್ವ-ಎಲ್ಲಿ, ಪಾರಗಾಮಿನೀ- ಕೊನೆಯನ್ನು ಹೊಂದಿಇದೆ ?.

ತಾತ್ಪರ್ಯ ॥ ಅನಂತರದಲ್ಲಿ ಧನುರ್ಧರರಾದ ಸಮಸ್ತರೂ ಚಂದ್ರಕವೆಂಬ ಯಂತ್ರದಲ್ಲಿರುತ್ತಿರುವ ಮೂರು ಹಂದಿಗಳನ್ನು ಹೊಡೆಯಲೋಸುಗ ಸಮರ್ಥರಾಗಲಿಲ್ಲವು. (ವಿದ್ಯೆಯಲ್ಲಿ ಒಬ್ಬನಿಗಿಂತಲೂ ಮತ್ತೊಬ್ಬನು ಉತ್ಕೃಷ್ಟನಿರುವನೇ ಹೊರತು ವಿದ್ಯೆಯಪಾರವನ್ನು ಹೊಂದಿದವನು ಯಾವನೂ ಇಲ್ಲವೆಂಬಭಿಪ್ರಾಯವು.) ಇದರಿಂದ, ಇವರೆಲ್ಲರಿಂದಲೂ ಆಗದ ಕೆಲಸವನ್ನು ಮತ್ತೊಬ್ಬ ಮಾಡತಕ್ಕವನಿದ್ದೇ ಇರುವನೆಂಬ ಭಾವನು ತೋರುತ್ತಿದೆ. ॥ ೧೫ ॥

ಶ್ಲೋಕ॥ ಅಲಾತಚಕ್ರತಶ್ಶೀಘ್ರಂ
ಚಕ್ರಮಾರುಹ್ಯ ಹೇಲಯಾ ।

ವಿವ್ಯಾಧ ವಿಜಯಾಸೂನು-

ರ್ಭಾನುಃ ಕಿಂ ನ ತಮೋಹರಃ ॥ ೨೬ ॥

ಟೀ ॥ ವಿಜಯಾಸೂನುಃ-ವಿಜಯಾ-ವಿಜಯಾದೇವಿಗೆ, ಸೂನುಃ- ಮಗನಾದ ಜೀವಂಧರಕುಮಾರನು, ಅಲಾತಚಕ್ರತಃ-ಅಲಾತ-ಕೊಳ್ಳಿಯ ಕೋಪಾದಿಯಲ್ಲಿ, ಚಕ್ರತಃ-ಚಕ್ರಾಕಾರವಾದ ಗತಿವಿಶೇಷದ ದೆಸೆಯಿಂದ, ಶೀಘ್ರಂ-ಶೀಘ್ರವಾಗಿ, ಚಕ್ರಂ-ವರಾಹಯಂತ್ರವನ್ನು, ಆರುಹ್ಯ-ಹತ್ತಿ, ಲೀಲಯಾ-ಅನಾಯಾಸದಿಂದ (ಲೀಲಾಮಾತ್ರದಿಂದ), ವಿವ್ಯಾಧ-ಕೊಡೆದನು., ಭಾನುಃ-ಸೂರ್ಯನು, ತಮೋಹರೋನಕಿಂ-ಕತ್ತಲೆಯನ್ನು ಹೋಗಲಾಡಿಸುವನಲ್ಲವೇ ಏನು ?.

ತಾತ್ಪರ್ಯ ॥ ವಿಜಯಾದೇವಿಗೆ ಪುತ್ರನಾದ ಜೀವಂಧರಸ್ವಾಮಿಯು ಕೊಳ್ಳಿಯಂತೆ ಅತಿವೇಗದಿಂದ ಸುತ್ತುವವನಾಗಿ ಯಂತ್ರವನ್ನೇರಿ ಆ ಯಂತ್ರದಮೇಲಿರುವ ಮೂರುವರಾಹಗಳನ್ನು ಕತ್ತರಿಸಿದನು. ಸೂರ್ಯನು ಕತ್ತಲೆಯುಪರಿಹರಿಸುತ್ತಾನಲ್ಲವೆ? ಅದರಂತೆ, (ಮಹಾಸಮರ್ಥನಾದ ಜೀವಂಧರಕುಮಾರನಹೊರತು ಈಮಹಾಸಾಹಸಕಾರ್ಯವಾದ ವರಾಹಯಂತ್ರಭೇದನವಂ ಮತ್ತೆಯಾರೂ ಮಾಡಲುಶಕ್ತರಲ್ಲವೆಂದಭಿಪ್ರಾಯವು)

ಶ್ಲೋಕ॥ ಅಥ ಗೋವಿಂದರಾಜೋಪಿ

ರಾಜ್ಞಾಮಿದಮಚೀಕಥತ್ ।

ಸಾತ್ಯಂಧರಿರಯಂ ಹೀತಿ

ಸ್ಥಾನೇ ಹಿ ಕೃತಿನಾಂ ಗಿರಃ ॥ ೨೭ ॥

ಟೀ॥ ಅಥ-ಅನಂತರದಲ್ಲಿ, ಅಯಂ-ಇವನು, ಸಾತ್ಯಂಧರಿಃ-ಸತ್ಯಂಧರಮಹಾರಾಜನ ಪುತ್ರನಾದ ಜೀವಂಧರಕುಮಾರನು, ಇತಿ-ಹೀಗೆಂಬ, ಕೃತಿನಾಂ-ಮಹಾತ್ಮರ (ನಿಪುಣಮತಿಗಳ), ಗಿರಃ-ವಾಕ್ಯಗಳು, ಸ್ಥಾನೇಹಿ-ಯುಕ್ತವಾದುದಲ್ಲವೆ ?, ಇದಂ-ಈ ಮಾತನ್ನು, ಗೋವಿಂದರಾಜೋಪಿ-ಗೋವಿಂದರಾಜನೂಕೂಡ,ರಾಜ್ಞಾಂ-ದೊರೆಗಳಿಗೆ, ಅಚೀಕಥತ್-ಹೇಳಿದನು.

ತಾತ್ಪರ್ಯ ॥ ಅನಂತರದಲ್ಲಿ ಗೋವಿಂದರಾಜನೂಕೂಡ ಇವನು ಸತ್ಯಂಧರಮಹಾರಾಜನ ಪುತ್ರನೆಂದು (ನಿಪುಣರಾದವರು) ಮಹಾತ್ಮರು ಹೇಳುವ ಮಾತುಯುಕ್ತವಲ್ಲವೆ ? ಎಂದು ಆ ಸಭೆಯಲ್ಲಿದ್ದ ಧೊರೆಗಳು

ಕುರಿತು ಹೇಳಿದನು. (ಸತ್ಯಂಧರ ಮಹಾರಾಜನ ಮಗನಲ್ಲದವನಕ್ಷಕ್ಕೆ ಈ ಸಾಹಸವನ್ನು ಹೇಗೆ ಮಾಡಬಲ್ಲನು? ಎಂದಭಿಪ್ರಾಯವು.) ॥೨೭॥

ಶ್ಲೋಕ॥ ರಾಜಾನೋಽಪ್ಯೇವಮಸ್ಮಾಭಿ-
ರಸ್ಮಾರೀತ್ಯಭ್ಯನಂದಿಷುಃ ।
ಆಚಷ್ಟೇ ಹಿ ನರೇಂದ್ರತ್ವ-
ಮಾಲೀಢಾದಿಷು ಪಾಟವಮ್ ॥೨೮॥

ಟೀ ॥ ರಾಜಾನೋಽಪಿ-ದೊರೆಗಳೂಕೂಡ, ಏವಂ-ಈ ಪ್ರಕಾರ, ಅಸ್ಮಾಭಿಃ-ನಮ್ಮಗಳಿಂದ, ಅಸ್ಮಾರಿ- ಸ್ಮರಿಸಲ್ಪಟ್ಟಿತು., ಇತಿ-ಈಪ್ರಕಾರ, ಅಭ್ಯನಂದಿಷುಃ-ಸಂತೋಷಿಸಿದರು., ಆಲೀಢಾದಿಷು-ಆಲೀಢವೆಂಬ ಗಮನವಿಶೇಷವೇ ಮೊದಲಾದವುಗಳಲ್ಲಿರುವ, ಪಾಟವಂ-ಪಟುತ್ವವು, ನರೇಂದ್ರತ್ವಂ-ರಾಜಭಾವವನ್ನು, ಆಚಷ್ಟೇಹಿ-ಹೇಳುತಲಿದೆಯಲ್ಲವೆ?.

ತಾತ್ಪರ್ಯ ॥ ಆ ಸಭೆಯಲ್ಲಿದ್ದರಾಜರುಕೂಡ ಸತ್ಯಂಧರಮಹಾರಾಜನಿಗೆ ಈತನು ಪುತ್ರನಾಗಿರಬಹುದೆಂದು ನಾವೂಕೂಡ ಆತನ ಸ್ಥಿತಿಗತ್ಯಾದಿಭಾವಂಗಳಂನೋಡಿ ಊಹಿಸಿದೆವು ಎಂಬದಾಗಿ ಸಂತೋಷಿಸಿದರು. (ಲೋಕದಲ್ಲಿ)ಆಲೀಢವೇ ಮೊದಲಾದ ಗತಿವಿಶೇಷಗಳಲ್ಲಿಯೂ, ಇತರ ಅತಿಸಾಹಸಕೃತ್ಯಗಳಲ್ಲಿಯೂ ಇರುವ ಪಟುತ್ವವನ್ನು ನೋಡಿದುದೇ ಆದರೆ ಇವನು ರಾಜಪುತ್ರನೆಂದು ವ್ಯಕ್ತವಾಗಿ ತೋರುತ್ತದೆಯಲ್ಲವೆ? ॥೨೮॥

ಶ್ಲೋಕ॥ ಕಾಷ್ಠಾಂಗಾರಃ ಕುಮಾರಸ್ಯ
ವಿಕ್ಷಣಾತ್ ಕ್ಷೀಣಮಾನಸಃ ।
ತಚ್ಛ್ರುತೇರ್ಮೃತಕಲ್ಪೋಽಯ-
ಮನಲ್ಪಾಧಿರಚಿಂತಯತ್ ॥ ೨೯ ॥

ಟೀ॥ ಅಯಂ ಕಾಷ್ಠಾಂಗಾರಃ-ಈ ಕಾಷ್ಠಾಂಗಾರನು, ಕುಮಾರಸ್ಯ-ಜೀವಂಧರಕುಮಾರನ, ವೀಕ್ಷಣಾತ್-ನೋಡೋಣವರದೆಸೆಯಿಂದ, ಕ್ಷೀಣಮಾನಸ(ಸ್ಸನ್)-ಕ್ಷೀಣ-ಕ್ಷಯವನ್ನು ಹೊಂದಿರುವ, ಮಾನಸ(ಸ್ಸನ್)-ಮನಸ್ಸುಳ್ಳವನಾಗಿ ( ಅತ್ಯಂತದೀನವಾದ ಮನಸ್ಸುಳ್ಳವನಾಗಿಯೂ), ತಚ್ಛ್ರುತೇಃ- ಸತ್ಯಂಧರಮಹಾರಾಜನ ಪುತ್ರನೆಂಬ ಮಾತನ್ನು ಕೇಳೋಣವರದೆಸೆಯಿಂದ, ಮೃತಕಲ್ಪ(ಸ್ಸನ್)- ಸತ್ತವನಿಗೆ

ಸಮಾನನಾಗಿಯೂ, ಅನಲ್ಪಾಧಿ(ಸ್ಸನ್)-ಅಧಿಕವಾದ ಮನೋವ್ಯಥೆಯುಳ್ಳವನಾಗಿ, ಅಚಿಂತಯತ್-ಆಲೋಚಿಸಿದನು.

ತಾತ್ಪರ್ಯ ॥ ಕಾಷ್ಠಾಂಗಾರನು ಜೀವಂಧರಕುಮಾರನನ್ನು ನೋಡೋಣದರ ದೆಸೆಯಿಂದಲೇ ದೀನಮನಸ್ಸುಳ್ಳವನಾದನು. ಅನಂತರ ಸತ್ಯಂಧರಮಹಾರಾಜನ ಮಗನೆಂಬ ಮಾತುಕೇಳುತ್ತಲಿರಲಿಕ್ಕಾಗಿ, ಈ ಕಾಷ್ಠಾಂಗಾರನು ಮೃತಪ್ರಾಯನಾದನು. ಅನುತರ ಅತ್ಯಂತ ಮನೋವ್ಯಥೆಯುಳ್ಳವನಾಗಿ ಚಿಂತಿಸಿದನು. ॥೨೯॥

ಶ್ಲೋಕ॥ ಸಾತ್ಯಂಧರೌ ಹಿ ಸತ್ಯಸ್ಮಿನ್
ಸದ್ಯೋ ಹನ್ತ ವಯಂ ಹತಾಃ ।
ವೀರೇಣ ಹಿ ಮಹೀಭೋಗ್ಯಾ
ಯೋಗ್ಯತಾಯಾಂ ಚ ಕಿಂ ಪುನಃ ॥ ೩೦ ॥

ಟೀ ॥ ಅಸ್ಮಿನ್-ಇವನು, ಸಾತ್ಯಂಧರೌ(ಸತಿ) - ಸತ್ಯಂಧರಪುತ್ರನಾಗಿರುತಿರಲಾಗಿ, ವಯಂ-ನಾವು, ಸದ್ಯಃ-ತತ್ಕ್ಷಣದಲ್ಲಿಯೇ, ಹತಾಃ-ಕೊಲ್ಲಲ್ಪಟ್ಟೆವು., ಮಹೀ-ಭೂಮಿಯು, ವೀರೇಣ-ಶೂರಪುರುಷನಿಂದ, ಭೋಗ್ಯಾಹಿ- ಅನುಭವಿಸಲೋಸುಗಯೋಗ್ಯವಲ್ಲವೆ ?, ಯೋಗ್ಯತಾಯಾಂ(ಸತ್ಯಾಂ)ಚ- ಯೋಗ್ಯತೆಯೂಕೂಡಇರುತಿರಲಾಗಿ, ಕಿಂಪುನಃ-ಹೇಳತಕ್ಕದ್ದೇನು ?.

ತಾತ್ಪರ್ಯ ॥ ಇವನು ಸತ್ಯಂಧರಮಹಾರಾಜನಮಗನಾಗಿರುತ್ತಿರಲಿಕ್ಕಾಗಿ, ತತ್ಕ್ಷಣದಲ್ಲಿಯೇ ನಾವು ಕೊಲ್ಲಲ್ಪಟ್ಟೆವು. ಭೂಮಿಯು ಶೂರಪುರುಷನಿಗೇನೇ ಅನುಭವಿಸಲೋಸುಗ ಯೋಗ್ಯವಾಗುವುದು. ಯೋಗ್ಯತೆಯೂಕೂಡ ಇದ್ದಲ್ಲಿ ಹೇಳತಕ್ಕದ್ದೇನು? ಪೃಥ್ವೀಪತಿಯಾದ ಸತ್ಯಂಧರನಮಗನಾದುದರಿಂದ ಇವನು ಪ್ರಜಾಪರಿಪಾಲನೆಗೆ ಅರ್ಹನೂ ಅಹುದು. ಮತ್ತು ಶೂರನಾಗಿಯೂ ಇರುವನು. ಇಂಥಾವನನ್ನುಬಿಟ್ಟು ಈ ರಾಜಲಕ್ಷ್ಮಿಯು ನನ್ನಲ್ಲಿಯೇ ಹೇಗೆ ತಾನೇ ಸ್ಥಿರವಾಗಿರುವಳು. ಇನ್ನುಮೇಲೆ ಇವನೇ ರಾಜನಾಗುವನೆಂದು ಅತ್ಯಂತ ಖಿನ್ನನಾಗಿ ಕಾಷ್ಠಾಂಗಾರನು ಚಿಂತಿಸಿದನು. ॥೩೦॥

ಶ್ಲೋಕ॥ ಕಥಮೇನಂ ವಣಿಕ್ಪೋತಂ
ಮಥನೋಽಪ್ಯವಧೀತ್ತದಾ ।
ಆತ್ಮನೀನೇ ವಿನಾತ್ಮಾನ-
ಮಂಜಸಾ ನಹಿ ಕಶ್ಚನ ॥ ೩೧ ॥

ಟೀ ॥ ಮಥನಃ-ಮಥನನೆಂಬುವನು, ತದಾ-ಆ ಕಾಲದಲ್ಲಿ, ಏನಂ ವಣಿಕ್ಪೋತಂ-ಈ ಶ್ರೇಷ್ಠಿಪುತ್ರನಾದ ಜೀವಂಧರನನ್ನು, ಕಥಂ-ಹೇಗೆತಾನೇ- ಅವಧೀತ್-ಕೊಂದನು ?, ಆತ್ಮನೀನೇ-ತನಿಗೆ ಅತ್ಯಂತ ಅಂತರಂಗಕೆಲಸದಲ್ಲಿ, ಆತ್ಮಾನಂವಿನಾ- ತನ್ನನ್ನು ಹೊರತು, ಕಶ್ಚನ-ಯಾವನೂ, ನಹಿ-ಆಪ್ತನಲ್ಲವಷ್ಟೆ?.

ತಾತ್ಪರ್ಯ ॥ ಕಾಷ್ಠಾಂಗಾರನು ತನ್ನಲ್ಲಿತಾನೇ ಆಲೋಚನೆಮಾಡುತ್ತಾನೆ;—ಈ ಗಂಧೋತ್ಕಟಶ್ರೇಷ್ಠಿಯಮಗನಾದ ಈ ಶತ್ರುವನ್ನು ಸಂಹಾರಮಾಡೆಂದು ನನ್ನ ಭಾವಮೈದುನನಾದ ಮಥನನ ವಶಕ್ಕೆ ಪೂರ್ವದಲ್ಲಿಯೇ ಒಪ್ಪಿಸಿದ್ದೆನಷ್ಟೆ? ಇವನನ್ನುಕೊಲ್ಲದೆ ಹೇಗೆಬಿಟ್ಟನೋ! ಇವಕ್ಕೇನುಕಾರಣವೋ! ತಿಳಿಯದು. ನನಗೆ ಪರಮಾಪ್ತನಾದ ನನ್ನ ಭಾವಮೈದುನನೇ ಶತ್ರುವಾದ ಈಶ್ರೇಷ್ಠಿಯಪುತ್ರನನ್ನು ಕೊಲ್ಲದೇ ಬಿಟ್ಟದ್ದನ್ನು ನೋಡಿದರೆ ತನ್ನ ಕೆಲಸವನ್ನು ತಾನೇ ಮಾಡಬೇಕೇಹೊರತು ಮತ್ತೆ ಯಾರನ್ನೂ ನಂಬಕೂಡದೆಂಬ ಮುಖ್ಯವಾಗಿ ಲೋಕನ್ಯಾಯವು ತಿಳಿಯಬರುತ್ತದೆ. ॥೩೧॥

ಶ್ಲೋಕ॥ ದುರಾಕೂತಃ ಕಿಮಾಕೂತೋ
ಮಾತುಲೋಽಸ್ಯ ಮಯಾ ಮುಧಾ ।
ಸ್ವವಧಾಯ ಹಿ ಮೂಢಾತ್ಮಾ
ಕೃತ್ಯೋತ್ಥಾಪನಮಿಚ್ಛತಿ ॥ ೩೨ ॥

ಟೀ ॥ ದುರಾಕೂತಃ-ಕೆಟ್ಟ ಅಭಿಪ್ರಾಯವುಳ್ಳ, (ನನಗೆ ದ್ರೋಹಚಿಂತಕನಾದ), ಅಸ್ಯ-ಈಜೀವಂಧರನ, ಮಾತುಲಃ-ಸೋದರಮಾವನು, ಕಿಂ-ಏತಕೋಸ್ಕರ, ಮುಧಾ-ವ್ಯರ್ಥವಾಗಿ, ಮಯಾ-ನನ್ನಿಂದ, ಆಹೂತಃ-ಕರೆಸಲ್ಪಟ್ಟನೋ, (ಲೋಕೇ-ಲೋಕದಲ್ಲಿ,) ಮೂಢಾತ್ಮಾ-ಮೂಢಬುದ್ಧಿಯುಳ್ಳವನು, ಸ್ವವಧಾಯ-ಸ್ವ-ತನ್ನ, ವಧಾಯ-ಸಂಹಾರಕ್ಕೋಸ್ಕರ, ಕೃತ್ಯೋತ್ಥಾಪನಂ-ಕೃತ್ಯಾ-ಶೂನ್ಯದೇವತೆಯ, ಉತ್ಥಾಪನಂ-ಎಬ್ಬಿಸೋಣವನ್ನು, ಇಚ್ಛತಿಹಿ-ಇಚ್ಛೈಸುತ್ತಾನೆಯಲ್ಲವೆ ?

ತಾತ್ಪರ್ಯ ॥ ಕಾಷ್ಠಾಂಗಾರನು ಚಿಂತಿಸುವುದೇನಂದರೆ.—ಇಂಥಾ ದುರಾಲೋಚನೆಯುಳ್ಳ ಈ ಜೀವಂಧರನ ಸೋದರಮಾವನಾದ ಈಗೋವಿಂದರಾಜನನ್ನು ನಾನು ಏತಕೆ ವ್ಯರ್ಥವಾಗಿ ಇಲ್ಲಿಗೆ ಕರೆಸಿದನೋ ! ಆದರೆ ಲೋಕದಲ್ಲಿ ಮೂಢಬುದ್ಧಿಯುಳ್ಳವನು ಸ್ವಸ್ಥವಾಗಿರುವ ಶೂನ್ಯ ದೇವತೆಯನ್ನು ಎಬ್ಬಿಸಿದನೇಆದರೆ ತಾನೇ ಸಾಯುತ್ತಾನಲ್ಲವೆ? ಹಾಗೆ ಈ ಗೋವಿಂದರಾಜನನ್ನು ನಾನು ಇಲ್ಲಿಗೆ ಕರೆಸಿದುದು ನನ್ನ ವಿಪತ್ತಿಗೇನೇ ಕಾರಣವಾಯಿತಲ್ಲಾ ! ನಾನು ಅತ್ಯಂತ ಮೂಢನೆಂದು ತಿಳಿದುಬಹಳ ಪಶ್ಚಾತ್ತಾಪಪಟ್ಟನು. ॥ ೩೨ ॥

ಶ್ಲೋಕ॥ ಗೋವಿಂದರಾಜೋ ಯುಕ್ತೋಯಂ
ದುರ್ದ್ದಾನ್ತಃ ಕಿಂ ವಿಧಿತ್ಸತಿ ।
ಮರುತ್ಸಖೇ ಮರುದ್ಧೂತೇ
ಮಹ್ಯಾಂ ಕಿಂ ವಾ ನ ದಹ್ಯತೇ ॥ ೩೩ ॥

ಟೀ॥ ಯುಕ್ತಃ-ಈ ಶೂರನಾದ ಜೀವಂಧರನೊಡನೆಯೂ, (ಸೈನ್ಯದೊಡನೆಯೂ ಕೂಡಿಕೊಂಡಿರುವ), ದುದಾರ್ಂತಃ-ಅತ್ಯಂತಕ್ರೂರನಾದ (ಅತ್ಯಂತಗರ್ವಿಷ್ಠನಾದ), ಅಯಂಗೋವಿಂದರಾಜಃ-ಈ ಗೋವಿಂದರಾಜನು, ಕಿಂ-ಏನನ್ನು, ವಿಧಿತ್ಸತಿ-ಮಾಡಲೋಸ್ಕರ ಅಪೇಕ್ಷೆಯುಳ್ಳವನಾಗಿದಾನೆಯೋ?, ಮರುತ್ಸಖೇ-ಬೆಂಕಿಯು, ಮರುದ್ಧೂತೇಸತಿ-ಮರುತ್ - ಗಾಳಿಯಿಂದ, ಧೂತೇಸತಿ-ಬೀಸಲ್ಪಡುತ್ತಿರಲಾಗಿ, ಮಹ್ಯಾಂ-ಭೂಮಿಯಲ್ಲಿ, ಕಿಂವಾ- ಯಾವವಸ್ತುವಾದರೋ, ನದಹ್ಯತೇ-ದಹಿಸಲ್ಪಡುವುದಿಲ್ಲವು?,

ತಾತ್ಪರ್ಯ ॥ ಸಮಸ್ತ ಸಾಮಂತರಾಜರೊಡನೆಯೂ, ಸರ್ವಸೈನ್ಯಗಳೊಡನೆಯೂ, ಮಹಾಶೂರನಾದ ಜೀವಂಧರಕುಮಾರನೊಡನೆಯೂ, ಕೂಡಿ ಅತ್ಯಂತ ಗರ್ವಿತನಾಗಿರುವ ಈ ಗೋವಿಂದರಾಜನು ನಮ್ಮಂ ಏನನ್ನುಮಾಡಬೇಕೆಂದಿರುವನೋ ! ತಿಳಿಯದು. ಬೆಂಕಿಯೂ, ಗಾಳಿಯೂ ಎರಡೂಒಂದಾಗಿ ಸೇರಿದುದೇ ಆದರೆ, ಭೂಮಿಯಲ್ಲಿ ಯಾವುದನ್ನುತಾನೇ ದಹಿಸದೇ ಉಳಿಸುವುದು ? ಹಾಗೆ ಈ ಶತ್ರುವಾದ ಮಹಾಶೂರನಾದ ಜೀವಂಧರನೊಡಗೂಡಿರುವ ಗೋವಿಂದರಾಜನು ಸಮಸ್ತರನ್ನೂ ಜಯಿಸಲು ಶಕ್ತನೆಂದು ಕಾಷ್ಠಾಂಗಾರನು ತನ್ನಲ್ಲಿ ತಾನೇ ಚಿಂತಿಸಿದನು. ॥ ೩೩ ॥

ಶ್ಲೋಕ॥ ಇತಿ ಚಿಂತಾಕುಲಂ ಶತ್ರುಂ
ಸ್ವಾಮಿಮಿತ್ರಾಣಿ ಚಿಕ್ಷಿಪುಃ ।
ವಿಪದೋ ಹೀತಪುಣ್ಯಾನಾಂ
ತಿಷ್ಠಂತ್ಯೇವ ಹಿ ಪೃಷ್ಠತಃ ॥ ೩೪ ॥

ಟೀ ॥ ಇತಿ-ಈಪ್ರಕಾರ, ಚಿಂತಾಕುಲಂ-ಚಿಂತಾಕ್ರಾಂತನಾದ, ಶತ್ರುಂ-ಕಾಷ್ಠಾಂಗಾರನನ್ನು, ಸ್ವಾಮಿಮಿತ್ರಾಣಿ-ಜೀವಂಧರಸ್ವಾಮಿಯ ಸ್ನೇಹಿತರು, ಚಿಕ್ಷಿಪುಃ-ಪ್ರೇರಿಸಿದರು., ವೀತಪುಣ್ಯಾನಾಂ-ವೀತ-ಹೋಗಿರುವ, ಪುಣ್ಯಾನಾಂ-ಪುಣ್ಯವುಳ್ಳವರಿಗೆ, ಪೃಷ್ಠತಃ-ಹಿಂದು ಗಡೆಯೇ, ವಿಪದಃ-ಆಪತ್ತುಗಳು, ತಿಷ್ಠಂತ್ಯೇವಹಿ-ಇರುತ್ತಲೇಇದೆಯಲ್ಲವೆ?.

ತಾತ್ಪರ್ಯ ॥ ಈ ಪೂರ್ವೋಕ್ತಪ್ರಕಾರವಾಗಿ ಚಿಂತಾಕ್ರಾಂತನಾದ ಶತ್ರುವಾದ ಕಾಷ್ಠಾಂಗಾರನನ್ನು ಜೀವಂಧರಸ್ವಾಮಿಯ ಸ್ನೇಹಿತರು ಪ್ರೇರಿಸಿದರು. ( ಈ ಕಾಷ್ಠಾಂಗಾರನ ಮನಸ್ಸು ಕೋಪಗೊಳ್ಳುವಂತೆಮಾಡಿದರು. ) ಪುಣ್ಯಹೀನರಿಗೆ ವಿಪತ್ತುಗಳು ಹಿಂದುಗಡೆಯೇ ಇದೆಯಲ್ಲವೆ ? ॥ ೩೪ ॥

ಶ್ಲೋಕ ॥ ಮತ್ಸರೀ ಕೌರವೇಣಾಯಂ
ಭರ್ತ್ಸನಾದಯುಯುತ್ಸತ ।
ಮತ್ಸರಾಣಾಂ ಹಿ ನೋದೇತಿ
ವಸ್ತುಯಾಥಾತ್ಮ್ಯಚಿನ್ತನಮ್ ॥೩೫॥

ಟೀ ॥ ಮತ್ಸರೀ - ಜೀವಂಧರಕುಮಾರನಶುಭಫಲಗಳಲ್ಲಿ, ದೀರ್ಘದ್ವೇಷಿಯಾದ, ಅಯಂ-ಈ ಕಾಷ್ಠಾಂಗಾರನು, ಭರ್ತ್ಸನಾತ್-ತಿರಸ್ಕರಿಸೋಣವರದೆಸೆಯಿಂದ,ಕೌರವೇಣ- ಕುರುವಂಶೋತ್ಪನ್ನನಾದಜೀವಂಧರಕುಮಾರನೊಡನೆ, ಅಯುಯುತ್ಸತ-ಯುದ್ಧ ಮಾಡಲೋಸುಗ ಇಚ್ಛೈಸಿದನು., ಮತ್ಸರಾಣಾಂ-ಮಾತ್ಸರ್ಯವುಳ್ಳವರಿಗೆ, ವಸ್ತುಯಾಥಾತ್ಮ್ಯಚಿಂತನಂ – ವಸ್ತುಸ್ವಭಾವವಂ ಪರ್ಯಾಲೋಚಿಸೋಣವು, ನೋದೇತಿಹಿ - ಉಂಟಾಗುವುದಿಲ್ಲವಷ್ಟೆ?

ತಾತ್ಪರ್ಯ ॥ ಈ ಜೀವಂಧರಸ್ವಾಮಿಯ ಸ್ನೇಹಿತರು ತಿರಸ್ಕಾರ ಮಾಡಿದುದರಿಂದ ಬಹುದಿವಸದಿಂದ ಜೀವಂಧರಕುಮಾರನಲ್ಲಿ ದ್ವೇಷಿಯಾ

ಗಿದ್ದ ಕಾಷ್ಠಾಂಗಾರನು ಕುರುವಂಶೋತ್ಪನ್ನನಾದ ಜೀವಂಧರಕುಮಾ ರನೊಡನೆಕೂಡ ಯುದ್ಧಮಾಡಬೇಕೆಂದು ನಿರ್ಣಯಿಸಿದನು. ಬಹು ಕಾಲದಿಂದ ದ್ವೇಷವುಳ್ಳವರಿಗೆ ವಸ್ತುಸ್ವಭಾವ ಪರ್ಯಾಲೋಚನೆಯು ಉಂಟಾಗುವುದೇ ಇಲ್ಲವಷ್ಟೆ? ॥ ೩೫ ॥

ಶ್ಲೋಕ॥ ಕೇಚಿತ್ಕೌರವತಃ ಕೇಚಿ-
ದ್ವೈರಿತೋಽಪ್ಯಭವನ್ನೃಪಾಃ ।
ಸುಜನೇತರಲೋಕೋಽಯ-
ಮಧುನಾ ನ ಹಿ ಜಾಯತೇ ॥೩೬॥

ಟೀ ॥ ಕೇಚಿತ್-ಕೆಲವು, ನೃಪಾಃ-ದೊರೆಗಳು, ಕೌರವತಃ-ಜೀವಂಧರಕುಮಾ ರನಕಡೆಗೂ, ಕೇಚಿತ್-ಕೆಲವು, ನೃಪಾಃ-ದೊರೆಗಳು, ವೈರಿತೋಪಿ-ಶತ್ರುವಾದ ಕಾ ಷ್ಠಾಂಗಾರನಪಕ್ಷಕ್ಕೂ, ಅಭವನ್-ಆದರು., ಅಯಂ-ಈ, ಸುಜನೇತರಲೋಕಃ-ದು ರ್ಜನಸಂಘವು, ಅಧುನಾ-ಈಗ, ನಜಾಯತೇಹಿ-ಉಂಟಾಗುವುದಿಲ್ಲವಷ್ಟೆ?.

ತಾತ್ಪರ್ಯ ॥ ಯುದ್ಧಸನ್ನಾಹವಾಗುತ್ತಿರಲಾಗಿ ಕೆಲವು ದೊರೆಗ ಳು ಜೀವಂಧರಕುಮಾರನ ಪಕ್ಷಕ್ಕೆ ಸೇರಿದರು. ಕೆಲವುರಾಜರು ಶತ್ರು ವಾದ ಕಾಷ್ಠಾಂಗಾರನಪಕ್ಷಕ್ಕೆ ಸೇರಿದರು. ಈ ದುರ್ಜನಲೋಕವು ಈ ಯುದ್ಧದಲ್ಲಿ ನಷ್ಟವಾಗಿ ಹೋಗುತ್ತದೆಯಲ್ಲವೆ ? ( ದುರ್ಜನರಿಗೆ ಲ್ಲಾ ವಿನಾಶಕರವಾದಯುದ್ಧವು ಪ್ರಾಪ್ತವಾಯಿತೆಂದಭಿಪ್ರಾಯವು)॥ ೩೬॥

ಶ್ಲೋಕ॥ ಕೌರವ್ಯೋಽಪ್ಯಾಹವೇಽರಾತಿಂ
ಲೋಕಾಂತರಮಜೀಗಮತ್ ।
ದುರ್ಬಲಾ ಹಿ ಬಲಿಷ್ಠೇನ
ಬಾಧ್ಯಂತೇ ಹನ್ತ ಸಂಸೃತೌ ॥೩೭॥

ಟೀ ॥ ಕೌರವ್ಯೋಪಿ-ಕುರುವಂಶಪ್ರಭುವಾದ ಜೀವಂಧರಕುಮಾರನೂಕೂಡ, ಆಹವೇ-ಯುದ್ಧದಲ್ಲಿ, ಅರಾತಿಂ-ಶತ್ರುವಾದ ಕಾಷ್ಠಾಂಗಾರನನ್ನೂ, ಲೋಕಾನ್ತ ರಂ-ಮತ್ತೊಂದು ಲೋಕವನ್ನು, ಅಜೀಗಮತ್-ಹೊಂದಿಸಿದನು., ಸಂಸೃತೌ-ಸಂ ಸಾರದಲ್ಲಿ, ದುರ್ಬಲಾಃ-ಅಶಕ್ತರು, ಬಲಿಷ್ಠೇನ-ಬಲಶಾಲಿಯಾದವನಿಂದ, ಬಾಧ್ಯಂತೆ ಹಿ-ಬಾಧಿಸಲ್ಪಡುತ್ತಾರಲ್ಲವೆ?, ಹನ್ತ-ಕಷ್ಟ!! ಆಶ್ಚರ್ಯ!!!.

ತಾತ್ಪರ್ಯ ॥ ಕುರುವಂಶಪ್ರಭುವಾದ ಜೀವಂಧರಸ್ವಾಮಿಯು ಉಕ್ತೂ
ಡ ಯುದ್ಧದಲ್ಲಿ ಶತ್ರುವಾದ ಕಾಷ್ಠಾಂಗಾರನನ್ನು ಮರಣವನ್ನೈದಿಸಿದ
ನು. ಈ ಸಂಸಾರದಲ್ಲಿರುವವರೆಗೂ ದುರ್ಬಲರಾದವರನ್ನು ಬಲಿಷ್ಠ
ರು ಸಂಹರಿಸುವುದು ನ್ಯಾಯವಾಗಿ ( ಲೋಕರೂಢಿಯಾಗಿ ) ಯೇ ಇ
ದೆಯಷ್ಟೆ ? ॥ ೩೩ ॥

ಶ್ಲೋಕ ॥ ಅಥ ಸಂಗ್ರಾಮ ಸಂರಂಭಂ
ಕೌರವೋಯಮವಾರಯತ್ ।
ಮುಧಾ ವಧಾದಿ ಭೀತಾ ಹಿ
ಕ್ಷತ್ರಿಯಾ ವ್ರತಿನೋ ಮತಾಃ ॥೩೪॥

ಟೀ ॥ ಅಥ-ಅನಂತರದಲ್ಲಿ, ಕೌರವಃ - ಕುರುವಂಶೋತ್ಪನ್ನನಾದ, ಅಯಂ-
ಈ ಜೀವಂಧರಸ್ವಾಮಿಯು, ಸಂಗ್ರಾಮಸಂರಂಭಂ-ಯುದ್ಧಸಂರಂಭವನ್ನು, ಅವಾ
ರಯತ್-ನಿಲ್ಲಿಸಿದನು, ವ್ರತಿನಃ-ವ್ರತಶಾಲಿಗಳಾದ, ಕ್ಷತ್ರಿಯಾಃ - ಕ್ಷತ್ರಿಯರು,
ಮುಧಾ-ನಿಷ್ಫಲವಾದ, ವಧಾದಿಭೀತಾಃ-ವಧ-ಪ್ರಾಣಿಹಿಂಸೆಯೇ, ಆದಿ-ಮೊದಲಾಗಿ
ವುಳ್ಳ ಅಧರ್ಮದದೆಸೆಯಿಂದ, ಭೀತಾಃ-ಭಯಪಟ್ಟವರಾಗಿ, ಮತಾಹಿ-ಇಷ್ಟರಲ್ಲವೆ?.

ತಾತ್ಪರ್ಯ ॥ ಅನಂತರದಲ್ಲಿ ಕುರುವಂಶಪ್ರಭುವಾದ ಜೀವಂಧರ
ಕುಮಾರನು ಶತ್ರುವಾದ ಕಾಷ್ಠಾಂಗಾರನ ಸಂಹಾರಾನಂತರದಲ್ಲಿ ನಿಷ್ಪ್ರ
ಯೋಜನವಾದ ಪ್ರಾಣಿಹಿಂಸೆಯು ಅಧರ್ಮವಾದುದರಿಂದ ಯುದ್ಧಾಡಂಬರ
ವಂ ನಿಲ್ಲಿಸಿದನು. ಅಹಿಂಸಾದಿ ವ್ರತಶಾಲಿಗಳಾದ ಕ್ಷತ್ರಿಯರು ನಿಷ್ಫಲ
ವಾದ ಹಿಂಸಾದಿಪಾಪಗಳನ್ನು ಮಾಡೋಣದರದೆಸೆಯಿಂದ ಭಯಪಡುವ
ರೆಂದು ಸತ್ಪುರುಷಸಮ್ಮತವಲ್ಲವೆ ? ( ಶತ್ರುಸಂಹಾರ ಪರ್ಯಂತವೂ ಯು
ದ್ಧವು ನ್ಯಾಯವು. ಶತ್ರುಮರಣಾನಂತರವೂ, ಪ್ರಾಣಿಗಳನ್ನೂ ಕೊ
ಲ್ಲೋಣವು ನಿಷ್ಫಲ ಹಿಂಸೆಯಾದುದರಿಂದ ಪಾಪಕ್ಕೇನೆ ಕಾರಣವೆಂ
ದಭಿಪ್ರಾಯವು. ॥ ೩೪ ॥

ಶ್ಲೋಕ ॥ ವೀರಸೂರ್ವಿಜಯಾ ಜಾತಾ
ವೀರಪತ್ನೀ ಚ ಮೇ ಸುತಾ ।

ಇತ್ಯುಕ್ತ್ವಾ ಮಾತುಲೋಽಪ್ಯೇನ-
ಮಾನಂದಾದಭ್ಯನಂದಯತ್ ॥೩೯॥

ಟೀ॥ ವಿಜಯಾ-ವಿಜಯಾದೇವಿಯು, ವೀರಸೂಃ(ಸ್ಸತೀ)-ವೀರಪುತ್ರನನ್ನು ಪಡೆದವಳಾಗಿ, (ಜಾತಾ-ಆವಳು)., ಮೇ-ನನ್ನ, ಸುತಾ-ಪುತ್ರಿಯು(ಮಗಳು), ವೀರಪತ್ನೀಚ-ವೀರಪುರುಷನ ಪತ್ನಿಯಾಗಿಯೂ, ಜಾತಾ-ಆವಳು., ಇತಿ-ಈಪ್ರಕಾರ, ಉಕ್ತ್ವಾ-ಹೇಳಿ, ಮಾತುಲೋಽಪಿ-ಸೋದರಮಾವನಾದ ಗೋವಿಂದರಾಜನೂಕೂಡ, ಏನಂ-ಈ ಜೀವಂಧರಸ್ವಾಮಿಯನ್ನು, ಆನಂದಾತ್- ಸಂತೋಷದದೆಸೆಯಿಂದ, ಅಭ್ಯನಂದಯತ್-ಶ್ಲಾಘಿಸಿದನು.

ತಾತ್ಪರ್ಯ ॥ ಗೋವಿಂದರಾಜನು ಹೇಳುತ್ತಾನೆ.—ನನ್ನ ಸಹೋದರಿಯಾದ ವಿಜಯಾದೇವಿಯೂಕೂಡ ವೀರಪುತ್ರನ ತಾಯಿಯೆಂಬ ಯಶಸ್ಸಿಗೂ, ಗೌರವಕ್ಕೂ ಪಾತ್ರಳಾದಳು. ನನ್ನ ಮಗಳೂಕೂಡ ವೀರನ ಪತ್ನಿಯೆಂಬ ಗೌರವಕ್ಕೂ, ಖ್ಯಾತಿಗೂ ಸ್ಥಾನಳಾದಳು. ಎಂಬದಾಗಿ ಪರಮಸಂತುಷ್ಟನಾಗಿ ಹೇಳಿ, ಸೋದರಮಾವನಾದ ಗೋವಿಂದರಾಜನೂಕೂಡ ಅಳಿಯನಾದ ಜೀವಂಧರಕುಮಾರನನ್ನು ಬಹಳವಾಗಿ ಶ್ಲಾಘಿಸಿ ಸಂತೋಷಪಡಿಸಿದನು. ॥ ೩೯ ॥

ಶ್ಲೋಕ॥ ಸಮನ್ತತಸ್ಸಮಾಯಾತಾ-
ಸ್ಸಾಮಂತಾಸ್ತಂ ಸಿಷೇವಿರೇ ।
ಸಮೌ ಹಿ ನಾಟ್ಯಸಭ್ಯಾನಾಂ
ಸಂಪದಾಂ ಚ ಲಯೋದಯೌ ॥೪೦॥

ಟೀ ॥ ಸಮಂತತಃ-ನಾಲ್ಕುಕಡೆಯಿಂದಲೂ, ಸಮಾಯಾತಾಃ-ಬಂದಿರುವಂಥ, ಸಾಮಂತಾಃ-ಸಮೀಪದೇಶವರ್ತಿಗಳಾದರಾಜರು, ತಂ-ಆ ಜೀವಂಧರಸ್ವಾಮಿಯನ್ನು, ಸಿಷೇವಿರೇ-ಸೇವಿಸಿದರು., ನಾಟ್ಯಸಭ್ಯಾನಾಂ-ನಾಟ್ಯದಸಭೆಯಲ್ಲಿರುವ ಜನಗಳಿಗೆ, ಸಂಪದಾಂ-ಸಂಪತ್ತುಗಳ, ಲಯೋದಯೌಚ-ಲಯ-ನಾಶವೂ, ಉದಯೌಚ-ಆವಿರ್ಭಾವವೂ ಇವುಗಳೂಕೂಡ, ಸಮೌಹಿ-ಸಮಾನವಲ್ಲವೆ?.

ತಾತ್ಪರ್ಯ ॥ ಸುತ್ತಲೂ ಇರುವ ದೇಶಗಳಿಂದ ಬಂದಿರುವ ಸಾಮಂತರಾಜರು ಆ ಜಯಶಾಲಿಯಾಗಿರುವ ಜೀವಂಧರಕುಮಾರನನ್ನು ಸೇವಿಸಿದರು. ನಾಟ್ಯವನ್ನು ನೋಡುತ್ತ ಸಭೆಯಲ್ಲಿರುವಜನಗಳಿಗೆ ಸಂಪತ್ತು

ಗಳಲಯವೂ, ಆವಿರ್ಭಾವವೂ, ಎರಡೂ ಸಮಾನಗಳಲ್ಲವೆ ? ( ನಿಷ್ಪಕ್ಷ
ಪಾತರಾದ ಸಭಾಜನಗಳಿಗೆ ಯುದ್ಧಮಾಡುತ್ತಿರುವ ಇಬ್ಬರಲ್ಲಿ ಯಾರಿಗೆ
ಜಯವಾದರೂ ಇಷ್ಟವೇಹೊರತು ಇವನಿಗೆ ಜಯವಾಗಬೇಕು,ಇವನಿಗೆ
ಅಪಜಯವಾಗಬೇಕೆಂಬ ದುರಾಗ್ರಹವಿಲ್ಲವಷ್ಟೆ ? ॥ ೪೦ ॥

ಶ್ಲೋಕ ॥ ರಾಜಪುರ್ಯಾಮಗಾಚ್ಚಾಯ-
ಮಭಿಷೇಕ್ತುಂ ಜಿನಾಲಯಮ್ ।
ಭಗವದ್ದಿವ್ಯಸಾನ್ನಿಧ್ಯೇ
ನಿಷ್ಪ್ರತ್ಯೂಹಾ ಹಿ ಸಿದ್ಧಯಃ ॥೪೧॥

ಟೀ ॥ ಅಯಂ-ಈ ಗೋವಿಂದರಾಜನು, ರಾಜಪುರ್ಯಾಂ- ರಾಜಪುರೀಪಟ್ಟಣದ
ಲ್ಲಿ, ಅಭಿಷೇಕ್ತುಂ-ಪಟ್ಟಾಭಿಷೇಕಮಾಡಲೋಸ್ಕರ, ಜಿನಾಲಯಂ- ಜಿನಚೈತ್ಯಾಲಯ
ವನ್ನು, ಅಗಾಚ್ಚ-ಹೊಂದಿಯೂ ಹೊಂದಿದನು, ಭಗವದ್ದಿವ್ಯಸಾನ್ನಿಧ್ಯೇ–ಭಗವತ್-
ಮಹಾಮಹಿಮೆಯುಳ್ಳಅರ್ಹತ್ಪರಮೇಶ್ವರನ, ದಿವ್ಯ-ಉತ್ಕೃಷ್ಟವಾದ, ಸಾನ್ನಿಧ್ಯೇ-
ಸನ್ನಿಧಾನದಲ್ಲಿ, ಸಿದ್ಧಯಃ-ಕಾರ್ಯಸಿದ್ಧಿಗಳು, ನಿಷ್ಪತ್ಯೂಹಾಹಿ-ನಿರ್ವಿಘ್ನಗಳಾಗಿ ನೆ
ವೇರುತ್ತೆಯಲ್ಲವೆ?

ತಾತ್ಪರ್ಯ ॥ ಶತ್ರುಜಯಾನಂತರದಲ್ಲಿ ಗೋವಿಂದರಾಜನು, ರಾಜ
ಪುರೀಪಟ್ಟಣದಲ್ಲಿ ಮಹಾರಾಜನಾದ ಸತ್ಯಂಧರಪುತ್ರನಾದ ಜೀವಂಧರ
ಸ್ವಾಮಿಗೆ ಪಟ್ಟಾಭಿಷೇಕವಂ ಮಾಡಲೋಸುಗ ಜಿನಚೈತ್ಯಾಲಯವನ್ನು
ಕೂಡ ಹೊಂದಿದನು. ಮಹಾಮಹಿಮೆ ಯುಳ್ಳವನಾಗಿಯೂ, ಸಮಸ್ತ
ಮಂಗಳಕಾರ್ಯಗಳಿಗೂ ಮಂಗಳವನ್ನುಂಟುಮಾಡತಕ್ಕವನಾದ ಭಗವಂ
ತನಸನ್ನಿಧಾನದಲ್ಲಿ ಮಾಡುವ ಶುಭಕಾರ್ಯಗಳು ನಿರ್ವಿಘ್ನವಾಗಿ ಸಿದ್ಧಿಸ
ವುದಲ್ಲವೆ ? ( ಆದುದರಿಂದ ಜಿನಾಲಯವನ್ನೇ ಹೊಂದಿದನೆಂದಭಿಪ್ರಾ
ಯವು. ) ॥ ೪೧ ॥

ಶ್ಲೋಕ॥ ತಾವತಾ ಸನ್ನಿಧಾತ್ತತ್ರ
ಯಕ್ಷೋ ಯಕ್ಷಚರೋ ಮುದಾ ।
ಫಲಮೇವ ಹಿ ಯಚ್ಛಂತಿ
ಪನಸಾಇವ ಸಜ್ಜನಾಃ ॥೪೨॥

ಟೀ ॥ ತಾವತಾ-ಅಷ್ಟರಲ್ಲಿಯೇ, ತತ್ರ-ಅಲ್ಲಿ, ಯಕ್ಷಚರಃ-ಪೂರ್ವದಲ್ಲಿ ಯಕ್ಷನಾಗಿದ್ದ, ಯಕ್ಷಃ-ಯಕ್ಷನು, ಮುದಾ-ಸಂತೋಷದಿಂದ,ಸನ್ನಿಧಾತ್-ಸಮೀಪವನ್ನು ಹೊಂದಿದನು, ಸಜ್ಜನಾಃ-ಸತ್ಪುರುಷರು, ಪನಸಾಇವ-ಹಲಸಿನಮರಗಳೋಪಾದಿಯಲ್ಲಿ, ಫಲಮೇವ (ಹಣ್ಣನ್ನೇ) ಪ್ರಯೋಜನವನ್ನೇ, ಯಚ್ಛಂತಿಹಿ- ಕೊಡುತ್ತಾರೆಯಲ್ಲವೆ,

ತಾತ್ಪರ್ಯ ॥ ಅಷ್ಟರಲ್ಲಿಯೇ, ಪೂರ್ವದಲ್ಲಿ ಜೀವಂಧರಸ್ವಾಮಿಯ ಮಂತ್ರಮಾಹಾತ್ಮ್ಯದಿಂದ ಯಕ್ಷನಾದ ಸುದರ್ಶನ ಯಕ್ಷನೂಕೂಡ ಸಂತೋಷದಿಂದ ಆ ರಾಜಪುರೀ ಪಟ್ಟಣದಲ್ಲಿರುವ ಜಿನಚೈತ್ಯಾಲಯವನ್ನುಹೊಂದಿ ಜೀವಂಧರಸ್ವಾಮಿಯ ಸನ್ನಿಧಾನವನ್ನು ಹೊಂದಿದನು. ಸತ್ಪುರುಷರು ಫಲಕಾಲದಲ್ಲಿಯೇ ಸಮೀಪವನ್ನು ಹೊಂದಿ ಇಷ್ಟಾರ್ಥವನ್ನುಂಟುಮಾಡುವರಲ್ಲವೆ ? ಆದುದರಿಂದ ಸತ್ಪುರುಷರು ಹಲಸಿನಮರಗಳಂತೆ ಹಲಸಿನಮರಗಳೂಕೂಡ ಫಲವನ್ನೇಕೊಡುವದು ಸ್ವಭಾವವೇಹೊರತು ಪುಷ್ಪವಂಕೊಡುವುದಿಲ್ಲವಷ್ಟೆ ? ಹಾಗೆ ( ಸತ್ಪುರುಷಾಗ್ರೇಸರನಾದ ಸುದರ್ಶನಯಕ್ಷನೂಕೂಡ ಪಟ್ಟಾಭಿಷೇಕವೆಂಬ ಇಷ್ಟಾರ್ಥವನ್ನುಂಟುಮಾಡುವುದಕ್ಕೋಸುಗ ಆ ಸಮಯಕ್ಕೆ ಸರಿಯಾಗಿ ಬಂದನೆಂದಭಿಪ್ರಾಯವು. ) ॥ ೪೭ ॥

ಶ್ಲೋಕ॥ ಅಥ ಗೋವಿಂದರಾಜೇನ
ಯಕ್ಷರಾಜೋ ಯಥಾವಿಧಿ।
ಅಭ್ಯಷಿಂಚನ್ಮಹಾರಾಜಂ
ಕೌರವಂ ಗುರುಗೌರವಾತ್ ॥೪೩॥

ಟೀ ॥ ಅಥ-ಅನಂತರದಲ್ಲಿ, ಗೋವಿಂದರಾಜೇನ - ಗೋವಿಂದರಾಜನೊಡನೆ, ಯಕ್ಷರಾಜಃ-ಯಕ್ಷರಾಜನಾದ ಸುದರ್ಶನಯಕ್ಷನು, ಯಥಾವಿಧಿ- ಶಾಸ್ತ್ರೋಕ್ತಪ್ರಕಾರವಾಗಿ, ಕೌರವಂ-ಕುರುವಂಶೋತ್ಪನ್ನನಾದ, ಮಹಾರಾಜಂ-ಮಹಾರಾಜನಾದ ಜೀವಂಧರಸ್ವಾಮಿಯನ್ನು, ಗುರುಗೌರವಾತ್-ಗುರು-ಅಧಿಕವಾದ, ಗೌರವಾತ್-ಗುರುತ್ವವದೆಸೆಯಿಂದ, ಅಭ್ಯಷಿಂಚತ್-ಪಟ್ಟಾಭಿಷೇಕವಂ ಮಾಡಿದನು.

ತಾತ್ಪರ್ಯ ॥ ಅನಂತರದಲ್ಲಿ ಗೋವಿಂದರಾಜನೂ, ಸುದರ್ಶನಯಕ್ಷನೂ, ಇವರಿಬ್ಬರೂಸೇರಿ ಕುರುವಂಶೋತ್ಪನ್ನನಾದ ಮಹಾರಾಜನಾ

ದ ಜೀವಂಧರಕುಮಾರನನ್ನು ಬಹಳ ಗೌರವದದೆಸೆಯಿಂದ ರಾಜ್ಯಾಭಿಷೇಕವಂ ಮಾಡಿದರೆಂದರೆ.- ( ರಾಜಪುರೀಪಟ್ಟಣದ ಪಿತ್ರಾರ್ಜಿತ ರಾಜ್ಯಕ್ಕೆ ಪರಮಗೌರವವದೆಸೆಯಿಂದ ಜೀವಂಧರಸ್ವಾಮಿಗೆ ರಾಜ್ಯಾಭಿಷೇಕವಂ ಮಾಡಿದರೆಂದಭಿಪ್ರಾಯವು.) ॥ ೪೩ ॥

ಶ್ಲೋಕ॥ ಅಯಾದಾಪೃಚ್ಛ್ಯ ರಾಜೇಂದ್ರಂ
ಯಕ್ಷೇಂದ್ರೋಽಪಿ ಸ್ವಮಂದಿರಮ್ ।
ನಹ್ಯಾಸತ್ತ್ಯಾ ತು ಸಾಪೇಕ್ಷೋ
ಭಾನುಃ ಪದ್ಮವಿಕಾಸನೇ ॥೪೪॥

ಟೀ॥ ಯಕ್ಷೇಂದ್ರ-ಯಕ್ಷರಾಜನಾದ ಸುದರ್ಶನಯಕ್ಷನೂಕೂಡ, ರಾಜೇಂದ್ರಂ-ರಾಜಶ್ರೇಷ್ಠನಾದ ಜೀವಂಧರಮಹಾರಾಜನನ್ನು, ಆಪೃಚ್ಛ್ಯ-ಕೇಳಿಕೊಂಡು, ಸ್ವಮಂದಿರಂ-ತನ್ನ ಗೃಹವನ್ನು, ಅಯಾತ್- ಹೊಂದಿದನು., ಭಾನುಃ-ಸೂರ್ಯನು, ಪದ್ಮವಿಕಾಸನೇ-ಪದ್ಮ- ಕಮಲಗಳ, ವಿಕಾಸನೇ-ವಿಕಾಸಪಡಿಸೋಣದಲ್ಲಿ, ಆಸತ್ತ್ಯಾತು-ಸಮೀಪಸ್ಥಿತಿಯಿಂದಲಾದರೋ,ಸಾಪೇಕ್ಷ(ಸ್ಸ್ಯ)-ಅಪೇಕ್ಷೆಯೊಡಗೂಡಿದವನಾಗಿ, ನಹಿ-ಆಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ಸುದರ್ಶನ ಯಕ್ಷನೂಕೂಡ ಮಹಾರಾಜನಾದ ಜೀವಂಧರನನ್ನು ಕೇಳಿಕೊಂಡು ತನ್ನ ಮನೆಯನ್ನು ಹೊಂದಿದನು. ಸೂರ್ಯನು ಸಮೀಪದಲ್ಲಿದ್ದರೇನೆ ಕಮಲವನ್ನು ಅರಳಿಸುತ್ತಾನೆಂಬುವದಿಲ್ಲವಷ್ಟೆ ? ( ಸೂರ್ಯನು ಆಕಾಶದಲ್ಲಿ ಬಹಳ ದೂರದೊಳದ್ದುಕೊಂಡಲ್ಲವೆ ಭೂಮಿಯಲ್ಲಿರುವ ಕಮಲವನ್ನರಳಿಸುವನು ? ) ಹಾಗೆಯೇ ( ಸುದರ್ಶನಯಕ್ಷನು ಎಷ್ಟು ದೂರದಲ್ಲಿದ್ದಾಗೂ ಜೀವಂಧರಕುಮಾರನಲ್ಲಿ ಪರಮಪ್ರೀತಿಯನ್ನಿಟ್ಟಿರುವನೆಂದಭಿಪ್ರಾಯವು. ) ಕೃತಜ್ಞರ ಸ್ವಭಾವವೇ ಈರೀತಿಯಾದದ್ದು. ॥ ೪೪ ॥

ಶ್ಲೋಕ ॥ ತರ್ಪಿತಾಖಿಲಲೋಕೋಽಸ್ಮಾ-
ತ್ಸೌಧಾಭ್ಯಂತರಮಾಶ್ರಿತಃ ।
ಸಿಂಹಾಸನಮಲಂ ಚಕ್ರೇ
ರಾಜಸಿಂಹಃ ಕ್ರಮಾಗತಮ್ ॥೪೫॥

ಶ್ರೀ.

ಶ್ರೀಮದುಭಯ ಲಕ್ಷ್ಮೀರಮಣಾಯ ನಮಃ.

ಶ್ರೀ ಮ ದ್ವಾ ದೀ ಭ ಸಿಂ ಹ ಸೂ ರಿ ಎಂ ಬ

ಮಹಾಕವಿಯಿಂದ ವಿರಚಿತವಾದ

# ಕ್ಷತ್ರಚೂಡಾಮಣಿಕಾವ್ಯವು

ಬೆಂಗಳೂರು ಚಿಕ್ಕಪೇಟೆ ಪಾತ್ರೆಅಂಗಡಿ ಯ. ದೇವೇಂ
ದ್ರಪ್ಪನವರ ಕಾಳಶೆಟ್ಟಪ್ಪನವರ ಮಕ್ಕಳು
ಶಾಂತರಾಜೈಯ್ಯನವರಿಗಾಗಿ

ಮೇಲುಗೋಟೆ ಶ್ರೀನಿವಾಸೈಯ್ಯಂಗಾರ್ಯರವರಿಂದ ಕನ್ನಡ ಟೀಕಾ
ತಾತ್ಪರ್ಯವಂ ರಚಿಸಿ ಪರಿಶೋಧಿಸಲ್ಪಟ್ಟು


First Edition 1000 Copies.

ಬೆಂಗಳೂರು

ಸತ್ಸಂಪ್ರದಾಯ ಕಳಾನಿಧಿ ಮುದ್ರಾಕ್ಷರಶಾಲೆಯಲ್ಲಿಯೂ,
ಬೆಂಗಳೂರು ಬುಕ್‌ಡಿಪೋ ಮುದ್ರಾಕ್ಷರಶಾಲೆಯಲ್ಲಿಯೂ
ಮುದ್ರಾಪಿಸಿ ಪ್ರಚುರಿಸಲ್ಪಟ್ಟಿತು.

1900.




(ಕ್ರಯ ೧—೦—೦ ರೂ.)

ಟೀ॥ ತರ್ಪಿತಾಖಿಲಲೋಕಃ-ತರ್ಪಿತ-ತೃಪ್ತಿಪಡಿಸಲ್ಪಟ್ಟ, ಅಖಿಲ-ಸಮಸ್ತವಾದ, ಲೋಕಃ-ಲೋಕವುಳ್ಳಜೀವಂಧರಕುಮಾರನು, ಅಸ್ಮಾತ್-ಈ ಸ್ಥಾನದದೆಸೆಯಿಂದ, ಸೌಧಾಭ್ಯಂತರಂ-ಉಪ್ಪರಿಗೆಯಮಧ್ಯಪ್ರದೇಶವನ್ನು, ಆಶ್ರಿತಃ ಹೊಂದಿದವನು., ರಾಜಸಿಂಹಃ-ರಾಜಶ್ರೇಷ್ಠನಾದ ಜೀವಂಧರಸ್ವಾಮಿಯು, ಕ್ರಮಾಗತಂ-ಕುಲಕ್ರಮದಿಂದ ಬಂದಿರುವ, ಸಿಂಹಾಸನಂ-ಸಿಂಹಾಸನವನ್ನು, ಅಲಂಚಕ್ರೇ-ಅಲಂಕರಿಸಿದನು.

ತಾತ್ಪರ್ಯ॥ ತೃಪ್ತಿಪಡಿಸಲ್ಪಟ್ಟ ಸಮಸ್ತಪ್ರಜೆಗಳುಳ್ಳ ಜೀವಂಧರ ಮಹಾರಾಜನು, ಈ ಪಟ್ಟಾಭಿಷೇಕವಾದ ಸ್ಥಾನದ ದೆಸೆಯಿಂದ ಉಪ್ಪರಿಗೆಯ ಮಧ್ಯಪ್ರದೇಶವನ್ನು ಹೊಂದಿ, ತನ್ನ ಮುಕವರುಪರೆಯಿಂದಬಂದಿರುವ ಸಿಂಹಾಸನವನ್ನಲಂಕರಿಸಿದನು. ॥ ೪೫ ॥

ಶ್ಲೋಕ॥ ತದ್ವೃತ್ತಾಂತವಿತರ್ಕೋಽಭೂ-
ಲ್ಲೋಕೋ ವಿಸ್ಮಯಬೃಂಹಿತಃ ।
ಅತರ್ಕ್ಯಸಂಪದಾಪದ್ಭ್ಯಾಂ
ವಿಸ್ಮಯೋ ಹಿ ವಿಶೇಷತಃ ॥೪೬॥

ಟೀ॥ ತದ್ವೃತ್ತಾಂತವಿತರ್ಕಃ-ತತ್-ಆ ಜೀವಂಧರಸ್ವಾಮಿಯ, ವೃತ್ತಾಂತ-ವೃತ್ತಾಂತದ, ವಿತರ್ಕಃ-ಊಹೆಯುಳ್ಳ, ಲೋಕಃ-ಲೋಕವು, ವಿಸ್ಮಯಬೃಂಹಿತ (ಸ್ಸನ್)-ವಿಸ್ಮಯ- ಆಶ್ಚರ್ಯದಿಂದ, ಬೃಂಹಿತ(ಸ್ಸನ್) - ಅಭಿವೃದ್ಧಿಹೊಂದಿದಂಥಾದ್ದಾಗಿ, ಅಭೂತ್-ಆಯಿತು., ಅತರ್ಕ್ಯಸಂಪದಾಪದ್ಭ್ಯಾಂ-ಅತರ್ಕ್ಯ-ಆಲೋಚಿಸಲಶಕ್ಯವಾದ, ಸಂಪತ್-ಸಂಪತ್ತು, ಆಪದ್ಭ್ಯಾಂ-ಆಪತ್ತು ಇವುಗಳಿಂದ, ವಿಸ್ಮಯಃ-ಆಶ್ಚರ್ಯವು, ವಿಶೇಷತೋಹಿ-ವಿಶೇಷವಾಗಿ ಉಂಟಾಗುವುದಲ್ಲವೆ?.

ತಾತ್ಪರ್ಯ॥ ಜನಗಳು ಜೀವಂಧರನ ವೃತ್ತಾಂತವನ್ನಾಲೋಚಿಸಿ ಬಹಳಆಶ್ಚರ್ಯಪಟ್ಟರು. ಲೋಕದಲ್ಲಿಊಹಿಸಲಶಕ್ಯವಾದಸಂಪತ್ತಿನಿಂದಲೂ ವಿಪತ್ತಿನಿಂದಲೂ, ಅತ್ಯಾಶ್ಚರ್ಯವುಂಟಾಗುವುದು ಸ್ವಭಾವವಷ್ಟೆ? ॥೪೬॥

ಶ್ಲೋಕ॥ ಕ್ವ ಪೂಜ್ಯಂ ರಾಜಪುತ್ರತ್ವಂ
ಪ್ರೇತಾವಾಸೇ ಕ್ವ ವಾ ಜನಿಃ ।
ಕ್ವ ವಾ ರಾಜ್ಯೇ ಪುನಃ ಪ್ರಾಪ್ತಿ-
ರಹೋ ಕರ್ಮವಿಚಿತ್ರತಾ ॥೪೭॥

ಟೀ॥ ಪೂಜ್ಯಂ-ಶ್ರೇಷ್ಠವಾದ, ರಾಜಪುತ್ರತ್ವಂ-ರಾಜಕುಮಾರನಾಗಿರುವಿಕೆ

ಯು, ಕ್ವ-ಎಲ್ಲಿ?, ಪ್ರೇತಾವಾಸೇ-ಶ್ಮಶಾನವಲ್ಲಿ, ಜನಿಃ-ಉತ್ಪತ್ತಿಯು, ಕ್ವವಾ-ಎಲ್ಲಿ?, ರಾಜ್ಯೇ-ರಾಜ್ಯವಲ್ಲಿ, ಪುನಃ-ಮರಳಿಯೂ, ಪ್ರಾಪ್ತಿಃ-ಪ್ರಾಪ್ತಿಯು, ಕ್ವವಾ-ಎಲ್ಲಿ ?, ಕರ್ಮವಿಚಿತ್ರತಾ-ಕರ್ಮ-ಕರ್ಮದ,ವಿಚಿತ್ರತಾ ವಿಚಿತ್ರತೆಯು, ಅಹೋ-ಆಶ್ಚರ್ಯಕರವು!

ತಾತ್ಪರ್ಯ ॥ ಶ್ಲಾಘನೀಯವಾದ ಧೊರೆಮಗನಾಗಿರೋಣವುಎಲ್ಲಿ? ಇಂಥಾ ರಾಜಪುತ್ರನಿಗೆ ಶ್ಮಶಾನದಲ್ಲಿ ಜನನವೆಂಬುವುದು ಎಲ್ಲಿ? ಶತ್ರುಹಸ್ತಗತವಾದ ರಾಜ್ಯವು ತಿರಿಗಿ ಬರೋಣವೆಂಬುದು ಹೇಗೆ ಸಂಭವಿಸೀತು ? ಕರ್ಮದವಿಚಿತ್ರತೆಯು ಚಿಂತಿಸಲಶಕ್ಯವು ! ಈ ಸಮಸ್ತಕ್ಕೂ ಕರ್ಮವುಕಾರಣವೇಹೊರತು ಪ್ರಾಣಿಗಳ ಪೌರುಷವೇ ಮುಖ್ಯಕಾರಣವಲ್ಲವು.॥೪೭॥

ಶ್ಲೋಕ॥ ಪುಣ್ಯಪಾಪಾದೃತೇನಾನ್ಯ-
ತ್ಸುಖೇದುಃಖೇ ಚ ಕಾರಣಮ್ ।
ತನ್ತವೋ ನ ಹಿ ಲೂತಾಯಾಃ
ಕೂಪಪಾತ ನಿರೋಧಿನಃ ॥೪೮॥

ಟೀ ॥ ಪುಣ್ಯಪಾಪಾತ್-ಪುಣ್ಯಪಾಪರೂಪವಾದ ಕರ್ಮದದೆಸೆಯಿಂದ, ಋತೇ-ಹೊರತು, ಅನ್ಯತ್-ಮತ್ತೆಯಾವುದೂ, ಸುಖೇ-ಸುಖವಲ್ಲಿಯೂ, ದುಃಖೇಚ-ದುಃಖವಲ್ಲಿಯೂಕೂಡ, ಕಾರಣಂ-ಕಾರಣವಾಗಿ, ನ-ಇಲ್ಲವು., ಲೂತಾಯಾಃ-ಜಾಡರಹುಳುವಿನಗೂಡಿನ, ತಂತವಃ-ನೂಲುಗಳು, ಕೂಪಪಾತನಿರೋಧಿನ(ಸ್ಸಂತಃ)-ಕೂಪ-ಬಾವಿಯಲ್ಲಿ, ಪಾತ-ಬೀಳೋಣವನ್ನು, ನಿರೋಧಿನ(ಸ್ಸಂತಃ)- ತಡೆಯುವಂಥಾವುಗಳಾಗಿ, ನಹಿ-ಆಗುವುದಿಲ್ಲವಷ್ಟೆ?.

ತಾತ್ಪರ್ಯ ॥ ಲೋಕದಲ್ಲಿ ಪ್ರಾಣಿಗಳ ಸುಖದುಃಖಗಳಿಗೆ ಪುಣ್ಯಪಾಪಗಳು ಕಾರಣವೇಹೊರತು ಮತ್ತೆಯಾವುದೂ ಕಾರಣವಲ್ಲವು. ಹಾಳುಬಾವಿಗೆ ಮೇಲ್ಭಾಗದಲ್ಲಿ ಮುಚ್ಚಿಕೊಂಡಿರುವ ಜಾಡರಹುಳುವಿನ ಗೂಡಿನ ನೂಲುಗಳು ಬಾವಿಯಲ್ಲಿ ಬೀಳುವವನನ್ನು ತಡೆಯಲರ್ಹವಾಗುವುದೇ ? ಹಾಗೆ ( ಮನುಷ್ಯನಿಗೆ ಪಾಪಫಲವಾಗಿ ಪ್ರಾಪ್ತವಾದ ದುಃಖವು ಮತ್ತೆ ಯಾವಕಾರಣದಿಂದಲೂ ತಪ್ಪಿಸಿಕೊಳ್ಳಲಶಕ್ಯವೆಂದಭಿಪ್ರಾಯವು.) ॥ ೪೮ ॥

ಶ್ಲೋಕ ॥ ಪತತ್ಸು ಜಘಾಂಸುಮಾತ್ಮಾನಂ-
ಲೇಭೇ ರಾಜ್ಯಂ ಚ ಜಘಾಂಸವಃ ।

ಭಾವ್ಯವಶ್ಯಂ ಭವೇದೇವ
ನ ಹಿ ಕೇನಾಪಿ ರುಧ್ಯತೇ ॥೪೯॥

ಟೀ ॥ ಆತ್ಮಾನಂ-ತನ್ನನ್ನು, ಜಿಘಾಂಸುಃ-ಕೊಲ್ಲಬೇಕೆಂಬ ಅಪೇಕ್ಷೆಯುಳ್ಳವನಾದ ಕಾಷ್ಠಾಂಗಾರನನ್ನು, ಹತ್ವಾ-ಕೊಂದು, ಜಿಘಾಂಸತಃ-ಕೊಲ್ಲಲೋಸುಗ ಅಪೇಕ್ಷಿಸುತಲಿರುವ ಕಾಷ್ಠಾಂಗಾರನದೆಸೆಯಿಂದ, ರಾಜ್ಯಂ-ರಾಜ್ಯವನ್ನು, ಲೇಭೇ-ಪಡೆದನು., ಭಾವಿ-ಉತ್ತರತ್ರ ಉಂಟಾಗತಕ್ಕ ಫಲವು, ಅವಶ್ಯಂ-ಅವಶ್ಯವಾಗಿ, ಭವೇದೇವ-ಆಗಿಯೇ ಆಗುತ್ತದೆ., ಕೇನಾಪಿ-ಯಾವನಿಂದಲೂ, ನರುಧ್ಯತೇಹಿ-ತಡೆಯಲ್ಪಡುವುದಿಲ್ಲವಷ್ಟೆ?.

ತಾತ್ಪರ್ಯ ॥ ತನ್ನನ್ನುಕೊಂದು ರಾಜ್ಯವನ್ನು ಸಾಧಿಸಬೇಕೆಂಬದಾಗಿ ಭಾವಿಸಿದ್ದ ಶತ್ರುವಾದ ಕಾಷ್ಠಾಂಗಾರನನ್ನು ಸಂಹರಿಸಿ, ಜೀವಂಧರಸ್ವಾಮಿಯು ತಾನೇರಾಜ್ಯವಂ ಪಡೆದನು. ಉತ್ತರತ್ರ ಉಂಟಾಗತಕ್ಕ ಫಲವು ಅವಶ್ಯವಾಗಿ ಆಗಿಯೇ ಆಗುತ್ತದೆ. (ಬರತಕ್ಕ ಸುಖದುಃಖಗಳು ಯಾರಿಂದಲೂ ತಡೆಯಲ್ಪಡಲಾರವೆಂದಭಿಪ್ರಾಯವು. ॥ ೪೯ ॥

ಶ್ಲೋಕ ॥ ಜಿಜೀವಿಷಾಪ್ರಪಂಚೇನ
ಜಾತೋಽಯಂ ರಾಜ್ಞಿವಂಚಕಃ ।
ಕಾಷ್ಠಾಂಗಾರೋಽಪಿ ನಷ್ಟೋಽಭೂ-
ತ್ಸ್ವಯಂ ನಾಶೇ ಹಿ ನಾಶಕಃ ॥೫೦॥

ಟೀ ॥ ಅಯಂ ಕಾಷ್ಠಾಂಗಾರೋಪಿ-ಈ ಕಾಷ್ಠಾಂಗಾರನೂಕೂಡ, ಜಿಜೀವಿಷಾಪ್ರಪಂಚೇನ—ಜಿಜೀವಿಷಾ-ಜೀವಿಸಬೇಕೆಂಬ ಆಶೆಗಳ, ಪ್ರಪಂಚೇನ-ಸಮೂಹದಿಂದ, ರಾಜ್ಞಿ-ದೊರೆಯಾದ ಸತ್ಯಂಧರಮಹಾರಾಜನಲ್ಲಿಯೂ, ಜೀವಂಧರಕುಮಾರನಲ್ಲಿಯೂ, ವಂಚಕ(ಸ್ಸನ್)- ವಂಚಿಸುವವನಾಗಿ, ಜಾತಃ-ಆದನು., ಸ್ವಯಂ-ತಾನೇ, ನಷ್ಟ(ಸ್ಸನ್) - ನಾಶವನ್ನು ಹೊಂದಿದವನಾಗಿ, ಅಭೂತ್ - ಆದನು., ನಾಶಕಃ-ಮತ್ತೊಬ್ಬನಿಗೆ ದ್ರೋಹಮಾಡತಕ್ಕವನು, ಸ್ವಯಂ-ತಾನೇ, ನಾಶೇಹಿ-ನಾಶವನ್ನು ಹೊಂದುತ್ತಾನೆಯಷ್ಟೆ?.

---

* ಜಿಘಾಂಸಿತುಃ-ಎಂಬ ಪಾಠವು, ಸಮೀಚೀನವು. ಈ ಪಕ್ಷದಲ್ಲಿ ಅನ್ವಯ ಕ್ರಮವು, ಆತ್ಮಾನಂ-ಜಿಘಾಂಸುಂ, ಜಿಘಾಂಸಿತುಃ-ಕೊಲ್ಲಲೋಸುಗ ಇಚ್ಛೆಯುಳ್ಳ ಜೀವಂಧರಸ್ವಾಮಿಯನ್ನು, ಹತ್ವಾ—ರಾಜ್ಯಂ.ಲೇಭೇ.

ತಾತ್ಪರ್ಯ॥ ಬಹುಕಾಲ ನಿರ್ಬಾಧವಾಗಿ ಜೀವಿಸಬೇಕೆಂದು ಇಚ್ಛಿಸಿ ಜೀವಂಧರಸ್ವಾಮಿಯುಂ ಕೊಲ್ಲಲೋಸುಗ ಅನೇಕದ್ರೋಹಕೃತ್ಯಗಳಂ ಮಾಡಿದಂಥ ಕಾಷ್ಠಾಂಗಾರನು ತಾನೇ ನಾಶವನ್ನು ಹೊಂದಿದನು. ಮತ್ತೊಬ್ಬರನ್ನು ಕೊಂದು ತಾನು ಬದುಕಬೇಕೆಂದು ಅಪೇಕ್ಷಿಸುವ ಪುರುಷನು ತಾನೇ ನಷ್ಟನಾಗಿ ಹೋಗುತ್ತಾನಲ್ಲವೆ! ಈವಿಷಯದಲ್ಲಿ ಕಾಷ್ಠಾಂಗಾರನೇ ಉದಾಹರಣ ಪ್ರಾಯನು. ॥೫೦॥

ಶ್ಲೋಕ॥ ಯಕ್ಷಃ ಕ್ಷಣೋಪಕಾರೇಣ
ಪ್ರಾಣದಾಯೀ ಬಭೂವ ಸಃ ।
ಕಾಷ್ಠಾಂಗಾರಃ ಕೃತಘ್ನೋಽಭೂ-
ತ್ಸ್ವಭಾವೋ ನ ಹಿ ವಾರ್ಯತೇ ॥೫೧॥

ಟೀ ॥ ಸಃ-ಆ ಸುದರ್ಶನನೆಂದು ಪ್ರಸಿದ್ಧನಾದ, ಯಕ್ಷಃ-ಯಕ್ಷನು, ಕ್ಷಣೋಪಕಾರೇಣ-ಕ್ಷಣ-ಕ್ಷಣಕಾಲದಲ್ಲಿ ಮಾಡಲ್ಪಟ್ಟ, ಉಪಕಾರೇಣ- ಉಪಕಾರದಿಂದ, ಪ್ರಾಣದಾಯೀ(ಸನ್)-ಪ್ರಾಣಪ್ರದನಾಗಿ, ಬಭೂವ-ಆದನು., ಕಾಷ್ಠಾಂಗಾರಃ-ಕಾಷ್ಠಾಂಗಾರನು, ಕೃತಘ್ನ(ಸ್ಸನ್)- ಉಪಕಾರಿಯಾದ ಸತ್ಯಂಧರ ಮಹಾರಾಜನಿಗೆ ಅಪಕಾರಿಯಾಗಿ, ಅಭೂತ್-ಆದನು., ಸ್ವಭಾವಃ-ಸ್ವಭಾವವು, ನವಾರ್ಯತೇಹಿ- ತಡೆಯಲ್ಪಡುವುದಿಲ್ಲವಷ್ಟೆ ?.

ತಾತ್ಪರ್ಯ ॥ ಪೂರ್ವದಲ್ಲಿ ಶ್ವಾನನಾಗಿದ್ದು ಮರಣಸಮಯದಲ್ಲಿ ಜೀವಂಧರಸ್ವಾಮಿಯಿಂದುಪದೇಶಿಸಲ್ಪಟ್ಟ ಪಂಚಪರಮೇಷ್ಠಿಮಂತ್ರ ಪ್ರಭಾವದಿಂದ ದೇವನಾದ ಸುದರ್ಶನಯಕ್ಷನು, ಜೀವಂಧರಸ್ವಾಮಿಯು ಒಂದು ಕ್ಷಣಮಾತ್ರದಲ್ಲಿ ಮಾಡಿದ ಉಪಕಾರಕ್ಕೆ ಕೃತಜ್ಞನಾಗಿ ಜೀವಂಧರಕುಮಾರನಿಗೆ ಪ್ರಾಣಾಪತ್ಸಮಯದಲ್ಲಿ ಪ್ರಾಣವನ್ನೇ ಕೊಡುವಂಥಾವನಾದನು. ಕಾಷ್ಠಾಂಗಾರನೋ ಎಂದರೆ, ಆಪ್ತರಾದ ಮಂತ್ರಿಗಳ ಮಾತನ್ನೂ ಕೂಡ ಮೀರಿ ಪರಮವಿಶ್ವಾಸದಿಂದ ತನಗೆ ರಾಜ್ಯವಂ ಕೊಟ್ಟ ಸತ್ಯಂಧರಮಹಾರಾಜನನ್ನು ಕೊಂದನು. ಇದಕ್ಕೆ ಸ್ವಭಾವವೇ ಕಾರಣವು. ಸ್ವಭಾವವು ಯಾರಿಂದಲೂ ತಡೆಯಲಶಕ್ಯವು. ॥ ೫೧ ॥

ಶ್ಲೋಕ॥ ಅಪಕಾರೋಪಕಾರಾಭ್ಯಾಂ
ಸದಸಂತೌ ನ ಭೇದಿನೌ ।

ದಗ್ಧಂ ಚ ಭಾತಿ ಕಲ್ಯಾಣಂ
ಕೇನಾಂಗಾರವಿಶುದ್ಧತಾ ॥೫೨॥

ಟೀ ॥ ಅಪಕಾರೋಪಕಾರಾಭ್ಯಾಂ- ಅಪಕಾರವೂ, ಉಪಕಾರವೂ, ಇವುಗಳಿಂದ, ಸದಸಂತೌ-ಸತ್ಪುರುಷರೂ, ಅಸತ್ಪುರುಷರೂ ನಭೇದಿನೌ- ಸ್ವಭಾವದಿಂದ ಭೇದವನ್ನು ಹೊಂದುವುದಿಲ್ಲವು., ಕಲ್ಯಾಣಂ-ಭಂಗಾರವು, ದಗ್ಧಂ ಚ - ದಹಿಸಲ್ಪಟ್ಟಾಗ್ಯೂಕೂಡ, ಭಾತಿ-ಪ್ರಕಾಶಿಸುತ್ತಲಿದೆ., ಅಂಗಾರವಿಶುದ್ಧತಾ- ಅಂಗಾರ-ಇಜ್ಜಲಿಗೆ, ವಿಶುದ್ಧತಾ-ನೈರ್ಮಲ್ಯವು (ವಿಶೇಷವಾಗಿ ಶುದ್ಧಿಯು ಬಿಳುಪುಬಣ್ಣವು), ಕೇನ-ಯಾತರಿಂದ ಉಂಟಾದೀತು ?.

ತಾತ್ಪರ್ಯ ॥ ಸತ್ಪುರುಷರು ಅಪಕಾರಿಗೂಕೂಡ ಉಪಕಾರವಂ ಮಾಡುವರೇಹೊರತು ಅಪಕಾರವಂ ಮಾಡರು. ಇವರು ಎಲ್ಲರಿಗೂ ಉಪಕಾರಮಾಡುವುದೇ ಸ್ವಭಾವವಾಗಿವುಳ್ಳವರಾದುದರಿಂದ ಎಲ್ಲಿಯೂ ಇವರಸ್ವಭಾವವು ಭೇದಿಸುವುದಿಲ್ಲವು. ದುರ್ಜನರು ಸರ್ವತ್ರ ಅಪಕಾರಮಾಡುವುದೇ ಸ್ವಭಾವವಾದುದರಿಂದ ಉಪಕಾರಿಗೂಕೂಡ ಅಪಕಾರವನ್ನೇ ಮಾಡುವರು. ಇವರಸ್ವಭಾವವು ವ್ಯತ್ಯಾಸವಾಗದೇ ಇರುವುದಕ್ಕೆ ಉದಾಹರಣ.- ಭಂಗಾರವನ್ನು ಪುಟಕ್ಕೆಹಾಕಿದರೆ ಎಷ್ಟು ದಹಿಸಲ್ಪಟ್ಟಾಗ್ಯೂ ಪ್ರಕಾಶಿಸುತ್ತದೆಯೋಹೊರತು ಕಾಂತಿಹೀನವಾಗುವುದಿಲ್ಲವಷ್ಟೆ ? ಇಜ್ಜಲು ಏನೇನುಮಾಡಿದಾಗ್ಯೂ ಕಡೆಗೆ ಕಪ್ಪಾಗಿಯೇ ಇರುವುದೇ ಹೊರತು ನೈರ್ಮಲ್ಯವುಂಟಾಗುವುದೇ ? (ಸತ್ಪುರುಷರುಭಂಗಾರದಂತೆಯೂ, ದುರ್ಜನರು ಇಜ್ಜಲಿನಂತೆಯೂ ಎಂದಭಿಪ್ರಾಯವು. ) ॥ ೫೨ ॥

ಶ್ಲೋಕ॥ ರಿಕ್ತಾರಿಕ್ತದಶಾಯಾಂ ಚ
ಸದಸಂತೌ ನಭೇದಿನೌ ।
ಖಾತಾಪಿ ಹಿ ನದೀ ದತ್ತೇ
ಪಾನೀಯಂ ನ ಪಯೋನಿಧಿಃ ॥೫೩॥

ಟೀ ॥ ರಿಕ್ತಾರಿಕ್ತದಶಾಯಾಂ ಚ-ದಾರಿದ್ರ್ಯದಶೆಯಲ್ಲಿಯೂ, ಸಂಪತ್ಸಮೃದ್ಧಿದಶೆಯಲ್ಲಿಯೂಕೂಡ, ಸದಸಂತೌ-ಸುಜನರೂ, ದುರ್ಜನರೂ ಇವರುಗಳು, ನಭೇದಿನೌ-ಒಂದೇ ಸ್ವಭಾವವುಳ್ಳವರು, ಖಾತಾಪಿ-ಅಗೆಯಲ್ಪಟ್ಟಾಗ್ಯೂ, ನದೀ-ನದಿಯು, ಪಾನೀಯಂ-ನೀರನ್ನು, ದತ್ತೇ-ಕೊಡುತ್ತಲಿದೆ., ಪಯೋನಿಧಿಃ- ಸಮು

ದ್ರವು, ಪಾನೀಯಂ-ನೀನೀರನ್ನು, ನಾದತ್ತೇ-ಕೊಡುವುದಿಲ್ಲವು.

ತಾತ್ಪರ್ಯ॥ ಸತ್ಪುರುಷರು ತಮಗೆಷ್ಟುಬಡತನ ಬಂದಾಗ್ಯೂ ತಮ್ಮ ಉತ್ತಮಸ್ವಭಾವವಂ ಬಿಡರು. ದುರ್ಜನರಿಗೆ ಎಷ್ಟು ಐಶ್ವರ್ಯ ಬಂದಾಗ್ಯೂ ತಮ್ಮ ನೀಚಸ್ವಭಾವವಂ ಬಿಡರು. ಇದಕ್ಕೆ ದೃಷ್ಟಾಂತವು.— ಹೊಳೆಯಲ್ಲಿ ನೀರೇಇಲ್ಲದಕಾಲದಲ್ಲಿ ಎಷ್ಟುಅಗೆದಾಗ್ಯೂ ಸೀನೀರೇ ದೊರೆಯುತ್ತದೆ. ಸಮುದ್ರದಲ್ಲಿ ನೀರು ಸರ್ವದಾ ಸಮೃದ್ಧವಾಗಿದ್ದಾಗ್ಯೂ ಉಪ್ಪುನೀರೇ ದೊರೆಯುತ್ತದೆ. ಹಾಗೆ ನದಿಯಂತೆ ಸತ್ಪುರುಷರಿಗೆಷ್ಟು ಬಡತನ ಬಂದಾಗ್ಯೂ ಅಪಕಾರಮಾಡಿದವನಿಗೂಕೂಡ ಉಪಕಾರವಮಾಡುವುದೇ ಸ್ವಭಾವವು. ದುರ್ಜನರು ಸಮುದ್ರದಂತೆ ಸಂಪತ್ಪರಿಪೂರ್ಣರಾಗಿದ್ದಾಗ್ಯೂ ಉಪಕಾರಮಾಡಿದವನಿಗೂಕೂಡ ಅಪಕಾರವನ್ನೇ ಮಾಡುವರೇ ಹೊರತು ಉಪಕರಿಸರು. ॥ ೫೩ ॥

ಶ್ಲೋಕ॥ ಇತೀಯಂ ಕಿಂವದಂತೀವ
ತದ್ದೇಶೇ ಶಂ ವದಾಪ್ಯಭೂತ್ ।
ರಾಜನ್ವತೀಸತೀ ಭೂಮಿಃ
ಕುತೋ ವಾ ನ ಸುಖಾಯತೇ ॥೫೪॥

ಟೀ॥ ಇತಿ-ಈಪ್ರಕಾರವಾಗಿ, ಇಯಂ ಕಿಂವದಂತೀವ- ಈ ಜನವಾಕ್ಯವೊ(ಪಾ)ದಿಯಲ್ಲಿ, ತದ್ದೇಶೇ-ಆದೇಶದಲ್ಲಿ, ಭೂಮಿಃ-ಭೂಮಿಯು, ಶಂವದಾಪಿ-ಸುಖವನ್ನುಹೇಳುವಂಥಾದ್ದಾಗಿಯೂ (ಲೋಕಕ್ಷೇಮಸೂಚಕವಾಗಿಯೂ), ಅಭೂತ್- ಆಯಿತು., ರಾಜನ್ವತೀ- ಒಳ್ಳೇರಾಜನುಳ್ಳ, ಸತೀ-ಶ್ರೇಷ್ಠವಾದ, ಭೂಮಿಃ-ಭೂಮಿಯು, ಕುತಃ ವಾ-ಯಾವಕಾರಣವದೆಸೆಯಿಂದತಾನೇ, ನಸುಖಾಯತೇ-ಸುಖಕರವಾಗುವದಿಲ್ಲವು.

ತಾತ್ಪರ್ಯ॥ ಈ ಪೂರ್ವೋಕ್ತಪ್ರಕಾರವಾದ ಒಳ್ಳೇಜನವಾಕ್ಯವ್ರೋ(ಪಾ)ದಿಯಲ್ಲಿ ಆ ರಾಜಪುರೀಪಟ್ಟಣವು ಶುಭಸೂಚಕವಾಗಿಯೇ (ಸುಖವನ್ನುಹೇಳುವುದಾಗಿಯೆ) ಆಯಿತು. ಒಳ್ಳೇ ರಾಜನುಳ್ಳ ಭೂಮಿಯು ಯಾವಕಾರಣದ ದೆಸೆಯಿಂದ ಸುಖವನ್ನುಂಟುಮಾಡುವದಿಲ್ಲವು. (ಸುಖವನ್ನೇ ಉಂಟುಮಾಡುವುದೆಂದಭಿಪ್ರಾಯವು.) ॥೫೪ ॥

ಶ್ಲೋಕ॥ ಕಾಷ್ಠಾಂಗಾರಕುಟುಂಬಸ್ಯ-
ಸ್ಯಾನುಸೇನೇ ಸುಖಾಸುಕಾಮ್ ।

ಸ್ವಸ್ಥಾನೇಽಪಿ ಮಹಾರಾಜೋ
ನಹ್ಯಸ್ಥಾನೇಽಪಿ ರುಟ್ಸತಾಮ್ ॥೫೫॥

ಟೀ ॥ ಮಹಾರಾಜಃ-ಜೀವಂಧರ ಮಹಾರಾಜನು, ಸ್ವಸ್ಥಾನೇಪಿ–ಸ್ವ - ತನ್ನ, ಸ್ಥಾನೇಪಿ-ಸ್ಥಾನವಾದ ರಾಜಪುರೀಪಟ್ಟಣದಲ್ಲಿಯೂಕೂಡ, ಕಾಷ್ಠಾಂಗಾರಕುಟುಂಬಸ್ಯಾಪಿ–ಕಾಷ್ಠಾಂಗಾರ-ಕಾಷ್ಠಾಂಗಾರನ, ಕುಟುಂಬಸ್ಯಾಪಿ-ಹೆಂಡತಿ ಮಕ್ಕಳಿಗೂ ಕೂಡ, ಸುಖಾಸಿಕಾಂ-ಸುಖಜೀವನವನ್ನು (ಸುಖಸ್ಥಿತಿಯನ್ನು), ಅನುಮೇನೇ- ಸಮ್ಮತಿಸಿದನು., ಅಸ್ಥಾನೇ-ವಿರೋಧವಮಾಡುವುದಕ್ಕೆ ಯೋಗ್ಯಸ್ಥಾನವಲ್ಲದೆಯೂ,ದಯೆಗೆಯೋಗ್ಯವಾಗಿಯೂ ಇರುವ ಸ್ಥಾನದಲ್ಲಿ, ಸತಾಂ-ಸತ್ಪುರುಷರಿಗೆ, ರುಟ್-ಕೋಪವು, ನಹಿ- ಉಂಟಾಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ಜೀವಂಧರಮಹಾರಾಜನು ತನ್ನ ಪಟ್ಟಣದಲ್ಲಿಯೇ ಕಾಷ್ಠಾಂಗಾರನ ಪತ್ನೀಪುತ್ರಾದಿ ಪೋಷ್ಯವರ್ಗವು ಸುಖದಿಂದ ಇರಲೆಂದುಸಮ್ಮತಿಸಿದನು. ಸತ್ಪುರುಷರಿಗೆ ಸ್ಥಾನವಲ್ಲದ ಸ್ಥಾನದಲ್ಲಿ ವೈರವುಂಟಾಗುವುದಿಲ್ಲವಷ್ಟೆ ? ಕೋಪವುಂಟಾಗುವುದಿಲ್ಲವಷ್ಟೆ? (ಮಹಾರಾಜದ್ರೋಹಿಯಾದ ಕಾಷ್ಠಾಂಗಾರನು ವೈರವಿಡುವುದಕ್ಕೆ ತಕ್ಕ ಸ್ಥಾನವಾದುದರಿಂದ ಜೀವಂಧರಮಹಾರಾಜನು ವಿರೋಧವಂಮಾಡಿದುದುಚಿತವು. (ಶತ್ರುವಾದ ಕಾಷ್ಠಾಂಗಾರನ ಮರಣಾನಂತರ ವೈರವು ತೀರಿಹೋದುದರಿಂದ ಅನಾಥರಾಗಿಯೂ, ದಯಾಯೋಗ್ಯರಾಗಿಯೂ ಇರುವ ಅವನ ಕುಟುಂಬವು ದಯಾಳುವಾದ ಜೀವಂಧರಮಹಾರಾಜನು ರಕ್ಷಿಸಿದನೆಂಬುವುದುಚಿತವೇಸರಿಯೆಂದಭಿಪ್ರಾಯವು.) ॥೫೫॥

ಶ್ಲೋಕ॥ ಯೌವರಾಜ್ಯೇಽಪಿ ನಂದಾಢ್ಯಂ
ವೃದ್ಧಕ್ಷತ್ರೋಚಿತೇ ಪದೇ ।
ಗಂಧೋತ್ಕಟಂ ಚ ಚಕ್ರೇಽಸೌ
ಲೋಕವಂದ್ಯೇ ಚ ಮಾತರೌ ॥೫೬॥

ಟೀ ॥ ಅಸೌ-ಈ ಜೀವಂಧರಮಹಾರಾಜನು, ಯೌವರಾಜ್ಯೇಪಿ- ಯುವರಾಜಾಧಿಕಾರದಲ್ಲಿಯೂ, ನಂದಾಢ್ಯಂ-ನಂದಾಢ್ಯನನ್ನು, ವೃದ್ಧಕ್ಷತ್ರೋಚಿತೇ—ವೃದ್ಧ-ಮುದುಕನಾದ, ಕ್ಷತ್ರ-ದೊರೆಗೆ, ಉಚಿತೇ-ಯೋಗ್ಯವಾದ, ಪದೇ- ಸ್ಥಾನದಲ್ಲಿ, ಗಂಧೋತ್ಕಟಂ ಚ-ಗಂಧೋತ್ಕಟಶ್ರೇಷ್ಠಿಯನ್ನು, ಮಾತರೌ - ತಾಯಿಗಳಾದ ವಿ

ಜಯಾದೇವಿಯನ್ನೂ, ಸುನಂದಾದೇವಿಯನ್ನೂ, ಲೋಕವಂದ್ಯೇ-ಲೋಕ-ಸಮಸ್ತ ಜನಗಳಿಂದಲೂ, ವಂದ್ಯೇ-ಪೂಜಿಸಲ್ಪಡತಕ್ಕ ಯೋಗ್ಯವಾದ, ಪದೇ ಚ- ಸ್ಥಾನದಲ್ಲಿ ಯೂಕೂಡ, ಚಕ್ರೇ-ಮಾಡಿದನು.

ತಾತ್ಪರ್ಯ || ಈ ಜೀವಂಧರಮಹಾರಾಜನು, ತನ್ನ ತಮ್ಮನಾದ ನಂದಾಢ್ಯನನ್ನು ಯುವರಾಜಾಧಿಕಾರದಲ್ಲಿಯೂ, ವೃದ್ಧನಾದ ಕ್ಷತ್ರಿಯನಿ ಗುಚಿತವಾದ ಸ್ಥಾನದಲ್ಲಿ ಗಂಧೋತ್ಕಟಶ್ರೇಷ್ಠಿಯನ್ನೂ, ತಾಯಿಗಳಾದ ವಿಜಯಾದೇವಿ ಸುನಂದಾದೇವಿಯರನ್ನೂ ಲೋಕಪೂಜ್ಯವಾದ ಸ್ಥಾನದಲ್ಲಿಯೂ, ಇಟ್ಟು ರಾಜ್ಯಪರಿಪಾಲನವಂ ಮಾಡಿದನು. || ೫೭ |

ಶ್ಲೋಕ|| ಅಕರಾಮಕರೋದ್ಧಾತ್ರೀಂ
ವರ್ಷಾಣಿ ದ್ವಾದಶಾಪ್ಯಯಮ್ |
ಮಹಿಷ್ಯೈಃ ಕ್ಷುಭಿತಂ ತೋಯಂ
ನ ಹಿ ಸದ್ಯಃ ಪ್ರಸೀದತಿ ||೫೮||

ಟೀ || ಅಯಂ-ಈ ಜೀವಂಧರಮಹಾರಾಜನು, ದ್ವಾದಶ- ಹನ್ನೆರಡಾದ, ವರ್ಷಾಣಿ-ವರ್ಷಗಳಲ್ಲಿ, ಧಾತ್ರೀಂ-ಭೂಮಿಯನ್ನು, ಅಕರಾಂ(ಸತೀಂ)-ಕಂದಾಯವಿಲ್ಲದೇ ಇರುವಂಥಾದ್ದನ್ನಾಗಿ, ಅಕರೋತ್-ಮಾಡಿದನು., ಮಹಿಷ್ಯೈಃ-ಎಮ್ಮೆಗಳಿಂದ, ಕ್ಷುಭಿತಂ-ಕಲಕಲ್ಪಟ್ಟ, ತೋಯಂ-ನೀರು, ಸದ್ಯಃ-ಆ ಕ್ಷಣದಲ್ಲಿಯೇ, ನಪ್ರಸೀದತಿ ಹಿ-ತಿಳಿಯಾಗುವುದಿಲ್ಲವಷ್ಟೆ?.

ತಾತ್ಪರ್ಯ || ಈ ಪರಮಧಾರ್ಮಿಕನಾದ ಜೀವಂಧರ ಮಹಾರಾಜನು ಭೂಮಿಗೆ ಹನ್ನೆರಡುವರ್ಷಗಳ ಪರ್ಯಂತವೂ ಕಂದಾಯವಿಲ್ಲದೆ ಪ್ರಜೆಗಳು ಅನುಭವಿಸುವಂತೆ ಆಜ್ಞೆ ಮಾಡಿದನು. ಎಮ್ಮೆಗಳಿಂದ ಕಲಕಲ್ಪಟ್ಟ ಕೊಳದನೀರು ಶೀಘ್ರವಾಗಿ ತಿಳಿಯಾಗುವುದಿಲ್ಲವಷ್ಟೆ ? ಅದರಂತೆ ನಿರ್ದಯನಾದ(ಕಾಷ್ಠಾಂಗಾರನಿಂದ ಬಾಧಿಸಲ್ಪಟ್ಟ ಪ್ರಜೆಗಳಿಗೆ ಶೀಘ್ರವಾಗಿ ಪೂರ್ವಸ್ಥಿತಿಯುಬರಲಾರದೆಂದು ಯೋಚಿಸಿ ದೀರ್ಘಕಾಲ ಅವಕಾಶವಂ ಕೊಟ್ಟನೆಂದಭಿಪ್ರಾಯವು. ) | ೫೮ ||

ಶ್ಲೋಕ|| ಸದ್ಮವಕ್ತ್ರಾದಿ ಪುತ್ರೇಭ್ಯೋ
ಯಥಾಯೋಗ್ಯಮದಾತ್ಸದಮ್ |

ಅವಿಶೇಷಪರಿಜ್ಞಾನೇ
ನ ಹಿ ಲೋಕೋಽನುರಜ್ಯತಿ ॥೫೮॥

ಟೀ ॥ ಪದ್ಮವಕ್ತ್ರಾದಿಪುತ್ರೇಭ್ಯಃ—ಪದ್ಮವಕ್ತ್ರ-ಪದ್ಮಾಸ್ಯನೇ, ಆದಿ- ಮೊದಲಾಗಿವುಳ್ಳ, ಪುತ್ರೇಭ್ಯಃ-ಗಂಧೋತ್ಕಟಶ್ರೇಷ್ಠಿಯು ಸಾಕಿದ ಪುತ್ರರಿಗೋಸುಗ, ಯಥಾಯೋಗ್ಯಂ-ಅವರವರಯೋಗ್ಯತೆಗೆ ತಕ್ಕದಾದ, ಪದಂ-ಅಧಿಕಾರವನ್ನು, ಅದಾತ್-ಕೊಟ್ಟನು., ಅವಿಶೇಷಪರಿಜ್ಞಾನೇ-ವಸ್ತುತಾರತಮ್ಯಜ್ಞಾನವಿಲ್ಲದ ಪಕ್ಷದಲ್ಲಿ, ಲೋಕಃ-ಜನವು, ನಾನುರಜ್ಯತಿ ಹಿ-ಪ್ರೀತಿಪಡುವುದಿಲ್ಲವಷ್ಟೆ?.

ತಾತ್ಪರ್ಯ ॥ ಜೀವಂಧರಮಹಾರಾಜನು, ಪದ್ಮಾಸ್ಯನೇಮೊದಲಾದ ಪುತ್ರರಿಗೋಸುಗ ಅವರವರ ಯೋಗ್ಯತೆಗೆ ತಕ್ಕಹಾಗೆ ಅಧಿಕಾರವಂ ಕೊಟ್ಟನು. ತಾರತಮ್ಯ ಜ್ಞಾನವಿಲ್ಲದ ಪುರುಷನಲ್ಲಿ ಜನವು ಪ್ರೀತಿಪಡುವುದಿಲ್ಲವಷ್ಟೆ? (ಮುಖ್ಯವಾಗಿ ಆಳತಕ್ಕ ಪ್ರಭುವಿಗೆ ತಾರತಮ್ಯ ಜ್ಞಾನವೇ ಪ್ರಜಾನುರಾಗಕಾರಣವೆಂದಭಿಪ್ರಾಯವು.) ॥ ೫೮ ॥

ಶ್ಲೋಕ॥ ಪದ್ಮಾದಯೋಽಪಿ ತದ್ದೇವ್ಯ-
ಸ್ಸಮಾಗತ್ಯ ತದಾಜ್ಞಯಾ ।
ತಂ ಸವೀಕ್ಷ್ಯ ಕ್ಷಣೇ ಚಾಸನ್
ಕ್ಷೀಣಾಖಿಲ ಮನೋವ್ಯಥಾಃ ॥ ೫೯॥

ಟೀ॥ ಪದ್ಮಾದಯಃ—ಪದ್ಮಾದೇವಿಯೇ ಮೊದಲಾಗಿವುಳ್ಳ, ತದ್ದೇವ್ಯೋಽಪಿ-ಆ ಜೀವಂಧರಸ್ವಾಮಿಯ ಪತ್ನಿಯರೂ ಕೂಡ, ತದಾಜ್ಞಯಾ-ಆ ಜೀವಂಧರ ಮಹಾರಾಜನ ಆಜ್ಞೆಯಿಂದ, ಸಮಾಗತ್ಯ-ಬಂದು, ತಂ-ಆ ಪತಿಯಾದ ಜೀವಂಧರಮಹಾರಾಜನನ್ನು, ಸವೀಕ್ಷ್ಯ-ನೋಡಿ, ಕ್ಷಣೇ ಚ-ಕ್ಷಣಕಾಲದಲ್ಲಿಯೂ ಕೂಡ, ಕ್ಷೀಣಾಖಿಲಮನೋವ್ಯಥಾ(ಸ್ಸತ್ಯಃ)—ಕ್ಷೀಣ-ನಷ್ಟವಾದ, ಅಖಿಲ- ಸಮಸ್ತವಾದ, ಮನೋವ್ಯಥಾ(ಸ್ಸತ್ಯಃ)-ಪತಿವಿರಹಪ್ರಯುಕ್ತವಾದ ದುಃಖವುಳ್ಳವರಾಗಿ, ಆಸನ್-ಇದ್ದರು.

ತಾತ್ಪರ್ಯ ॥ ಪದ್ಮಾದೇವಿಯೇ ಮೊದಲಾದ ಆ ಜೀವಂಧರಮಹಾರಾಜನ ಪತ್ನಿಯರೂಕೂಡ ಪತಿಯ ಆಜ್ಞಾನುಸಾರವಾಗಿ ಬಂದು ಆ ಪತಿಯಾದ ಜೀವಂಧರಭೂಪತಿಯನ್ನು ನೋಡಿ, ಬಹುಕಾಲದಿಂದಿರುತ್ತಿದ್ದ ಪತಿವಿರಹಪ್ರಯುಕ್ತವಾದ ಮನೋದುಃಖಗಳಂ ಕ್ಷಣಮಾತ್ರದಿಂದಲೇ ಬಿಟ್ಟು ಅತ್ಯಂತ ಸಂತುಷ್ಟರಾದರು. ॥ ೫೯ ॥

ಶ್ಲೋಕ॥ ಚಿರಸ್ಥಾಯ್ಯಪಿ ನಷ್ಟಂ ಸ್ಯಾ-
ದ್ವಿರುದ್ಧಾರ್ಥೇ ಹಿ ವೀಕ್ಷಿತೇ।
ಸನ್ನಿಧಾವಪಿ ದೀಪಸ್ಯ
ಕಿಂ ತಮಿಸ್ರಂ ಗುಹಾಮುಖಮ್ ।೬೦॥

ಟೀ॥ ವಿರುದ್ಧಾರ್ಥೇ-ವಿರುದ್ಧ-ವಿರೋಧಿಯಾದ, ಅರ್ಥೇ-ವಸ್ತುವು, ವೀಕ್ಷಿತೇ(ಸತಿ)-ನೋಡಲ್ಪಡುತ್ತಿರಲಾಗಿ, ಚಿರಸ್ಥಾಯ್ಯಪಿ- ಬಹುಕಾಲದಿಂದಿರುತಲಿದ್ದ ವಸ್ತುವೂ ಕೂಡ, ನಷ್ಟಂ(ಸತ್)-ನಾಶವನ್ನು ಹೊಂದಿದಂಥಾದ್ದಾಗಿ, ಸ್ಯಾದ್ಧಿ- ಆದೀತಲ್ಲವೆ ?, ದೀಪಸ್ಯ-ದೀಪದ, ಸನ್ನಿಧಾವಪಿ-ಸಮೀಪದಲ್ಲಿಯೂಕೂಡ, ಗುಹಾಮುಖಂ-ಗುಹಾ-ಗುಹೆಯ, ಮುಖಂ-ಮುಂಭಾಗವು, ತಮಿಸ್ರಂ ಕಿಂ-ಕತ್ತಲೆಯುಳ್ಳದ್ದಾಗಿದ್ದೀತೇನು ?.

ತಾತ್ಪರ್ಯ॥ ವಿರೋಧಿಯಾದ ಅರ್ಥವು ನೋಡಲ್ಪಡುತ್ತಿರಲಾಗಿ ಬಹುಕಾಲದಿಂದಿರುತ್ತಿದ್ದ ವಸ್ತುವೂಕೂಡ ನಿವರ್ತಿಸುತ್ತದೆ. ( ಪದ್ಮಾದೇವಿಯೇ ಮೊದಲಾದ ಪತ್ನಿಯರಿಗೆ ಪತಿಯಾದ ಜೀವಂಧರ ಸ್ವಾಮಿಯ ದರ್ಶನವಿಲ್ಲದ್ದರಿಂದುಂಟಾಗಿದ್ದ ಶೋಕವು ಅದಕ್ಕೆವಿರುದ್ಧಾರ್ಥವಾದ ಜೀವಂಧರಸ್ವಾಮಿಯ ದರ್ಶನಮಾತ್ರದಿಂದಲೇ ಹೋಯಿತೆಂದರ್ಥವು. ( ಇದಕ್ಕೆ ದೃಷ್ಟಾಂತವೇನೆಂದರೆ.— ಕೈಯಲ್ಲಿ ದೀಪವನ್ನು ಹಿಡಿದುಕೊಂಡಿರುವ ಪುರುಷನಿಗೆ ಆವಾಗಲೂ ಗುಹೆಯಬಾಗಲು ಕತ್ತಲೆಮಯವಾಗಿಯೇ ಇದ್ದೀತೇ ? ಹಾಗೆ ಸುಖಕಾರಣವಾದ ವಸ್ತುವು ಸಮೀಪದಲ್ಲಿರುವಾಗ್ಯೆ ಚಿರಕಾಲದಿಂದುಂಟಾಗಿದ್ದ ದುಃಖವಾದರೂ ನಿಂತೀತೇ ? ಎಂದಭಿಪ್ರಾಯವು. ) ॥ ೬೦ ॥

ಶ್ಲೋಕ॥ ಅಥಾಯಂ ವಿನತೇಃ ಪುತ್ರೀಂ
ದತ್ತಾಂ ಗೋವಿಂದಭೂಭುಜಾ।
ಪರ್ಯಣೈಷ್ಟ ಮಹಾರಾಜಃ
ಪಾರ್ಥಿವೈರ್ವಿಹಿತೋತ್ಸವಃ ॥೬೧॥

ಟೀ॥ ಅಥ-ಅನಂತರದಲ್ಲಿ, ಮಹಾರಾಜಃ-ಮಹಾರಾಜನಾದ, ಅಯಂ-ಈಜೀವಂಧರಸ್ವಾಮಿಯು, ಗೋವಿಂದಭೂಭುಜಾ-ಗೋವಿಂದಮಹಾರಾಜನಿಂದ, ದತ್ತಾಂ-ಕೊಡಲ್ಪಟ್ಟ, ವಿನತೇಃ-ವಿನತಿದೇವಿಗೆ, ಪುತ್ರೀಂ-ಮಗಳಾದಲಕ್ಷ್ಮಣಾದೇವಿಯನ್ನು, ಪಾ

ಋದ್ಧಿವೈಃ-ದೊರೆಗಳಿಂದ, ವಿಹಿತೋತ್ಸವ(ಸ್ಸ್ಕ)-ವಿಹಿತ-ಮಾಡಲ್ಪಟ್ಟ, ಉತ್ಸವ(ಸ್ಸ್ಕ)-ವಿವಾಹಮಹೋತ್ಸವವುಳ್ಳವನಾಗಿ, ಪರ್ಯಣೇಷ್ಟ - ವಿವಾಹಮಾಡಿಕೊಂಡನು.

ತಾತ್ಪರ್ಯ ॥ ಅನಂತರದಲ್ಲಿ, ಈ ಜೀವಂಧರಮಹಾರಾಜನು, ಗೋವಿಂದಮಹಾರಾಜನಿಂದ ಕೊಡಲ್ಪಟ್ಟ ವಿನತಿದೇವಿಗೆ ಮಗಳಾದ ಲಕ್ಷ್ಮಣಾದೇವಿಯನ್ನು ರಾಜರಿಂ ಪರಮಸಂತೋಷದಿಂದ ನಡೆಸಲ್ಪಟ್ಟ ಮಹೋತ್ಸವವುಳ್ಳವನಾಗಿ ವಿವಾಹಮಾಡಿಕೊಂಡನು. ॥ ೬೧ ॥

ಇಂತು ಜೀವಂಧರ ಕುಮಾರನು ಸುರಮಂಜರಿಯಂ ಬಹುಮಾನ ಪೂರ್ವಕ ವಿವಾಹಮಾಡಿಕೊಂಡು ರಮಿಸಿ, ಬಹುಯತ್ನದಿಂದಾಕಾಮಿನೀ ರತ್ನವು ಸಮಾಧಾನಪಡಿಸಿ, ಮಿತ್ರರಸಮೀಪವನ್ನೈದಿ, ಈಅಸಾಧ್ಯವಾದ ಸುರಮಂಜರೀ ವಿವಾಹದಿಂ ಪರಮವಿಸ್ಮಿತರಾದ ಮಿತ್ರಮಂಡಲದೊಡಗೂಡಿ ಗಂಧೋತ್ಕಟಶ್ರೇಷ್ಠಿಸಮೀಪವಂಪೊಂದಿ ಶತ್ರುವಾದ ಕಾಷ್ಠಾಂಗಾರನ ಜಯೋಪಾಯಂಗಳಂ ಆತನೊಡನೆ ಚಿಂತಿಸಿ, ವಿದೇಹದೇಶದಲ್ಲಿರುವ ಧರಣೀತಿಲಕವೆಂಬ ತನ್ನ ಸೋದರಮಾವನಾದ ಗೋವಿಂದರಾಜನ ಪಟ್ಟಣಮಂಸೇರಿ ಸೋದರಮಾವನಿಂದ ಪರಮಸಂತೋಷದಿಂ ಸತ್ಕರಿಸಲ್ಪಟ್ಟ ತಾನಾಗಿಯೇ ಸೋದರಳಿಯನಾದ ಜೀವಂಧರಕುಮಾರನಂ ರಾಜ್ಯದಲ್ಲಿ ಸ್ಥಾಪಿಸಲುದ್ಯುಕ್ತನಾಗಿರುವ ಗೋವಿಂದರಾಜನೊಡನೆಯೂ, ಮನ್ತ್ರಿಗಳೊಡನೆಯೂಸಹ ಮಂತ್ರಾಲೋಚನೆಯಂ ಗೈದು, ಕಾಷ್ಠಾಂಗಾರನಿಗೆ ಹೇಳಿಕಳುಹಿಸಿ ಆತನ ಮಂತ್ರಿಗಳಿಂದ ಕಪಟಾಭಿಪ್ರಾಯಪೂರ್ವಕವಾಗಿ ಬಾಹ್ಯದಲ್ಲಿ ಮಹಾವಿನಯಪೂರ್ವಕವಾಗಿ ಹೇಳಿ ಕಳುಹಿಸಿರುವ ಸ್ನೇಹವಂ ಬೆಳಸುವುದಕ್ಕೆ ಕಾರಣವಾದ ಸಮಾಧಾನವಾಕ್ಯನ್ನು ಕೇಳಿ ಕಪಟವೆಂದುನಿಶ್ಚಯಿಸಿ,ಜೀವಂಧರಕುಮಾರ ಗೋವಿಂದರಾಜರಿವರೀರ್ವರೂ ಸಹ ಅಂತರಂಗದಲ್ಲಿ ಯುದ್ಧವನ್ನೇ ನಿರ್ಣಯಿಸಿ ಬಹಿರಂಗವಾಗಿ ಕಾಷ್ಠಾಂಗಾರನಿಗೂ ತಮಿಗೂ ಸ್ನೇಹವಾದುದೆಂದು ಪ್ರಕಟಪಡಿಸಿ ಸ್ವಸೈನ್ಯಬಲಾಬಲವಿಚಾರಪೂರ್ವಕ ಚತುರಂಗಬಲ ಸಾಮಂತರಾಜರೊಡಗೊಡಿ ರಾಜಪುರೀ ಪಟ್ಟಣಸಮೀಪಮಂ ಪರಸ್ಪರರಾಜಮರ್ಯಾದಾಪೂರ್ವಕವಾಗಿಸೇರಿದರು. ಬಳಿಕ ಗೋವಿಂದರಾಜನು ತನ್ನ ಕನ್ಯಾಸ್ವಯಂವರವಂ ವ್ಯಾಜೀಕರಿಸಿ ಕನ್ಯಾಶುಲ್ಕಾರ್ಥವಾಗಿ ಚಂದ್ರಕವೆಂಬೊಂದು ಯಂತ್ರವಂ

ನಿರ್ಮಿಸಿ ಈ ಚಂದ್ರಕಯಂತ್ರದ ಅಗ್ರಭಾಗದಲ್ಲಿರುವ ವರಾಹಗಳಂ ಭೇದಿ
ಸಿದವರಿಗೆ ಈ ಕನ್ನಿಕೆಯು ದೊರಕುವಳೆಂದು ಲೋಕದಲ್ಲಿ ಪ್ರಕಟಪಡಿ
ಸಲು, ಸಮಸ್ತತ್ರೈವರ್ಣಿಕರೂ ನಾನಾದೇಶಗಳಿಂದ ಬಂದು ಸೇರಲು, ಸ
ಮಸ್ತಧನುರ್ಧರವೀರರೂ ಅವರವರ ಸರ್ವಸಾಹಸಪ್ರದರ್ಶನಪೂರ್ವಕವಾಗಿ
ಪರಾಜಿತರಾಗಲು, ಮಹಾಧನುರ್ಧರಾಗ್ರಗಣ್ಯನಾದ ಜೀವಂಧರಕುಮಾರ
ನು ಲೀಲಾಮಾತ್ರದಿಂದ ಆ ವರಾಹಯಂತ್ರವಂ ಭೇದಿಸಲು, ಪರಮಸಂತು
ಷ್ಟನಾದ ಗೋವಿಂದಮಹಾರಾಜನು ಮಹಾರಾಜಮಂಡಲವೆಲ್ಲವೂ ಕೇ
ಳುವಂತೆ ಈ ಜೀವಂಧರಕುಮಾರನು ಶ್ರೀಮನ್ಮಹಾರಾಜ ಸತ್ಯಂಧರಪುತ್ರ
ನೆಂದು ಪ್ರಕಟಪಡಿಸಿದನು. ಸಮಸ್ತರೂ ಜೀವಂಧರಕುಮಾರನ ಪರಾ
ಕ್ರಮಾದಿ ಗುಣಾತಿಶಯಾಕಾರಾದಿಗಳಿಂದ ಹಾಗೆಯೇ ನಂಬಲು, ಕಾಷ್ಠಾಂ
ಗಾರನು ವಿಪತ್ಸನ್ನಿಹಿತವಾದುದರಿಂದ ಜೀವಂಧರಕುಮಾರನನ್ನು ತನಗೆ
ಮೃತ್ಯುವೆಂದು ಭಾವಿಸಿ ದೀನಮನಸ್ಕನಾಗಿ ನಾನಾಪ್ರಕಾರವಾಗಿ ಚಿಂತಿ
ಸುತ್ತಿರುವಸಮಯದೊಳು ಜೀವಂಧರಕುಮಾರನ ಮಿತ್ರರು ಕಾಷ್ಠಾಂ
ಗಾರನು ಕೋಪಗೊಳಿಸಿ ಯುದ್ಧೋದ್ಯುಕ್ತನನ್ನಾಗಿಮಾಡಲು, ಪರಸ್ಪರ
ಮಹಾಯುದ್ಧವುಸಂಭವಿಸಿ ಮಹಾವೀರಾಗ್ರಗಣ್ಯನಾದ ಜೀವಂಧರಕುಮಾ
ರನಿಂದ ವೈರಿಯಾದ ಕಾಷ್ಠಾಂಗಾರನು ಮರಣವನ್ನೈದಿಸಲ್ಪಟ್ಟನು.
ಅನಂತರ ಸಮಸ್ತ ರಾಜಮಂಡಲದೊಡಗೂಡಿ ಗೋವಿಂದಮಹಾರಾಜ
ನಿಂ ತತ್ಕಾಲಸನ್ನಿಹಿತನಾದ ಸುದರ್ಶನಯಕ್ಷನೊಡಗೂಡಿ ರಾಜಪುರೀ
ಪಟ್ಟಣದ ಶ್ರೀ ಭಗವದ್ದಿವ್ಯಜಿನ ಚೈತ್ಯಾಲಯದೊಳು ಪಟ್ಟಾಭಿಷಿಕ್ತ
ನಾಗಿ ಸಕಲಜನಶ್ಲಾಘಾಸ್ಪದನಾಗಿ ಸಕಲಗುಣ ರತ್ನರತ್ನಾಕರಾರ್ಜಿತಸು
ಕೃತಸಾರ ಕುರುಕುಲಪ್ರದೀಪ ಸತ್ಯಂಧರಕುಮಾರ ಶ್ರೀಮದ್ರಾಜಾಧಿರಾ
ಜ ಜೀವಂಧರಮಹಾರಾಜರು ಕುಲಕ್ರಮಾಗತದಿವ್ಯಸಿಂಹಾಸನಾಧಿರೂಢ
ರಾಗಿ ಹನ್ನೆರಡುವರುಷ ಭೂಮಿಗೆ ಕಂದಾಯವಂ ಉತ್ತರತ್ರ ತಾವು ಅಂ
ಗೀಕರಿಸುವುದಿಲ್ಲವೆಂದು ಪ್ರಕಟಪಡಿಸಿ(ಮಾತುಮಾಡಿ) ಸಕಲಜನ ಚಿತ್ತ
ವಲ್ಲಭರಾಗಿ ಗೋವಿಂದರಾಜಪುತ್ರಿಯಾದ ಲಕ್ಷ್ಮಣಾದೇವಿಯಂ ವಿವಾಹ
ಮಾಡಿಕೊಂಡು ಮಾತಾಪಿತೃಪ್ರಜಾನಿರತರಾಗಿ ಗಂಧರ್ವದತ್ತಾದ್ಯಷ್ಟಪ
ಟ್ಟಮಹಿಷೀ ಸಹಿತರಾಗಿ ಸುಖದಿಂ ರಾಜ್ಯವಂ ಪರಿಪಾಲಿಸಿದರೆಂಬಲ್ಲಿಗೆ,

ಹತ್ತನೆಯ ಲಂಬವು ಪರಿಸಮಾಪ್ತವಾದುದು.



ಶ್ರೀರಸ್ತು.

ಶ್ರೀಮದ್ವಾದೀಭಸಿಂಹಸೂರಿವಿರಚಿತ ಕ್ಷತ್ರಚೂಡಾಮಣೌ,

# ಏಕಾದಶೋ ಲಂಬಃ.

ಶ್ಲೋಕ॥ ಅಥ ರಾಜಶ್ರಿಯಾ ಲಬ್ಧ್ವಾ
ಲಕ್ಷ್ಮಣಾಂ ಮುಮುದೇ ಕೃತೀ ।
ಚಿರಕಾಂಕ್ಷಿತಲಾಭೇ ಹಿ
ತೃಪ್ತಿಸ್ಸ್ಯಾದತಿಶಾಯಿನೀ ॥೧॥

ಟೀ ॥ ಅಥ-ಅನಂತರದಲ್ಲಿ, ಕೃತೀ- ಮಹಾ ಪುಣ್ಯಶಾಲಿಯಾದ ಜೀವಂಧರಮಹಾರಾಜನು, ರಾಜಶ್ರಿಯಾ-ರಾಜಲಕ್ಷ್ಮಿಯೊಡನೆಕೂಡ, ಲಕ್ಷ್ಮಣಾಂ- ಲಕ್ಷ್ಮಣಾದೇವಿಯನ್ನು, ಲಬ್ಧ್ವಾ-ಪಡೆದು, ಮುಮುದೇ-ಸಂತೋಷಿಸಿದನು., ಚಿರಕಾಂಕ್ಷಿತಲಾಭೇ(ಸತಿ)–ಚಿರ-ಬಹುಕಾಲದಿಂದ, ಕಾಂಕ್ಷಿತ-ಅಪೇಕ್ಷಿಸಲ್ಪಟ್ಟ ಇಷ್ಟಾರ್ಥದ, ಲಾಭೇ (ಸತಿ)-ಪ್ರಾಪ್ತಿಯುಂಟಾಗುತ್ತಿರಲಾಗಿ, ಅತಿಶಾಯಿನೀ-ಅಧಿಕವಾದ, ತೃಪ್ತಿಃ-ತೃಪ್ತಿಯು, ಸ್ಯಾದ್ಧಿ–ಉಂಟಾದೀತಲ್ಲವೆ?.

ತಾತ್ಪರ್ಯ ॥ ಅನಂತರದಲ್ಲಿ ಮಹಾಪುಣ್ಯಶಾಲಿಯಾದ ಜೀವಂಧರ ಮಹಾರಾಜನು ರಾಜಲಕ್ಷ್ಮಿಯೊಡನೆಕೂಡ ತನ್ನ ಸೋದರಮಾವನಮಗಳಾದ ಲಕ್ಷ್ಮಣಾದೇವಿಯನ್ನು ಹೊಂದಿ ಸಂತೋಷಿಸಿದನು. ಲೋಕದಲ್ಲಿ ಮನುಷ್ಯನು ತಾನು ಬಹುಕಾಲದಿಂದಪೇಕ್ಷಿಸಿಕೊಂಡಿದ್ದ ಇಷ್ಟವು ಸಿದ್ಧಿಸುತ್ತಿರಲಾಗಿ, ಅತಿಶಯವಾದ ತೃಪ್ತಿಯನ್ನು ಹೊಂದುತ್ತಾನಲ್ಲವೆ? ॥ ೧ ॥

ಶ್ಲೋಕ॥ ಲಬ್ಧ್ವಾ ರಾಜ್ಯಮಯಂ ರಾಜಾ
ರೇಜೇ ಸರ್ವಗುಣೈರಪಿ ।

ಕಾಚೋ ಹಿ ಯಾತಿ ವೈಗುಣ್ಯಂ
ಗುಣ್ಯತಾಂ ಹಾರಗೋ ಮಣಿಃ ॥೨॥

ಟೀ ॥ ಅಯಂ ರಾಜಾ-ಈ ಜೀವಂಧರಮಹಾರಾಜನು, ರಾಜ್ಯಂ-ರಾಜ್ಯವನ್ನು ಲಬ್ಧ್ವಾ-ಹೊಂದಿ, ಸರ್ವಗುಣೈರಪಿ-ಸರ್ವ-ಸಮಸ್ತವಾದ, ಗುಣೈರಪಿ-ಗುಣಗಳಿಂದ ಲೂಕೂಡ, ರೇಜೇ-ಪ್ರಕಾಶಿಸಿದನು., ಕಾಚಃ-ಗಾಜು, ವೈಗುಣ್ಯಂ - ಗುಣಹೀನತೆ ಯನ್ನು (ಹಾರದ ತಂತುವಿನಲ್ಲಿ ಪೋಣಿಸಲೋಸುಗ ಯೋಗ್ಯವಲ್ಲದೇ ಇರೋಣವ ನ್ನು), ಯಾತಿಹಿ-ಹೊಂದುತಲಿದೆಯಲ್ಲವೆ?, ಹಾರಗಃ-ಹಾರದಲ್ಲಿರುವ, ಮಣಿಃ- ರತ್ನ ವು, ಗುಣ್ಯತಾಂ-ಗುಣಕ್ಕೆ ಯೋಗ್ಯವಾಗಿರೋಣವನ್ನು ತಂತಿಯಲ್ಲಿ ( ಹಾರದಲ್ಲಿ ಪೋಣಿಸುವುವಕ್ಕೆ ಯೋಗ್ಯವಾಗಿರೋಣವನ್ನು), ಯಾತಿಹಿ- ಹೊಂದುತ್ತಲಿದೆ ಯಲ್ಲವೆ ?.

ತಾತ್ಪರ್ಯ ॥ ಈ ಜೀವಂಧರ ಮಹಾರಾಜನು, ರಾಜ್ಯವನ್ನು ಹೊಂ ದಿ ಸಮಸ್ತಗುಣಗಳಿಂದಲೂ ಪ್ರಕಾಶಿಸಿದನು. ಗಾಜುಗುಣವಿಲ್ಲದವಸ್ತು ವಾದುದರಿಂದಲೇ ರತ್ನಹಾರದ ತಂತುವಿನಲ್ಲಿ ಪೋಣಿಸಲೋಸುಗ ಯೋ ಗ್ಯವಲ್ಲವು. ಗುಣವತ್ತಾದ ರತ್ನವಾದರೋ ಗುಣದಿಂದ ಪ್ರಕಾಶಿಸೋ ಣದರಿಂದಲೇ ರತ್ನಹಾರದಲ್ಲಿ ಪೋಣಿಸುವುದಕ್ಕೆ ಯೋಗ್ಯವಾಗುವುದು. ( ಗುಣಹೀನರಾದವರು ಗಾಜಿನಂತೆ ಪರಿತ್ಯಾಗಕ್ಕೇನೆ ಅರ್ಹರಾಗುತ್ತಾ ರೆ. ಗುಣವಂತರು ರತ್ನದಂತೆ ಸರ್ವೋತ್ತಮಸ್ಥಾನದಲ್ಲಿ ಪ್ರಕಾಶಿಸು ತ್ತಾರೆಂದು ಮುಖ್ಯಾಭಿಪ್ರಾಯವು. ) ॥ ೨ ॥

ಶ್ಲೋಕ॥ ಕೃತಿನಾಮೇಕರೂಪಾ ಹಿ
ವೃತ್ತಿಸ್ಸಂಪದ ಸಂಪದೋಃ ।
ನ ಹಿ ನಾದೇಯತೋಯೇನ
ತೋಯಧೇರಸ್ತಿ ವಿಕ್ರಿಯಾ ॥೩॥

ಟೀ ॥ ಕೃತಿನಾಂ-ಪ್ರಜ್ಞಾಶಾಲಿಗಳಾದ ಸತ್ಪುರುಷರಿಗೆ, ಸಂಪದಸಂಪದೋಃ- ಐಶ್ವರ್ಯವೂ, ಬಡತನವೂ ಇವೆರಡರಲ್ಲಿಯೂ, ( ಏಕರೂಪಾ-ಒಂದೇಪ್ರಕಾರವಾದ ವೃತ್ತಿರ್ಹಿ-ವ್ಯಾಪಾರವಲ್ಲವೆ,) ವೃತ್ತಿಃ- ಇರೋಣವು ( ಸ್ವಭಾವವು ), ಏಕರೂ ಪಾಹಿ-ಒಂದೇ ಪ್ರಕಾರವಲ್ಲವೆ?, ನಾದೇಯತೋಯೇನ-ನಾದೇಯ-ನದೀಸಂಬ

ಧಿಪನಾದ, ತೋಯೌಘೈಃ-ನೀರಿನಿಂದ, ತೋಯಧೇಃ-ಸಮುದ್ರಕ್ಕೆ, ವಿಕ್ರಿಯಾ-ವಿಕಾರವು (ಹೆಚ್ಚುಕಡಮೆಯಾಗೋಣವು), ನಾಸ್ತಿಹಿ-ಇಲ್ಲವಷ್ಟೆ ?.

ತಾತ್ಪರ್ಯ ॥ ಪುಣ್ಯಶಾಲಿಗಳಾದ ಸತ್ಪುರುಷರಿಗೆ ಸಂಪತ್ತುಬಂದಾಗ್ಯೂ, ಬಡತನಬಂದಾಗ್ಯೂ ಸ್ವಭಾವವು. ( ನಡತೆಯೂ ) ಏಕರೀತಿಯಾಗಿದೆಯೇಹೊರತು ದುರ್ಜನರಂತೆ ಸಂಪತ್ತುಬಂದಕಾಲದಲ್ಲಿ ಮದಿಸುವುದೂ, ಬಡತನಬಂದಾಗ ಪರಮದೀನನಾಗೋಣವೂ, ಶೋಕಿಸೋಣವೂ, ಇವುಗಳಿಲ್ಲವಷ್ಟೆ? ಇದಕ್ಕೆ ಲೋಕ ದೃಷ್ಟಾಂತವೇನೆಂದರೆ.-- ಸಮುದ್ರವು ಎಷ್ಟುನದಿಗಳ ನೀರುಸೇರಿದಾಗ್ಯೂ ಹೆಚ್ಚುವುದಿಲ್ಲವು; ಕಡಿಮೆಹೋಗುವುದಿಲ್ಲವು. ಬರದೇಇದ್ದಲ್ಲಿ ಕಡಮೆಯಾಗುವುದೂ ಇಲ್ಲವಷ್ಟೆ ? ಹಾಗೆ( ಸಂಪತ್ಪ್ರಾಪ್ತಿಯಲ್ಲಿ ಸತ್ಪುರುಷರು ಸಂತೋಷಪಡುವುದೂ ಇಲ್ಲವು. ಬಡತನದಲ್ಲಿ ವ್ಯಸನವನ್ನೂಕೂಡ ವಹಿಸದೇ ಏಕರೀತಿಯಾಗಿರುವರೆಂದಭಿಪ್ರಾಯವು. ) ॥ ೩ ॥

ಶ್ಲೋಕ॥ ಸುಖದುಃಖೇ ಪ್ರಜಾಧೀನೇ
ತದಾಭೂತಾಂ ಪ್ರಜಾಪತೇಃ ।
ಪ್ರಜಾನಾಂ ಜನ್ಮವರ್ಜಂ ಹಿ
ಸರ್ವತ್ರ ಪಿತರೌ ನೃಪಾಃ ॥೪॥

ಟೀ॥ ತದಾ-ಆ ಕಾಲದಲ್ಲಿ, ಪ್ರಜಾಪತೇಃ-ಪ್ರಜಾ-ಪ್ರಜೆಗಳಿಗೆ, ಪತೇಃ-ಸ್ವಾಮಿಯಾದ ಜೀವಂಧರ ಮಹಾರಾಜನ, ಸುಖದುಃಖೇ-ಸುಖವೂ, ದುಃಖವೂ ಇವುಗಳು, ಪ್ರಜಾಧೀನೇ(ಸತಿ)-ಪ್ರಜಾನಿಮಿತ್ತಕಗಳಾಗಿ, ಅಭೂತಾಂ-ಆದವು., ನೃಪಾಃ-ರಾಜರು, ಪ್ರಜಾನಾಂ-ಪ್ರಜೆಗಳಿಗೆ, ಜನ್ಮವರ್ಜಂ-ಉತ್ಪತ್ತಿಯೊಂದು ಹೊರತು, ಸರ್ವತ್ರ-ಇತರ ಸಮಸ್ತವಿಷಯದಲ್ಲಿಯೂ, ಪಿತರೌಹಿ-ತಾಯಿತಂದೆಗಳಲ್ಲವೆ ?.

ತಾತ್ಪರ್ಯ ॥ ಆ ಮಹಾರಾಜನಾಗಿ ಧಾರ್ಮಿಕಶಿರೋಮಣಿಯಾದ ಜೀವಂಧರಸ್ವಾಮಿಯು ರಾಜ್ಯಪರಿಪಾಲನವಂ ಗೈಯುತಲಿರುವಕಾಲದೊಳು ಪ್ರಜಾನಿಮಿತ್ತಕವಾಗಿ ಉಂಟಾಗುವ ಸುಖದುಃಖಗಳೇ ಜೀವಂಧರಮಹಾರಾಜನ ಸುಖದುಃಖಗಳಾಗಿದ್ದವೇ ಹೊರತು ಮಹಾರಾಜನು ಪ್ರತ್ಯೇಕವಾದ ಸುಖದುಃಖಗಳಿಗೆ ಭಾಗಿಯೇ ಆಗಲಿಲ್ಲವು. ( ಪ್ರಜೆಗ

ಳ ಸುಖದುಃಖಗಳೇ ತನ್ನದೆಂದು ತಿಳಿದು ಪ್ರಜಾಪರಿಪಾಲನೆಯಂ ಗೈದ
ನೆಂದರ್ಥವು. ) ಇದು ನ್ಯಾಯುವೇಸರಿ; ಹೇಗೆಂದರೆ.-- ಪ್ರಜೆಗಳಿಗೆ ರಾ
ಜರು ಉತ್ಪತ್ತಿಯೊಂದು ಹೊರತು ಇತರ ಸಮಸ್ತ ವಿಷಯಗಳಲ್ಲಿಯೂ
ತಾಯಿತಂದೆಗಳಲ್ಲವೆ? ( ತಾಯಿತಂದೆಗಳಂತೆ ರಕ್ಷಕರಲ್ಲವೆ? ) ॥ ೪ ॥

ಶ್ಲೋಕ॥ ಆಸೀತ್ಪ್ರೀತಿಕರಂ ತಸ್ಯ
ಕರದಾನಂ ಚ ದಾನವತ್ ।
ಕರ್ಷಿಣಃ ಕಿಂ ನ ತುಷ್ಯಂತಿ
ಶಾಲೇಯೇ ಬೀಜವಾಪಿನಃ ॥೫॥

ಟೀ ॥ ತಸ್ಯ-ಆ ಜೀವಂಧರಮಹಾರಾಜನಿಗೆ, ಕರದಾನಂ ಚ-ಕರ-ಕಂದಾಯ
ದ, ದಾನಂ ಚ-ಕೊಡೋಣವೂಕೂಡ, ದಾನವತ್-ದಾನದೋಪಾದಿಯಲ್ಲಿ, ಪ್ರೀತಿ
ಕರಂ(ಸತ್)-ಪ್ರೀತಿಯನ್ನುಂಟುಮಾಡುವಂಥಾದ್ದಾಗಿ, ಆಸೀತ್-ಆಯಿತು., ಶಾ
ಲೇಯೆ-ಉತ್ತಮಕ್ಷೇತ್ರದಲ್ಲಿ, ಬೀಜವಾಪಿನಃ-ಬೀಜವನ್ನುಬಿತ್ತಿದಂಥಾ, ಕರ್ಷಿಣಃ-ರೈ
ತರು, ನತುಷ್ಯಂತಿ ಕಿಂ-ಸಂತೋಷಿಸುವುದಿಲ್ಲವೇ ಏನು ?.

ತಾತ್ಪರ್ಯ ॥ ಆ ಜೀವಂಧರ ಮಹಾರಾಜನಿಗೆ ಕಂದಾಯಕೊಡೊ
ಣವೂಕೂಡ ದಾನದಂತೆ ಪ್ರೀತಿಕರವಾಗಿದ್ದುದು ರೈತರು ಉತ್ತಮಕ್ಷೇ
ತ್ರದಲ್ಲಿ ಬೀಜವಂಬಿತ್ತಿ ಬಹಳವಾಗಿಸಂತೋಷಿಸುವರಷ್ಟೆ ? (ಹಾಗೆಯೆ
ಜೀವಂಧರಮಹಾರಾಜನು ಪ್ರಜೆಗಳ ಸುವತ್ಸವೃದ್ಧಿಯಿಂದ ಬಹಳವಾ
ಗಿ ಸಂತೋಷಿಸಿದನೆಂದಭಿಪ್ರಾಯವು. ) ॥ ೫ ॥

ಶ್ಲೋಕ ॥ ಮಿತ್ರೋದಾಸೀನ ಶತ್ರೂಣಾಂ
ವಿಷಯೇಷ್ವಪಸರ್ಪತಃ ।
ತದಜ್ಞಾನೇ ಚ ತದ್ಜ್ಞಾನಾ-
ತ್ತದೈವಾಸೀತ್ಪ್ರತಿಕ್ರಿಯಾ ॥೬॥

ಟೀ ॥ ಮಿತ್ರೋದಾಸೀನಶತ್ರೂಣಾಂ-ಮಿತ್ರ-ಸ್ನೇಹಿತರೂ, ಉದಾಸೀ
ಉಪೇಕ್ಷಾರ್ಹರೂ, ಶತ್ರೂಣಾಂ-ಶತ್ರುಗಳೂ ಇವರುಗಳ, ವಿಷಯೇಷು-ವಿಷಯ
ಲ್ಲಿ, ಅಪಸರ್ಪತಃ-ಗೂಢಚಾರರವೆಸೆಯಿಂದ, (ಗಸ್ತು ತಿರುಗುವ ತನ್ನ ಭೃತ್ಯರ
ಯಿಂದ), ತದಜ್ಞಾನೇ ಚ-ತತ್-ಆ ಶತ್ರು ಮಿತ್ರ ಉದಾಸೀನರವಿಷಯ, ಅ

ನೇಷ-ತಿಳುವಳಿಕೆಯುಂಟಾಗದೇ ಇದ್ದಾಗ್ಯೂ ಕೂಡ, ತದ್ವಿಜ್ಞಾನಾತ್-ಆ ಶತ್ರುಮಿತ್ರಾದಿಗಳಂ ತಿಳಿಯೋಣವರದೆಸೆಯಿಂದ, ತಸ್ಯೈವ- ಅದೇ ಕಾಲವಲ್ಲಿಯೇ, ಪ್ರತಿಕ್ರಿಯಾ-ಪ್ರತೀಕಾರವು, ಆಸೀತ್-ಆಯಿತು.

ತಾತ್ಪರ್ಯ ॥ ಆ ಮಹಾ ಬುದ್ಧಿಶಾಲಿಯಾದ ಜೀವಂಧರಮಹಾರಾಜನು, ಶತ್ರುವೂ, ಮಿತ್ರನೂ, ಉದಾಸೀನನೂ ಇವರವಿಷಯಗಳಲ್ಲಿ ಗೂಢಚಾರರಿಂದ ಅವರಭಾವಗಳು ಸ್ಪಷ್ಟವಾಗಿತಿಳಿಯದೇಹೋದಾಗ್ಯೂ ತಾನು ತಿಳಿಯುವಂಥಾವನಾಗಿ ಅದೇಕಾಲದಲ್ಲಿ ತಕ್ಕಪ್ರತೀಕಾರವಂ ಮಾಡುತ್ತಿದ್ದನು. ( ರಾಜ್ಯಪರಿಪಾಲನೆಯಲ್ಲಿ ಬಹು ಜಾಗರೂಕನಾಗಿದ್ದನೆಂಬ ಮುಖ್ಯಾಭಿಪ್ರಾಯವು. ) ॥ ೬॥

ಶ್ಲೋಕ॥ ರಾತ್ರಿಂ ದಿವವಿಭಾಗೇಷು
ನಿಯತೋ ನಿಯತಿಂ ವ್ಯಧಾತ್।
ಕಾಲಾತಿಪಾತಮಾತ್ರೇಣ
ಕರ್ತವ್ಯಂ ಹಿ ವಿನಶ್ಯತಿ ॥೭॥

ಟೀ ॥ ನಿಯತಃ-ಕಾಲಕಾಲಕ್ಕೆ ಸರಿಯಾಗಿ ರಾಜಕಾರ್ಯವಂ ಮಾಡೋಣದರಲ್ಲಿ ಉದ್ಯುಕ್ತನಾದ ಆಜೀವಂಧರಮಹಾರಾಜನು, ರಾತ್ರಿಂದಿವವಿಭಾಗೇಷು—ಅಹೋರಾತ್ರಕಾಲವಿಭಾಗಗಳಲ್ಲಿ, ನಿಯತಿಂ-ಕ್ಲೃಪ್ತಿಯನ್ನು, ವ್ಯಧಾತ್-ಮಾಡಿದನು., ಕಾಲಾತಿಪಾತಮಾತ್ರೇಣ – ಉಚಿತ ಕಾಲವನ್ನು ಮೀರೋಣದರ ಮಾತ್ರದಿಂದಲೇ, ಕರ್ತವ್ಯಂ-ಮಾಡತಕ್ಕ ಕೆಲಸವು, ವಿನಶ್ಯತಿಹಿ-ನಾಶವನ್ನುಹೊಂದುವುದಲ್ಲವೆ?.

ತಾತ್ಪರ್ಯ ॥ ಕಾಲನಿಯಮವುಳ್ಳ ಜೀವಂಧರಮಹಾರಾಜನು ಹಗಲುರಾತ್ರಿಕಾಲಗಳಲ್ಲಿ ಯಾವಯಾವ ಕೆಲಸವನ್ನು ಎಷ್ಟೆಷ್ಟುಹೊತ್ತು ಮಾಡತಕ್ಕದ್ದುಚಿತವೋ ಅದಕ್ಕನುಸಾರವಾಗಿ ಕಾಲಕ್ಲೃಪ್ತಿಯಂ ಮಾಡಿದನು. ಆಯಾಯಕೆಲಸಗಳಿಗೆ ತಕ್ಕತಕ್ಕ ಕಾಲಗಳಲ್ಲಿ ಮಾಡದೇಹೋದರೆ ಮಾಡತಕ್ಕಕೆಲಸವು ನಷ್ಟವಾಗಿ ನಿಷ್ಫಲವಾಗಿ ಹೋಗುವುದಲ್ಲವೆ ? (ಆದುದರಿಂದ ನಿತ್ಯವೂ ಮಾಡತಕ್ಕಸಕಲಕೃತ್ಯಗಳಿಗೂ ಕಾಲಕ್ಲೃಪ್ತಿಯಂ ಮಾಡಿದನೆಂದಭಿಪ್ರಾಯವು.) ಕಾಲವರಿತು ಕೆಲಸವಂ ಮಾಡುವವನಕಾರ್ಯಗಳು ಸಫಲವಾಗುವುವು.॥೭॥

ಶ್ಲೋಕ॥ ತಪಸಾ ಹಿ ಸಮಂ ರಾಜ್ಯಂ
ಯೋಗಕ್ಷೇಮಪ್ರಪಂಚತಃ ।
ಪ್ರಮಾದೇ ಸತ್ಯಧಃಪಾತಾ-
ದನ್ಯಥಾ ಚ ಮಹೋದಯಾತ್ ॥೮॥

ಟೀ ॥ ಪ್ರಮಾದೇಸತಿ-ಅಜಾಗರೂಕನಾಗಿರುತ್ತಿರಲಾಗಿ, ಅಧಃಪಾತಾತ್-ಕೆಳಗೆ ಬೀಳೋಣದರದೆಸೆಯಿಂದಲೂ, ಅನ್ಯಥಾ ಚ-ಬಹಳ ಜಾಗರೂಗನಾಗಿದ್ದಲ್ಲಿ ಮಹಾಶ್ರೇಯಸ್ಸುಂಟಾಗೋಣದರ ದೆಸೆಯಿಂದಲೂ, ಯೋಗಕ್ಷೇಮ ಪ್ರಪಂಚತಃ-ಯೋಗ-ಪೂರ್ವದಲ್ಲಿ ಪಡೆಯಲ್ಪಡದೇಇದ್ದ ವಸ್ತುವನ್ನು ಪಡೆಯೋಣವೂ, ಕ್ಷೇಮ-ಪಡೆಯಲ್ಪಟ್ಟವಸ್ತುವಂ ಪರಿಪಾಲಿಸೋಣವೂ ಇವುಗಳ, ಪ್ರಪಂಚತಃ- ವ್ಯಾಪಾರಗಳ ದೆಸೆಯಿಂದ (ವಿಸ್ತಾರಪಡಿಸೋಣದರ ದೆಸೆಯಿಂದ), ರಾಜ್ಯಂ-ರಾಜ್ಯವು, ತಪಸಾ-ತಪಸ್ಸಿನೊಡನೆ, ಸಮಂಹಿ-ಸಮಾನವಲ್ಲವೆ ?.

ತಾತ್ಪರ್ಯ ॥ ರಾಜ್ಯಪರಿಪಾಲನೆಯು ತಪಸ್ಸಿಗೆ ಸಮಾನವು. ಹೇಗೆಂದರೆ.—ದೊರೆಯು ಮದಿಸಿ ಅಜಾಗರೂಕನಾಗಿದ್ದಲ್ಲಿ ಬಹಳ ಹಾನಿಯುಂಟಾಗುತ್ತದೆ. ದೊರೆಯು ಎಷ್ಟುಜಾಗರೂಕನಾಗಿದ್ದರೆ ಅಷ್ಟು ಅಭಿವೃದ್ಧಿಯನ್ನು ಹೊಂದುತ್ತಾನೆ. ತಪಸ್ಸಿಗೂ ಹಾಗೆಯೇ ಅಜಾಗರೂಕನಾಗಿದ್ದಲ್ಲಿ ತಪೋಭಂಗವಾಗಿ ಅಧೋಗತಿಯುಂಟಾಗುತ್ತದೆ. ಎಷ್ಟುಜಾಗರೂಕನಾಗಿ ತಪಸ್ಸನ್ನಭಿವೃದ್ಧಿ ಪಡಿಸುತ್ತಾನೆಯೋ ಅಷ್ಟು ತಪಃಪ್ರಭಾವದಿಂದ ಸಕಲಪುರುಷಾರ್ಥಗಳನ್ನೂ ಪಡೆಯುತ್ತಾನೆ. ॥೮॥

ಶ್ಲೋಕ॥ ಪ್ರಬುದ್ಧೇಽಸ್ಮಿನ್ ಭುವಂ ಕೃತ್ಸ್ನಾಂ
ರಕ್ಷತ್ಯೇಕಪುರೀಮಿವ ।
ರಾಜನ್ವತೀ ಚ ಭೂರಾಸೀ-
ದನ್ವರ್ಥಾ ರತ್ನಸೂರಪಿ ॥೯॥

ಟೀ ॥ ಪ್ರಬುದ್ಧೇ- ಬಹಳ ಜ್ಞಾನಿಯಾದ ಜೀವಂಧರ ಮಹಾರಾಜನು, ಕೃತ್ಸ್ನಾಂ-ಸಮಸ್ತವಾದ, ಭುವಂ-ಭೂಮಿಯನ್ನು, ಏಕಪುರೀಮಿವ- ಒಂದು ಪಟ್ಟಣವನ್ನೋಪಾದಿಯಲ್ಲಿ, ರಕ್ಷತಿ(ಸತಿ)-ರಕ್ಷಿಸುತ್ತಿರಲಾಗಿ, ಭೂಃ-ಭೂಮಿಯು, ರಾಜನ್ವತೀಚ-ಒಳ್ಳೇರಾಜನುಳ್ಳದ್ದಾಗಿಯೂ, ರತ್ನಸೂರಪಿ-ರತ್ನಗಳನ್ನು ಪ್ರಸವಿಸುವ

ಥಾದ್ದಾಗಿಯೂ, ಅನ್ವರ್ಥಾ(ಸತೀ)- ಸಾರ್ಥಕವಾದ ನಾಮಧೇಯ ವುಳ್ಳದ್ದಾಗಿ, ಆಸೀತ್-ಆಯಿತು.

ತಾತ್ಪರ್ಯ || ಅತ್ಯಂತ ವಿವೇಕಿಯಾದ ಈ ಜೀವಂಧರಮಹಾರಾಜನು ಈ ಸಮಸ್ತ ಭೂಮಂಡಲವನ್ನೂ ಒಂದೇಪಟ್ಟಣವನ್ನೋಪಾದಿಯಲ್ಲಿ ರಕ್ಷಿಸುತ್ತಿರಲಿಕ್ಕಾಗಿ ಭೂಮಿಯು ಒಳ್ಳೇರಾಜನುಳ್ಳದ್ದಾಗಿಯೂ ಉತ್ಕೃಷ್ಟ ವಸ್ತುಗಳನ್ನೂ ಪ್ರಸವಿಸುವಂಥಾದ್ದಾಗಿಯೂ ಆದುದರಿಂದಲೇ ಒಪ್ಪತಕ್ಕಹೆಸರುಳ್ಳದ್ದಾಗಿ ಆಯಿತು. (ಇದರಿಂದ ಜೀವಂಧರಮಹಾರಾಜನು ತನ್ನ ವಿವೇಕದಿಂದಲೂ ಧರ್ಮದಿಂದಲೂ, ಶೌರ್ಯದಿಂದಲೂ, ಭೂಮಿಯಲ್ಲಿ ಧನಧಾನ್ಯಸಂಪತ್ಸಮೃದ್ಧವನ್ನಾಗಿ ಮಾಡಿ ಚೆನ್ನಾಗಿ ರಕ್ಷಿಸಿದನೆಂದಭಿಪ್ರಾಯವು.)||೯||

ಶ್ಲೋಕ|| ಏವಂ ವಿರಾಜಮಾನೇಽಸ್ಮಿನ್
ರಾಜರಾಜೇ ಮಹೋದಯೇ।
ವಿಜಯಾ ಜನನೀ ತಸ್ಯ
ವಿರಕ್ತಾ ಸಂಸೃತಾವಭೂತ್ ||೧೦||

ಟೀ|| ಏವಂ-ಈ ಪ್ರಕಾರ, ರಾಜರಾಜೇ-ಸಮಸ್ತ ರಾಜರಿಗೂ ರಾಜನಾದ, ಅಸ್ಮಿನ್-ಈ ಜೀವಂಧರಮಹಾರಾಜನು, ಮಹೋದಯೇ(ಸತಿ)-ಮಹಾಸಂಪತ್ಸಮೃದ್ಧಿಯೊಡಗೂಡಿದವನಾಗಿ, ವಿರಾಜಮಾನೇ(ಸತಿ) - ಪ್ರಕಾಶಿಸುತ್ತಿರಲು, ತಸ್ಯ-ಆ ಜೀವಂಧರಮಹಾರಾಜನ, ಜನನೀ - ತಾಯಿಯಾದ, ವಿಜಯಾ- ವಿಜಯಾಮಹಾದೇವಿಯು, ಸಂಸೃತೌ-ಸಂಸಾರದಲ್ಲಿ, ವಿರಕ್ತಾ(ಸತೀ)- ವೈರಾಗ್ಯವನ್ನು ಹೊಂದಿದವಳಾಗಿ, ಅಭೂತ್-ಆದಳು.

ತಾತ್ಪರ್ಯ || ಸಮಸ್ತರಾಜರಿಗೂ ರಾಜನಾಗಿ ಮಹತ್ತಾದ ಸಂಪದಭಿವೃದ್ಧಿಯುಳ್ಳ ಈ ಜೀವಂಧರಮಹಾರಾಜನು ಈಪ್ರಕಾರ ಪ್ರಕಾಶಿಸುತ್ತಿರಲಾಗಿ, ಈ ಜೀವಂಧರಸ್ವಾಮಿಗೆ ತಾಯಿಯಾದ ವಿಜಯಾಮಹಾದೇವಿಯು ಸಂಸಾರದಲ್ಲಿ ವಿರಕ್ತಿಯುಳ್ಳವಳಾಗಿ ಆದಳು. ||೧೦||

ಶ್ಲೋಕ|| ಪೈತೃಕಂ ಪದಮುದ್ರಾಕ್ಷ-
ಮುತ್ಪ್ರಾಹಂ ಪುತ್ರಪುಂಗವೇ।

ಕೃತಾಃ ಪುರೋಪಕರ್ತಾರಃ
ಕೃತಕೃತ್ಯಾ ಯಥೋಚಿತಮ್ ॥೧೧॥

ಟೀ ॥ ಅಹಂ-ನಾನು, ಪುತ್ರಪುಂಗವೇ-ಪುತ್ರಶ್ರೇಷ್ಠನಾದ, ತತ್ರ-ಆ ಜೀವಂಧರಕುಮಾರನಲ್ಲಿ, ಪೈತೃಕಂ-ತಂದೆಯ ಸಂಬಂಧಿಯಾದ, ಪದಂ-ಸ್ಥಾನವನ್ನು (ದೊರೆತನವನ್ನು), ಅದ್ರಾಕ್ಷಂ-ನೋಡಿದೆನು., ಪುರಾ-ಪೂರ್ವದಲ್ಲಿ, ಉಪಕರ್ತಾರಃ-ಉಪಕಾರಮಾಡಿದಜನಗಳು, ಯಥೋಚಿತಂ-ಯೋಗ್ಯತಾನುಸಾರವಾಗಿ, ಕೃತಕೃತ್ಯಾ (ಸ್ವಂತಃ)-ಪ್ರತ್ಯುಪಕಾರಮಾಡಲ್ಪಟ್ಟವರಾಗಿ, ಕೃತಾಃ-ಮಾಡಲ್ಪಟ್ಟರು.

ತಾತ್ಪರ್ಯ ॥ ವಿಜಯಾ ಮಹಾದೇವಿಯು ತನ್ನಲ್ಲಿ ತಾನೇ ಭಾವಿಸುತ್ತಾಳೆ.— ಶ್ರೇಷ್ಠಪುತ್ರನಲ್ಲಿ ತಂದೆಸಂಪಾದಿಸಿದ ಶತ್ರುಹಸ್ತಗತವಾಗಿದ್ದ ರಾಜ್ಯವು ತಿರಿಗಿಬಂದದ್ದನ್ನು ಕಣ್ಣಿನಿಂದ ನೋಡಿದೆನು. ಪೂರ್ವದಲ್ಲಿ ಉಪಕಾರಮಾಡಿದವರಿಗೆಲ್ಲಾ ನಾನು ಯಥೋಚಿತವಾಗಿ ಪ್ರತ್ಯುಪಕಾರವನ್ನೂ ಮಾಡಿದೆನು. ಇನ್ನುಮೇಲೆ ಈಲೋಕಸುಖಗಳು ಯಾವುದೂ ಆವಶ್ಯಕವಿಲ್ಲವೆಂದಾಲೋಚಿಸಿದಳು. (ಮತ್ತು, ಅನುಭವಿಸತಕ್ಕದ್ದಾದ ಸಕಲಸುಖದುಃಖಗಳೂ ಅನುಭವಿಸಲ್ಪಟ್ಟವು ಎಂದುಭಾವವು.)॥೧೧

ಶ್ಲೋಕ ॥ ಫಲಂ ಚ ಪುಣ್ಯಪಾಪಾನಾಂ
ಮಯಾ ಮಯ್ಯೇವ ವೀಕ್ಷಿತಮ್ ।
ಶಾಸ್ತ್ರಾದೃತೇ ಕಿಮನ್ಯತ್ರ
ಕರ್ಮಪಾಕೋಽಯಮೀಕ್ಷಿತಃ ॥೧೨॥

ಟೀ ॥ ಪುಣ್ಯಪಾಪಾನಾಂ-ಪುಣ್ಯಪಾಪಕರ್ಮಗಳ, ಫಲಂಚ- ಫಲವೂಕೂಡ, ಮಯಾ-ನನ್ನಿಂದ, ಮಯ್ಯೇವ-ನನ್ನಲ್ಲಿಯೇ, ವೀಕ್ಷಿತಂ-ನೋಡಲ್ಪಟ್ಟಿತು., ಶಾಸ್ತ್ರಾದೃತೇ–ಶಾಸ್ತ್ರದಹೊರತು, ಅನ್ಯತ್ರ–ಮತ್ತೆ ಯಾವುದರಲ್ಲಿ, ಅಯಂಕರ್ಮಪಾಕಃ-ಈ ಪುಣ್ಯಪಾಪಕರ್ಮಗಳ ಪರಿಪಾಕವು, ಈಕ್ಷಿತಃ-ನೋಡಲ್ಪಟ್ಟಿತು?.

ತಾತ್ಪರ್ಯ ॥ ಶಾಸ್ತ್ರದಲ್ಲಿ ಹೇಳಲ್ಪಡುವ ಪುಣ್ಯಪಾಪಗಳ ಫಲವನ್ನು ನನ್ನಲ್ಲಿಯೇ ನಾನೇ ಅನುಭವಿಸಿ ತಿಳಿದುಕೊಂಡೆನು. ಕರ್ಮಪರಿಪಾಕವು ಶಾಸ್ತ್ರದಹೊರತು ಮತ್ತೆ ಯಾವುದರಲ್ಲಿ ನೋಡಲ್ಪಟ್ಟೀತು? (ಶಾಸ್ತ್ರವೇ ಮುಖ್ಯಪ್ರಮಾಣವೆಂದಭಿಪ್ರಾಯವು.) ॥ ೧೨ ॥

ಶ್ಲೋಕ॥ ಅತೋಽಪಾಸ್ಯ ಸುತಸ್ನೇಹಂ
ತಪಸ್ಯಾಮಿ ಯಥೋಚಿತಮ್ ।
ಜ್ಞಾತ್ವಾಪಿ ಕುಣ್ಡಪಾತೋಽಯಂ
ಕುತ್ಸಿತಾನಾಂ ಹಿ ಚೇಷ್ಟಿತಮ್ ॥೧೩॥

ಟೀ ॥ ಅತಃ-ಆದಕಾರಣಪದೆಸೆಯಿಂದ, ಸುತಸ್ನೇಹಂ-ಸುತ-ಮಗನಲ್ಲಿರುವ, ಸ್ನೇಹಂ- ಶರೀರಸಂಬಂಧ ಪ್ರಯುಕ್ತವಾದ ಪ್ರೀತಿಯನ್ನು, ಅಪಾಸ್ಯ-ಬಿಟ್ಟು, ಯಥೋಚಿತಂ-ಶಾಸ್ತ್ರೋಕ್ತಪ್ರಕಾರವಾಗಿ, ತಪಸ್ಯಾಮಿ-ತಪಸ್ಸನ್ನು ಮಾಡುತ್ತೇನೆ., ಜ್ಞಾತ್ವಾಪಿ-ತಿಳಿದೂಕೂಡ, ಕುಂಡಪಾತಃ-ಬೆಂಕೀ ಕೊಂಡದಲ್ಲಿ ಬೀಳೋಣವೆಂಬ, ಅಯಂ-ಈ ಸಂಸಾರಸಂಬಂಧವು, ಕುತ್ಸಿತಾನಾಂ-ಮೂರ್ಖರ, ಚೇಷ್ಟಿತಂಹಿ-ಕೃತ್ಯವಲ್ಲವೆ ?.

ತಾತ್ಪರ್ಯ ॥ ಆ ಕಾರಣದದೆಸೆಯಿಂದ ನಾನು ಈ ಶರೀರಸಂಬಂಧ ಪ್ರಯುಕ್ತವಾಗಿ ಉಂಟಾಗಿರುವ ಪುತ್ರವಾತ್ಸಲ್ಯವಂ ಬಿಟ್ಟು ತಪಸ್ಸನ್ನುಮಾಡುತ್ತೇನೆ ' ತಿಳಿದೂನೂ ಬೆಂಕಿಕೊಂಡದಲ್ಲಿ ಬೀಳುವಂತೆ, ಈ ನಾನಾವಿಧವಾದ ಆಧಿವ್ಯಾಧಿಮೊದಲಾದ ದುಃಖಗಳಿಗಾಸ್ಪದವಾದ ಸಂಸಾರಕ್ಕೇನೇ ಕಾರಣವಾದ ಈ ಪುತ್ರಾದಿವಿಷಯವಾದ ಆಶೆಯೆಂಬ ರಾಗದ ಸಂಬಂಧವು ಮೂರ್ಖರಿಗುಚಿತವೇಹೊರತು ವಿವೇಕಿಗಳಿಗಲ್ಲವಷ್ಟೆ ? ಎಂಬದಾಗಿ ವಿಜಯಾಮಹಾದೇವಿಯು ವೈರಾಗ್ಯದಿಂದ ತತ್ತ್ವ ಸ್ಥಿತಿಯಂ ಭಾವಿಸುತ್ತಾಳೆ. ॥ ೧೩ ॥

ಶ್ಲೋಕ॥ ಇತಿ ವೈರಾಗ್ಯತಸ್ತಸ್ಯಾಃ
ಸುನಂದಾಪಿ ವ್ಯರಜ್ಯತ।
ಪಾಕೇ ಹಿ ಪುಣ್ಯಪಾಪಾನಾಂ
ಭವೇದ್ಬಾಹ್ಯಂ ಚ ಕಾರಣಮ್॥೧೪॥

ಟೀ ॥ ಇತಿ-ಈ ಪ್ರಕಾರವಾದ, ತಸ್ಯಾಃ-ಆವಿಜಯಾದೇವಿಯ, ವೈರಾಗ್ಯತಃ-ವೈರಾಗ್ಯದದೆಸೆಯಿಂದ, ಸುನಂದಾಪಿ-ಸುನಂದಾದೇವಿಯೂಕೂಡ, ವ್ಯರಜ್ಯತ- ವೈರಾಗ್ಯವನ್ನು ಹೊಂದಿದಳು., ಪುಣ್ಯಪಾಪಾನಾಂ-ಪುಣ್ಯಪಾಪದ್ವಯಗಳ, ಪಾಕೇ-ಪರಿಪಾಕದದೆಸೆಯಲ್ಲಿಯೂಕೂಡ, ಬಾಹ್ಯಂ-ಹೊರಗಿನ ವಿಷಯವೂ ಕೂಡ, ಕಾರ

ಣಂ(ಸತ್)-ಕಾರಣವಾದಂಥಾದ್ದಾಗಿ, ಭವೇದ್ಧಿ-ಆದೀತಲ್ಲವೆ ?.

ತಾತ್ಪರ್ಯ ॥ ಈ ಪ್ರಕಾರ ಆ ವಿಜಯಾಮಹಾದೇವಿಯು ವೈರಾಗ್ಯದ ದೆಸೆಯಿಂದ ಸುನಂದೆಯೂಕೂಡ ವೈರಾಗ್ಯವನ್ನು ಹೊಂದಿದಳು. ಪುಣ್ಯವು ಪರಿಪಾಕವನ್ನು ಹೊಂದುವದಕ್ಕೂ, ಹಾಗೆಯೇ ಪಾಪವೂಕೂಡ ಪರಿಪಾಕವನ್ನು ಹೊಂದುವುದಕ್ಕೂ, ಮನಶ್ಶುದ್ಧಿ ಮನೋದೋಷ ದುಷ್ಪರಿಣಾಮ ಇವುಗಳು ಹೇಗೆ ಕಾರಣಗಳೋ ಹಾಗೆ ಹೊರಗಿನವಿಷಯಗಳೂಕೂಡ ಕಾರಣವಾಗುತ್ತದೆಯಲ್ಲವೆ ? ॥ ೧೭ ॥

ಶ್ಲೋಕ ॥ ತತಃ ಕೃಚ್ಛ್ರಾಯಮಾಣಂ ತೇ
ಮಹೀನಾಥಂ ಚ ಕೃಚ್ಛ್ರತಃ ।
ಅನುಜ್ಞಾಪ್ಯ ತತೋ ಗತ್ವಾ-
ದೀಕ್ಷಿಷಾತಾಂ ಯಥಾವಿಧಿ ॥೧೫॥

ಟೀ ॥ ತತಃ-ಅನಂತರದಲ್ಲಿ, ಕಛ್ರಾಯಮಾಣಂ-ಬಹಳವಾಗಿ ದುಃಖಿಸುತಲಿರುವ, ಮಹೀನಾಥಂ ಚ-ಮಗನಾದ ಜೀವಂಧರ ಮಹಾರಾಜನನ್ನು ಕೂಡ, ಕೃಛ್ರತಃ-ಬಹು ಪ್ರಯತ್ನದದೆಸೆಯಿಂದ, ತೇ-ಆ ತಾಯಿಯರಾದ ವಿಜಯಾದೇವಿ, ಸುನಂದಾದೇವಿ ಇವರೀರ್ವರೂ, ಅನುಜ್ಞಾಪ್ಯ-ಸಮ್ಮತಪಡಿಸಿ, ತತಃ-ಆ ಬಳಿಕ, ಗತ್ವಾ-ಹೊರಟು, ಯಥಾವಿಧಿ-ಶಾಸ್ತ್ರೋಕ್ತಪ್ರಕಾರವಾಗಿ, ಅದೀಕ್ಷಿಷಾತಾಂ-ದೀಕ್ಷೆಯನ್ನುತೆಗೆದುಕೊಂಡರು.

ತಾತ್ಪರ್ಯ ॥ ಅನಂತರದಲ್ಲಿ ತಾಯಿಯರಾದ ವಿಜಯಾಸುನಂದೆಯರ ದೀಕ್ಷಾಪ್ರಯತ್ನವಂ ನೋಡಿ, ಬಹಳ ದುಃಖಿಸುತ್ತಿರುವ ಜೀವಂಧರ ಮಹಾರಾಜನನ್ನು ಬಹುಪ್ರಯತ್ನದಿಂದ ಸಮಾಧಾನಪಡಿಸಿ ಅವನಸಮ್ಮತಿಯಂಪಡೆದು ಈವಿಜಯಾ ಸುನಂದಾದೇವಿಯರಿಬ್ಬರೂ ಅನಂತರ ಹೋಗಿ ಶಾಸ್ತ್ರೋಕ್ತಪ್ರಕಾರವಾಗಿ ದೀಕ್ಷೆಯನ್ನಂಗೀಕರಿಸಿದರು.॥೧೫॥

ಶ್ಲೋಕ॥ ಪದ್ಮಾಖ್ಯಾಶ್ರಮಣೀ ಮುಖ್ಯಾ
ವಿಶ್ರಾಣ್ಯಾಶ್ರಮಣೀ ಪದಮ್ ।
ತನ್ಮಾತೃಭ್ಯಂ ತತಸ್ತಂ ಚ
ಮಹೀನಾಥಮಚೋದಯತ್ ॥೧೬॥

ಟೀ ॥ ಪದ್ಮಾಖ್ಯಾ-ಪದ್ಮೆಎಂಬ ನಾಮಧೇಯವುಳ್ಳ, ಶ್ರಮಣೀಮುಖ್ಯಾ-ಅಜ್ಜಿಕೆಯರಲ್ಲಿ ಪ್ರಧಾನಳಾದ ಅಜ್ಜಿಕೆಯು, ತನ್ಮಾತೃಭ್ಯಾಂ– ತತ್- ಆ ಜೀವಂಧರ ಮಹಾರಾಜನ, ಮಾತೃಭ್ಯಾಂ-ತಾಯಿಗಳಾದ ವಿಜಯಾ ಸುನಂದೆಯರಿಗೋಸುಗ, ಶ್ರಮಣೀಪದಂ-ಜಿನದೀಕ್ಷೆಯನ್ನು, ವಿಶ್ರಾಣ್ಯ-ಕೊಟ್ಟು, ತತಃ- ಅನಂತರದಲ್ಲಿ, ಮಹೀನಾಥಂ-ಮಹಾರಾಜನಾದ, ತಂಚ- ಆ ಜೀವಂಧರಕುಮಾರನನ್ನು ಕೂಡ, ಅಜೋದಯತ್-ಬೋಧಿಸಿದಳು.

ತಾತ್ಪರ್ಯ ॥ ಪದ್ಮೆಯೆಂದು ನಾಮಧೇಯವುಳ್ಳ ಅಜ್ಜಿಕೆಯರಲ್ಲಿಪ್ರಧಾನಳಾದ ಅಜ್ಜಿಕೆಯು, ಆ ವಿಜಯಾಸುನಂದೆಯರಿಗೆ ಜಿನದೀಕ್ಷೆಯಂ ಕೊಟ್ಟು, ಆ ಜೀವಂಧರಮಹಾರಾಜನಿಗೆ ತತ್ತ್ವವಂಬೋಧಿಸಿದಳು.॥೧೬

ಶ್ಲೋಕ॥ ಪ್ರವ್ರಜ್ಯಾ ಜಾತುಚಿತ್ಪ್ರಾಜ್ಞೈಃ
ಪ್ರತಿಷೇದ್ಧುಂ ನ ಯುಜ್ಯತೇ ।
ನಹಿ ಖಾದಾಪತಂತೀಚೇ-
ದ್ರತ್ನವೃಷ್ಟಿರ್ನಿವಾರ್ಯತೇ ॥೧೭॥

ಟೀ ॥ ಪ್ರವ್ರಜ್ಯಾ-ದೀಕ್ಷೆಯು, ಜಾತುಚಿತ್-ಯಾವಾಗಲೂ, ಪ್ರಾಜ್ಞೈಃ-ವಿವೇಕಿಗಳಿಂದ, ಪ್ರತಿಷೇದ್ಧುಂ-ತಡೆಯುಲೋಸುಗ, ನಯುಜ್ಯತೇ-ಯೋಗ್ಯವಾಗುವುದಿಲ್ಲವು, ರತ್ನವೃಷ್ಟಿಃ-ರತ್ನಗಳ ಮಳೆಯು, ಖಾತ್-ಆಕಾಶದ ದೆಸೆಯಿಂದ, ಆಪತಂತೀಚೇತ್-ಬಿದ್ದದ್ದೇ ಆದರೆ, ನನಿವಾರ್ಯತೇ ಹಿ-ತಡೆಯಲ್ಪಡುವುದಿಲ್ಲವಷ್ಟೆ ?.

ತಾತ್ಪರ್ಯ ॥ ಪದ್ಮೆಯೆಂಬ ಅಜ್ಜಿಕೆಯು ಜೀವಂಧರಸ್ವಾಮಿಗೆ ದುಃಖಸಮಾಧಾನಾರ್ಥವಾಗಿ ತತ್ತ್ವವಂ ಬೋಧಿಸುತ್ತಾಳೆ. ಏನೆಂದರೆ.- ಈಲೋಕದಲ್ಲಿ ದೀಕ್ಷೆಯನ್ನಪೇಕ್ಷಿಸುವರೇ ಪರಮದುರ್ಲಭರಾದುದರಿಂದ ಆಸನ್ನಭವ್ಯರಾದ ಯಾರಾವರೂ ಮಹಾತ್ಮರಾದವರು ದೀಕ್ಷೆಯನ್ನಪೇಕ್ಷಿಸಿದರೆ ಪ್ರಾಜ್ಞರು ಸಂತೋಷಿಸುವರೇಹೊರತು ಅಜ್ಞಾನಿಯಂತೆ ತಡೆಯುವರೇ ? ಆದಕಾರಣ ನೀನು ವ್ಯಸನಪಡುವುದು ನ್ಯಾಯವಲ್ಲವು. ಇದಕ್ಕೆ ಉದಾಹರಣ.-- ಆಕಾಶದಿಂದ ರತ್ನದ ಮಳೆಯುಸುರಿದರೆ ತಡೆಯುವುದುಂಟೆ ? ಹಾಗೆ ದೀಕ್ಷೆಯಲ್ಲಿ ಪ್ರವರ್ತಿಸಿದವರನ್ನು ತಡೆಯಕೂಡದು. ॥ ೧೭ ॥

ಶ್ಲೋಕ॥ ವಯಸ್ಯಂತ್ಯೇಽಪಿವಾ ದೀಕ್ಷಾಂ
ಪ್ರೇಕ್ಷಾವದ್ಭಿರಪೇಕ್ಷ್ಯತಾಮ್।
ಭಸ್ಮನೇ ರತ್ನಹಾರೋಽಯಂ
ಪಂಡಿತೈರ್ನಹಿ ದಹ್ಯತೇ ॥೧೪॥

ಟೀ ॥ ಅಂತ್ಯೇ- ಕೊನೆಯದಾದ, ವಯಸ್ಯಪಿವಾ-ವಯಸ್ಸಿನಲ್ಲಾದರೂ(ಮು ಪ್ಪಿನಕಾಲದಲ್ಲಾದರೂ), ದೀಕ್ಷಾ-ಜಿನದೀಕ್ಷೆಯು, ಪ್ರೇಕ್ಷಾವದ್ಭಿಃ-ವಿವೇಕಿಗಳಾದಜ ನಗಳಿಂದ, ಅಪೇಕ್ಷ್ಯತಾಂ- ಅಪೇಕ್ಷಿಸಲ್ಪಡಬೇಕು.; ರತ್ನಹಾರಃ- ರತ್ನಹಾರವೆಂ ಪರಮದುರ್ಲಭವಾದ, ಅಯಂ-ಈದೇಹವು, ಭಸ್ಮನೇ-ಬೂದಿಗೋಸ್ಕರ, ಪಂಡಿತೈಃ- ವಿವೇಕಿಗಳಿಂದ, ನದಹ್ಯತೇಹಿ-ದಹಿಸಲ್ಪಡುವುದಿಲ್ಲವಷ್ಟೆ ?

ತಾತ್ಪರ್ಯ॥ ಪದ್ಮೆಯು ಹೇಳುತ್ತಾಳೆ.-- ಯೌವನವಯಸ್ಸಿನಲ್ಲಿ ಈ ವೈರಾಗ್ಯವುಂಟಾಗುವುದು ಅತ್ಯಂತ ಶ್ಲಾಘ್ಯವು. ಅದು ಬಹಳ ಅ ಸಾಧ್ಯವಾದುದರಿಂದ ಮುಪ್ಪಿನಕಾಲದಲ್ಲಾದರೂ ಪ್ರಾಜ್ಞರು ದೀಕ್ಷೆಯ ನ್ನಪೇಕ್ಷಿಸಬೇಕು. ಹಾಗೆ ಮುಪ್ಪಿನಕಾಲದಲ್ಲಿಯೂಕೂಡ ವೈರಾಗ್ಯ ಉಂಟಾಗದೆ ಸಂಸಾರದ ಆಶಾಪಾಶದಿಂ ಬದ್ಧನಾಗಿದ್ದಲ್ಲಿ, ರತ್ನಹಾರವ ಭಸ್ಮಮಾಡುವದಕ್ಕೋಸುಗ ದಹಿಸುವ ಪರಮಮೂಢನಂತೆ ಪರಮದು ರ್ಲಭವಾದ ಮನುಷ್ಯದೇಹವಂ ವ್ಯರ್ಥಮಾಡಿಕೊಳ್ಳುತ್ತಾನೆಂದಭಿ ಪ್ರಾಯವು. ॥ ೧೪ ॥

ಶ್ಲೋಕ॥ ಇತಿ ಪ್ರಬೋಧಿತೋ ನತ್ವಾ
ಪ್ರಸವಿತ್ರೀ ಸಕಾಶತಃ ।
ಪ್ರಶ್ರಯೇಣ ಗತೋ ರಾಜಾ
ಪ್ರಾವಿಕ್ಷನ್ನಿಜಮಂದಿರಮ್ ॥೧೫॥

ಟೀ ॥ ಇತಿ-ಈಪ್ರಕಾರ, ಪ್ರಬೋಧಿತಃ-ಪದ್ಮೆಯಿಂದ ವಿಶೇಷವಾಗಿಬೋಧಿ ಲ್ಪಟ್ಟ, ರಾಜಾ-ಜೀವಂಧರಮಹಾರಾಜನು, ನತ್ವಾ-ನಮಸ್ಕರಿಸಿ, ಪ್ರಸವಿತ್ರೀಸ ಕಾಶತಃ-ಪ್ರಸವಿತ್ರೀ-ತಾಯಿಯ, ಸಕಾಶತಃ- ಸವಿಾಪದೆಸೆಯಿಂದ, ಪ್ರಶ್ರಯೇ ವಿನಯದಿಂದ, ಗತ(ಸ್ಸನ್)-ಹೊರಟಂಥಾವನಾಗಿ, ನಿಜಮಂದಿರಂ- ತನ್ನ ಅರಮ ನೆಯನ್ನು, ಪ್ರಾವಿಕ್ಷತ್-ಪ್ರವೇಶಿಸಿದನು.

ತಾತ್ಪರ್ಯ॥ ಈಪ್ರಕಾರ ಅಜ್ಜಿಕೆಯಾದ ಪದ್ಮೆಯಿಂದ ವಿಶೇಷವಾಗಿ ತತ್ತ್ವಬೋಧೆಮಾಡಲ್ಪಟ್ಟ ಜೀವಂಧರಮಹಾರಾಜನು ಆ ಅಜ್ಜಿಕೆಯಾದ ಪದ್ಮೆಯಂ ನಮಸ್ಕರಿಸಿ ತಾಖಿಗಳ ಸಮೀಪದದೆಸೆಯಿಂದ ಬಹಳವಿನೀತನಾಗಿ ಹೊರಟು ತನ್ನ ಅರಮನೆಯಂ ಪ್ರವೇಶಿಸಿದನು. ॥ ೧೯ ॥

ಶ್ಲೋಕ ॥ ನ ಚಿರಾಯು ಪದಂ ದತ್ತೇ
ಕೃತಿನಾಂ ಹೃದಿ ವಿಕ್ರಿಯಾ ॥
ಯದಿ ರತ್ನೇ ಹಿ ಮಾಲಿನ್ಯಂ
ನ ಹಿ ತತ್ಕೃಚ್ಛ್ರಶೋಧನಮ್ ॥೨೦॥

ಟೀ॥ ಕೃತಿನಾಂ-ಪುಣ್ಯಶಾಲಿಗಳ, ಹೃದಿ-ಮನಸ್ಸಿನಲ್ಲಿ, ವಿಕ್ರಿಯಾ-ವಿಕಾರವು, ಚಿರಾಯು-ಬಹುಕಾಲದ ವರೆಗೂ, ಪದಂ-ಕಾಲನ್ನು, ನದತ್ತೇ-ಇಡುವುದಿಲ್ಲವು., ರತ್ನೇ-ರತ್ನದಲ್ಲಿ, ಮಾಲಿನ್ಯಂ-ಕೊಳೆಯು, ಯದಿ-ಉಂಟಾದದ್ದೇಆದರೆ, ತತ್-ಅದು, ಕೃಚ್ಛ್ರಶೋಧನಂ (ಸತ್) - ಪ್ರಯಾಸದಿಂದ ಹೋಗಲಾಡಿಸಲ್ಪಡ ತಕ್ಕದ್ದಾಗಿ, ನಹಿ-ಆಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ಪುಣ್ಯಶಾಲಿಗಳ ಮನಸ್ಸಿನಲ್ಲಿ ಶೋಕಮೋಹಾದಿ ವಿಕಾರಗಳು ಬಹಳ ಹೊತ್ತು ಇರುವುದಿಲ್ಲವು. ಅದಕ್ಕೆ ದೃಷ್ಟಾಂತವೇನೆಂದರೆ.—ರತ್ನದಲ್ಲಿ ಕೊಳೆಯುಸಂಬಂಧಿಸಿದುದೇಆದರೆ, ಪ್ರಯಾಸದಿಂದ ಹೋಗಲಾಡಿಸಲ್ಪಡುವುದಿಲ್ಲವಷ್ಟೆ?. (ಪ್ರಯಾಸವಿಲ್ಲದೆ ಕ್ಷಣಮಾತ್ರದಲ್ಲಿ ಹೋಗಲಾಡಿಸಬಹುದೆಂದಭಿಪ್ರಾಯವು.) ॥೨೦॥

ಶ್ಲೋಕ॥ ಅಥಾಸ್ಯ ಕ್ಷಾತ್ರವಿದ್ಯಸ್ಯ
ಕ್ಷಣವದ್ಭುಂಜತೋ ಮಹೀಮ್ ।
ತ್ರಿದಶೋಪಮ ಸೌಖ್ಯೇನ
ತ್ರಿಂಶದ್ವರ್ಷಾಣ್ಯಯಾಸಿಷುಃ ॥ ೨೧ ॥

ಟೀ ॥ ಅಥ-ಅನಂತರದಲ್ಲಿ, ಕ್ಷಾತ್ರವಿದ್ಯಸ್ಯ— ಕ್ಷಾತ್ರ- ಕ್ಷತ್ರಿಯೋಚಿತವಾದ, ವಿದ್ಯಸ್ಯ-ದಂಡನೀತಿ ವಿದ್ಯೆಯುಳ್ಳವನಾಗಿ, ಮಹೀಂ-ಭೂಮಿಯನ್ನು, ಭುಂಜತಃ-ರಕ್ಷಿಸುತ್ತಿರುವ, ಅಸ್ಯ-ಈ ಜೀವಂಧರಮಹಾರಾಜನಿಗೆ, ತ್ರಿದಶೋಪಮಸೌಖ್ಯೇನ-ತ್ರಿದಶ-ದೇವತೆಗಳಿಗೆ, ಉಪಮ-ಉಚಿತವಾದ, ಸೌಖ್ಯೇನ-ಸುಖದಿಂದ, ತ್ರಿಂಶದ್ವ

ವರ್ಷಾಣಿ-ಮೂವತ್ತು ವರ್ಷಗಳು, ಕ್ಷಣವತ್- ಕ್ಷಣಕಾಲವ್ಹೋಪಾದಿಯಲ್ಲಿ, ಅಯಾಸಿ ಷುಃ-ಕಳೆದವು.

ತಾತ್ಪರ್ಯ॥ ಅನಂತರದಲ್ಲಿ ದಂಡನೀತಿಯುಳ್ಳವನಾಗಿ ದೇವತೆಗಳಸು ಖಕ್ಕೆ ಸಮಾನವಾದ ಸುಖದಿಂದ ಭೂಮಿಯನ್ನು ಅನುಭವಿಸುತ್ತಿರುವ ಜೀವಂಧರ ಮಹಾರಾಜನಿಗೆ ಮೂವತ್ತು ವರುಷಗಳು ಕ್ಷಣದಂತೆ ಕಳೆ ದುಹೋದವು. ಅಂದರೆ ( ದೇವಭೋಗಸಮಾನವಾದ ಭೋಗವನ್ನನುಭ ವಿಸುವವನಾಗಿ ಜೀವಂಧರ ಮಹಾರಾಜನು ಮೂವತ್ತು ವರ್ಷಗಳು ರಾಜ್ಯಪರಿಪಾಲನೆಯಂ ಮಾಡಿದನು. ಅದು ಆ ಮಹಾರಾಜಭೋಗದಿಂದ ಕ್ಷಣದಂತೆ ತೋರಿತೆಂದಭಿಪ್ರಾಯವು.

ಶ್ಲೋಕ॥ ತತಃ ಕದಾಚಿತ್ತಸ್ಯಾಸೀ-
ಜ್ಜಲಕ್ರೀಡಾ ಮಹೋತ್ಸವಃ |
ವಸಂತೇ ಸಹ ಕಾನ್ತಾಭಿ-
ರಷ್ಟಾಭಿರತಿ ಕೌತುಕಾತ್ ॥ ೨೭ ॥

ಟೀ ॥ ತತಃ-ಅನಂತರದಲ್ಲಿ, ಕದಾಚಿತ್-ಒಂದಾನೊಂದು ಕಾಲದಲ್ಲಿ, ವಸಂ ತೇ-ವಸಂತಋತುವಿನಲ್ಲಿ, ಅಷ್ಟಾಭಿಃ-ಎಂಟುಮಂದಿಯಾದ, ಕಾಂತಾಭಿಸ್ಸಹ-ಪತ್ನಿ ಯರೊಡನೆಕೂಡ, ತಸ್ಯ-ಆ ಜೀವಂಧರಮಹಾರಾಜನಿಗೆ, ಅತಿಕೌತುಕಾತ್- ಅತ್ಯಂ ತಕುತೂಹಲದ ದೆಸೆಯಿಂದ, ಜಲಕ್ರೀಡಾಮಹೋತ್ಸವಃ - ಜಲಕ್ರೀಡೆಯೆಂಬ ಮ ಹೋತ್ಸವವು, ಆಸೀತ್-ಆಯಿತು.

ತಾತ್ಪರ್ಯ ॥ ಅನಂತರದೊಳೊಂದಾನೊಂದುಕಾಲದಲ್ಲಿ ವಸಂತಋ ತುಸಮಯದಲ್ಲಿ ಎಂಟುಮಂದಿ ಪತ್ನಿಯರೊಡನೆಕೂಡ ಅತ್ಯಂತಕುತೂ ಹಲದಿಂದ ಆಜೀವಂಧರಮಹಾರಾಜನಿಗೆ ಜಲಕ್ರೀಡೆಯೆಂಬ ಮಹೋತ್ಸವ ವು ಉಂಟಾಯಿತು ॥೨೭॥

ಶ್ಲೋಕ॥ ಜಲಕ್ರೀಡಾಶ್ರಮಾತ್ತ್ರೋಯ-
ಮಾಕ್ರೀಡೇ ಚ ಸನೀಡಕೇ ।
ಕ್ರೀಡನ್ ಕಾಪಿಕೈಶ್ಚಾನ್ಯೋ
ಕಾಪೇಯಂ ನಿರವರ್ಣಯತ್ ॥ ೨೮ ॥

ಟೀ ॥ ಸೋಯಂ-ಆ ಈ ಜೀವಂಧರಮಹಾರಾಜನು, ಜಲಕ್ರೀಡಾಶ್ರಮಾತ್-ಜಲಕ್ರೀಡೆಯಿಂಮಂಟಾದ ಆಯಾಸದ ದೆಸೆಯಿಂದ, ಸನೀಡಕೇ- ಪಕ್ಷಿಗಳಗೂಡುಗಳೊಡಗೂಡಿರುವ, ಆಕ್ರೀಡೇ-ಉದ್ಯಾನವನದಲ್ಲಿ, ಕ್ರೀಡನ್(ಸನ್)-ವಿನೋದದಿಂದಾಡುವವನಾಗಿ, ಕಾಪಟಕ್ಯೈಃ-ಕಪಟವೇ ಪ್ರಯೋಜನವಾಗಿವುಳ್ಳವರಿಂದ, ಶ್ಲಾಘ್ಯಂ-ಶ್ಲಾಘಿಸುವುದಕ್ಕೆ ಯೋಗ್ಯವಾದ, ಕಾಪೇಯಂ- ಕಪಿಗಳ ಚೇಷ್ಟೆಯನ್ನು, ನಿರವರ್ಣಯತ್-ನೋಡಿದನು.

ತಾತ್ಪರ್ಯ ॥ ಆ ಈ ಜೀವಂಧರ ಮಹಾರಾಜನು ಜಲಕ್ರೀಡೆಯಿಂದುಂಟಾದ ಆಯಾಸದದೆಸೆಯಿಂದ ಅನೇಕ ಪಕ್ಷಿಗಳ ಗೂಡುಗಳುಳ್ಳ ಆ ಉದ್ಯಾನ ವನದಲ್ಲಿ ವಿನೋದದಿಂದ ಸಂಚರಿಸುತ್ತಿರುವ ಸಮಯದೊಳು ಪಾಮರಜನಗಳಿಂದ ಶ್ಲಾಘಿಸುವುದಕ್ಕೆ ಯೋಗ್ಯವಾದ ಕೆಲವು ಕಪಿಗಳ ಚೇಷ್ಟೆಯನ್ನು ಚೆನ್ನಾಗಿ ನೋಡಿದನು ॥೨೩॥

ಶ್ಲೋಕ॥ ಅನ್ಯಸಮ್ಪರ್ಕತಃ ಕ್ರುದ್ಧಾಂ
ಮರ್ಕಟೀಂ ಕೋಽಪಿ ಮರ್ಕಟಃ ।
ಪ್ರಕೃತಿಸ್ಥಾಂ ಬಹೂಪಾಯೈ-
ರ್ನಾಶಕತ್ಕರ್ತುಮುದ್ಯತಃ ॥ ೨೪ ॥

ಟೀ ॥ ಕೋಪಿ-ಒಂದಾನೊಂದು, ಮರ್ಕಟಃ-ಕಪಿಯು, ಅನ್ಯಸಂಪರ್ಕತಃ-ಮತ್ತೊಂದು ಕಪಿಯ ಸಂಭೋಗದದೆಸೆಯಿಂದ, ಕ್ರುದ್ಧಾಂ- ಕೋಪಿಸಿಕೊಂಡಿರುವ, ಮರ್ಕಟೀಂ-ಹೆಣ್ಣು ಕಪಿಯನ್ನು, ಬಹೂಪಾಯೈಃ-ಅನೇಕ ಉಪಾಯಗಳಿಂದ, ಪ್ರಕೃತಿಸ್ಥಾಂ(ಸತೀಂ)- ಪೂರ್ವಸ್ವಭಾವವನ್ನು ಹೊಂದಿರುವಂಥಾದ್ದನ್ನಾಗಿ, ಕರ್ತುಂ-ಮಾಡಲೋಸುಗ, ಉದ್ಯತ(ಸ್ಸನ್)-ಉದ್ಯುಕ್ತವಾಗಿ, ನಾಶಕತ್-ಸಮರ್ಥವಾಗಲಿಲ್ಲವು.

ತಾತ್ಪರ್ಯ ॥ ಆ ಉದ್ಯಾನವನದಲ್ಲಿ ಒಂದು ಗಂಡುಕಪಿಯು ಮತ್ತೊಂದು ಹೆಣ್ಣು ಕಪಿಯೊಡನೆ ಸೇರಿದುದರಿಂದ ಕೋಪಿಸಿಕೊಂಡಿರುವ ತನ್ನ ಹೆಣ್ಣು ಕಪಿಯನ್ನು ಸಮಾಧಾನಪಡಿಸಲೋಸುಗ ನಾನಾವಿಧೋಪಾಯಗಳಂ ಮಾಡಿದಾಗ್ಯೂ ಸಾಧ್ಯವಾಗಲಿಲ್ಲವು ॥೨೪॥

ಶ್ಲೋಕ॥ ತತಶ್ಯಾಖಾಮೃಗೋಽಸ್ಯಾಸೀ-
ನ್ಮಾಯಿಕೋ ಮೃತವದ್ವಶಃ ।

ತದವಸ್ಥಾಂ ಭಯಗ್ರಸ್ತಾ
ವಾನರೀಯಮಪಾಕರೋತ್ ॥ ೨೫ ॥

ಟೀ ॥ ತತಃ-ಅನಂತರದಲ್ಲಿ, ಮಾಯಿಕಃ- ವಂಚಕವಾದ, ಶಾಖಾಮೃಗೋ ಪಿ-ಕಪಿಯೂಕೂಡ, ಮೃತವದ್ವಶ(ಸ್ಸನ್)-ಮರಣವನ್ನು ಹೊಂದಿದಂತೆ ನಟಿಸು ವಂಥಾದ್ದಾಗಿ, ಆಸೀತ್-ಆಯಿತು., ಇಯಂ ವಾನರೀ-ಈ ಹೆಣ್ಣು ಕಪಿಯು, ಭಯ ಗ್ರಸ್ತಾ(ಸತೀ)-ಭೀತಿಯೊಡಗೂಡಿದಮನಸ್ಸುಳ್ಳದ್ದಾಗಿ, ತದವಸ್ಥಾಂ-ತತ್-ಆ ಗಂ ಡುಕಪಿಯ, ಅವಸ್ಥಾಂ-ದುಃಖದಶೆಯನ್ನು, ಅಪಾಕರೋತ್-ಹೋಗಲಾಡಿಸಿತು.

ತಾತ್ಪರ್ಯ ॥ ಅನಂತರದಲ್ಲಿ ಆ ವಂಚಕವಾದ ಗಂಡು ಕಪಿಯೂಕೂ ಡ ಸತ್ತುಹೋದಂತೆ ನಿಶ್ಚಂಚಲಶರೀರವುಳ್ಳದ್ದಾಗಿ ಸುಮ್ಮನೆ ನಟನೆಮಾ ಡಿತು. ಆಗ ಈ ಹೆಣ್ಣುಕಪಿಯೂ ಕೂಡ ಮೊದಲಿದ್ದ ಕೋಪವಂ ಬಿ ಟ್ಟುಗಾಬರಿಯಾಗಿ ಆ ಗಂಡುಕಪಿಯ ದುಃಖವಂ ಸಮಾಧಾನಪಡಿಸಿತು॥

ಶ್ಲೋಕ॥ ಹರ್ಷುಲೋ ಹರಿರಪ್ಯಸ್ಯೈ
ಪನಸಸ್ಯ ಫಲಂ ದದೌ ।
ವನಪಾಲೋ ಜಹಾರೈತ-
ದ್ವಾನರೀಮಪಿ ಭರ್ತ್ಸಯನ್ ॥ ೨೬ ॥

ಟೀ॥ ಹರ್ಷುಲಃ-ಸಂತುಷ್ಟವಾದ, ಹರಿರಪಿ-ಗಂಡುಕಪಿಯೂಕೂಡ, ಅಸ್ಯೈ-ಈ ಹೆಣ್ಣು ಕಪಿಗೋಸುಗ, ಪನಸಸ್ಯ-ಹಲಸಿನ, ಫಲಂ-ಹಣ್ಣನ್ನು, ದದೌ- ಕೊಟ್ಟಿ ತು., ವನಪಾಲಃ-ಉದ್ಯಾನದ ಕಾವಲುಗಾರನು, ವಾನರೀಮಪಿ- ಹೆಣ್ಣು ಕಪಿಯ ನ್ನೂಕೂಡ, ಭರ್ತ್ಸಯನ್(ಸನ್)-ಹೆದರಿಸುವವನಾಗಿ, ಏತತ್-ಈಹಣ್ಣನ್ನು, ಜಹಾ ರ-ಕಿತ್ತುಕೊಂಡನು (ತೆಗೆದುಕೊಂಡನು).

ತಾತ್ಪರ್ಯ ॥ ಆ ಗಂಡು ಕಪಿಯೂಕೂಡ ಸಂತುಷ್ಟವಾಗಿ ಆ ಹೆ ಣ್ಣು ಕಪಿಗೆ ಒಂದು ಹಲಸಿನಹಣ್ಣನ್ನು ಕೊಟ್ಟಿತು. ಉದ್ಯಾನವನದ ಕಾವಲುಗಾರನು ಆ ಹೆಣ್ಣುಕಪಿಯನ್ನು ಹೆದರಿಸಿ ಆ ಹಲಸಿನಹಣ್ಣನ್ನು ತೆಗೆದುಕೊಂಡನು ॥೨೬॥

ಶ್ಲೋಕ॥ ಇತ್ಯಶೇಷಂ ವಿಶೇಷಜ್ಞೋ
ವೀಕ್ಷಮಾಣಃ ಕ್ಷಿತೀಶ್ವರಃ ।

ತತ್‌ಕ್ಷಣೇ ಜಾತವೈರಾಗ್ಯಾ-
ದನುಪ್ರೇಕ್ಷಾಮಭಾವಯತ್ ॥ ೨೭ ॥

ಟೀ ॥ ವಿಶೇಷಜ್ಞಃ-ವಿಶೇಷವನ್ನು ತಿಳಿದಿರುವಂಥ, ಕ್ಷಿತೀಶ್ವರಃ-ಜೀವಂಧರಮಹಾರಾಜನು, ಇತಿ-ಈ ಪೂರ್ವೋಕ್ತವಾದ, ಅಶೇಷಂ-ಸಮಸ್ತಕೃತ್ಯವನ್ನೂ, ವೀಕ್ಷಮಾಣ(ಸ್ಸನ್)-ನೋಡುವವನಾಗಿ, ತತ್‌ಕ್ಷಣೇ-ಆ ಕ್ಷಣದಲ್ಲಿಯೇ, ಜಾತ ವೈರಾಗ್ಯಾತ್-ಜಾತ-ಉತ್ಪನ್ನವಾದ, ವೈರಾಗ್ಯಾತ್-ವೈರಾಗ್ಯದದೆಸೆಯಿಂದ, ಅನುಪ್ರೇಕ್ಷಾಂ-ದ್ವಾದಶಾನುಪ್ರೇಕ್ಷೆಯನ್ನು, ಅಭಾವಯತ್-ಭಾವಿಸಿದನು (ಧ್ಯಾನಿಸಿದನು).

ತಾತ್ಪರ್ಯ ॥ ಅನಂತರ ವಿಶೇಷವಂ ಬಲ್ಲವನಾದ ಜೀವಂಧರಮಹಾರಾಜನು ಈ ಪೂರ್ವೋಕ್ತವಾದ ಸಮಸ್ತ ಕೃತ್ಯವನ್ನೂ ನೋಡುವವನಾಗಿ ಆ ಕ್ಷಣದಲ್ಲಿಯೇ ಉಂಟಾದ ವೈರಾಗ್ಯದ ದೆಸೆಯಿಂದ ದ್ವಾದಶಾನುಪ್ರೇಕ್ಷೆಯಂ ಭಾವಿಸಿದನು. ( ಆಸನ್ನಭವ್ಯಾತ್ಮರಿಗೆ ವೈರಾಗ್ಯಹುಟ್ಟುವುದಕ್ಕೆ ಯಾವುದಾದರೊಂದು ನೆವವುಸಿಕ್ಕಿದರೆ ಸಾಕಲ್ಲವೆ? )॥೨೭॥

ಶ್ಲೋಕ॥ ಮದ್ಯತೇ ವನಪಾಲೋಯಂ
ಕಾಷ್ಠಾಂಗಾರಾಯತೇ ಹರಿಃ ।
ರಾಜ್ಯಂ ಫಲಾಯತೇ ತಸ್ಮಾ-
ನ್ಮಯ್ಯೈವ ತ್ಯಾಜ್ಯಮೇವ ತತ್ ॥ ೨೮ ॥

ಟೀ ॥ ಅಯಂವನಪಾಲಃ-ಈ ಉದ್ಯಾನವನದ ಕಾವಲುಗಾರನು, ಮದ್ಯತೇ-ನನ್ನಂತೆ ಆಚರಿಸುತ್ತಾನೆ., ಹರಿಃ-ಕಪಿಯು, ಕಾಷ್ಠಾಂಗಾರಾಯತೇ-ಕಾಷ್ಠಾಂಗಾರನೋಪಾದಿಯಲ್ಲಿ ಆಚರಿಸುತಲಿದೆ., ರಾಜ್ಯಂ-ರಾಜ್ಯವು, ಫಲಾಯತೇ- ಹಲಸಿನಹಣ್ಣಿನೋಪಾದಿಯಲ್ಲಿ ಆಚರಿಸುತಲಿದೆ., ತಸ್ಮಾತ್-ಆ ಕಾರಣದ ದೆಸೆಯಿಂದ, ತತ್-ಆ ರಾಜ್ಯವು, ಮಯ್ಯೈವ-ನನ್ನಿಂದಲೇ, ತ್ಯಾಜ್ಯಮೇವ-ಬಿಡುವುದಕ್ಕೇ ಯೋಗ್ಯವು.

ತಾತ್ಪರ್ಯ ॥ ಜೀವಂಧರಮಹಾರಾಜನು ವೈರಾಗ್ಯದಿಂದ ತತ್ತ್ವವನ್ನು ಭಾವಿಸುತ್ತಾನೆ.— ಈ ಉದ್ಯಾನವನದ ಕಾವಲುಗಾರನು ನನ್ನಂತೆ ಯಾದನು. ಅಂದರೆ, (ನಾನು ಹೇಗೆ ಕಾಷ್ಠಾಂಗಾರನಸ್ವಾಧೀನವಾಗಿದ್ದ ರಾಜ್ಯವನ್ನು ತೆಗೆದುಕೊಂಡೆನೋ ಹಾಗೆ ಕಾವಲುಗಾರನು ಕಪಿಯಂ ಹೆದರಿಸಿ ಹಣ್ಣನ್ನು ತೆಗೆದುಕೊಂಡನಲ್ಲವೆ ?.) ಮೂಲಸ್ಥಾನವಾದ ನಮ್ಮ

ಕಂದೆಯಲ್ಲಿದ್ದ ರಾಜ್ಯವನ್ನಪಹರಿಸಿದ ಕಾಷ್ಠಾಂಗಾರನಂತೆ ಮೂಲಸ್ಥಾನ ವಾದ ವೃಕ್ಷದಿಂದ ಹಣ್ಣನ್ನಪಹರಿಸಿದುದರಿಂ ಕಪಿಯು ಕಾಷ್ಠಾಂಗಾರನು ತಾದುದು. ರಾಜ್ಯವೇ ಹಲಸಿನಹಣ್ಣಿನಂತಾಯಿತು. ಆದಕಾರಣ ನಾ ನೇ ವಿರಕ್ತನಾಗಿ ಆ ರಾಜ್ಯವಂ ಪರಿತ್ಯಜಿಸುವುದುಚಿತವಲ್ಲವೆ? ॥

ಶ್ಲೋಕ ॥ ಜಾತಾಃ ಪುಷ್ಟಾಃ ಪುನರ್ನಷ್ಟಾ
ಇತಿ ಪ್ರಾಣಭೃತಾಂ ಪ್ರಥಾ ।
ನ ಸ್ಥಿತಾ ಇತಿ ತತ್ಕುರ್ಯಾಃ
ಸ್ಥಾಯಿನ್ಯಾತ್ಮನ್ಪದೇ ಮತಿಮ್ ॥ ೨೯ ॥

ಟೀ॥ ಇಹ-ಈ ಲೋಕದಲ್ಲಿ, ಪ್ರಾಣಿನಃ-ಪ್ರಾಣಿಗಳು, ಜಾತಾಃ-ಹುಟ್ಟಿದರು. ಪುಷ್ಟಾಃ-ವೃದ್ಧಿಯನ್ನು ಹೊಂದಿದರು., ಪುನಃ-ಮರಳಿಯೂ, ನಷ್ಟಾಃ-ನಾಶವನ್ನು ಹೊಂದಿದರು., ಇತಿ-ಈ ಪ್ರಕಾರ, ಪ್ರಾಣಭೃತಾಂ-ಪ್ರಾಣಿಗಳಿಗೆ,ಪ್ರಥಾ-ಪ್ರಸಿದ್ಧಿಯು, ಸ್ಥಿತಾಇತಿ-ಸ್ಥಿರವಾಗಿರುತ್ತಾರೆಂದು, ನ-ಪ್ರಸಿದ್ಧಿಯಿಲ್ಲವು., ತತ್-ಆ ಕಾರಣದ ದೆಸೆಯಿಂದ, ಹೇ ಆತ್ಮನ್-ಎಲೈ ಆತ್ಮನೇ, ಸ್ಥಾಯಿನಿ-ಸ್ಥಿರವಾದ, ಪದೇ-ಸ್ಥಾನವಾದ ಮೋಕ್ಷದಲ್ಲಿ, ಮತಿಂ-ಬುದ್ಧಿಯನ್ನು, ಕುರ್ಯಾಃ-ಮಾಡು.

ತಾತ್ಪರ್ಯ ॥ ಈ ಲೋಕದಲ್ಲಿ ಪ್ರಾಣಿಗಳು ಹುಟ್ಟಿದವು. ಬೆಳೆದವು. ಕಡೆಗೆ ನಷ್ಟವಾದವು. ಎಂಬ ಪ್ರಸಿದ್ಧಿಯಿರುವುದೇ ಹೊರತು, ಸ್ಥಿರವಾಗಿವೆಯೆಂಬಮಾತೇ ಇಲ್ಲವಷ್ಟೆ?. ಆದಕಾರಣ ಎಲೈ ಆತ್ಮನೇ! ಸ್ಥಿರಸ್ಥಾನವಾದ ಮೋಕ್ಷವಂಪಡೆಯುವುದರಲ್ಲಿ ಬುದ್ಧಿಯನ್ನಿಡು ॥೨೯॥

ಶ್ಲೋಕ॥ ಸ್ಥಾಯೀತಿ ಕ್ಷಣಮಾತ್ರಂ ವಾ
ಜ್ಞಾಯತೇ ನ ಹಿ ಜೀವಿತಮ್ ।
ಕೋಟೀರಪ್ಯಧಿಕಂ ಹನ್ತ
ಜನ್ತೂನಾಂ ಹಿ ಮನೀಷಿತಮ್ ॥ ೩೦ ॥

ಟೀ ॥ ಜೀವಿತಂ-ಪ್ರಾಣವು, ಕ್ಷಣಮಾತ್ರಂವಾ-ಕ್ಷಣಕಾಲವಾದ್ದಾದರೂ, ಸ್ಥಾಯೀತಿ-ಸ್ಥಿರವಾದದ್ದೆಂದು, ನಜ್ಞಾಯತೇಹಿ- ತಿಳಿಯಲ್ಪಡುವುದಿಲ್ಲವಷ್ಟೆ?, ಜಂತೂನಾಂ-ಪ್ರಾಣಿಗಳ, ಮನೀಷಿತಂ-ಇಷ್ಟಾರ್ಥವು, ಕೋಟೇರಪಿ-ಕೋಟಿಸಂಖ್ಯೆಗಿಂತಲೂ, ಅಧಿಕಂ-ಅಧಿಕವಾಗಿದೆ., ಹನ್ತ-ಆಶ್ಚರ್ಯವು !!.

ತಾತ್ಪರ್ಯ॥ ಪ್ರಾಣವು ಕ್ಷಣಮಾತ್ರವಾದರೂ ಸ್ಥಿರವಾಗಿದೆಯೆಂದು ನಂಬಲ್ಪಡುವುದಿಲ್ಲವಷ್ಟೆ?. ಹಾಗಿದ್ದರೂ ಪ್ರಾಣಿಗಳ ಮನೋರಥವು ಕೋಟಿಸಂಖ್ಯೆಗಿಂತಲೂ ಅಧಿಕವಾಗಿದೆ. ಆಶ್ಚರ್ಯವು!! ॥೨೦॥

ಶ್ಲೋಕ॥ ಅವಶ್ಯಂ ಯದಿ ನಶ್ಯನ್ತಿ
ಸ್ಥಿತ್ವಾಪಿ ವಿಷಯಾಶ್ಚಿರಮ್ ।
ಸ್ವಯಂತ್ಯಾಜ್ಯಾಸ್ತಥಾ ಹಿ ಸ್ಯಾ-
ನ್ಮುಕ್ತಿಸ್ಸಂಸೃತಿರನ್ಯಥಾ ॥ ೨೧ ॥

ಟೀ॥ ವಿಷಯಾಃ-ಪತ್ನೀಪುತ್ರಗೃಹಕ್ಷೇತ್ರವಿತ್ತಾದಿ ಭೋಗೋಪಭೋಗ ವಸ್ತುಗಳು, ಚಿರಂ-ಬಹುಕಾಲಪವರೆಗೂ, ಸ್ಥಿತ್ವಾಪಿ-ಇದ್ದಾಗ್ಯೂಕೂಡ, ಅವಶ್ಯಂ-ಅವಶ್ಯವಾಗಿ, ನಶ್ಯಂತಿಯದಿ ನಾಶವನ್ನು ಹೊಂದಿದ್ದೇ ಆದರೆ, ಸ್ವಯಂ- ತಾನಾಗಿಯೇ, ತ್ಯಾಜ್ಯಾಃ-ಬಿಡಲೋಸುಗ ಯೋಗ್ಯಗಳು , ತಥಾಹಿ-ಹಾಗೆ ತಾನೇ ವಿಷಯ ಸಂಗವಂ ಪರಿತ್ಯಜಿಸುತ್ತಿರಲಿಕ್ಕಾಗಿಯೇ, ಮುಕ್ತಿಃ-ಮೋಕ್ಷವು, ಸ್ಯಾತ್- ಉಂಟಾಗುವುದು., ಅನ್ಯಥಾ-ಹಾಗಲ್ಲದಿದ್ದರೆ, ಸಂಸೃತಿಃ ನರ ಸುರ ತಿರ್ಯಙ್ನಾರಕಿಗಳೆಂಬ ಚತುರ್ಗತಿಭ್ರಮಣರೂಪವಾದ ಸಂಸಾರವು, ಭವೇತ್-ಉಂಟಾಗುವುದು.

ತಾತ್ಪರ್ಯ ॥ ದೇಹವೇಮೊದಲಾಗಿ ಸಮಸ್ತಭೋಗೋಪಭೋಗಪದಾರ್ಥಗಳು ಎಷ್ಟುದಿವಸವಿದ್ದರೂ ನಾಶವನ್ನುಹೊಂದುವುದೇ ಸ್ವಭಾವವಾದುದರಿಂದ, ಅದಾಗಿಯೇ ನಾಶಹೊಂದುವುದಕ್ಕಿಂತಲೂ ಮುಂಚಿತವಾಗಿ ನಾವೇ ವಿಷಯಾಶೆಯಂ ಪರಿತ್ಯಜಿಸುವಿಕೆಯು (ವೈರಾಗ್ಯವಂ ಪಡೆಯುವಿಕೆಯು) ಉಚಿತವು. ಹಾಗೆ ನಾವಾಗಿಯೇ ವೈರಾಗ್ಯವಂ ಹೊಂದಿದರೇನೆ ಮೋಕ್ಷವುಂಟಾಗುವುದು. ಹಾಗಲ್ಲದೆ ಭೋಗೋಪಭೋಗ ವಸ್ತುಗಳು ನಮಗೆ ದೊರೆತಿರುವವರೆಗೂ ಅನುಭವಿಸಿ ತಪ್ಪಿಹೋದ ನಂತರ ಆಶೆಯನ್ನು ತೊರೆಯುವಿಕೆಯು ವೈರಾಗ್ಯವೆನಿಸಲಾರದು. ಅಂಥಾವನು ಸಂಸಾರದುಃಖಕ್ಕೆ ಪಾತ್ರನಾಗುವನೆಂದಭಿಪ್ರಾಯವು. ಆದುದರಿಂದ ಆತ್ಮನಿಗೆ ವೈರಾಗ್ಯವೇ ಮೋಕ್ಷಕಾರಣವು. ॥೨೧॥

ಶ್ಲೋಕ॥ ಅನಶ್ವರಸುಖಾವಾಪ್ತೌ
ಸತ್ಯಾಂ ನಶ್ವರಕಾಯತಃ ।

ಕಿಂ ವೃಥೈವ ನಯಸ್ಯಾತ್ಮನ್
ಕ್ಷಣಂ ವಾ ಸಫಲಂ ನಯ ॥ ೩೨ ॥

ಟೀ ॥ ನಶ್ವರಕಾಯತಃ-ನಾಶವನ್ನು ಹೊಂದುತಲಿರುವ ಶರೀರದ ದೆಸೆಯಿಂದ, ಅನಶ್ವರಸುಖಾವಾಪ್ತೌ(ಸತ್ಯಾಂ)–ಅನಶ್ವರ-ಎಂದಿಗೂನಾಶವಿಲ್ಲದೇಇರುವ, ಸುಖ-ಸೌಖ್ಯದ, (ಅನಂತಸುಖಸ್ವರೂಪವಾದ ಮೋಕ್ಷದ), ಅವಾಪ್ತೌ(ಸತ್ಯಾಂ)-ಪ್ರಾಪ್ತಿಯುಂಟಾಗುತಿರಲಿಕ್ಕಾಗಿ, ಕಿಂ-ಏತಕೋಸುಗ, ವೃಥೈವ-ವ್ಯರ್ಥವಾಗಿಯೇ, ನಯಸಿ-ಆಯುಸ್ಸನ್ನು ಕಳೆಯುತ್ತೀಯೆ?, ಹೇ ಆತ್ಮನ್-ಎಲೈ ಆತ್ಮನೇ!, ಕ್ಷಣಂವಾ-ಕ್ಷಣಕಾಲವನ್ನಾದರೂ, ಸಫಲಂ(ಸನ್ತಂ)-ಸಾರ್ಥಕವನ್ನಾಗಿ, ನಯ-ಕಳೆ.

ತಾತ್ಪರ್ಯ॥ ನಾಶವೇ ಸ್ವಭಾವವಾಗಿವುಳ್ಳ ಈ ದೇಹದ ದೆಸೆಯಿಂದ ಸ್ಥಿರಸುಖವಾದ ಮೋಕ್ಷವು ದೊರೆಯುತಿರಲಾಗಿ ಏತಕೋಸುಗ ನಿಷ್ಫಲವಾದ ಸಂಸಾರ ಸಂಬಂಧಿಯಾಗಿರುವ ಕೆಲಸಗಳಲ್ಲಿಯೇ ಆಯುಸ್ಸನ್ನು ಕಳೆಯುತ್ತೀಯೆ ?. ಎಲೈ ಆತ್ಮನೆ! ಆಯುಸ್ಸಿನಲ್ಲಿ ಕ್ಷಣಕಾಲವಾದರೂ ಸಾರ್ಥಕವಾಗಿ ಕಳೆ. (ಕ್ಷಣವಾದರೂ ತತ್ವಜ್ಞಾನಪರನಾಗು. ಎಂದಭಿಪ್ರಾಯವು.) ॥ ೩೨ ॥

--*(ಅನಿತ್ಯಾನುಪ್ರೇಕ್ಷಾ.)*--

ಶ್ಲೋಕ॥ ಪಯೋಧೌ ನಷ್ಟನೌಕಸ್ಯ
ಪತತ್ರೇರಿವ ಜೀವಿತೇ ।
ಸತ್ಯಪಾಯೇ ಶರಣ್ಯಂ ನ
ತತ್ಸ್ವಾಸ್ಥ್ಯೇ ಹಿ ಸಹಸ್ರಧಾ ॥೩೩॥

ಟೀ ॥ ಪಯೋಧೌ-ಸಮುದ್ರದಲ್ಲಿ, ನಷ್ಟನೌಕಸ್ಯ–ನಷ್ಟ-ನಾಶವನ್ನು ಹೊಂದಿದ, ನೌಕಸ್ಯ-ಹಡಗುವುಳ್ಳ, ಪತತ್ರೇರಿವ-ಪಕ್ಷಿಗೋಪಾದಿಯಲ್ಲಿ, ಜೀವಿತೇ-ಪ್ರಾಣದಲ್ಲಿ, ಅಪಾಯೇ-ಹಾನಿಯು, ಸತಿ-ಉಂಟಾಗುತಲಿರಲು, ಶರಣ್ಯಂ-ಯಾವುದೂ ರಕ್ಷಕವಾದುದಾಗಿ, ನ-ಆಗುವುದಿಲ್ಲವು, ತತ್ಸ್ವಾಸ್ಥ್ಯೇಹಿ-ಆ ಪ್ರಾಣವು ಸ್ವಸ್ಥವಾಗಿರುತಿರಲಾಗಿಯೇ, ಸಹಸ್ರಧಾ-ಸಾವಿರಪ್ರಕಾರವಾಗಿ, ಶರಣ್ಯಂ-ರಕ್ಷಕವು, ಭವತಿ-ಉಂಟಾಗುತ್ತದೆ.

ತಾತ್ಪರ್ಯ॥ ಸಮುದ್ರದಲ್ಲಿ ಹಡಗು ಮುಳಗಿಹೋಗುತ್ತಿರಲು ನಿರಾ

ಧಾರವಾಗಿ ಆಕಾಶದಲ್ಲಿ ಹಾರಿಯಾಡುತಲಿರುವ ಪಕ್ಷಿಗೋಪಾದಿಯಲ್ಲಿ ಶರೀರವದೆಸೆಯಿಂದ ಪ್ರಾಣಕ್ಕೆ ಅಪಾಯವುಂಟಾಗುತ್ತಿರಲಾಗಿ (ಮರಣವುಂಟಾಗುತಿರಲಾಗಿ) ಯಾವುದೂ ರಕ್ಷಿಸುವುದಿಲ್ಲವು. ಆ ಪ್ರಾಣವು ಶರೀರದಲ್ಲಿ ಸ್ವಸ್ಥವಾಗಿರುವಪರ್ಯಂತವೇ ಎಲ್ಲಾ ವಸ್ತುವೂ, ಎಲ್ಲಾ ಬಂಧುಗಳೂ ರಕ್ಷಕರಾಗಿರುತ್ತಾರೆ. ಕರ್ಮವಿರುವವರೆಗೂ ಆ ಕರ್ಮಫಲವಾದ ಸುಖದುಃಖಗಳನ್ನನುಭವಿಸಲೋಸುಗ ಆತ್ಮನು ಜೀವಿಸಿರುವನಾದುದರಿಂದ ಪುಣ್ಯವೇ ಆತ್ಮನಿಗೆ ರಕ್ಷಕವೇ ಹೊರತು ಬೇರೆ ಯಾವುದೂ ರಕ್ಷಕವಲ್ಲವೆಂದಭಿಪ್ರಾಯವು ॥೩೩॥

ಶ್ಲೋಕ॥ ಆಯುಧಿಕ್ಯೈರತಿಸ್ನಿಗ್ಧೈ-
ರ್ಬನ್ಧುಭಿಶ್ಚಾಭಿಸಂವೃತಃ ।
ಜನ್ತುಸ್ಸಂರಕ್ಷ್ಯಮಾಣೋಽಪಿ
ಪಶ್ಯತಾಮೇವ ನಶ್ಯತಿ ॥ ೩೪ ॥

ಟೀ ॥ ಜಂತುಃ-ಪ್ರಾಣಿಯು, ಆಯುಧಿಕ್ಯೈಃ-ಖಡ್ಗಧಾರಿಗಳಿಂದಲೂ (ಕತ್ತಿಯನ್ನು ಹಿಡಿದುಕೊಂಡು ಕಾಯುದುಕೊಂಡಿರುವ ಪಹರೆಯುವರಿಂದಲೂ), ಅತಿಸ್ನಿಗ್ಧೈಃ-ಅತ್ಯಂತಪ್ರೀತಿಯುಳ್ಳವರಾದ, ಬಂಧುಭಿಶ್ಚ-ಬಂಧುಗಳಿಂದಲೂ ಕೂಡ, ಅಭಿಸಂವೃತಃ(ಸ್ಸನ್)-ಸುತ್ತಲೂಸುತ್ತಲ್ಪಟ್ಟವನಾಗಿ, ಸಂರಕ್ಷ್ಯಮಾಣೋಽಪಿ-(ಜೆನ್ನಾಗಿ)ಬಹು ಜಾಗರೂಕತೆಯಿಂದ ರಕ್ಷಿಸಲ್ಪಟ್ಟಾಗ್ಯೂ ಕೂಡ, ಪಶ್ಯತಾಮೇವ- ನೋಡುತಲಿರುವವರ ಕಣ್ಣಿನೆದುರಿಗೇ, ನಶ್ಯತಿ-ನಾಶವನ್ನು ಹೊಂದುತ್ತದೆ.

ತಾತ್ಪರ್ಯ ॥ ಕತ್ತಿಯನ್ನು ಹಿಡಿದು ಪಹರೆಯುವರು ಯಮನುಚ್ಚಬದಂತೆ ನೋಡುತ್ತಾ ರಕ್ಷಿಸುತಲಿದ್ದರೂ, ಮಾತಾಪಿತೃಪತ್ನೀಪುತ್ರಾದಿ ಪ್ರಿಯಬಂಧುಗಳೆಲ್ಲರೂ ಸುತ್ತಲೂಸುತ್ತಿಕೊಂಡು ರಕ್ಷಿಸುತ್ತಿದ್ದರೂ ಹೋಗುವ ಪ್ರಾಣಗಳನ್ನು ಹಿಡಿದುಕೊಳ್ಳಲಾದರಷ್ಟೆ? (ಅವರೆಲ್ಲರೂ ನೋಡುತಲಿರುವಾಗಲೇ ಪ್ರಾಣಗಳು ಹೊರಟುಹೋಗುವುವಾದುದರಿಂದ ಧರ್ಮವೇ ಆತ್ಮನಿಗೆ ರಕ್ಷಕವೇ ಹೊರತು ಮತ್ತೆಯಾವುದೂ ರಕ್ಷಕವಲ್ಲವೆಂದಭಿಪ್ರಾಯವು.) ಆದುದರಿಂದ ವಿವೇಕಿಗಳು ಮೋಕ್ಷವನ್ನಿಚ್ಛೈಸುವರು॥೩೪

ಶ್ಲೋಕ॥ ಮಂತ್ರತಂತ್ರಾದಯೋಽಪ್ಯಾತ್ಮನ್

ಸ್ವತಂತ್ರಂ ಶರಣಂ ನ ತೇ।
ಕಿಂ ತು ಸತ್ಯೇವ ಪುಣ್ಯೇ ಹಿ
ನೋಚೇತ್ಕೇನಾಮ ತೈಸ್ಥಿತಾಃ ‖ ೩೫ ‖

ಟೀ ‖ ಹೇ ಆತ್ಮನ್-ಎಲೈ ಆತ್ಮನೇ ! ತೇ-ನಿನಗೆ, ಮಂತ್ರತಂತ್ರಾದಯೋಪಿ-ಮಂತ್ರಗಳೂ,ತಂತ್ರಗಳೂ,ಔಷಧಗಳೇ ಮೊದಲಾದವೂಕೂಡ, ಸ್ವತಂತ್ರಂ (ಮುಧಾತಥಾ)-ಮತ್ತೊಂದರಸಹಾಯವಿಲ್ಲದೇಇರೋಣ ಹೇಗೋಹಾಗೆ ತಾನೇ ತಾನಾಗಿ, ಶರಣಂ(ಸತ್)-ರಕ್ಷಕವಾಗಿ, ನ-ಆಗುವುದಿಲ್ಲವು., ಕಿಂತು-ಮತ್ತೇನೆಂದರೆ.–,ಪುಣ್ಯೇ-ಪುಣ್ಯವು, ಸತ್ಯೇವ-ಇರುತಿರಲಾಗಿಯೇ, ಶರಣಂ ಹಿ-ರಕ್ಷಕವಾಗುವುದಲ್ಲವೆ?. ನೋಚೇತ್-ಹಾಗಲ್ಲದೆ ಸ್ವತಂತ್ರರಕ್ಷಕವಾಗಿದ್ದಲ್ಲಿ, ಕೇನಾಮ-ಯಾರುತಾನೇ, ತೈಃ-ಆ ಮಂತ್ರತಂತ್ರಾದಿಗಳಿಂದ, ಸ್ಥಿತಾಃ-ಇರುವರು ?.

ತಾತ್ಪರ್ಯ‖ ಎಲೈ ಆತ್ಮನೇ! ಮಂತ್ರ ತಂತ್ರೌಷಧ ಮೊದಲಾದವು ಪೂರ್ವಭವದಪುಣ್ಯವಿರುವ ಪರ್ಯಂತವೇ ರಕ್ಷಕವಾಗುವುದೇಹೊರತು ಸ್ವತಂತ್ರವಾಗಿ ರಕ್ಷಕವಾಗಲಾರದು. ಹಾಗೆ ಮಂತ್ರತಂತ್ರಾದಿಗಳೇ ಸ್ವತಂತ್ರವಾಗಿ ರಕ್ಷಿಸುವಪಕ್ಷದಲ್ಲಿ, ಲೋಕದಲ್ಲಿ ಅವುಗಳಿಂದ ಮರಣವೇ ಇಲ್ಲದಿರುವವರು ಯಾರು ?. (ಮಂತ್ರತಂತ್ರಾದಿಗಳನ್ನು ಪ್ರಯೋಗಿಸಿದರೂ ಮರಣವೇ ಉಂಟಾಗುವುದರಿಂದ ಪೂರ್ವಪುಣ್ಯವೇಸ್ವತಂತ್ರರಕ್ಷಕವೆಂದಭಿಪ್ರಾಯವು. ‖೩೫‖

---

—*(ಅಶರಣಾನುಪ್ರೇಕ್ಷಾ.)*—

ಶ್ಲೋಕ‖ ನಟವನ್ನೈಕವೇಷೇಣ
ಭ್ರಾಮ್ಯಸ್ಯಾತ್ಮನ್ ಸ್ವಕರ್ಮತಃ ।
ತಿರಶ್ಚಿ ನಿರಯೇ ಪಾಪಾ-
ದ್ದಿವಿ ಪುಣ್ಯಾದ್ದ್ವಯಾನ್ನರೇ ‖ ೩೬ ‖

ಟೀ‖ ಹೇ ಆತ್ಮನ್-ಎಲೈಆತ್ಮನೇ! ಸ್ವಕರ್ಮತಃ–ಸ್ವ-ಸ್ವಕೀಯವಾದ,ಕರ್ಮ ತಃ-ಪುಣ್ಯಪಾಪರೂಪವಾದ ಕರ್ಮದ ದೆಸೆಯಿಂದ, ನಟವತ್-ಆಟಗಾರನೋಪಾದಿಯಲ್ಲಿ, ನೈಕವೇಷೇಣ-ಅನೇಕವಾದ ಭವಗಳೆಂಬವೇಷದಿಂದ, ಭ್ರಾಮ್ಯಸಿ-ತಿರುಗುತ್ತಿಯೆ

(ನರಸುರತಿರ್ಯಙ್ನಾರಕಿದೇಹಗಳಲ್ಲಿ ತಿರುಗುತ್ತೀಯೆ.) ಪಾಪಾತ್-ಪಾಪದದೆಸೆಯಿಂದ, ತಿರಶ್ಚಿ-ಪಶುಪಕ್ಷಿಮೃಗಾದಿಗಳಾದ ತಿರ್ಯಗ್ಗತಿಯಲ್ಲಿಯೂ, ನಿರಯೇ-ನರಕದಲ್ಲಿಯೂ, ಪುಣ್ಯಾತ್-ಪುಣ್ಯದದೆಸೆಯಿಂದ, ದಿವಿ-ಸ್ವರ್ಗದಲ್ಲಿಯೂ, ದ್ವಯಾತ್-ಪುಣ್ಯಪಾಪಗಳೆರಡರದೆಸೆಯಿಂದ, ನರೇ-ಮನುಷ್ಯಜನ್ಮದಲ್ಲಿಯೂ, ಭ್ರಾಮ್ಯಸಿ-ತಿರುಗುವೆ.

ತಾತ್ಪರ್ಯ॥ ಎಲೈ ಆತ್ಮನೇ! ನಿನ್ನ ಸ್ವಕೀಯವಾದ ಕರ್ಮದದೆಸೆಯಿಂದ ನಾಟಕದಲ್ಲಿ ವೇಷಧಾರಿಯಾಗಿ ಬರುವ ನಟನಂತೆ (ಆಟಗಾರನಂತೆ) ನಾನಾಭವಗಳನ್ನೆತ್ತುತ್ತೀಯೆ. ಪಾಪದದೆಸೆಯಿಂದ ಪಶುಪಕ್ಷಿಮೃಗಾದಿ ತಿರ್ಯಗ್ಜನ್ಮಗಳಲ್ಲಿಯೂ, ನರಕದಲ್ಲಿಯೂ, ಕೇವಲಪುಣ್ಯದಿಂದ ದೇವಜನ್ಮದಲ್ಲಿಯೂ, ಪುಣ್ಯಪಾಪಗಳೆರಡೂ ಮಿಶ್ರವಾಗಿದ್ದಲ್ಲಿ ಮನುಷ್ಯ ಜನ್ಮದಲ್ಲಿಯೂ ಹುಟ್ಟುವವನಾಗುವೆ ॥೩೬॥

ಶ್ಲೋಕ॥ ಪಂಚಾನನ ಇವಾ ಮೋಕ್ಷಾ-
ದಸಿ ಪಂಜರಮಧ್ಯಗಃ ।
ಕ್ಷಣೇಽಪಿ ದುಸ್ಸಹೇ ದೇಹೇ
ದೇಹಿನ್ ಹನ್ತ ಕಥಂ ವಸೇಃ ॥ ೩೭ ॥

ಟೀ ॥ ಹೇ ದೇಹಿನ್-ಎಲೈ ಆತ್ಮನೇ !, ಆಮೋಕ್ಷಾತ್-ಮೋಕ್ಷವುಂಟಾಗುವವರೆಗೂ, ಪಂಜರಮಧ್ಯಗಃ-ಪಂಜರ-ಬೋನಿನ, ಮಧ್ಯ-ಮಧ್ಯವನ್ನು, ಗಃ-ಹೊಂದಿರುವ, ಪಂಚಾನನಇವ-ಸಿಂಹದೋಪಾದಿಯಲ್ಲಿ, ಅಸಿ-ಆಗುತ್ತೀಯೆ., ಕ್ಷಣೇಪಿ-ಕ್ಷಣಮಾತ್ರದಲ್ಲಿಯೂಕೂಡ, ದುಸ್ಸಹೇ- ಸಹಿಸಲಶಕ್ಯವಾದ, ದೇಹೇ-ಶರೀರದಲ್ಲಿ, ಕಥಂ-ಹೇಗೆ, ವಸೇಃ-ವಾಸಮಾಡುವೆ?, ಹಂತ-ಕಷ್ಟವು!!.

ತಾತ್ಪರ್ಯ ॥ ಎಲೈ ಆತ್ಮನೆ! ನಿನಗೆ ಮೋಕ್ಷವುಂಟಾಗುವವರೆಗೂ ಬೋನಿನಲ್ಲಿ ಸೇರಿಸಿದ ಸಿಂಹದಹಾಗೆ ಈ ದುಃಖಾಸ್ಪದವಾದ ದೇಹದಲ್ಲಿ ಇರುತಲಿರುವೆ. ಕ್ಷಣಮಾತ್ರವೂಕೂಡ ಸಹಿಸಲಶಕ್ಯವಾದೀದೇಹದಲ್ಲಿ ಹೇಗೆ ವಾಸಮಾಡುತಿರುವೆಯೋ? ಆದುದರಿಂದ ಇನ್ನುಮೇಲಾದರೂ ಈ ದೇಹಬಂಧವಂ ತಪ್ಪಿಸಿಕೊಳ್ಳುವ ಉಪಾಯವಂ ಮಾಡು ॥೩೭॥

ಶ್ಲೋಕ॥ ತನ್ನಾಸ್ತಿ ಯನ್ನ ವೈ ಭುಕ್ತಂ
ಪುದ್ಗಲೇಷು ಮುಹುಸ್ತ್ವಯಾ।

ತಲ್ಲೇಶಸ್ತವ ಕಿಂ ತೃಪ್ತ್ಯೈ
ಬಿನ್ದುಃಪೀತಾಮ್ಬುಧೇರಿವ ॥ ೩೮ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ, ಪುದ್ಗಲೇಷು-ಪರಮಾಣು ಸ್ವರೂಪವಾದ ಪುದ್ಗಲಸಮೂಹಗಳಲ್ಲಿ, ಯತ್-ಯಾವುದು, ತ್ವಯಾ-ನಿನ್ನಿಂದ, ಮುಹುಃ-ಬಾರಿಬಾರಿಗೂ, ನವೈಭುಕ್ತಂ-ಅನುಭವಿಸಲ್ಪಡಲಿಲ್ಲವೋ, ತತ್-ಆ ಪುದ್ಗಲಪುಂಜ ಸ್ವರೂಪವಾದ ದೇಹಾದಿವಸ್ತುವು, ನಾಸ್ತಿ-ಇಲ್ಲವು. ತಲ್ಲೇಶಃ-ತತ್-ಆ ಪುದ್ಗಲದ, ಲೇಶಃ-ಅತ್ಯಲ್ಪಭಾಗವಾದ ದೇಹಾದಿ ಭೋಗೋಪಭೋಗ ಪದಾರ್ಥವು, ಪೀತಾಂಬುಧೇಃ-ಪೀತ-ಕುಡಿಯಲ್ಪಟ್ಟ, ಅಂಬುಧೇಃ-ಸಮುದ್ರವುಳ್ಳವನಿಗೆ, ಬಿಂದುರಿವ-ಒಂದು ಹನಿಯೋಪಾದಿಯಲ್ಲಿ, ತವ-ನಿನ್ನ, ತೃಪ್ತ್ಯೈ-ತೃಪ್ತಿಗೋಸುಗ, ಭವತಿಕಿಂ-ಆಗುತ್ತದೆಯೋ ಏನು ?.

ತಾತ್ಪರ್ಯ॥ ಎಲೈ ಆತ್ಮನೇ! ಈ ಪುದ್ಗಲ ಪುಂಜ ಸ್ವರೂಪವಾದ ಪ್ರಪಂಚದಲ್ಲಿ ನಿನ್ನಿಂದ ಅನುಭವಿಸಲ್ಪಡದೇ ಮಿಕ್ಕಿರುವುದು ಯಾವುದೂ ಇಲ್ಲವು. ಸಮುದ್ರವನ್ನುಕುಡಿದರೂ ತೃಪ್ತಿಯಾಗದವನಿಗೆ ಒಂದು ಹನಿಯೋಪಾದಿಯಲ್ಲಿ ಆ ಪುದ್ಗಲಲೇಶವು ನಿನ್ನತೃಪ್ತಿಗೋಸುಗ ವಾಗುವುದೇ? (ಇದುವರೆಗೂ ಎಷ್ಟೋಭವಗಳಲ್ಲಿ ಅನುಭವಿಸಲ್ಪಟ್ಟಭೋಗಗಳಿಂದಲೂ ತೃಪ್ತಿಯಾಗದ ನಿನಗೆ ಈಭವದಲ್ಲಿ ಯತ್ಕಿಂಚಿತ್ಸುಖವನ್ನು ಅನುಭವಿಸಿದ ಮಾತ್ರದಿಂದ ತೃಪ್ತಿಯಾಗುವುದಿಲ್ಲವಷ್ಟೆ? ಎಂದಭಿಪ್ರಾಯವು. ॥೩೮॥

ಶ್ಲೋಕ॥ ಭುಕ್ತೋಜ್ಝಿತಂ ತದುಚ್ಛಿಷ್ಟಂ
ಭೋಕ್ತುಮೋತ್ಸುಕಾಯಸೇ ।
ಅಭುಕ್ತಮುಕ್ತಿಸೌಖ್ಯಸ್ತ್ವ-
ಮತುಚ್ಛಂ ಹನ್ತ ನೇಚ್ಛಸಿ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ! ಭುಕ್ತೋಜ್ಝಿತಂ-ಭುಕ್ತ-ಪೂರ್ವ ಭವಗಳಲ್ಲಿ ಅನುಭವಿಸಲ್ಪಟ್ಟ, ಉಜ್ಝಿತಂ-ಬಿಡಲ್ಪಟ್ಟ, ಉಚ್ಛಿಷ್ಟಂ-ಎಂಜಲಿಗೆ ಸಮಾನವಾದ, ತತ್-ಅದೇ ವಿಷಯಸುಖವನ್ನು, ಭೋಕ್ತುಮೇವ-ಅನುಭವಿಸಲೋಸುಗವೇ, ಉತ್ಸುಕಾಯಸೇ-ಆಶಿಪಡುತ್ತಿಯೆ., ಅಭುಕ್ತಮುಕ್ತಿಸೌಖ್ಯಃ-ಅಭುಕ್ತ-ಅನುಭವಿಸಲ್ಪಡದೇಇರುವ, ಮುಕ್ತಿ-ಮೋಕ್ಷದ, ಸೌಖ್ಯಃ-ಸುಖವುಳ್ಳ, ತ್ವಂ-ನೀನು,

ತುಚ್ಛಂ-ಅನಂತಸುಖಸ್ವರೂಪವಾದ ಮೋಕ್ಷಸುಖವನ್ನು, ನೇಚ್ಛಸಿ- ಇಚ್ಛೈಸುವುದಿಲ್ಲವು., ಹನ್ತ-ಆಶ್ಚರ್ಯವು !!.

ತಾತ್ಪರ್ಯ॥ ಎಲೈ ಆತ್ಮನೇ ! ಅನೇಕ ಪೂರ್ವಭವಗಳಲ್ಲಿ ಅನುಭವಿಸಲ್ಪಟ್ಟು, ಬಿಡಲ್ಪಟ್ಟ, ಊಟಮಾಡಿ ಮಿಕ್ಕ ಎಂಜಲಿನಂತಿರುವ, ಭೋಗೋಪಭೋಗಗಳನ್ನೇ ಮರಳಿಮರಳಿ ಅನುಭವಿಸಲೋಸುಗ ಆಶೆಪಡುವೆ ? ಇದು ನಿನಗುಚಿತವೇ ! ಅನುಭವಿಸಲ್ಪಡದೇ ಇರುವ ಅನಂತವಾದ ಮೋಕ್ಷಸುಖದಲ್ಲಿ ಆಶೆಗೊಳ್ಳಬಾರದೇ !. ಅಯ್ಯೋ!! ನಿನ್ನ ಅಜ್ಞಾನವು ಬಹಳ ಆಶ್ಚರ್ಯಕರವು !!. ॥೩೯॥

ಶ್ಲೋಕ॥ ಸಂಸೃತೌ ಕರ್ಮರಾಗಾದ್ಯೈಃ—
ಸ್ತತಃ ಕಾಯಾನ್ತರಂ ತತಃ ।
ಇಂದ್ರಿಯಾಣೀಂದ್ರಿಯದ್ವಾರಾ
ರಾಗಾದ್ಯಾಶ್ಚಕ್ರಕಂ ಪುನಃ ॥ ೪೦॥

ಟೀ॥ ಸಂಸೃತೌ-ಸಂಸಾರದಲ್ಲಿ, ರಾಗಾದ್ಯೈಃ-ರಾಗ-ವಿಷಯಾಸಕ್ತಿಯೇ, ಆದ್ಯೈಃ-ಮೊದಲಾಗಿವುಳ್ಳ ದ್ವೇಷಾದಿಗಳಿಂದ, ಕರ್ಮ-ಕರ್ಮವುಂಟಾಗುವುದು., ತತಃ-ಆ ಕರ್ಮದ ದೆಸೆಯಿಂದ, ಕಾಯಾಂತರಂ-ಮತ್ತೊಂದು ಶರೀರವುಂಟಾಗುವುದು., ತತಃ-ಆ ಶರೀರದ ದೆಸೆಯಿಂದ, ಇಂದ್ರಿಯಾಣಿ-ಇಂದ್ರಿಯಗಳು, ಭವನ್ತಿ-ಉಂಟಾಗುತ್ತವೆ. ಇಂದ್ರಿಯದ್ವಾರಾ-ಇಂದ್ರಿಯಗಳ ಮೂಲಕವಾಗಿ, ರಾಗಾದ್ಯಾಃ- ರಾಗವೇ ಮೊದಲಾದವು, ಭವನ್ತಿ-ಉಂಟಾಗುತ್ತವೆ., ಪುನಃ-ಮರಳಿಯೂ, ಚಕ್ರಕಂ-ಚಕ್ರದಂತೆ ಇದೇ ಪ್ರಕಾರವಾಗಿ ಕರ್ಮಾದಿಗಳುಂಟಾಗುತಲೇ ಇವೆ.

ತಾತ್ಪರ್ಯ॥ ಚತುರ್ಗತಿಭ್ರಮಣರೂಪವಾದ ಸಂಸಾರದಲ್ಲಿ, ಪ್ರಾಣಿಗಳಿಗೆ ರಾಗದ್ವೇಷಾದಿಗಳಿಂದ ಕರ್ಮವೂ, ಆ ಕರ್ಮದ ದೆಸೆಯಿಂದ ಶರೀರವೂ, ಆ ಶರೀರದ ದೆಸೆಯಿಂದ ಇಂದ್ರಿಯಗಳೂ, ಆ ಇಂದ್ರಿಯಮೂಲಕ ತಿರಿಗಿಯೂ ರಾಗಾದಿಗಳೂಸಹ ಉಂಟಾಗುವುವು. ಮರಳಿಯೂ ಇದೇ ರೀತಿಯಾಗಿಯೇ ಚಕ್ರದಂತೆ ತಿರುಗುತಲೇ ಇದೆ.॥೪೦॥

ಶ್ಲೋಕ॥ ಸತ್ಯನಾದೌ ಪ್ರಬಂಧೇಸ್ಮಿನ್
ಕಾರ್ಯಕಾರಣರೂಪಕೇ ।

ಯೇನ ದುಃಖಾಯಸೇ ನಿತ್ಯ-
ಮದ್ಯಾಪ್ಯಾತ್ಮನ್ವಿಮುಂಚ ತತ್ ॥ ೪೧ ॥

ಟೀ ॥ ಕಾರ್ಯಕಾರಣರೂಪಕೇ-ಕಾರ್ಯಕಾರಣ ಸ್ವರೂಪವಾಗಿರುವ, ಅಸ್ಮಿನ್ ಪ್ರಬಂಧೇ-ಚಕ್ರದಂತೆ ತಿರುಗುತಲಿರುವ ಈ ಕರ್ಮಾದಿಬಂಧನವು, ಅನಾದೌ(ಸತಿ)-ಅನಾದಿಯಾಗಿರುತ್ತಿರಲಾಗಿ, ಯೇನ-ಯಾವ ಕರ್ಮಬಂಧನದಿಂದ (ಯಾವ ಚತುರ್ಗತಿ ಭ್ರಮಣದಿಂದ), ನಿತ್ಯಂ-ಯಾವಾಗಲೂ, ದುಃಖಾಯಸೇ-ದುಃಖಿಸುವೆಯೋ, ಹೇ ಆತ್ಮನ್-ಎಲೈ ಆತ್ಮನೇ ! ಅದ್ಯಾಪಿ-ಈಗಲಾದರೂ, ತತ್-ಆ ಸಂಸಾರಮೂಲಕಾರಣವಾದ ಕರ್ಮವನ್ನು, ವಿಮುಂಚ-ಬಿಡು.

ತಾತ್ಪರ್ಯ ॥ ಆ ರಾಗದ್ವೇಷಾದಿಗಳೂ, ಅದರಿಂದ ಕರ್ಮವೂ, ಕರ್ಮದಿಂ ದೇಹೇಂದ್ರಿಯಾದಿಗಳೂ, ಅದರಿಂದ ಮರಳಿ ರಾಗಾದಿಗಳೂ ಹೀಗೆ ಒಂದಕ್ಕೊಂದು ಕಾರ್ಯಕಾರಣರೂಪದಿಂದನಾದಿಯಾಗಿರುತಲಿರಲು, ಎಲೈ ಆತ್ಮನೇ ! ಯಾವ ಸಂಸಾರದಿಂದ ನಿತ್ಯವೂ ದುಃಖಿಸುತಿರುವೆಯೋ ಆ ದುಃಖಕರವಾದ ಸಂಸಾರಬಂಧವನ್ನು ಈಗಲಾದರೂ ಬಿಡುವವನಾಗು ॥ ೪೧

---

—*( ಸಂಸಾರಾನುಪ್ರೇಕ್ಷಾ. )*—

ಶ್ಲೋಕ॥ ತ್ಯಕ್ತೋಪಾತ್ತ ಶರೀರಾದಿಃ
ಸ್ವಕರ್ಮಾನುಗುಣಂ ಭ್ರಮನ್ ।
ತ್ವಮಾತ್ಮನ್ನೇಕ ಏವಾಸಿ
ಜನನೇ ಮರಣೇಽಪಿ ಚ ॥ ೪೨ ॥

ಟೀ ॥ ಹೇ ಆತ್ಮನ್-ಎಲೈ ಆತ್ಮನೇ ! ತ್ವಂ-ನೀನು, ತ್ಯಕ್ತೋಪಾತ್ತ ಶರೀರಾದಿ(ಸ್ಸನ್)— ತ್ಯಕ್ತ-ಪೂರ್ವ ದೇಹವಂ ಪರಿತ್ಯಜಿಸಿ, ಉಪಾತ್ತ- ಸ್ವೀಕರಿಸಲ್ಪಟ್ಟ, ಶರೀರ-ಹೊಸಹೊಸವಾದ ಶರೀರವೇ, ಆದಿ(ಸ್ಸನ್)-ಮೊದಲಾಗುಳ್ಳವನಾಗಿ, ಸ್ವಕರ್ಮಾನುಗುಣಂ(ಯಥಾತಥಾ)—ಸ್ವ-ತನ್ನ, ಕರ್ಮ-ಪುಣ್ಯಪಾಪಕರ್ಮಗಳಿಗೆ, ಅನುಗುಣಂ(ಯಥಾತಥಾ)-ಅನುಗುಣವಾಗಿರೋಣ ಹೇಗೋಹಾಗೆ, ಭ್ರಮನ್(ಸ್ಸನ್)-ತಿರುಗುವವನಾಗಿ, ಜನನೇ-ಉತ್ಪತ್ತಿಯಲ್ಲಿಯೂ, ಮರಣೇಪಿಚ-ಮರಣದಲ್ಲಿಯೂಕೂಡ, ಏಕಏವ-ಯಾರೂ ಸಹಾಯವಿಲ್ಲದೇ ಇರುವವನಾಗಿಯೇ, ಅಸಿ-ಆಗುತ್ತೀಯೆ?.

ತಾತ್ಪರ್ಯ ॥ ಎಲೈ ಆತ್ಮನೇ! ನೀನು ಒಂದು ದೇಹವಂ ಬಿಟ್ಟು, ಮತ್ತೊಂದು ದೇಹವಂ ಪರಿಗ್ರಹಿಸುವವನಾಗಿ, ನಿನ್ನ ಕರ್ಮಾನುಗುಣ್ಯದಿಂ ನಾನಾ ದೇಹಗಳಂ ಪರಿಗ್ರಹಿಸುತ್ತಾ, ಈ ಸಂಸಾರದಲ್ಲಿ ತಿರುಗುವವನಾಗಿ ಹುಟ್ಟುವಾಗಲೂ, ಸಾಯುವಾಗಲೂ ನೀನೊಬ್ಬನೇ ಇರುವೆಯೋ ಹೊರತು ಈ ದೇಹದೇಹಾನುಬಂಧಿಗಳಾದ ಯಾವ ವಸ್ತುವೂ, ಯಾವ ಬಂಧುಗಳೂ ಸಹಾಯರಲ್ಲವು. ॥೪೧॥

ಶ್ಲೋಕ॥ ಬಂಧವೋಽಪಿ ಶ್ಮಶಾನಾಂತಾ
ಗೃಹಏವಾರ್ಜಿತಂ ಧನಮ್ ।
ಭಸ್ಮನೇ ಗಾತ್ರಮೇಕಸ್ತ್ವಾಂ
ಧರ್ಮಏವ ನ ಮುಂಚತಿ ॥ ೪೨॥

ಟೀ॥ ಬಂಧವೋಪಿ- ಪತ್ನೀಪುತ್ರಾದಿ ಬಂಧುಜನಗಳೂಕೂಡ, ಶ್ಮಶಾನಾಂತಾಃ-ಶ್ಮಶಾನದವರೆಗೂ ಜೊತೆಯಾಗಿ ಬರುವಂಥಾವರು., ಆರ್ಜಿತಂ-ಸಂಪಾದಿಸಲ್ಪಟ್ಟ, ಧನಂ-ಹಣವು, ಗೃಹಏವ-ಮನೆಯಲ್ಲಿಯೇ ಉಳಿಯುತ್ತದೆ., ಗಾತ್ರಂ-ಶರೀರವು, ಭಸ್ಮನೇ-ಬೂದಿಯಾಗಲೋಸುಗ, ಭವತಿ-ಆಗುತ್ತದೆ., ಏಕಃ-ಒಂದಾದ, ಧರ್ಮಏವ-ಧರ್ಮವೆಯೇ, ತ್ವಾಂ-ನಿನ್ನನ್ನು, ನಮುಂಚತಿ-ಬಿಡುವುದಿಲ್ಲವು.

ತಾತ್ಪರ್ಯ ॥ ಎಲೈ ಆತ್ಮನೇ! ಬಂಧುಗಳೂ ಕೂಡ ಶ್ಮಶಾನದವರೆಗೂ ಅಳುತ್ತಾ ಹಿಂದೆ ಬರುವರು. ಆ ಬಳಿಕ ನೀನೊರ್ವನೇ ಹೋಗಬೇಕೇ ಹೊರತು, ಯಾವುದೂ ಸಂಗಡ ಬರುವುದಿಲ್ಲವು. ಸಂಪಾದಿಸಲ್ಪಟ್ಟ ಹಣವಾದರೋ ಮನೆಯಲ್ಲಿಯೇ ನಿಲ್ಲುವುದು. ಶರೀರವಾದರೋ ಬೂದಿಯಾಗಿಹೋಗುವುದು. ಧರ್ಮವು ಒಂದೇ ನಿನ್ನನ್ನು ಬಿಡುವುದಿಲ್ಲವು. ಆದುದರಿಂದ, ಎಲೈ ಆತ್ಮನೇ! ಪರಲೋಕಕ್ಕೆ ನಿನ್ನೊಡನೆ ಧರ್ಮವು ಸಹಾಯಕವೇ ಹೊರತು, ಬೇರೆ ಯಾವುದೂ ಸಹಾಯಕವಲ್ಲವೆಂ ದಭಿಪ್ರಾಯವು. ಆದುದರಿಂದ ಇಹಪರಸುಖ ಹೇತುವಾದ ಧರ್ಮವನ್ನೇ ಸಂಪಾದಿಸು. ಏಕತ್ವವೇ ನಿಶ್ಚಯವು. ॥೪೨॥

ಶ್ಲೋಕ॥ ಪುತ್ರಮಿತ್ರಕಳತ್ರಾದ್ಯ-
ಮನ್ಯದಪ್ಯನ್ತರಾಳಜಮ್ ।

ನಾನುಯಾಯೀತಿ ನಾಶ್ಚರ್ಯಂ
ನನ್ವಂಗಂ ಸಹಜಂ ತಥಾ ॥ ೪೪ ॥

ಟೀ ॥ ಪುತ್ರಮಿತ್ರಕಳತ್ರಾದ್ಯಂ—ಪುತ್ರ-ಮಗನೂ, ಮಿತ್ರ-ಸ್ನೇಹಿತನೂ, ಕಳತ್ರ-ಹೆಂಡತಿಯೂ, ಆದ್ಯಂ-ಇವರೇ ಮೊದಲಾಗುಳ್ಳ, ಅನ್ಯದಪಿ-ಬೇರೆಯಾದ, ಅಂತರಾಳಜಂ- ಮಧ್ಯಕಾಲದಲ್ಲಿ ಉಂಟಾದ ಧನವೇ ಮೊದಲಾದ ಸಮಸ್ತ ವಸ್ತುವೂ, ನಾನುಯಾಯೀತಿ-ಆತ್ಮನೊಡನೆಕೂಡ ಬರುವುದಿಲ್ಲವೆಂಬುದು, ನಾಶ್ಚರ್ಯಂ- ಆಶ್ಚರ್ಯವಲ್ಲವು., ಸಹಜಂ-ಕೂಡ ಹುಟ್ಟಿದಂಥ, ಅಂಗಂ-ಶರೀರವು, ತಥಾನನು-ಹಾಗೆಯೇ ಅಲ್ಲವೆ ?.

ತಾತ್ಪರ್ಯ ॥ ಎಲೈ ಆತ್ಮನೇ ! ಮಗನೂ, ಸ್ನೇಹಿತನೂ, ಹೆಂಡತಿಯೂ ಇವರೇ ಮೊದಲಾಗಿವುಳ್ಳ ಮಧ್ಯಕಾಲದಲ್ಲಿ ನಿನಗೆ ದೊರೆತ ಧನಕನಕವಸ್ತುವಾಹನರಾಜ್ಯಾದಿಗಳು ನೀನು ಹೋಗುವಾಗ್ಯೆ ಲೋಕಾಂತರಕ್ಕೆ ನಿನ್ನೊಡನೆ ಸಹಾಯವಾಗಿ ಬರುವುದಿಲ್ಲವೆಂಬುವುದು ಆಶ್ಚರ್ಯವಲ್ಲವು. ನೀನು ಈ ಲೋಕದೊಳು ಜನ್ಮವನ್ನುಹೊಂದುವಕಾಲದಲ್ಲಿಯೇ ನಿನ್ನೊಡನೆಕೂಡ ಹುಟ್ಟಿ ನಿನ್ನಿಂದ ಪೋಷಿಸಲ್ಪಟ್ಟ ಈ ದೇಹವೇ ನಿನ್ನೊಡನೆಕೂಡಬರುವುದಿಲ್ಲವು. ಹೀಗಿರುವಲ್ಲಿ, ಈ ಮಧ್ಯಕಾಲದೊಳು ದಾರಿಹೋಕರಂತೆ ಸಂಬಂಧಿಸಿದ ಬಂಧುಮಿತ್ರಾದಿಗಳು, ಗೃಹ ಕ್ಷೇತ್ರ ವಿಸ್ತರಾಜಾದಿಗಳೂ ನಿನಗೆ ಸಹಾಯವಾಗುವವೆ? ಅದುದರಿಂದ, ಏಕೆ ವ್ಯಥಾ ಇವುಗಳಲ್ಲಿ ಆಶಾಪಾಶಬದ್ಧನಾಗಿ ಅಧೋಗತಿಗೆ ಪಾತ್ರನಾಗುತ್ತೀಯೆ?.

ಶ್ಲೋಕ॥ ತ್ವಮೇವ ಕರ್ಮಣಾಂ ಕರ್ತಾ
ಭೋಕ್ತಾ ಚ ಫಲ ಸಂತತೇಃ ।
ಮೋಕ್ತಾ ಚ ತಾತ ಕಿಂ ಮುಕ್ತೌ
ಸ್ವಾಧೀನಾಯಾಂ ನ ಚೇಷ್ಟಸೇ॥ ೪೫ ॥

ಟೀ ॥ ಹೇ ಆತ್ಮನ್-ಎಲೈ ಆತ್ಮನೆ! ತ್ವಮೇವ-ನೀನೆ, ಕರ್ಮಣಾಂ-ಪುಣ್ಯಪಾಪಗಳಿಗೆ, ಕರ್ತಾ-ಮಾಡತಕ್ಕವನು, ಫಲಸಂತತೇಃ—ಸುಖದುಃಖರೂಪವಾದ ಫಲಪರಂಪರೆಗೆ, ಭೋಕ್ತಾಚ-ಅನುಭವಿಸತಕ್ಕವನಾಗಿಯೂ ಇದ್ದೀಯೆ, ಮೋಕ್ತಾ ಚ-ಮುಕ್ತಿಯನ್ನು ಹೊಂದುವ ವಿಷಯದಲ್ಲಿಯೂ ಸ್ವತಂತ್ರನಾಗಿದ್ದೀಯೆ. ಹೇ ತಾತ—ಬಾಲ್ಯತಂದೆಯೇ! ಮುಕ್ತೌ-ಮೋಕ್ಷವು, ಸ್ವಾಧೀನಾಯಾಂ(ಸತ್ಯಾಂ)

ನಿನಗೆಬಾಧಿಸತಕ್ಕೊಸುಗ ಯೋಗ್ಯವಾಗಿದ್ದರೂ, ನಜೀಪ್ಸಸೇ-ಪ್ರವರ್ತಿಸುವದಿಲ್ಲವು.

ತಾತ್ಪರ್ಯ ॥ ಎಲೈ ಆತ್ಮನೆ ! ಪುಣ್ಯಪಾಪಕರ್ಮಗಳನ್ನು ಮಾಡುವವನೂ, ಅವರ ಫಲವನ್ನನುಭವಿಸುವವನೂಸಹ ನೀನೇಯು. ಕಡೆಗೆ ನಿನ್ನಿಂದ ನೀನೇ ಮೋಕ್ಷವನ್ನು ಹೊಂದತಕ್ಕವನಾಗಿಯೂ ಇರುವೆ. ಎಲೈ ತಂದೆಯೇ! ಆತ್ಮನೇ! ಮೋಕ್ಷವು ಸ್ವಾಧೀನವಾಗಿಯೇ ಇರುತ್ತಿರಲು, ನೀನು ಏಕೆ ಅದರಲ್ಲಿ ಪ್ರವರ್ತಿಸಬಾರದು ?. ॥೪೫॥

ಶ್ಲೋಕ॥ ಅಜ್ಞಾತಂ ಕರ್ಮಣೈವಾತ್ಮನ್
ಸ್ವಾಧೀನೇಽಪಿ ಸುಖೋದಯೇ ।
ನೇಹಸೆ ತದುಪಾಯೇ ವಾ
ಯತಸೇ ದುಃಖಸಾಧನೇ ॥ ೪೬ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ, ಸುಖೋದಯೇ-ಸುಖ-ಸ್ಥಿರಸುಖ ಸ್ವರೂಪವಾದ ಮೋಕ್ಷದ, ಉದಯೇ-ಆವಿರ್ಭಾವವು, ಸ್ವಾಧೀನೇ(ಸತಿ)-ಆತ್ಮನಿಗಧೀನವಾಗಿಯೇ ಇರುತ್ತಿರಲಾಗಿ, ಕರ್ಮಣೈವ-ಕರ್ಮದಿಂದಲೇ, ಅಜ್ಞಾತಂ-ತಿಳಿಯಲ್ಪಡಲಿಲ್ಲವು., ತ್ವಂ-ನೀನು, ತದುಪಾಯೇವಾ-ಆ ಮೋಕ್ಷೋಪಾಯದಲ್ಲಿಯೂಕೂಡ, ನೇಹಸೆ-ಅಪೇಕ್ಷಿಸುವದಿಲ್ಲವು., ದುಃಖಸಾಧನೇ-ದುಃಖವನ್ನು ಸಂಪಾದಿಸೋಣದರಲ್ಲಿ, ಯತಸೇ-ಯತ್ನಿಸುತ್ತೀಯೆ.

ತಾತ್ಪರ್ಯ ॥ ಎಲೈ ಆತ್ಮನೇ! ಮೋಕ್ಷಸುಖವು ಸ್ವಾಧೀನವಾಗಿದ್ದರೂಕೂಡ ಅಜ್ಞಾನಹೇತುವಾದ ಕರ್ಮದಿಂದಲೇ ತಿಳಿಯಲ್ಪಡಲಿಲ್ಲವು. ಆದುದರಿಂದಲೇ ನೀನು ಮೋಕ್ಷೋಪಾಯದಲ್ಲಿಕೂಡ ಪ್ರವರ್ತಿಸುವುದಿಲ್ಲ. ಮತ್ತು(ಅಪೇಕ್ಷಿಸುವದೇ ಇಲ್ಲವು). ಮತ್ತು ಆ ಅಜ್ಞಾನದಿಂದ ದುಃಖಕಾರಣವಾದ ಹಿಂಸಾದಿ ಪಾಪಕರ್ಮಗಳಲ್ಲಿ ಪ್ರವರ್ತಿಸುತ್ತೀಯೆ ?.

ಶ್ಲೋಕ॥ ದೇಹಾತ್ಮಕೋಽಹಮಿತ್ಯಾತ್ಮನ್
ಜಾತುಚೇತಸಿ ಮಾ ಕೃಥಾಃ ।
ಕರ್ಮತೋಽಪ್ಯಪೃಥಕ್ತ್ವಂ ತೇ
ತ್ವಂ ನಿಚೋಳಾಸಿಸನ್ನಿಭಃ ॥ ೪೭ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ!, ಅಹಂ-ನಾನು, ದೇಹಾತ್ಮಕಃ-ದೇಹವೇ

ಸ್ವರೂಪವಾಗಿವುಳ್ಳವನು., ಇತಿ-ಹೀಗೆಂದು, ಜಾತು - ಬಂದಾನೊಂದು ಕಾಲದಲ್ಲಿ ಯೂ, ಚೇತಸಿ-ಮನಸ್ಸಿನಲ್ಲಿ, ಮಾಕೃಥಾಃ-ಮಾಡಬೇಡ., ತೇ-ನಿನಗೆ, ಕರ್ಮತಃ-ಕರ್ಮದದೆಸೆಯಿಂದ, ಅಪೃಥಕ್ತ್ವಂ-ಭೇದ ತೋರುವುದಿಲ್ಲವು., ತ್ವಂ-ನೀನು, ನಿಜೋಳಾಸಿಸನ್ನಿಭಃ—ನಿಜೋಳ-ಒರೆಯಲ್ಲಿರುವ, ಅಸಿ-ಕತ್ತಿಗೆ, ಸನ್ನಿಭಃ-ಸಮಾನನು.

ತಾತ್ಪರ್ಯ ॥ ಎಲೈ ಆತ್ಮನೇ! ದೇಹವೇ ಆತ್ಮವಸ್ತುವೇ ಹೊರತು ದೇಹವು ಬೇರೆ, ಆತ್ಮನು ಬೇರೆ ಎಂಬುವುದು ಹೇಗೆ ಸಂಭವಿಸೀತು? ಅದು ಹೇಗೆ ? ಅಂದಗೆ—'ಅಹಂಸ್ಥೂಲಃ, ಅಹಂಕೃಶಃ, ಗೌರೋಽಹಂ, ಮನುಷ್ಯೋಽಹಂ, ಬ್ರಾಹ್ಮಣೋಽಹಂ' ಇತ್ಯಾದಿ ಪ್ರಯೋಗಗಳು ಲೋಕದಲ್ಲಿ ಶರೀರವನ್ನವಲಂಬಿಸಿಯೇ ಕಾಣಲ್ಪಡುವುದರಿಂದ ಎಂದು ಭ್ರಮಿಸಬೇಡ; ಈ ಅಜ್ಞಾನವು ಕರ್ಮದದೆಸೆಯಿಂದ ಉಂಟಾಗುತ್ತದೆ. ದೇಹವೇ ಆತ್ಮನೆಂದು ಒಂದುಕಾಲದಲ್ಲಿಯೂ ಭಾವಿಸಬೇಡ ; ನೀನಾದರೋ ಒರೆಯಿಂದೊಡಗೂಡಿದ ಕತ್ತಿಯಂತೆ, ದೇಹದಲ್ಲಿ ಸೇರಿರುತ್ತೀಯೆ. ಆದುದರಿಂದ ದೇಹಬೇರೆ ಆತ್ಮನುಬೇರೆಯೆಂಬುವುದೇ ಯಥಾರ್ಥವು॥೪೭॥

ಶ್ಲೋಕ॥ ಅಧ್ರುವತ್ವಾದಮೇಧ್ಯತ್ವಾ-
ದಚಿತ್ತ್ವಾದನ್ಯದಙ್ಗಕಮ್ ।
ಚಿತ್ತ್ವ ನಿತ್ಯತ್ವ ಮೇಧ್ಯತ್ವೈ-
ರಾತ್ಮನ್ನನ್ಯೋಽಸಿ ಕಾಯತಃ ॥ ೪೮ ॥

ಟೀ ॥ ಅಂಗಕಂ-ಈ ಹೇಯ ದೇಹವು, ಅಧ್ರುವತ್ವಾತ್-ಎಂದಿಗಿದ್ದರೂ ಒಂದುದಿವಸ ನಾಶವನ್ನು ಹೊಂದುವುದೇ ಸ್ವಭಾವವಾದುದರಿಂದಲೂ, ಅಮೇಧ್ಯತ್ವಾತ್-ತ್ವಕ್ಚರ್ಮ ಮಾಂಸರುಧಿರಸ್ನಾಯು ಮಜ್ಜಾಸ್ಥಿಮಯವಾದುದರಿಂದಶುದ್ಧವಾದ ಪುದ್ಗಲಪುಂಜಸ್ವರೂಪವಾದುದರಿಂದಲೂ, ಅಚಿತ್ತ್ವಾತ್-ಜ್ಞಾನಸ್ವರೂಪವಲ್ಲದುದರಿಂದಲೂ, ಅನ್ಯತ್-ಆತ್ಮನಿಗಿಂತಲೂ ಬೇರೆಯಾದದ್ದು., ಹೇ ಆತ್ಮನ್-ಎಲೈಆತ್ಮನೇ!, ಚಿತ್ತ್ವನಿತ್ಯತ್ವಮೇಧ್ಯತ್ವೈಃ—ಚಿತ್ತ್ವ-ಸಮಸ್ತವನ್ನೂ ತಿಳಿಯುವ ಜ್ಞಾನಸ್ವರೂಪವಸ್ತುವಾದುದರಿಂದಲೂ, ನಿತ್ಯತ್ವ-ಎಂದಿಗೂ ನಾಶರಹಿತವಸ್ತುವಾದುದರಿಂದಲೂ, ಮೇಧ್ಯತ್ವೈಃ-ಪರಿಶುದ್ಧಸ್ವಭಾವವುಳ್ಳವನಾದುದರಿಂದಲೂ, ಕಾಯತಃ-ದೇಹಕ್ಕಿಂತಲೂ, ಅನ್ಯಃ(ಸ್ಸನ್)-ಬೇರೆಯಾಗಿ, ಅಸಿ-ಆಗುತ್ತೀಯೆ.

ತಾತ್ಪರ್ಯ ॥ ಎಲೈ ಆತ್ಮನೇ! ಈ ಶರೀರಸ್ವಭಾವವು ಎಂದಿಗಿದ್ದ

ರೂ ಕಡೆಗೆ ನಾಶವೇಫಲವಾಗುಳ್ಳದ್ದಾದುದರಿಂದಲೂ, ತ್ವಕ್ಚರ್ಮಮಾಂಸಮ
ಜ್ಜಾರಕ್ತಮೆದಳುಮೂಳೆಗಳಿಂಕೂಡಿ ಮಲಮಯವುದ್ಗಲಪುಂಜಸ್ವರೂಪ
ವಾದುದರಿಂದಲೂ, ಸ್ವತಃ ಜ್ಞಾನರಹಿತವಸ್ತುವಾದುದರಿಂದಲೂ, ಆತ್ಮನಿ
ಗಿಂತಲೂ ಬೇರೆಯಾದದ್ದು; ಅತ್ಯಂತನೀಚವಾದದ್ದು. ಆತ್ಮನಾದರೋ
ಜ್ಞಾನಸ್ವರೂಪನಾಗಿರೋಣದರಿಂದಲೂ, ನಿತ್ಯವಸ್ತುವಾಗಿರೋಣದರಿಂ
ದಲೂ, ಪರಿಶುದ್ಧನಾಗಿರೋಣದರಿಂದಲೂ ದೇಹಕ್ಕಿಂತಲೂ ಬೇರೆಯಾದ
ವನು. ಮೋಕ್ಷೇಚ್ಛೆಯುಳ್ಳವನು ಈಪ್ರಕಾರ ದೇಹಾತ್ಮಸ್ವಭಾವವನ್ನು
ವಿವೇಚನೆ ಮಾಡಬೇಕು ॥ ೪೮ ॥

ಶ್ಲೋಕ॥ ( ಹೇಯೇ ಸ್ವಯಂಸತೀ ಬುದ್ಧಿಃ
ಯತ್ನೇನಾಪ್ಯಸತೀ ಶುಭೇ ।
ತದ್ಧೇತುಃ ಕರ್ಮತದ್ವನ್ತ-
ಮಾತ್ಮಾನಮಪಿ ಸಾಧಯೇತ್॥ ೪೯ ॥ )

ಟೀ ॥ ಬುದ್ಧಿಃ-ಬುದ್ಧಿಯು, ಹೇಯೆ-ಕೆಟ್ಟಕೆಲಸದಲ್ಲಿ, ಸ್ವಯಂ-ತಾನಾಗಿಯೆ, ಸತೀ-ಉಂಟಾಗುತ್ತದೆ., ಶುಭೇ-ಒಳ್ಳೇ ಕೆಲಸದಲ್ಲಿ, ಬುದ್ಧಿಃ-ಬುದ್ಧಿಯು, ಯತ್ನೇನಾಪಿ-ಪ್ರಯತ್ನದಿಂದಲೂಕೂಡ, ಅಸತೀ-ಉಂಟಾಗುವುದಿಲ್ಲವು., ತದ್ಧೇತುಃ-ಅದಕ್ಕೆ ಕಾರಣವಾದ, ಕರ್ಮ-ಕರ್ಮವು, ತದ್ವಂತಂ-ಆ ಕರ್ಮವುಳ್ಳ, ಆತ್ಮಾನಮಪಿ-ಆತ್ಮನನ್ನೂಕೂಡ, ಸಾಧಯೇತ್- ಸಾಧಿಸುವುದು.

ತಾತ್ಪರ್ಯ ॥ ಎಲೈ ಆತ್ಮನೇ! ಮನುಷ್ಯನಿಗೆ ಕೆಟ್ಟಕೆಲಸದಲ್ಲಿ ಬುದ್ಧಿಯು ತಾನಾಗಿಯೇ ಉಂಟಾಗುತ್ತದೆ; ಒಳ್ಳೇ ಕೆಲಸದಲ್ಲಿ ಪ್ರಯತ್ನದಿಂದಲೂ ಕೂಡ ಬುದ್ಧಿಯುಂಟಾಗುವುದಿಲ್ಲವು. ಇದಕ್ಕೆ ಕಾರಣವು ಕರ್ಮವೇಯೆ. ಈ ಕರ್ಮವು ದೇಹಕ್ಕಿಂತಲೂ ಆತ್ಮನು ಬೇರೆಯೆಂಬ ವಿಷಯವಂ ಸಾಧಿಸುವುದಕ್ಕೆ ತಕ್ಕ ಉಪಾಯವಾಗಿರುವುದು.॥೪೯॥

## —*(ಅನ್ಯತ್ವಾನುಪ್ರೇಕ್ಷಾ.)*—

ಶ್ಲೋಕ॥ ಮೇಧ್ಯಾನಾಮಪಿ ವಸ್ತೂನಾಂ
ಯತ್ಸಂಪರ್ಕಾದಮೇಧ್ಯತಾ ।

ತದ್ಗಾತ್ರಮಶುಚೀತ್ಯೇತ-
ತ್ಕಿನ್ನಾತ್ಮನ್ಮಲಸಮ್ಭವಮ್ ॥ ೫೦ ॥

ಟೀ ॥ ಹೇ ಆತ್ಮನ್-ಎಲೈ ಆತ್ಮನೇ!, ಮೇಧ್ಯಾನಾಂ- ಪರಿಶುದ್ಧವಾದ, ವಸ್ತೂನಾಮಪಿ-ವಸ್ತುಗಳಿಗೂಕೂಡ, ಯತ್ಸಂಪರ್ಕಾತ್–ಯತ್- ಯಾವ ದೇಹದ, ಸಂಪರ್ಕಾತ್-ಸಂಬಂಧದ ದೆಸೆಯಿಂದ, ಅಮೇಧ್ಯತಾ-ಅಶುದ್ಧಿಯು, ಭವತಿ- ಉಂಟಾಗುತ್ತದೆಯೋ, ತತ್-(ಅಂಥಾ) ಆ ಅಮೇಧ್ಯವಾದ, ಗಾತ್ರಂ-ಶರೀರವು, ಅಶುಚಿ-ಅಶುದ್ಧವಾದದ್ದು., ಮಲಸಂಭವಂ-ಮಲದಿಂದ ಹುಟ್ಟಿದ್ದು., ಇತಿ-ಈ ಪ್ರಕಾರವಾದ, ಏತತ್-ಇದು, ನಕಿಂ- ಸಂಭವಿಸುವುದಿಲ್ಲವೇ ಏನು?.

ತಾತ್ಪರ್ಯ॥ ಎಲೈ ಆತ್ಮನೇ! ಪರಿಶುದ್ಧವಸ್ತುಗಳೂಕೂಡ ಯಾವ ಶರೀರದಲ್ಲಿ ಸೇರುತ್ತಿರಲಾಗಿ ಅಮೇಧ್ಯವೆನಿಸುವುದೋ ಅಂಥಾ ದೇಹವು ಮಲದಿಂದಲೇ ಉತ್ಪನ್ನವಾದದ್ದು; ಅಶುದ್ಧವಾದದ್ದು; ಆದುದರಿಂದ ಈ ರೀತಿಯಾಗಿ ಹೇಳುವುದು ಯುಕ್ತವೇ ಸರಿ. ॥೫೦॥

ಶ್ಲೋಕ॥ ಅಸ್ಪಷ್ಟಂ ದೃಷ್ಟಮಙ್ಗಂ ಹಿ
ಸಾಮರ್ಥ್ಯಾತ್ಕರ್ಮಶಿಲ್ಪಿನಃ ।
ರಮ್ಯಮೂಹೇ ಕಿಮನ್ಯತ್ಸ್ಯಾ-
ನ್ಮಲಮಾಂಸಾಸ್ಥಿಮಜ್ಜತಃ ॥ ೫೧ ॥

ಟೀ ॥ ಅಂಗಂ-ಶರೀರವು, ಕರ್ಮಶಿಲ್ಪಿನಃ--ಕರ್ಮ-ಕರ್ಮವೆಂಬ, ಶಿಲ್ಪಿನಃ-ಶಿಲ್ಪಿಯ, ಸಾಮರ್ಥ್ಯಾತ್-ಸಾಮರ್ಥ್ಯದದೆಸೆಯಿಂದ, ಅಸ್ಪಷ್ಟಂ(ಸತ್)-ಆತ್ಮನಿಗಿಂತಲೂ ಬೇರೆಯೆಂದು ತಿಳಿಯಲ್ಪಡದೇ ಇರುವಂಥಾದ್ದಾಗಿ (ಶರೀರವೇ ಆತ್ಮನೆಂಬದಾಗಿ), ದೃಷ್ಟಂಹಿ- ತಿಳಿಯಲ್ಪಟ್ಟಿತಲ್ಲವೆ?, ಊಹೇ(ಸತಿ) - ವಿಚಾರಮಾಡಲ್ಪಡುವಲ್ಲಿ, ಮಲಮಾಂಸಾಸ್ಥಿಮಜ್ಜತಃ– ಮಲ-ಮಲವೂ, ಮಾಂಸ- ಮಾಂಸವೂ, ಅಸ್ಥಿ-ಮೂಳೆಯೂ, ಮಜ್ಜತಃ-ಮಜ್ಜಾ ಎನ್ನುವ ಧಾತುವಿಶೇಷವೂ ಎಂಬಿವುಗಳಿಗಿಂತಲೂ, ಅನ್ಯತ್- ಬೇರೆಯಾದ, ರಮ್ಯಂ(ಸತ್)-ಉತ್ಕೃಷ್ಟ ವಸ್ತುವೆನಿಸುವದಾಗಿ, ಸ್ಯಾತ್ಕಿಂ- ಆದೀತೇ ಏನು?.

ತಾತ್ಪರ್ಯ ॥ ದೇಹವೇ ಆತ್ಮನೆಂಬ ಅಜ್ಞಾನಕ್ಕೆ ಕರ್ಮವೇ ಕಾರಣವು; ಕರ್ಮಸಾಮರ್ಥ್ಯದಿಂದಲೇ ಅಜ್ಞಾನವುಂಟಾಗುವುದೆಂಬಭಿಪ್ರಾಯ. ಶರೀರಸ್ವಭಾವವನ್ನು ಚೆನ್ನಾಗಿ ಪರ್ಯಾಲೋಚಿಸಿ ನೋಡುವಲ್ಲಿ ದೇಹವು

ಮಲಮಾಂಸಾಸ್ಥಿಮಜ್ಜಾಮಯವಾಗಿದೆಯೇ ಹೊರತು, ಶರೀರವು ರಮ್ಯ ವೆಂದು ಹೇಳಲಾಗುವುದೇ?॥೫೦॥

ಶ್ಲೋಕ॥ ದೈವಾದನ್ತಸ್ಸ್ವರೂಪಂ ಚೇತ್
ಬಹಿರ್ದೇಹಸ್ಯ ಕಿಂ ಪರೈಃ।
ಆಸ್ತಾಮನುಭವೇಚ್ಛೇಯ-
ಮಾತ್ಮನ್ ಕೋನಾಮ ಪಶ್ಯತಿ ॥೫೧॥

ಟೀ॥ ದೈವಾತ್-ಅದೃಷ್ಟವಶವಪಸೆಯಿಂದ, ದೇಹಸ್ಯ-ದೇಹದ, ಅಂತಃ-ಒಳಗಿರುವ, ಸ್ವರೂಪಂ-ಸ್ವರೂಪವು, ಬಹಿಶ್ಚೇತ್-ಹೊರಗೂ ಇದ್ದದ್ದೇ ಆದರೆ, ಪರೈಃ-ಉಳಿದ ಮಾತುಗಳಿಂದ, ಕಿಂ-ಏನು ಪ್ರಯೋಜನವು?, ಇಯಂ-ಈ, ಅನುಭವೇಚ್ಛಾ-ಅನುಭವಿಸಬೇಕೆಂಬ ಈಚ್ಛೆಯು, ಆಸ್ತಾಂ-ಹಾಗಿರಲಿ., ಹೇ ಆತ್ಮನ್-ಎಲೈ ಆತ್ಮನೇ!, ಕೋನಾಮ-ಯಾವನುತಾನೇ, ಪಶ್ಯತಿ-ನೋಡುತ್ತಾನೆ?.

ತಾತ್ಪರ್ಯ॥ ಅದೃಷ್ಟವಶದಿಂದ ದೇಹದೊಳಗಿರುವ ಅತ್ಯಂತಜುಗುಪ್ಸಾಕರವಾದ ಘೋರಾಕಾರವು ದೇಹದಮೇಲೂ ಇದ್ದದ್ದೇಆದರೆ ಅನುಭವಿಸಬೇಕೆಂಬ ಇಚ್ಛೆಯು ಹಾಗಿರಲಿ; ಯಾವನುತಾನೆ ನೋಡುವನು॥

ಶ್ಲೋಕ॥ ಏವಂ ಪಿಶಿತಪಿಣ್ಡಸ್ಯ
ಕ್ಷಯಿಣೋಽಕ್ಷಯಶಂಕೃತಃ।
ಗಾತ್ರಸ್ಯಾತ್ಮನ್ ಕ್ಷಯಾತ್ಪೂರ್ವಂ
ತತ್ಫಲಂ ಪ್ರಾಪ್ಯ ತತ್ತ್ಯಜ ॥ ೫೨ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ! ಏವಂ-ಈ ಪ್ರಕಾರ, ಪಿಶಿತಪಿಂಡಸ್ಯ-ಮಾಂಸಪಿಂಡಸ್ವರೂಪವಾದ, ಕ್ಷಯಿಣಃ-ನಾಶವೇ ಸ್ವಭಾವವಾಗಿವುಳ್ಳ, ಅಕ್ಷಯಶಂಕೃತಃ-ಅಕ್ಷಯ-ನಾಶರಹಿತವಾದ, ಶಂ-ಸುಖವನ್ನು (ಮೋಕ್ಷಸುಖವನ್ನು), ಕೃತಃ-ಉಂಟುಮಾಡುತ್ತಿರುವ, ಗಾತ್ರಸ್ಯ-ದೇಹದ, ಕ್ಷಯಾತ್-ನಾಶಕ್ಕಿಂತಲೂ, ಪೂರ್ವಂ-ಮುಂಚಿತವಾಗಿಯೇ, ತತ್ಫಲಂ-ತತ್-ಆ ಶರೀರಕ್ಕೆ, ಫಲಂ-ಪ್ರಯೋಜನವಾದ ಧರ್ಮವನ್ನು, ಪ್ರಾಪ್ಯ-ಸಂಪಾದಿಸಿ, ತತ್-ಆ ದೇಹವನ್ನು, ತ್ಯಜ-ಬಿಡು.

ತಾತ್ಪರ್ಯ॥ ಎಲೈ ಆತ್ಮನೇ! ಈ ಪ್ರಕಾರ ಮಾಂಸಪಿಂಡಸ್ವರೂಪವಾಗಿಯೂ ನಾಶವೇ ಸ್ವಭಾವವುಳ್ಳದ್ದಾಗಿಯೂ, ಅಕ್ಷಯಸುಖವಾದ ಮೋಕ್ಷಕ್ಕೆ ಕಾರಣವಾಗಿಯೂ, ಧರ್ಮಸಂಪಾದನೆಗೆ ಮೂಲಕಾರಣವಾಗಿ

ಯೂಇರುವೀಶರೀರವು ನಾಶವಾಗುವುದಕಿಂತಲೂ ಪೂರ್ವದಲ್ಲಿಯೇ ಈಶ
ರೀರಕ್ಕೆ ಮುಖ್ಯಫಲವಾದ ಧರ್ಮವನ್ನು ಸಂಪಾದಿಸಿಕೊಂಡು ಆ ಶರೀರವ
ನ್ನು ಬಿಡುವವನಾಗು ಎಂದರೆ—(ದೇಹಕ್ಕೆ ಭೋಗವೇ ಫಲವೆಂಬ ದುರ
ಭಿಮಾನವನ್ನು ಬಿಡೆಂದಭಿಪ್ರಾಯವು ॥ ೫೩ ॥

ಶ್ಲೋಕ॥ ಆತ್ತಸಾರಂ ವಪುಃ ಕುರ್ಯಾ-
ಸ್ತಥಾತ್ಮನ್ ತತ್ಕ್ಷಯೇಪ್ಯಭೀಃ ।
ಆತ್ತಸಾರೇಕ್ಷುದಾಹೇಽಪಿ
ನ ಹಿ ಶೋಚನ್ತಿ ಮಾನವಾಃ ॥ ೫೪ ॥

ಟೀ ॥ ಆತ್ಮನ್-ಎಲೈ ಆತ್ಮನೇ!, ವಪುಃ-ಶರೀರವನ್ನು, ಆತ್ತಸಾರಂ(ಸತ್)-
ಆತ್ತ-ಪಡೆಯಲ್ಪಟ್ಟ, ಸಾರಂ(ಸತ್)- ಸಾರಭೂತವಾದ ಧರ್ಮವುಳ್ಳದ್ದನ್ನಾಗಿ, ಕು
ರ್ಯಾಃ-ಮಾಡು., ತಥಾ-ಹಾಗೆಯೇ, ತತ್ಕ್ಷಯೇಪಿ—ತತ್-ಆ ದೇಹದ, ಕ್ಷಯೇಪಿ-ನಾ
ಶವುಂಟಾಗುತ್ತಿದ್ದರೂಕೂಡ, ಅಭೀಃ-ನಿರ್ಭಯನಾಗಿರು., ಆತ್ತಸಾರೇಕ್ಷುದಾಹೇಪಿ-
ಆತ್ತ-ಸ್ವೀಕರಿಸಲ್ಪಟ್ಟ, ಸಾರ-ಸಾರಾಂಶವಾದರಸವುಳ್ಳ, ಇಕ್ಷು-ಕಬ್ಬಿನ, ದಾಹೇಪಿ-
ದಹಿಸೋಣದರಲ್ಲಿಯೂಕೂಡ, ಮಾನವಾಃ-ಮನುಷ್ಯರು, ನಶೋಚಂತಿ ಹಿ- ಶೋ
ಕಿಸುವುದಿಲ್ಲವಷ್ಟೆ?.

ತಾತ್ಪರ್ಯ॥ ಎಲೈ ಆತ್ಮನೇ! ಶರೀರವುಂಟಾದುದಕ್ಕೆ ಮುಖ್ಯವಾ
ಗಿ ಪಡೆಯಲ್ಪಡುವ (ಫಲವಾದ)ಸಾರಾಂಶವಾದ ಧರ್ಮವನ್ನು ಸಂಪಾದಿಸು;
ಉದಾಸೀನನಾಗಿರಬೇಡ. ಧರ್ಮವನ್ನುಸಂಪಾದಿಸಿ ಅನಂತರ ಶರೀರವು
ನಾಶವನ್ನು ಹೊಂದುತ್ತಿರಲಾಗಿ ಈ ಶರೀರವು ಉತ್ತರತ್ರ ಹೋಗುವುದ
ಲ್ಲಾ !! ಎಂದು ಶೋಕಿಸಬೇಡ ; ಧೈರ್ಯವಾಗಿರು ; ದೇಹನಾಶವು
ವುಂಟಾಗುತ್ತಿರಲು ಶೋಕಿಸುವುದನುಚಿತವು ; ಹೇಗೆಂದರೆ.—ಆಲೆಗೆ
ಕೊಟ್ಟು ಕಬ್ಬಿನ ರಸವನ್ನೆಲ್ಲಾ ತೆಗೆದು ನಂತರ ಆ ಕಬ್ಬಿನ ಶಿಪ್ಪೆಯ
ನ್ನೇ ಒಲೆಗೆ ಹಾಕುವ ಮನುಷ್ಯರು ಶೋಕಿಸುವುದಿಲ್ಲವಷ್ಟೆ ?. ಅದರಂ
ತೆಯೇ (ದೇಹದ ಫಲವಾದ ಧರ್ಮವು ಪಡೆದನಂತರ ಹಾಗೆಯೇ ಆದೇಹನ
ನಷ್ಟವಾದಲ್ಲಿ, ವಸ್ತುತತ್ತ್ವಸ್ವರೂಪವು ತಿಳಿದವರು ಶೋಕಿಸಲಾರರೆಂ
ದಭಿಪ್ರಾಯವು.) ॥೫೪॥

—*(ಅಶುಚಿತ್ವಾನುಪ್ರೇಕ್ಷಾ.)*—

ಶ್ಲೋಕ॥ ಅಜಸ್ರಮಾಸ್ರವಂತ್ಯಾತ್ಮನ್
ದುರ್ಮೋಚಾಃ ಕರ್ಮಪುದ್ಗಲಾಃ ।
ತೈಃ ಪೂರ್ಣಸ್ತ್ವಮಧೋಧಸ್ಸ್ಯಾ-
ಜಲಪೂರ್ಣೋ ಯಥಾ ಪ್ಲವಃ॥ ೫೫ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ!, ದುರ್ಮೋಚಾಃ-ತ್ಯಜಿಸಲಶಕ್ಯವಾದ, ಕರ್ಮಪುದ್ಗಲಾಃ-ಕರ್ಮ-ಪುಣ್ಯಪಾಪರೂಪವಾದ ಕರ್ಮಗಳ, ಪುದ್ಗಲಾಃ-ಪರಮಾಣು ಸ್ವರೂಪಗಳಾದ ಪುದ್ಗಲಗಳು, ಅಜಸ್ರಂ- ಸರ್ವಕಾಲದಲ್ಲಿಯೂ, ಆಸ್ರವಂತಿ- ಉಂಟಾಗುತ್ತಲಿವೆ., ತೈಃ-ಆ ಕರ್ಮಪುದ್ಗಲಗಳಿಂದ, ತ್ವಂ-ನೀನು, ಪೂರ್ಣ(ಸ್ಸನ್)- ತುಂಬಲ್ಪಟ್ಟವನಾಗಿ, ಜಲಪೂರ್ಣಃ-ಜಲ-ನೀರಿನಿಂದ, ಪೂರ್ಣಃ-ತುಂಬಲ್ಪಟ್ಟ, ಪ್ಲವೋ ಯಥಾ-ತೆಪ್ಪದಹಾಗೆ (ಛಿಲವಾದ ದೋಣಿಯಂತೆ), ಅಧೋಧಃ-ಕೆಳಕೆಳಗೆ, ಸ್ಯಾಃ- ಆಗುವಿ.

ತಾತ್ಪರ್ಯ॥ ಎಲೈ ಆತ್ಮನೇ! ತ್ಯಜಿಸಲಶಕ್ಯವಾದ ಯಾವ ಕರ್ಮಪುದ್ಗಲಗಳುಂಟೋ ಸರ್ವಕಾಲದಲ್ಲಿಯೂ ಆ ಪುಣ್ಯಪಾಪರೂಪವಾದ ಕರ್ಮಪುದ್ಗಲಗಳು ಉಂಟಾಗುತ್ತಲಿವೆ. ಹೀಗೆಯೇ ಪ್ರತಿಕ್ಷಣದಲ್ಲಿಯೂ ಸೇರುತ್ತಿರುವ ಕರ್ಮಪುದ್ಗಲಗಳಿಂದ ಪರಿಪೂರ್ಣನಾದ ನೀನು (ಒಡಕು ತೆಪ್ಪವು (ಹರಿಗೋಲು) ಹೇಗೆ ಸ್ವಲ್ಪಸ್ವಲ್ಪವಾಗಿ ನೀರು ತುಂಬಿಕೊಳ್ಳುತ ಕ್ರಮವಾಗಿ ಕೆಳಕೆಳಗೆ ಹೋಗುತ ಮುಳುಗಿಪೋಗುವುದೋ, ಹಾಗೆ ಕರ್ಮಪೂರಿತನಾಗಿ ಕ್ರಮೇಣ ನರಕಾದಿ ದುರ್ಗತಿಯನ್ನು ಹೊಂದುವಿ.॥೫೫॥

ಶ್ಲೋಕ॥ ತನ್ನಿದಾನಂ ತವೈವಾತ್ಮ-
ನ್ಯೋಗಭಾವೌ ಸದಾತನೌ ।
ತೌ ವಿದ್ಧಿ ಸಪರಿಸ್ಪಂದಂ
ಪರಿಣಾಮಂ ಶುಭಾಶುಭಮ್ ॥ ೫೬ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ! ತನ್ನಿದಾನಂ—ತತ್-ಆ ಕರ್ಮಪುದ್ಗಲಗಳಿಗೆ, ನಿದಾನಂ-ಮೂಲಕಾರಣವು, ತವೈವ- ನಿನ್ನ ಸಂಬಂಧಿಯಾಗಿಯೇ ಇರುವ, ಸದಾತನೌ-ಪೂರ್ವಭವಸಂಬಂಧಿಯಾದ, ಯೋಗಭಾವೌ—ಯೋಗ-ಯೋಗವೂ, ಭಾವೌ-ಭಾವಾನುಬಂಧವೂ ಇವುಗಳೆಯು, ತೌ-ಆ ಅನಾದಿವಾಸನಾರೂಪವಾದಯೋಗ

ಭಾವಗಳನ್ನು, ಸಪರಿಸ್ಪಂದಂ-ಚಂಚಲವಾದ, ಶುಭಾಶುಭಂ-ಶುಭಸ್ವರೂಪವಾದು ವಾಗಿಯೂ, ಅಶುಭ- ಪಾಪವಿಶಿಷ್ಟವಾಗಿಯೂ ಇರುವ, ಪರಿಣಾಮಂ(ಸ್ವ) [illegible]- ಅಂತಃಕರಣ ಪರಿಣಾಮವನ್ನಾಗಿ, ವಿದ್ಧಿ-ತಿಳಿ.

ಟೀ ॥ ಎಲೈ ಆತ್ಮನೇ! ಆ ಪುಣ್ಯಪಾಪರೂಪವಾದ ಕರ್ಮಗಳ ಆಸ್ರ ವಗಳಿಗೆ ಮೂಲಕಾರಣವು ಪೂರ್ವಭವದಲ್ಲಿ ನಿನ್ನಲ್ಲಿಯೇ ಸಂಬಂಧಿಸಿದ್ದ ಯೋಗವೂ ಭಾವವೂ ಇವುಗಳೇ ಹೊರತು ಬೇರೆಯಾವುವೂ ಕಾರಣ ವಲ್ಲವು. ಯೋಗವೆಂದರೆ.—ಪೂರ್ವಭವದಲ್ಲಿ ಮಾಡಿದ ಪುಣ್ಯಕರ್ಮದಿಂ ದುಂಟಾದ ಚಲಿಸುತಲಿರುವ ಅಂತಃಕರಣದ ಶುಭಪರಿಣಾಮವೇಯೆ. ಭಾವವೆಂದರೆ.—ಪೂರ್ವಭವಸಂಬಂಧಿಯಾದಪಾಪಗಳಿಂದುಂಟಾದ ಯಾಗ ಲೂ ಪಾಪದಲ್ಲಿಯೇ ಪ್ರವರ್ತಿಸುವಹಾಗೆ ಮಾಡುವ (ಚಲಿಸುತಿರುವ) ಅಶು ಭಪರಿಣಾಮವೇಯೆ. ಹೀಗೆಂದು ತಿಳಿ. ( ಶುಭಾಶುಭ ಪರಿಣಾಮಗಳೇ ಪುಣ್ಯಾಸ್ರವ ಪಾಪಾಸ್ರವಗಳಿಗೆ ಮೂಲಕಾರಣವೆಂದು ಮುಖ್ಯಾಭಿ ಪ್ರಾಯವು.)॥೫೬॥

ಶ್ಲೋಕ॥ ಆಸ್ರವೋಽಯಮಮುಷ್ಯೇತಿ
ಜ್ಞಾತ್ವಾತ್ಮನ್ಕರ್ಮಕಾರಣೇ ।
ತತ್ತನ್ನಿಮಿತ್ತವೈಧುರ್ಯಾ-
ದಪವಾರ್ಯೋರ್ಧ್ವಗೋ ಭವ ॥ ೫೭ ॥

ಟೀ॥ ಹೇಆತ್ಮನ್-ಎಲೈ ಆತ್ಮನೇ! ಕರ್ಮಕಾರಣೇ—ಕರ್ಮ-ಕರ್ಮಗಳಿಗೆ, ಕಾರಣೇ- ಕಾರಣವಾದ ಆಸ್ರವದಲ್ಲಿ, ಅಯಮಾಸ್ರವಃ-ಈ ಆಸ್ರವವು, ಅಮುಷ್ಯ-ಈಕರ್ಮಕ್ಕೆ ಕಾರಣವಾದದ್ದು, ಇತಿ-ಹೀಗೆಂದು, ಜ್ಞಾತ್ವಾ-ತಿಳಿದು, ತತ್ತನ್ನಿಮಿತ್ತವೈಧುರ್ಯಾ ತ್-ತತ್ತನ್ನಿಮಿತ್ತ-ಆ ಆ ಕರ್ಮಗಳಿಗೆ ಕಾರಣವಾದಆಸ್ರವಗಳ, ವೈಧುರ್ಯಾತ್- ನಾ ಶಮಾಡೋಣವೆಂಬ ದೆಸೆಯಿಂದ, ಅಪವಾರ್ಯ-ಮರಳಿ ಕರ್ಮಾಸ್ರವಬಂಧವುಂಟಾಗದಂತೆ ಆತ್ಮನನ್ನು ತಪ್ಪಿಸಿ, ಊರ್ಧ್ವಗ(ಸ್ಸನ್)- ಊರ್ಧ್ವಗತಿಯನ್ನು ಪಡೆಯುವವನಾಗಿ, (ಮೋಕ್ಷವನ್ನುಪಡೆಯುವವನಾಗಿ), ಭವ-ಆಗು.

ತಾತ್ಪರ್ಯ ॥ ಎಲೈ ಆತ್ಮನೇ? ಕರ್ಮಗಳಿಗೆ ಕಾರಣವಾದ ಆಸ್ರವಗ ಳಲ್ಲಿ ಈ ಆಸ್ರವವು ಈ ಕರ್ಮಕ್ಕೆ ಕಾರಣವೆಂಬದಾಗಿ ಆಸ್ರವತತ್ವವಿವೇಕ ವನ್ನುಪೊಂದಿ, ಆ ಆ ಕರ್ಮನಿಮಿತ್ತವಾದ ಆಸ್ರವಗಳಂ ನಾಶಮಾಡಿ ತಿರಿ

ಆತ್ಮನಿಗೆ ಆಸ್ರವವು ಸಂಭವಿಸದಂತೆ ಹಿಂದಿರುಗಿಸಿ ಊರ್ಧ್ವ ಗತಿಯಾದ ಮೋಕ್ಷವಂ ಪಡೆಯುವವನಾಗಿ ಆಗು. ॥೫೩॥

--*(ಇತ್ಯಾಸ್ರವಾನುಪ್ರೇಕ್ಷಾ.)*--

ಶ್ಲೋಕ॥ ಸಂರಕ್ಷ್ಯ ಸಮಿತಿಂ ಗುಪ್ತಿ-
ಮನುಪ್ರೇಕ್ಷಾಪರಾಯಣಃ ।
ತಪಸ್ಸಂಯಮಧರ್ಮಾತ್ಮಾ
ತ್ವಂಸ್ಯಾಜಿತ ಪರೀಷಹಃ॥೫೪॥

ಟೀ ॥ (ಹೇ ಆತ್ಮನ್-ಎಲೈ ಆತ್ಮನೇ!), ತ್ವಂ-ನೀನು, ಸಮಿತಿಂ-ಪಂಚಸಮಿತಿಗಳನ್ನು, ಗುಪ್ತಿಂ-ತ್ರಿಗುಪ್ತಿಗಳನ್ನು, ಸಂರಕ್ಷ್ಯ-ಅಪಾಯಬಾರದಂತೆ ರಕ್ಷಿಸಿ, ಅನುಪ್ರೇಕ್ಷಾಪರಾಯಣ(ಸ್ಸನ್)-ಅನುಪ್ರೇಕ್ಷಾ-ದ್ವಾದಶಾನುಪ್ರೇಕ್ಷೆಗಳಲ್ಲಿ, ಪರಾಯಣ(ಸ್ಸನ್)-ಆಸಕ್ತನಾಗಿ, ತಪಸ್ಸಂಯಮಧರ್ಮಾತ್ಮಾ(ಸನ್)-ತಪಃ-ತಪಸ್ಸೂ, ಸಂಯಮ-ದೀಕ್ಷೆಯೂ(ವ್ರತವೂ) ಮತ್ತು, ಧರ್ಮ-ಧರ್ಮವೂ ಇವುಗಳಲ್ಲಿ, ಆತ್ಮಾ(ಸನ್)-ಮನಸ್ಸುಳ್ಳವನಾಗಿ, ಜಿತಪರೀಷಹ(ಸ್ಸನ್)-ಜಿತ-ಜಯಿಸಲ್ಪಟ್ಟ, ಪರೀಷಹ(ಸ್ಸನ್)-ಕ್ಷುತ್ಪಿಪಾಸಾದಂಶಮಶಕ ಶೀತೋಷ್ಣ ವಾತಾತಪ ವರ್ಷಾದಿ ಬಾಧೆಗಳುಳ್ಳವನಾಗಿ, ಸ್ಯಾಃ-ಆಗು.

ತಾತ್ಪರ್ಯ ॥ ಎಲೈ ಆತ್ಮನೇ ! ನೀನು ಪಂಚ ಸಮಿತಿಗಳನ್ನೂ, ತ್ರಿಗುಪ್ತಿಗಳನ್ನೂ ಸಂರಕ್ಷಿಸಿಕೊಂಡು ದ್ವಾದಶಾನುಪ್ರೇಕ್ಷೆಗಳಲ್ಲಿ ಆಸಕ್ತನಾಗಿ ದೀಕ್ಷೆಯು, ತಪಸ್ಸು(ವ್ರತವು), ಧರ್ಮವು ಇವುಗಳಲ್ಲಿ ಮನಸ್ಸುಳ್ಳವನಾಗಿ ಕ್ಷುತ್ಪಿಪಾಸಾದಿ ಪರೀಷಹಗಳನ್ನು ಜಯಿಸಿದಂಥಾವನಾಗಿ ಆಗು.

ಶ್ಲೋಕ॥ ಏವಂ ಚ ತ್ವಯಿ ಸತ್ಯಾತ್ಮನ್
ಕರ್ಮಾಸ್ರವ ನಿರೋಧನಾತ್ ।
ನೀರನ್ಧ್ರಪ್ರೋತವದ್ಭೂಯಾ
ನಿರಪಾಯೋ ಭವಾಂಬುಧೌ ॥ ೫೫ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ ! ತ್ವಯಿ-ನೀನು, ಏವಂ ಚ ಸತಿ-ಪಂಚಸಮಿತಿ ತ್ರಿಗುಪ್ತಿ ಮೊದಲುಗೊಂಡು ಪೂರ್ವೋಕ್ತವಾದ ಪರೀಷಹಜಯ ಪರ್ಯಂತ ಸಾಧಿಸುತ್ತಲಿರಲಾಗಿ, ಕರ್ಮಾಸ್ರವನಿರೋಧನಾತ್-ಪುಣ್ಯಾಸ್ರವ ಪಾಪಾಸ್ರವಗಳಂ

ತಡೆಯೋಣದಿಂದ, ನೀರಂಧ್ರಪೋತವತ್–ನೀರಂಧ್ರ-ರಂಧ್ರವಿಲ್ಲದೇ ಇರುವ, ಪೋ
ವತ್-ಹಡಗಿನೋಪಾದಿಯಲ್ಲಿ, ಭವಾಂಬುಧೌ–ಭವ-ಚತುರ್ಗತಿಭ್ರಮಣ ರೂಪವಾ
ದ ಸಂಸಾರವೆಂಬ, ಅಂಬುಧೌ-ಸಮುದ್ರದಲ್ಲಿ, ನಿರಪಾಯ(ಸ್ಸನ್)-ಅಪಾಯವಿಲ್ಲದವ
ನಾಗಿ, ಭೂಯಾಃ-ಆಗು.

ತಾತ್ಪರ್ಯ॥ ಎಲೈ ಆತ್ಮನೇ! ನೀನು ಪೂರ್ವೋಕ್ತ ಪ್ರಕಾರವಾಗಿ
ಪಂಚಸಮಿತಿ ತ್ರಿಗುಪ್ತಿಮೊದಲುಗೊಂಡು ಪರೀಷಹಜಯ ಪರ್ಯಂತ ಸಿ
ದ್ಧಿಯನ್ನೈದುತ್ತಿರಲಾಗಿ, ಪುಣ್ಯಾಪುಣ್ಯಾಸ್ರವಗಳಂ ತಡೆಯೋಣದ
ರದೆಸೆಯಿಂದ ರಂಧ್ರವಿಲ್ಲದ ಹಡಗಿನೋಪಾದಿಯಲ್ಲಿ ಸಂಸಾರವೆಂಬ ಸಮು
ದ್ರದಲ್ಲಿ ಅಪಾಯರಹಿತನಾಗುವೆ. ॥೫೯॥

ಶ್ಲೋಕ॥ ವಿಕಥಾದಿ ವಿಯುಕ್ತಸ್ತ್ವ-
ಮಾತ್ಮಭಾವನಯಾನ್ವಿತಃ।
ತ್ಯಕ್ತ ಬಾಹ್ಯಸ್ಪೃಹೋಭೂಯಾ
ಗುಪ್ತ್ಯಾದ್ಯಾಸ್ತೇ ಕರಸ್ಥಿತಾಃ ॥ ೬೦ ॥

ಟೀ॥ (ಹೇ ಆತ್ಮನ್-ಎಲೈ ಆತ್ಮನೇ!), ತ್ವಂ- ನೀನು, ವಿಕಥಾದಿವಿಯುಕ್ತ
(ಸ್ಸನ್)–ವಿಕಥಾ- ವಿರುದ್ಧ ಕಥೆಯೇ ಅಂದರೆ (ಭಂಡಕಥೆಯೇ), ಆದಿ- ಮೊದಲಾ
ದೋಷಾಸ್ಪದವಾದ ಕೃತ್ಯಗಳಿಂದ, ವಿಯುಕ್ತ(ಸ್ಸನ್)- ಬಿಡಲ್ಪಟ್ಟವನಾಗಿ, ಆತ್ಮ
ಭಾವನಯಾ–ಆತ್ಮ-ಆತ್ಮವಸ್ತುವಿನ, ಭಾವನಯಾ-ಧ್ಯಾನದೊಡನೆ,ಅನ್ವಿತ(ಸ್ಸನ್)
ಕೂಡಿದವನಾಗಿ, ತ್ಯಕ್ತಬಾಹ್ಯಸ್ಪೃಹ(ಸ್ಸನ್)–ತ್ಯಕ್ತ-ಬಿಡಲ್ಪಟ್ಟ, ಬಾಹ್ಯ-ಹೊ
ಗಿನದಾದ, ಸ್ಪೃಹ(ಸ್ಸನ್)-ಆಶೆಯುಳ್ಳವನಾಗಿ. ಭೂಯಾಃ–ಆಗು., ಗುಪ್ತ್ಯಾ
ದ್ಯಾಃ–ತ್ರಿಗುಪ್ತಿಯೇ ಮೊದಲಾಗಿ ವುಳ್ಳವುಗಳು, ತೇ-ನಿನ್ನ, ಕರಸ್ಥಿತಾಃ-ಹಸ್ತ
ಲ್ಲಿರುತ್ತಿವೆ.

ತಾತ್ಪರ್ಯ ॥ ಎಲೈ ಆತ್ಮನೇ! ನೀನು ಭಂಡ ಕಥೆಯೇ ಮೊದಲ
ದ ವಿರುದ್ಧಕೃತ್ಯದಿಂದ ಬಿಡಲ್ಪಟ್ಟವನಾಗಿ, ಆತ್ಮಧ್ಯಾನದಿಂದೊಡಗೂ
ಹೊರಗಿನ ಭೋಗಾಶೆಯಂ ಪರಿತ್ಯಜಿಸಿದವನಾಗಿ ಆಗು. ತ್ರಿಗುಪ್ತಿಯೇ
ಮೊದಲಾದ ಧರ್ಮಗಳು ನಿನ್ನ ಹಸ್ತಗತವಾಗುವುದೆಂದು ತಿಳಿ. ॥ ೬೦ ॥

ಶ್ಲೋಕ॥ ಏವಮುಕ್ತ್ಲೇಶಗವ್ಯೇಸ್ಮಿ-
ನ್ನಾತ್ಮಾಧೀನ ತಯಾ ಸದಾ ।

ಶ್ರೇಯೋಮಾರ್ಗೇ ಮತಿಂ ಕುರ್ಯಾಃ
ಕಿಂ ಬಾಹ್ಯೇ ತಾಪಕಾರಿಣಿ ॥ ೬೧ ॥

ಟೀ ॥ ಆತ್ಮಾಧೀನತಯಾ-ಆತ್ಮ-ತನಿಗೆ, ಅಧೀನತಯಾ-ಸ್ವಾಧೀನವಾಗಿರೋಣವಗಿಂದ, ಏವಂ-ಈ ಪ್ರಕಾರ, ಅಕ್ಲೇಶಗಮ್ಯೇ- ಅಕ್ಲೇಶ- ಅನಾಯಾಸದಿಂದ, ಗಮ್ಯ-ಹೊಂದುವುದಕ್ಕೆ ಯೋಗ್ಯವಾದ, ಅಸ್ಮಿನ್-ಈ ಪ್ರಸಿದ್ಧವಾದ, ಶ್ರೇಯೋಮಾರ್ಗೇ-ಶ್ರೇಯಃ-ಮೋಕ್ಷಪುರುಷಾರ್ಥದ, ಮಾರ್ಗೇ-ಮಾರ್ಗವೆನಿಸಿವ ರತ್ನತ್ರಯಾದಿಗಳಲ್ಲಿ, ಸದಾ-ಸರ್ವಕಾಲದಲ್ಲಿಯೂ, ಮತಿಂ-ಬುದ್ಧಿಯನ್ನು, ಕುರ್ಯಾಃ-ಮಾಡು, ತಾಪಕಾರಿಣಿ-ತಾಪ-ದುಃಖವನ್ನು, ಕಾರಿಣಿ-ಉಂಟು ಮಾಡತಕ್ಕದಾದ, ಬಾಹ್ಯೇ-ಹೊರಗಿನ ಭೋಗೋಪಭೋಗರೂಪವಾದ ವಿಷಯದಲ್ಲಿ, ಕಿಂ-ಏನುಪ್ರಯೋಜನ?.

ತಾತ್ಪರ್ಯ॥ ಜೀವಂಧರಮಹಾರಾಜನು ವಿರಕ್ತಿಯಿಂದ ತನ್ನಾತ್ಮನನ್ನು ಕುರಿತು ಸಂವರತತ್ತ್ವಭಾವನೆಯಂ ಬೋಧಿಸುತ್ತಾನೆ.—ಎಲೈ ಆತ್ಮನೇ ! ಸಮ್ಯಗ್ದರ್ಶನಾದಿ ರತ್ನತ್ರಯದೊಡನೆಕೂಡಿದ ನಿನಗೆ ತ್ರಿಗುಪ್ತಿ ಪಂಚಸಮಿತಿಗಳೇಮೊದಲಾದ ಮೋಕ್ಷೋಪಾಯ ಭೂತವಾದ ಧರ್ಮಗಳು ಸ್ವಾಧೀನವಾಗಿಯೂ, ಅನಾಯಾಸದಿಂದಲೇ ಸಾಧಿಸುವುದಕ್ಕೆಯೋಗ್ಯಗಳಾಗಿಯೂ ಇರೋಣದರಿಂದ ಕರ್ಮಪುದ್ಗಲಗಳುಸೇರುವ ದಾರಿಗಳಂ ಮುಚ್ಚೋಣವೆಂಬ ಸಂವರತತ್ವದಲ್ಲಿ ಸದಾ ಬುದ್ಧಿಯನ್ನು ಮಾಡು. ಎಂದಿಗಿದ್ದರೂ ದುಃಖಕ್ಕೆ ಕಾರಣವಾದ ಪಂಚೇಂದ್ರಿಯವಿಷಯಗಳಲ್ಲಿ ಏಕೆ ಆಶೆಪಡುತ್ತೀಯೆ ? ನಿತ್ಯದುಃಖಕ್ಕೆ ಕಾರಣವಾದ ಕರ್ಮಗಳ ಪ್ರವೇಶದ್ವಾರವಂ ತ್ರಿಗುಪ್ತ್ಯಾದಿಗಳಿಂದ ತಡೆದು ನಿತ್ಯಸುಖರೂಪವಾದಮೋಕ್ಷಕ್ಕೆಹೇತುವಾದ ಸಂವರತತ್ವವನ್ನು ಸಾಧಿಸೋಣದರಲ್ಲಿ ಸುಖಸಾಧ್ಯವಾದುದರಿಂದ ಸರ್ವದಾ ಮನಸ್ಸನ್ನಿಡೆಂದು ಮುಖ್ಯಾಭಿಪ್ರಾಯವು. ಶಾಸ್ತ್ರದಿಂದಲೂ, ಸ್ವಾನುಭವದಿಂದಲೂ ಪಂಚೇಂದ್ರಿಯವಿಷಯಗಳು ದುಃಖಹೇತುಗಳೆಂದು ತಿಳಿದೂಕೂಡ, ವಿಷಯಾಶೆಯಂ ಪರಿತ್ಯಜಿಸದೇ ಇರೋಣವು ಅತ್ಯಂತಾನುಚಿತವೆಂದೂನೂ ಮುಖ್ಯಭಾವವು. ॥೬೧॥

ಶ್ಲೋಕ॥ ಶುಷ್ಕನಿರ್ಬನ್ಧತೋ ಬಾಹ್ಯೇ
ಮುಹ್ಯತ್ಯಸ್ಮಿನ ಸ್ಫುದನ್ಯಥಾ ।

ಪ್ರತ್ಯಕ್ಷಿತೈವ ನನ್ವಾತ್ಮನ್
ಪ್ರತ್ಯಕ್ಷನಿರಯೋಚಿತಾ ‖ ೬೧ ‖

ಟೀ ‖ ಹೇ ಆತ್ಮನ್-ಎಲೈ ಆತ್ಮನೇ!, ಶುಷ್ಕನಿರ್ಬಂಧತಃ-ಶುಷ್ಕ-ನಿಷ್ಫಲವಾದ, ನಿರ್ಬಂಧತಃ-ನಿರ್ಬಂಧದದೆಸೆಯಿಂದ, ಬಾಹ್ಯೇ-ಹೊರಗಿನ ಪಂಚೇಂದ್ರಿಯ ವಿಷಯಗಳಲ್ಲಿ, ಮುಹ್ಯತಃ-ಮೋಹಪಡುತಲಿರುವ, ತವ-ನಿನಗೆ, ಪ್ರತ್ಯಕ್ಷನಿರಯೋಚಿತಾ-ಪ್ರತ್ಯಕ್ಷ-ಪ್ರತ್ಯಕ್ಷವಾದ, ನಿರಯ-ನರಕಕ್ಕೆ, ಉಚಿತಾ-ಯೋಗ್ಯವಾದ, ಹೃದ್ವ್ಯಥಾ-ಹೃತ್-ಮನಸ್ಸಿನ, ವ್ಯಥಾ-ವ್ಯಥೆಯು, ಪ್ರತ್ಯಕ್ಷಿತೈವನನು-ಪ್ರತ್ಯಕ್ಷೀಕರಿಸಲ್ಪಟ್ಟತಲ್ಲವೆ ?.

ತಾತ್ಪರ್ಯ ‖ ಎಲೈ ಆತ್ಮನೇ! ನಿಷ್ಫಲವಾದ ನಿರ್ಬಂಧದ ದೆಸೆಯಿಂದ ಹೊರಗಿನ ಪಂಚೇಂದ್ರಿಯಾಕರ್ಷಕವಾದ ಭೋಗೋಪಭೋಗವಿಷಯದಲ್ಲಿ ಮೋಹಪಡುತಲಿರುವ ನಿನ್ನ ಮನೋವ್ಯಥೆಯು ಪ್ರತ್ಯಕ್ಷವಾದ ನರಕಕ್ಕೆ ಯೋಗ್ಯವಾದುದಾಗಿ ನಿನ್ನಿಂದ ಅನುಭವಿಸಲ್ಪಡುತ್ತಲೇ ಇದೆಯಷ್ಟೆ ? ಹೀಗಿದ್ದಾಗ್ಯೂ ವಿಷಯಾಶೆಯಂ ಪರಿತ್ಯಜಿಸದೇಇರುವ ನಿನ್ನ ಮೌಢ್ಯವು ಅತ್ಯಾಶ್ಚರ್ಯಕರವೆಂದಭಿಪ್ರಾಯವು ‖೬೧‖

—*( ಸಂವರಾನುಪ್ರೇಕ್ಷಾ ಸಮಾಪ್ತಾ. )*—

---

ಶ್ಲೋಕ‖ ರತ್ನತ್ರಯಪ್ರಕರ್ಷೇಣ
ಬದ್ಧಕರ್ಮಕ್ಷಯೋ ಹಿ ತೇ ।
ಆಧ್ಮಾತಃ ಕಥಮಪ್ಯಗ್ನಿ-
ರ್ದಾಹ್ಯಂ ಕಿಂ ಸಾವಶೇಷಯೇತ್ ‖ ೬೨ ‖

ಟೀ ‖ (ಹೇ ಆತ್ಮನ್-ಎಲೈಆತ್ಮನೇ!), ರತ್ನತ್ರಯಪ್ರಕರ್ಷೇಣ-ರತ್ನತ್ರಯ-ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳೆಂಬ ರತ್ನತ್ರಯದ, ಪ್ರಕರ್ಷೇಣ-ಅಭಿವೃದ್ಧಿ ಹೊಂದಿಸೋಣಪರಿಂದ (ಮಾಹಾತ್ಮ್ಯದಿಂದ), ತೇ-ನಿನಗೆ, ಬದ್ಧಕರ್ಮಕ್ಷಯೋಹಿ-ಬದ್ಧ-ಕಟ್ಟಲ್ಪಟ್ಟ, ಕರ್ಮ-ಕರ್ಮಗಳ, ಕ್ಷಯೋಹಿ-ನಾಶವುಂಟಾಗುತಲಿದೆಯಲ್ಲವೆ ?., ಆಧ್ಮಾತಃ ಊದಲ್ಪಟ್ಟ, ಅಗ್ನಿಃ-ಬೆಂಕಿಯು, ಕಥಮಪಿ-ಹೇಗಾದರೂ, ದಾಹ್ಯಂ-ದಹಿಸುವುದಕ್ಕೆ ಯೋಗ್ಯವಾದವಸ್ತುವನ್ನು, ಸಾವಶೇಷಯೇತ್ ಕಿಂ-ಉಳಿಸೀತೇನು?

ತಾತ್ಪರ್ಯ॥ ಎಲೈ ಆತ್ಮನೇ! ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂಬ ರತ್ನತ್ರಯವನ್ನು ಅಭಿವೃದ್ಧಿ ಹೊಂದಿಸೋಣದರಿಂದ ನಿನ್ನಭವಾಂಕುರದಿಂದಲೂ ಕಟ್ಟಲ್ಪಟ್ಟಿರುವ ಕರ್ಮಗಳು ಕ್ಷಯಿಸುತ್ತದಲ್ಲವೆ? ಗಾಳಿಯಿಂದ ಬೀಸಲ್ಪಟ್ಟ ಬೆಂಕಿಯು ದಹಿಸಲ್ಪಡತಕ್ಕುದಾದ ಸೌದೆಯೇ ಮೊದಲಾದ ವಸ್ತುಗಳನ್ನು ನಿಶ್ಶೇಷವಾಗಿ ದಹಿಸುವುದೇ ಹೊರತು ಉಳಿಸೀತೇ? ಹಾಗೆಯೇ ರತ್ನತ್ರಯವನ್ನು ಅಭಿವೃದ್ಧಿಪಡಿಸೋಣದರಿಂದ ಆತ್ಮನ ಸಕಲ ಕರ್ಮಗಳು ಕ್ಷಯಿಸುವುದೆಂದಭಿಪ್ರಾಯವು. (ಬೆಂಕಿಯು ಸೌದೆಯನ್ನು ನಿಶ್ಶೇಷವಾಗಿ ದಹಿಸುವಂತೆ ರತ್ನತ್ರಯವು ಕರ್ಮಗಳನು ಕ್ಷಯವನ್ನೈದಿಸುತ್ತೆಂದು ಮುಖ್ಯ ಭಾವವು.) ॥ ೬೩ ॥

ಶ್ಲೋಕ॥ ಕ್ಷಯಾದನಾಸ್ರವಾಚ್ಚಾತ್ಮನ್
ಕರ್ಮಣಾಮಸಿ ಕೇವಲೀ ।
ನಿರ್ಗಮೇ ಚಾಪ್ರವೇಶೇ ಚ
ಧಾರಾಬನ್ಧೇ ಕುತೋ ಜಲಮ್ ॥ ೬೪ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ! ಕರ್ಮಣಾಂ-ಕರ್ಮಗಳ, ಕ್ಷಯಾತ್- ನಾಶಪದೆಸೆಯಿಂದ, ಅನಾಸ್ರವಾಚ್ಚ-ಪುಣ್ಯಾಪಾಪಾಸ್ರವಗಳಂ ತಡೆಯೋಣವದೆಸೆಯಿಂದಲೂ, ಕೇವಲೀ(ಸನ್)-ಕರ್ಮರಹಿತ ಕೇವಲಸ್ವರೂಪನಾಗಿ, ಅಸಿ-ಆಗುತ್ತೀಯೆ., ನಿರ್ಗಮೇಚ- ಇದ್ದ ನೀರೆಲ್ಲಾ ಹೊರಟು ಹೋಗುತಿರಲಾಗಿಯೂ, ಅಪ್ರವೇಶೇಚ-ಹೊರಗಿನ ನೀರು ಬರದೇಇರುತಿರಲಾಗಿಯೂ, ಧಾರಾಬಂಧೇ- ಧಾರಾಯಂತ್ರದಲ್ಲಿ, (ಚೇರುಕೊಳಸೆಯಲ್ಲಿ), ಜಲಂ-ನೀರು, ಕುತಃ-ಎಲ್ಲಿಂದ ಬಂದೀತು ?.

ತಾತ್ಪರ್ಯ॥ ಎಲೈ ಆತ್ಮನೇ! ಕರ್ಮಗಳೆಲ್ಲವೂ ಕ್ಷಯಿಸಿ, ಪುಣ್ಯಾಸ್ರವ ಪಾಪಾಸ್ರವಗಳಂ ನಿರೋಧಿಸೋಣದರಿಂದಲೂ ಕೂಡ ನೀನು ಶುದ್ಧಸ್ವರೂಪನಾಗಿ ಆಗುತ್ತೀಯೆ?. ಅದು ಹೇಗೆಂದರೆ.--ಒಳಗಿದ್ದ ನೀರು ನಿಶ್ಶೇಷವಾಗಿ ಆಚೆಗೆ ಹೋಗಿ, ಹೊರಗಿನ ನೀರು ಒಳಗೆ ಪ್ರವೇಶಮಾಡದೆ ಇದ್ದಲ್ಲಿ ಚೇರುಕೊಳವೆಯಲ್ಲಿ ನೀರು ಎಲ್ಲಿಂದ ಬಂದೀತು ? ಹಾಗೆ ಆತ್ಮನಿಗೆ ಸಕಲಕರ್ಮಗಳ ಕ್ಷಯವೆಂಬ ನಿರ್ಜರಾತತ್ವ ಉಂಟಾಗಿ, ಸಂವರತತ್ವವೂ ನುಂಟಾಗಿ ಸಂವರತತ್ವದಿಂ ಪುಣ್ಯಾಸ್ರವ ಪಾಪಾಸ್ರವಗಳ ಅಭಾವ

ವುಂಟಾಗುತಿರಲು ಆತ್ಮನು ನಿರ್ಮಲಸ್ವರೂಪನಾಗಿ ಮುಕ್ತಿಯುಂ ಪಡೆಯು ತ್ತಾನೆಂದಭಿಪ್ರಾಯವು ॥ ೬೪ ॥

ಶ್ಲೋಕ॥ ರತ್ನತ್ರಯಸ್ಯ ಪೂರ್ತಿಶ್ಚ
ತ್ವಯಾತ್ಮನ್ ಸುಲಭೈವ ಸಾ ।
ಮೋಹಕ್ಷೋಭ ವಿಹೀನಸ್ಯ
ಪರಿಣಾಮೋ ಹಿ ನಿರ್ಮಲಃ ॥ ೬೫ ॥

ಟೀ॥ಸಾ-ಸಕಲಕರ್ಮಕ್ಷಯಹೇತುವಾದ, ರತ್ನತ್ರಯಸ್ಯ-ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂಬ ರತ್ನತ್ರಯದ, ಪೂರ್ತಿಶ್ಚ- ಪೂರ್ತಿಯೂಕೂಡ, ಹೇಆತ್ಮನ್- ಎಲೈ ಆತ್ಮನೇ!, ತ್ವಯಾ-ನಿನ್ನಿಂದ, ಸುಲಭೈವ- ಅನಾಯಾಸದಿಂದಲೇಪಡೆಯಲ್ಪಡು ಸುಗ ಯೋಗ್ಯವು., ಮೋಹಕ್ಷೋಭವಿಹೀನಸ್ಯ– ಮೋಹ- ಮೋಹನೀಯಕರ್ಮದ, ಕ್ಷೋಭ - ಅಜ್ಞಾನವಿಲಾಸದಿಂದ, ವಿಹೀನಸ್ಯ- ರಹಿತನಾದ ಆತ್ಮನ, ಪರಿಣಾಮಃ- ಮನೋಭಾವವು, ನಿರ್ಮಲೋಹಿ-ನಿರ್ದೋಷವಾದುದಲ್ಲವೆ ?.

ತಾತ್ಪರ್ಯ ॥ ಎಲೈ ಆತ್ಮನೆ! ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂಬ ರತ್ನತ್ರಯದ ಪೂರ್ತಿಯೂಕೂಡ ನಿನಗೆ ಸುಲಭವಾಗಿಯೇ ಇದೆಯಲ್ಲವೆ ?, ಮೋಹನೀಯ ಕರ್ಮಬಲದಿಂದುಂಟಾದ ಅಜ್ಞಾನವ್ಯಾಪಾರಗಳೆಲ್ಲಾ ಅಡಗಿದ ನಂತರ ಆತ್ಮನಿಗೆ ಮನಸ್ಸಿನ ಪರಿಣಾಮವು ನಿರ್ಮಲವಾಗುವುದಲ್ಲವೆ ? ( ಅಂತಃಕರಣನೈರ್ಮಲ್ಯವೇ ಮೋಕ್ಷಕಾರಣವೆಂತಲೂ, ಆ ನಿರ್ಮಲ ಪರಿಣಾಮವು, ರತ್ನ ತ್ರಯವೂ ಸಂಪೂರ್ಣವಾಗಿದ್ದಲ್ಲಿ ಉಂಟಾಗುವುದೆಂತಲೂ ಹೇಳಲ್ಪಟ್ಟಿತು ॥ ೬೫ ॥

ಶ್ಲೋಕ॥ ಪರಿಣಾಮವಿಶುದ್ಧ್ಯರ್ಥಂ
ತತೋ ಬಾಹ್ಯಂ ವಿಧೀಯತೇ ।
ನ ಹಿ ತಂಡುಲಪಾಕಸ್ಸ್ಯಾ-
ತ್ಪಾವಕಾದಿ ಪರಿಕ್ಷಯೇ ॥ ೬೬ ॥

ಟೀ ॥ ಪರಿಣಾಮವಿಶುದ್ಧ್ಯರ್ಥಂ–ಪರಿಣಾಮ-ಮನಸ್ಸಿನಪರಿಣಾಮದ, ವಿಶುದ್ಧ್ಯರ್ಥಂ-ನೈರ್ಮಲ್ಯಕ್ಕೋಸುಗ, ತತಃ-ಆ ಕಾರಣದೆಸೆಯಿಂದ, ಬಾಹ್ಯಂ-ಹೊರಗಿನ ತಪಸ್ಸು, ವಿಧೀಯತೇ-ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ, ಪಾವಕಾದಿಪರಿಕ್ಷಯೇ

(ಸತಿ)—ಪಾವಕ-ಬೆಂಕಿಯೇ, ಆದಿ-ಮೊದಲಾಗಿವುಳ್ಳ ಬಾಹ್ಯಸಾಮಗ್ರಿಗಳ, ಪರಿಕ್ಷೆಯೇ(ಸತಿ)-ಸಾಕಲ್ಯದಿಂದ ನಾಶವುಂಟಾಗುತ್ತಿರಲಾಗಿ, ತಂಡುಲಪಾಕಃ—ತಂಡುಲ—ಅಕ್ಕಿಯಲ್ಲಿ, ಪಾಕಃ-(ಅವಯವಶೈಥಿಲ್ಯಾನುಕೂಲವ್ಯಾಪಾರವು) ಬೇಯೋಣವು, ನಸ್ಯಾದ್ಧಿ-ಉಂಟಾಗುವುದಿಲ್ಲವಷ್ಟೆ ?.

ತಾತ್ಪರ್ಯ ॥ ಪೂರ್ವೋಕ್ತಪ್ರಕಾರದಿಂದ ಮೋಕ್ಷ ಹೇತುವಾದ ಅಂತಃಕರಣಪರಿಣಾಮದ ನೈರ್ಮಲ್ಯಕ್ಕೋಸುಗವೇ ಹೊರಗಿನ ಅನಶನಾದಿ ಕಾಯಕ್ಲೇಶರೂಪವಾದ ತಪಸ್ಸು ಶಾಸ್ತ್ರದಲ್ಲಿ ಹೇಳಲ್ಪಡುತ್ತದೆ. ಅಕ್ಕಿಯಲ್ಲಿ ಪಾಕ ವುಂಟಾಗಬೇಕಾದರೆ ಬೆಂಕಿಯೇ ಮೊದಲಾದ ಹೊರಗಿನ ಸಾಮಗ್ರಿಗಳು ಅತ್ಯಾವಶ್ಯಕವಲ್ಲವೆ ? ಅಕ್ಕಿಯಲ್ಲಿಯೇ ಪಾಕವು ಉಂಟಾಗತಕ್ಕದಾದರೂ ಬೆಂಕಿಯೇ ಮೊದಲಾದ ಬಾಹ್ಯೋಪಕರಣಗಳಿಲ್ಲದೆ ಹೇಗೆ ಉಂಟಾಗಲಾರದೋ ಹಾಗೆ ಹೊರಗಿನ ತಪಸ್ಸಿಲ್ಲದೇ ಸ್ವತಏವ ಅಂತಃಕರಣದ ನಿರ್ಮಲಪರಿಣಾಮವುಂಟಾಗುವುದಿಲ್ಲವೆಂದಭಿಪ್ರಾಯವು॥೬೬

ಶ್ಲೋಕ॥ ಪರಿಣಾಮ ವಿಶುದ್ಧಿಶ್ಚ
ಬಾಹ್ಯೇ ಸ್ಯಾನ್ನಿಸ್ಪೃಹಸ್ಯ ತೇ ।
ನಿಸ್ಪೃಹತ್ವಂ ತು ಸೌಖ್ಯಂ ತ-
ದ್ಬಾಹ್ಯೇ ಮುಹ್ಯಸಿ ಕಿಂ ಮುಧಾ ॥ ೬೭ ॥

ಟೀ ॥ ಪರಿಣಾಮವಿಶುದ್ಧಿಶ್ಚ— ಪರಿಣಾಮ- ಅಂತಃಕರಣ ಪರಿಣಾಮವೆಂಬ ಮನೋವೃತ್ತಿಯ, ವಿಶುದ್ಧಿಶ್ಚ-ನೈರ್ಮಲ್ಯವೂಕೂಡ, ಬಾಹ್ಯೇ-ಹೊರಗಿನಪಂಚೇಂದ್ರಿಯವಿಷಯದಲ್ಲಿ, ನಿಸ್ಪೃಹಸ್ಯ-ವಿರಕ್ತನಾದ, ತೇ-ನಿನಗೆ, ಸ್ಯಾತ್-ಆಗುವುದು., ನಿಸ್ಪೃಹತ್ವಂತು—ವಿಷಯಾಶಾಪರಿತ್ಯಾಗವೆಂಬ ವೈರಾಗ್ಯವೇ, ಸೌಖ್ಯಂ- ಸುಖವು., ತತ್-ಆ ಕಾರಣದ ದೆಸೆಯಿಂದ, ಬಾಹ್ಯೇ-ಹೊರಗಿನವಿಷಯದಲ್ಲಿ ಮುಧಾ-ವ್ಯರ್ಥವಾಗಿ, ಕಿಂ-ಏತಕ್ಕೋಸ್ಕರ, ಮುಹ್ಯಸಿ-ಮೋಹಪಡುತ್ತೀಯೆ ?.

ತಾತ್ಪರ್ಯ ॥ ಎಲೈ ಆತ್ಮನೇ! ಅಂತಃಕರಣಪರಿಣಾಮದ ನೈರ್ಮಲ್ಯವೋ ಎಂದರೆ.—ಹೊರಗಿನ ಮೋಹಹೇತುವಾದ ವಿಷಯಗಳಲ್ಲಿ ವೈರಾಗ್ಯವುಳ್ಳ ನಿನಗೆ ಉಂಟಾಗುವುದು. ವೈರಾಗ್ಯವೇ ಸುಖವು. ಅಂದರೆ.—(ವೈರಾಗ್ಯವೇ ಸುಖಕ್ಕೆ ಮೂಲಕಾರಣವು.) ರಾಗವೇ ದುಃಖ ಕಾರಣವು. ಆ ಕಾರಣದ ದೆಸೆಯಿಂದ ವಿಷಯವ್ಯಾಮೋಹದಿಂದೇಕೆ ವೃಥಾ ದುಃಖ

ಪಡುತ್ತೀಯೆ ?. ಪರಮಸುಖಹೇತುವಾಗಿಯೂ, ಪರಿಣಾಮಶುದ್ಧಿಗೆ ಕಾರಣವಾಗಿಯೂ ಇರುವ ವೈರಾಗ್ಯವಂ ವಹಿಸೆಂದಭಿಪ್ರಾಯವು ॥೬೭॥

ಶ್ಲೋಕ॥ ಗುಪ್ತೇನ್ದ್ರಿಯಃ ಕ್ಷಣಂ ವಾತ್ಮ-
ನ್ನಾತ್ಮನ್ಯಾತ್ಮಾನಮಾತ್ಮನಾ ।
ಭಾವಯನ್ ಪಶ್ಯ ತತ್ಸೌಖ್ಯ-
ಮಾಸ್ತಾಂ ನಿಶ್ರೇಯಸಾದಿಕಮ್ ॥ ೬೮ ॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ!, ತ್ವಂ-ನೀನು, ಗುಪ್ತೇಂದ್ರಿಯ(ಸ್ಸನ್)-ಗುಪ್ತ-ವಿಷಯುಗಳೆಂಬ ದುರ್ಮಾರ್ಗದಲ್ಲಿ ಪ್ರವೇಶಿಸದಂತೆ ರಕ್ಷಿಸಲ್ಪಟ್ಟ, ಇಂದ್ರಿಯಃ-ಇಂದ್ರಿಯವುಳ್ಳವನಾಗಿ, ಕ್ಷಣಂವಾ-ಕ್ಷಣಕಾಲಮಾತ್ರವಾದರೂ, ಆತ್ಮನಿ- ಮನಸ್ಸಿನಲ್ಲಿ, ಆತ್ಮಾನಂ-ಆತ್ಮತತ್ವವನ್ನು, ಆತ್ಮನಾ-ಬುದ್ಧಿಯಿಂದ, ಭಾವಯನ್(ಸನ್)—ಧ್ಯಾನಿಸುವವನಾಗಿ, ತತ್ಸೌಖ್ಯಂ-ಆ ಆತ್ಮಧ್ಯಾನದಿಂದುಂಟಾಗುವಸುಖವನ್ನು, ಪಶ್ಯ-ನೋಡು., ನಿಶ್ರೇಯಸಾದಿಕಂ-ಮೋಕ್ಷವೇ ಮೊದಲಾಗಿವುಳ್ಳದ್ದು ಆಸ್ತಾಂ-ಇರಲಿ.

ತಾತ್ಪರ್ಯ॥ ಎಲೈ ಆತ್ಮನೇ ! ಇಂದ್ರಿಯಗಳನ್ನು ವಿಷಯುಗಳೆಂಬದುರ್ಮಾರ್ಗದಲ್ಲಿ ಸಂಚರಿಸದಂತೆ ತಡೆದು, ನಿರ್ಮಲಾಂತಃಕರಣನಾಗಿ ಒಂದುಕ್ಷಣಕಾಲದಲ್ಲಿಯಾದರೂ ಪರಮಾತ್ಮನನ್ನು (ಸಿದ್ಧಾಷ್ಟಗುಣವಿಶಿಷ್ಟನಾದ ಆತ್ಮನ ಪರಿಶುದ್ಧ ಸ್ವರೂಪವನ್ನು) ನಿನ್ನ ಮನಸ್ಸಿನಲ್ಲಿಯೇ ನಿನ್ನ ಬುದ್ಧಿಯಿಂದ ಭಾವಿಸಿ, ಆ ಆತ್ಮಧ್ಯಾನಸುಖವನ್ನು ಏಕಾಗ್ರಚಿತ್ತನಾಗಿ ಅನುಭವಿಸಿನೋಡು., ಆಗ ಆಪ್ತವಾಕ್ಯವಾದ ಶಾಸ್ತ್ರಪ್ರಮಾಣ್ಯವು ನಿನಗೇನೆ ಅನುಭವಕ್ಕೆ ಬರುತ್ತದೆ. ಮೋಕ್ಷವೇ ಮೊದಲಾದ ಪುರುಷಾರ್ಥವು ಹಾಗಿರಲಿ, ಅಂದರೆ.–ಧ್ಯಾನಸುಖವು ಅನುಭವಿಸಲ್ಪಡಲು ಪರೋಕ್ಷವಾದ ಮೋಕ್ಷಾದಿಗಳೂಕೂಡ ಇದರಂತೆಯೇ ಸತ್ಯವೆಂದು ನೀನೇ ನಂಬುತ್ತೀಯೆ ಎಂದಭಿಪ್ರಾಯವು. ॥೬೮॥

ಶ್ಲೋಕ॥ ಅನನ್ತಸೌಖ್ಯಮಾತ್ಮೋತ್ಥ-
ಮಸ್ತೀತ್ಯತ್ರ ಹಿ ಸಾ ಪ್ರಮಾ।
ಶಾನ್ತಸ್ವಾನ್ತಸ್ಯ ಯಾಪ್ರೀತಿ-
ಸ್ಸ್ವಸಂವೇದನಗೋಚರಾ ॥ ೬೯ ॥

ಟೀ ॥ ಅನಂತಸೌಖ್ಯಂ– ಅನಂತ- ಅಪರಿಚ್ಛಿನ್ನವಾದ, ಸೌಖ್ಯಂ-ಸುಖವು, ಆತ್ಮೋತ್ಥಂ(ಸತ್)-ಆತ್ಮನಲ್ಲಿಹುಟ್ಟಾಗುವುದಾಗಿ, ಅಸ್ತಿ-ಇದೆ; ಇತಿ- ಹೀಗೆಂಬ, ಅತ್ರ-ಈ ವಿಷಯದಲ್ಲಿ, ಶಾನ್ತಸ್ವಾಂತಸ್ಯ– ಶಾಂತ- ಕಷಾಯ ರಹಿತವಾದ, ಸ್ವಾಂತಸ್ಯ-(ಮನಸ್ಸುಳ್ಳ) ನಿರ್ಮಲಪರಿಣಾಮವುಳ್ಳವನಿಗೆ, ಸ್ವಸಂವೇದನಗೋಚರಾ-ಸ್ವ-ತನ್ನ, ಸಂವೇದನ-ಅನುಭವಕ್ಕೆ, ಗೋಚರಾ-ವಿಷಯವಾದ, ಯಾಪ್ರೀತಿಃ-ಯಾವಪ್ರೀತಿಯುಂಟೋ, ಸಾ-ಆ ಆತ್ಮಪ್ರೀತಿಯೇ, ಪ್ರಮಾಣ-ಪ್ರಮಾಣವಲ್ಲವೆ?.

ತಾ ॥ ರಾಗದ್ವೇಷಾದಿ ಕಷಾಯ ರಹಿತವಾದ ಮನಸ್ಸುಳ್ಳವನಿಗೆ ತನ್ನನುಭವಕ್ಕೆ ಗೋಚರವಾದ ಯಾವ ಪ್ರೀತಿಯುಂಟೋ ಆ ಪ್ರೀತಿಯು ಆತ್ಮನಿಗೆ ಸಕಲ ಕರ್ಮಕ್ಷಯಾನಂತರದಲ್ಲಿ ಅನಂತ ಸುಖವುಂಟೆಂಬ ವಿಷಯದೊಳು ಮುಖ್ಯ ಪ್ರಮಾಣವು. (ಕ್ಷಣಮಾತ್ರವಾದ ಆತ್ಮಾನುಭವವೇ ನಿತ್ಯಾನಂದ ಪ್ರಾಪ್ತಿಯುಂಟೆಂದು ನಂಬುವುದಕ್ಕೆ ಮುಖ್ಯಪ್ರಮಾಣ ವೆಂದಭಿಪ್ರಾಯವು.) ॥೬೯॥

--*(ನಿರ್ಜರಾನುಪ್ರೇಕ್ಷಾ.)*--

ಶ್ಲೋ॥ ಪ್ರಸಾರಿತಾಂಘ್ರಿಣಾಲೋಕಃ  
ಕಟಿನಿಕ್ಷಿಪ್ತಪಾಣಿನಾ ।  
ತುಲ್ಯಃ ಪುಂಸೋರ್ಧ್ವಮಧ್ಯಾಧೋ  
ವಿಭಾಗಸ್ತ್ರಿಮರುದ್ವೃತಃ ॥೭೦॥

ಟೀ ॥ ಲೋಕಃ-ಲೋಕವು, ಪ್ರಸಾರಿತಾಂಘ್ರಿಣಾ–ಪ್ರಸಾರಿತ-ವಿಸ್ತಾರಪಡಿಸಲ್ಪಟ್ಟ, ಅಂಘ್ರಿಣಾ- ಕಾಲುಗಳುಳ್ಳವನಾಗಿಯೂ, ಕಟಿನಿಕ್ಷಿಪ್ತಪಾಣಿನಾ–ಕಟಿ-ಸೊಂಟದಲ್ಲಿ, ನಿಕ್ಷಿಪ್ತ-ಇರಿಸಲ್ಪಟ್ಟ, ಪಾಣಿನಾ- ಕೈಗಳುಳ್ಳ, ಪುಂಸಾಂ- ಮನುಷ್ಯನೊಡನೆ, ತುಲ್ಯಃ-ಸಮಾನಾಕಾರವುಳ್ಳದ್ದು, ಊರ್ಧ್ವಮಧ್ಯಾಧೋವಿಭಾಗಃ-ಮೇಲುಭಾಗ ಮಧ್ಯಭಾಗ ಕೆಳಭಾಗಗಳೆಂಬ ಮೂರುವಿಭಾಗ ವುಳ್ಳದ್ದಾಗಿಯೂ, ತ್ರಿಮರುದ್ವೃತ(ಸನ್)-ತ್ರಿ- ಮೂರುಪ್ರಕಾರವಾದ, ಮರುತ್-ಗಾಳಿಗಳಿಂದ, ವೃತ(ಸನ್)-ಸುತ್ತಲ್ಪಟ್ಟದ್ದಾಗಿಯೂ, ಅಸ್ತಿ-ಇದೆ

ತಾ ॥ ಲೋಕ ಸ್ವರೂಪವನ್ನು ಭಾವಿಸೋಣವೆಂಬ ಲೋಕಾನುಪ್ರೇಕ್ಷೆಯು ಹೇಳಲ್ಪಡುತ್ತದೆ; ಹೇಗೆಂದರೆ; ಈ ಲೋಕವು ಯಾವ ಆಕಾ

ರವುಳ್ಳದ್ದೆಂದರೆ.- ಒಬ್ಬ ಮನುಷ್ಯನು ತನ್ನ ಕಾಲುಗಳನ್ನು ವಿಸ್ತಾರವ
ಡಿಸಿಕೊಂಡು ಸೊಂಟದ ಮೇಲೆ ಕೈಗಳನ್ನಿಟ್ಟುಕೊಂಡು ನಿಂತಿದ್ದರೆ
ಆ ಮನುಷ್ಯನ ಆಕಾರವು ಹೇಗಿದೆಯೋ ಹಾಗೆ ಈ ಲೋಕವು ಊರ್ಧ್ವ
ಭಾಗ ಮಧ್ಯಭಾಗ ಅಧೋಭಾಗಗಳೆಂಬ ಈ ಮೂರು ವಿಭಾಗ ವುಳ್ಳ
ದ್ದಾಗಿಯೂ, ಮೂರು ಗಾಳಿಗಳಿಂದ ಸುತ್ತಲ್ಪಟ್ಟದ್ದಾಗಿಯೂ ಇದೆ.
ಅಂದರೆ (ವಿಸ್ತಾರವಾಗಿಡಲ್ಪಟ್ಟ ಕಾಲುಗಳ ಸನ್ನಿವೇಶಕ್ಕೆ ಸಮಾನವಾಗಿ
ಈ ಲೋಕದಕೆಳಭಾಗವೂ, ಇರಿಸಲ್ಪಟ್ಟ ಕೈಗಳೊಡಗೂಡಿದ ಸೊಂಟ
ಕ್ಕೆ ಸಮಾನಾಕಾರವಾಗಿ ಈ ಲೋಕದ ಮಧ್ಯಭಾಗವೂ, ಶಿರೋಭಾ
ಗಕ್ಕೆ ಸಮಾನಾಕಾರವಾಗಿ ಊರ್ಧ್ವ ಲೋಕವೂ ಇರುತ್ತೆಂದು ಅಭಿ
ಪ್ರಾಯವು.) ॥ ೭೦॥

ಶ್ಲೋಕ॥ ಜನ್ಮಮೃತ್ಯೋಃ ಪದೇ ಚಾತ್ಮ-
ನ್ನಸಂಖ್ಯಾತಪ್ರದೇಶಕೇ ।
ಲೋಕೇನಾಯಂ ಪ್ರದೇಶೋಽಸ್ತಿ
ಯಸ್ಮಿನ್ನಾಭೂರನನ್ತಶಃ॥೭೧

ಟೀ॥ ಜನ್ಮಮೃತ್ಯೋಃ- ಜನ್ಮ-ಉತ್ಪತ್ತಿಯೂ, ಮೃತ್ಯೋಃ-ಮರಣವೂ
ಇವುಗಳಿಗೆ, ಪದೇಪ-ಸ್ಥಾನವಾಗಿಯೂ, ಅಸಂಖ್ಯಾತಪ್ರದೇಶಕೇ-ಅಸಂಖ್ಯಾತ-ಎ
ಣಿಕೆಗೆ ವಿಷಯವಲ್ಲದ, ಪ್ರದೇಶಕೇ-ಸ್ಥಲಗಳುಳ್ಳ, ಲೋಕೇ-ಲೋಕದಲ್ಲಿ, ಯಸ್ಮಿನ್-
ಯಾವಪ್ರದೇಶದೊಳು, ತ್ವಂ-ನೀನು, ಅನಂತಶಃ-ಅನೇಕಪ್ರಕಾರವಾಗಿ, ನಾಭೂಃ-
ಜನ್ಮವನ್ನು ಹೊಂದಲಿಲ್ಲವೋ, ಸೋಯಂ ಪ್ರದೇಶಃ- ಆ ಈಪ್ರದೇಶವು, ನಾಸ್ತಿ-
ಇಲ್ಲವು.

ತಾತ್ಪರ್ಯ ॥ ಜೀವಂಧರ ಸ್ವಾಮಿಯು ಜೀವಾತ್ಮನಿಗೆ ಈ ಪ್ರ
ದೋಕ್ತವಾದ, ಲೋಕಸಂಬಂಧನಿಮಿತ್ತಕವಾದ ದುಃಖವನ್ನೆಯಂ (ಅಂದ
ರೆ ಲೋಕಾನುಪ್ರೇಕ್ಷೆಯಂ) ಭಾವಿಸುತ್ತಾನೆ ; ಏನೆಂದರೆ.--ಪ್ರಾಣಿಗಳ
ಜನನಮರಣಗಳಿಗೆ ಸ್ಥಾನವಾಗಿ ಸಂಖ್ಯೆಯನ್ನತಿಕ್ರಮಿಸಿದ (ಅಂದರೆ-
ಎಣಿಕೆಗೆ ಅಶಕ್ಯವಾದ ಪ್ರದೇಶಗಳುಳ್ಳ) ಈ ಲೋಕದಲ್ಲಿ ಎಲೈ ಆತ್ಮನೆ!
ನೀನು ಯಾವ ಪ್ರದೇಶದಲ್ಲಿ ಹುಟ್ಟಲಿಲ್ಲವೋ, ಅಂಥಾ ಸ್ಥಾನವು ಒಂದು
ಉಳಿದಿಲ್ಲವಷ್ಟೆ ? (ಅಂದರೆ.-ಎಲೈ ಆತ್ಮನೇ !, ಈ ಲೋಕವು ಎಣಿ

ಶಕ್ಯವಾದ ಜನನಮರಣಾಸ್ಪದಸ್ಥಾನಗಳಿದ್ದುದರಿಂದ ಇಷ್ಟುಪ್ರ
ದೇಶಗಳಲ್ಲಿಯೂ ನಾನಾಭವಗಳಂ ಪಡೆದ ನಿನ್ನ ಭವಗಳೂ ಎಣಿಸಲಶಕ್ಯ
ವೆಂದಭಿಪ್ರಾಯವು.) ಇದುವರೆಗೂ ನಿನ್ನಿಂದ ಪಡೆಯಲ್ಪಡದ ಮತ್ತೊಂ
ದು ಜನ್ಮವುಳಿದಿದ್ದಲ್ಲಿ ಅದರ ಸುಖವಂ ಬಯಸಬಹುದು. ಹಾಗಿಲ್ಲದೆ,
ಇದುವರೆಗೆ ಅನುಭವಿಸಲ್ಪಟ್ಟ ನಾನಾದುಃಖಾಸ್ಪದಗಳಾದ ಹೀನ ಭವಗಳ
ನ್ನೇ ಪುನಃಪುನಃ ಪಡೆಯಲು ಪ್ರವರ್ತಿಸುವ ನೀನು ಉಚ್ಛಿಷ್ಟಭೋ
ಜಿಯಂತೆ ಅತ್ಯಂತ ನಿಂದ್ಯನು, (ಪರಮ ಮೂಢನೆಂತಲೂ ಮುಖ್ಯಾಭಿ
ಪ್ರಾಯವು.) ಮತ್ತು; ಈ ಲೋಕವು ಜನನ ಮರಣಾದಿಗಳಾದ ನಿತ್ಯ
ದುಃಖಾನುಭವ ಸ್ಥಾನವೇ ಹೊರತು ನಿತ್ಯಸುಖಾನುಭವಸ್ಥಾನವಲ್ಲವಾ
ದುದರಿಂದ, ಎಲೈ ಆತ್ಮನೇ! ನೀನು ವಿವೇಕಿಯಾದರೆ, ನಿತ್ಯಸುಖಸ್ಥಾನ
ವಾದ ಲೋಕಾಗ್ರವಂ ಪಡೆಯಲು ತಕ್ಕ ಮೋಕ್ಷಮಾರ್ಗದಲ್ಲಿ ಪ್ರವೇಶಿ
ಸೆಂದು ಭಾವವು. ॥೨೦॥

ಶ್ಲೋಕ॥ ಸತ್ಯಜ್ಞಾನೇ ಪುನಶ್ಚಾತ್ಮನ್
ಪೂರ್ವವತ್ಸಂಸರಿಷ್ಯಸಿ।
ಕಾರಣೇಜೃಂಭಮಾಣೇಽಪಿ
ನ ಹಿ ಕಾರ್ಯಪರಿಕ್ಷಯಃ ॥೨೧॥

ಟೀ॥ ಹೇ ಆತ್ಮನ್-ಎಲೈ ಆತ್ಮನೆ!, ಅಜ್ಞಾನೇ-ಅಜ್ಞಾನವು, ಸತಿ- ಇರುತ್ತಿ
ರಲಾಗಿ, ಪುನಶ್ಚ-ಮರಳಿಯೂ ಕೂಡ, ಪೂರ್ವವತ್-ಪೂರ್ವದಂತೆಯೇ, ಸಂಸರಿಷ್ಯ
ಸಿ-ನರಸುರತಿರ್ಯಙ್ನಾರಕಿರೂಪವಾದ ಚತುರ್ಗತಿಭ್ರಮಣರೂಪವಾಗಿರುವ ಸಂಸಾ
ರದಲ್ಲಿಯೇ ಸಂಚರಿಸುತ್ತೀಯೆ., ಕಾರಣೇ-ಕಾರಣವು, ಜೃಂಭಮಾಣೇ(ಸತಿ)- ವೃ
ದ್ಧಿಹೊಂದುತ್ತಿರಲಾಗಿ, ಕಾರ್ಯಪರಿಕ್ಷಯಃ-ಕಾರ್ಯ-ಕಾರ್ಯದ, ಪರಿಕ್ಷಯಃ-ನಾಶವು,
ನಹಿ-ಇಲ್ಲವಷ್ಟೆ?.

ತಾತ್ಪರ್ಯ॥ ಎಲೈ ಆತ್ಮನೇ! ಅಜ್ಞಾನವಿರುತ್ತಿರಲಾಗಿ ಪೂರ್ವ
ದಂತೆಯೇ ನರಸುರತಿರ್ಯಙ್ನಾರಕಿಜನ್ಮಗಳಲ್ಲಿ ಅಡಿಗಡಿಗೂ ಸಂಚರಿಸುತ್ತ
ಲೇ ಇದ್ದೀಯೆ. ಲೋಕದಲ್ಲಿ ಕಾರಣವು ಅಭಿವೃದ್ಧಿಹೊಂದುತ್ತಿರುವವ
ರೆಗೂ ಕಾರ್ಯವೂ ಅಭಿವೃದ್ಧಿಹೊಂದುತಲಿದೆಯಲ್ಲವೆ? ಕಾರಣವಾದ ಅ
ಜ್ಞಾನವು ನಿವರ್ತಿಸುವವರೆಗೂ ಕಾರ್ಯಭೂತವಾದ ಜನ್ಮಗಳೂ ನಿವರ್ತಿ

ಸುವುದಿಲ್ಲವೆಂದಭಿಪ್ರಾಯವು. ಆದುದರಿಂದ, (ಎಲೈಆತ್ಮನೇ! ಅಜ್ಞಾ
ನನಿವೃತ್ತಿಗೆ ಕಾರಣವಾದಮಾರ್ಗದಲ್ಲಿ ಪ್ರವರ್ತಿಸೆಂದಭಿಪ್ರಾಯವು)೩೦

ಶ್ಲೋಕ॥ ಯತಸ್ವ ತತ್ತಪಸ್ಯಾತ್ಮ-
ನ್ಮುಕ್ತ್ವಾ ಮುಗ್ಧೋಚಿತಂ ಸುಖಮ್ ।
ಚಿರಸ್ಥಾಯ್ಯಂಧಕಾರೋಽಪಿ
ಪ್ರಕಾಶೇ ಹಿ ವಿನಶ್ಯತಿ ॥೩೩॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ!, ತತ್-ಆದಕಾರಣದ ದೆಸೆಯಿಂದ, ಮುಗ್ಧೋಚಿತಂ-ಮುಗ್ಧ-ಮೂಢರಿಗೆ, ಉಚಿತಂ-ಯೋಗ್ಯವಾದ, ಸುಖಂ-ಸೌಖ್ಯವನ್ನು, ಮುಕ್ತ್ವಾ-ಬಿಟ್ಟು, ತಪಸಿ-ತಪಸ್ಸಿನಲ್ಲಿ, ಯತಸ್ವ-ಯತ್ನಿಸು., ಚಿರಸ್ಥಾಯಿ-ಬಹುಕಾಲದಿಂದಿರುತಲಿರುವ, ಅಂಧಕಾರೋಽಪಿ-ಕತ್ತಲೆಯುೂಕೂಡ, ಪ್ರಕಾಶೇ (ಸತಿ)-ಬೆಳಕು ಉಂಟಾಗುತ್ತಿರಲಾಗಿ, ವಿನಶ್ಯತಿ ಹಿ-ನಾಶವನ್ನು ಹೊಂದುವುದಲ್ಲವೆ?.

ತಾತ್ಪರ್ಯ ॥ ಎಲೈ ಆತ್ಮನೇ! ಮೂಢರಿಗುಚಿತವಾದ ಪಾಪಹೇತುವಾದ ವಿಷಯಸುಖವಂ ಬಿಟ್ಟು ನಿತ್ಯಸುಖವಾದ ಮೋಕ್ಷ ಪುರುಷಾರ್ಥಕ್ಕೋಸುಗ ವಿವೇಕಿಗಳಿಗುಚಿತವಾದ ತಪಸ್ಸಿನಲ್ಲಿ ಪ್ರಯತ್ನಿಸು. ಅನಾದಿಕಾಲದಿಂದ ಅನೇಕಭವಗಳಲ್ಲನುಸರಿಸಿಬಂದಿರುವ ರಾಗದ್ವೇಷಾದಿದೋಷಮೂಲಕವಾದ, ಸಂಸಾರಸಂಬಂಧಿಯಾದ ವಿಷಯವ್ಯಾಮೋಹವು ತಪಸ್ಸಿನಿಂದ ಹೇಗೆ ನಿವರ್ತಿಸುವುದೆಂದರೆ .--ಬಹುಕಾಲದಿಂ ದಿರುತಲಿರುವ ಗಾಢಾಂಧಕಾರವು ಬೆಳಕು ವುಂಟಾದಮಾತ್ರಕ್ಕೇನೆ ಹೇಗೆ ತತ್ಕ್ಷಣ ನಿವರ್ತಿಸುವುದೋ ಹಾಗೆ ತತ್ವಜ್ಞಾನವು ಉಂಟಾಗುತ್ತಿರಲಾಗಿ ಅನಾದ್ಯಜ್ಞಾನವು ನಿವೃತ್ತಿಸುವುದೆಂದಭಿಪ್ರಾಯವು. ॥ ೩೩ ॥

—*(ಲೋಕಾನುಪ್ರೇಕ್ಷಾ.)*—

ಶ್ಲೋಕ॥ ಭವ್ಯತ್ವಂಕರ್ಮಭೂ ಜನ್ಮ
ಮಾನುಷ್ಯಂ ಸ್ವಜ್ಞವಂಶ್ಯತಾ।
ದುರ್ಲಭಂ ತೇ ಕ್ರಮಾದಾತ್ಮನ್-
ಸಮವಾಯಸ್ತು ಕಿಂ ಪುನಃ ॥೩೪॥

ಟೀ ॥ ಹೇಆತ್ಮನ್-ಎಲೈ ಆತ್ಮನೇ!, ಭವ್ಯತ್ವಂ- ಭವ್ಯಾತ್ಮನಾಗೋಣವೂ, (ಅಂದರೆ_ಸಮ್ಯಗ್ದರ್ಶನಜ್ಞಾನ ಚಾರಿತ್ರಗಳಿಗರ್ಹನಾಗುವಿಕೆಯೂ), ಕರ್ಮಭೂಜನ್ಮ-ಕರ್ಮಭೂ-ಕರ್ಮಭೂಮಿಯಲ್ಲಿ, ಜನ್ಮ-ಉತ್ಪತ್ತಿಯೂ, ಮಾನುಷ್ಯಂ- ಒಳ್ಳೇಮನುಷ್ಯನಾಗುವಿಕೆಯೂ, ಸ್ವಂಗವಂಶ್ಯತಾ_ಸ್ವಂಗ- ಅಂಗಹೀನನಾಗದೇ ಶುಭಾಂಗನಾಗೋಣವೂ, ವಂಶ್ಯತಾ-ಸತ್ಕುಲಪ್ರಸೂತನಾಗೋಣವೂ, ಏತತ್-ಇದು, ಕ್ರಮಾತ್-ಕ್ರಮಪಡೆಸೆಯಿಂದ, (ಅಂದರೆ_ಒಂದಾಗುತಲೂ ಮತ್ತೊಂದೆಂಬ ರೀತಿಯಿಂದಲೂ), ತೇ-ನಿನಗೆ, ದುರ್ಲಭಂ ಪಡೆಯಲಶಕ್ಯವು., ಸಮವಾಯಸ್ತು-ಪೂರ್ವೋಕ್ತವಾದ ಸಮಸ್ತಗುಣ ಸಮುದಾಯವು, ಕಿಂಪುನಃ-ಹೇಳತಕ್ಕದ್ದೇನು ?.

ತಾತ್ಪರ್ಯ ॥ ಜೀವಂಧರಮಹಾರಾಜನು ತತ್ತ್ವಜ್ಞಾನದ ದೌರ್ಲಭ್ಯವಂ ಭಾವಿಸುತ್ತಾನೆ .__ಇದು ಬೋಧಿದುರ್ಲಭಾನುಪ್ರೇಕ್ಷೆಯೆನ್ನಲ್ಪಡುವದು.-ಎಲೈ ಆತ್ಮನೇ ! ನೀನು ಭವ್ಯಾತ್ಮನಾಗಿ ಹುಟ್ಟುವುದಕ್ಕೇನೆ ಮಹಾಪುಣ್ಯವಂ ಮಾಡಬೇಕು. ಕರ್ಮಭೂಮಿಯಲ್ಲಿ ಹುಟ್ಟೋಣವು, ಅದರಲ್ಲಿಯೂ ಮನುಷ್ಯನಾಗಿಹುಟ್ಟೋಣವು, ಅದರಲ್ಲಿಯೂ ಅಂಗಹೀನನಲ್ಲದೆ ಕೈಕಾಲುಮೊದಲಾದ ಅವಯವಗಳ ಸೌಷ್ಠವವುಳ್ಳವನಾಗಿ ಹುಟ್ಟೋಣವು, ಹಾಗಾದರೂ ಸತ್ಕುಲದಲ್ಲಿ ಹುಟ್ಟೋಣವು, ಈ ಗುಣಗಳಲ್ಲಿ ಒಂದೊಂದುಗುಣವನ್ನು ಕೂಡ ಮಹಾಪುಣ್ಯವಂ ಮಾಡಿ ಪಡೆಯತಕ್ಕದ್ದು. ಹೀಗಿರುವಲ್ಲಿ, ಏಕಕಾಲದಲ್ಲಿ ಭವ್ಯಾತ್ಮನಾಗಿಯೂ, ಕರ್ಮಭೂಮಿಯಲ್ಲಿ ಜನ್ಮವುಳ್ಳವನಾಗಿಯೂ, ಅದರಲ್ಲಿ ಒಳ್ಳೇ ಮನುಷ್ಯನಾಗಿಯೂ ಅಂಗಹೀನನಲ್ಲದೆ ಶುಭಾಂಗನಾಗಿಯೂ, ಸತ್ಕುಲ ಪ್ರಸೂತನಾಗಿಯೂ, ಹುಟ್ಟುವ ವಿಷಯದಲ್ಲಿ ಹೇಳತಕ್ಕದ್ದೇನು?. (ಅಂದರೆ-ಮೋಕ್ಷ ಹೇತುವಾದ ತತ್ತ್ವಜ್ಞಾನೋಪಯೋಗಿಯಾದ ಈ ಸಮಸ್ತಗುಣಗಳಸಮೂಹವು ಏಕಕಾಲದಲ್ಲಿ ಪರಮದುರ್ಲಭವೆಂಬಭಿಪ್ರಾಯವು.) ಈ ಸಮಸ್ತವೂ ಇರುವಲ್ಲಿ ಆತ್ಮನು ಮೋಕ್ಷಸಾಧಕವಾದ ಜ್ಞಾನವಂ ಪಡೆಯದಿರುವುದತ್ಯಂತಾನುಚಿತವೆಂಬಭಿಪ್ರಾಯವು. ಮತ್ತು, ಈಗ ಈ ಗುಣಗಳನ್ನು ವ್ಯರ್ಥಪಡಿಸಿಕೊಂಡಲ್ಲಿ ಪುನಃ ಪರಮದುರ್ಲಭವಾದುದರಿಂದ ಈಗಲೇ ಸಫಲಪಡಿಸಿಕೊಳ್ಳಬೇಕೆಂಬ ಭಾವವು. ॥ ೨೪ ॥

ಶ್ಲೋಕ॥ ವ್ಯರ್ಥಸ್ಸ ಸಮವಾಯೋಽಪಿ

ತವಾತ್ಮನ್ ಧರ್ಮಧೀರ್ನಚೇತ್ ।
ಕಣಿಶೋದ್ಗಮ ವೈಧುರ್ಯೇ
ಕೇದಾರಾದಿ ಗುಣೇನ ಕಿಮ್॥೭೫॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ !, ತವ-ನಿನಗೆ, ಧರ್ಮಧೀಃ-ಧರ್ಮ-ಧರ್ಮದಲ್ಲಿ, ಧೀಃ-ಬುದ್ಧಿಯು, ನಚೇತ್-ಇಲ್ಲದೇಹೋದರೆ, ಸಃ-ಆ ಪೂರ್ವೋಕ್ತವಾದ, ಸಮವಾಯೋಪಿ-ಭವ್ಯತ್ವಾದಿಗುಣಸಮುದಾಯವೂಕೂಡ, ವ್ಯರ್ಥಃ-ನಿಷ್ಫಲವು., ಕಣಿಶೋದ್ಗಮವೈಧುರ್ಯೇ(ಸತಿ)–ಕಣಿಶ-ತೆನೆಗಳ, ಉದ್ಗಮ-ಆವಿರ್ಭಾವದಿಂದ, ವೈಧುರ್ಯೇ (ಸತಿ)-ಶೂನ್ಯವಾಗುತಿರಲಾಗಿ, ಕೇದಾರಾದಿಗುಣೇನ- ಕೇದಾರ- ಗದ್ದೆಯೇ, ಆದಿ-ಮೊದಲಾದುದರ, ಗುಣೇನ-ಗುಣದಿಂದ, ಕಿಂ-ಏನುಪ್ರಯೋಜನವು?.

ತಾತ್ಪರ್ಯ ॥ ಎಲೈ ಆತ್ಮನೇ ! ನಿನಗೆ ಧರ್ಮದಲ್ಲಿ ಬುದ್ಧಿಯು ಇಲ್ಲದೇಇದ್ದಲ್ಲಿ ಆ ಭವ್ಯತ್ವ, ಕರ್ಮಭೂಮಿಜನನ, ಮನುಷ್ಯಜನ್ಮ,ಅವಯವಸೌಷ್ಠವ, ಸತ್ಕುಲದಲ್ಲಿ ಹುಟ್ಟುವಿಕೆಯೆಂಬ ಈಗುಣಗಳಸಮೂಹವೂ ಕೂಡ ನಿಷ್ಫಲವು. (ಈ ಸಮಸ್ತಗುಣಗಳೂಇದ್ದು ಧರ್ಮಬುದ್ಧಿಯೂ ಇದ್ದರೇನೆ ಸಫಲವೆಂದಭಿಪ್ರಾಯವು.) ಇದಕ್ಕೆ ದೃಷ್ಟಾಂತವು.–ಭತ್ತದ ಪೈರಿನಲ್ಲಿ ತೆನೆಯೇ ಹೊರಡದೇಹೋದರೆ ಗದ್ದೆಯೇ ಮೊದಲಾದುದರಗುಣಗಳಿಂದೇನು ಪ್ರಯೋಜನವು? ಹಾಗೆ ಈ ಸಮಸ್ತ ಗುಣಗಳಿದ್ದರೂ ಇದರ ಫಲವಾದ ಧರ್ಮಬುದ್ಧಿ ಇಲ್ಲದಿದ್ದರೆ ಏನು ಪ್ರಯೋಜನವು ? ಆದುದರಿಂದ, ಆತ್ಮನೇ! ಧರ್ಮದಲ್ಲಿ ಬುದ್ಧಿಯನ್ನಿಡು. ಯಾವ ಗುಣಗಳಿದ್ದರೂ ಧರ್ಮಬುದ್ಧಿಯಿಲ್ಲದಿದ್ದರೆ ದುರ್ಗತಿಯಂ ಪಡೆಯುವನೇ ಹೊರತು ಆತ್ಮನು ಸದ್ಗತಿಯಂ ಪಡೆಯಲಾರನೆಂದು ಮುಖ್ಯಾಭಿಪ್ರಾಯವು.॥೭೫॥

ಶ್ಲೋಕ॥ ತದಾತ್ಮನ್ದುರ್ಲಭಂ ಗಾತ್ರಂ
ಧರ್ಮಾರ್ಥಂ ಪ್ರೋಥುಮಿಚ್ಛತಾ ।
ಭಸ್ಮನೇ ದಹತೋ ರತ್ನಂ
ಮೂಢಃ ಕಸ್ಮಾತ್ಪರೋಜನಃ ॥೭೬॥

ಟೀ॥ ಹೇ ಆತ್ಮನ್- ಎಲೈ ಆತ್ಮನೆ !, ಧರ್ಮಾರ್ಥಂ- ಧರ್ಮಕ್ಕೋಸ್ಕರ, ಗಾತ್ರಂ-ಶರೀರವನ್ನು, ಪ್ರೋಥುಂ-ಪೋಷಿಸುವುದಕ್ಕೋಸ್ಕರ, ಇಚ್ಛತಾ- ಬಯಸುವ ನಿನ್ನಿಂದ

ತದಾ-ಆ ಕಾಲದಲ್ಲಿ, ದುರ್ಲಭಂ- ಪಡೆಯುಲಶಕ್ಯವು., ಭಸ್ಮನೇ-ಬೂದಿಗೋಸುಗ, ರತ್ನಂ-ರತ್ನವನ್ನು, ದಹತಃ-ದಹಿಸುವಪುರುಷನಿಗಿಂತಲೂ, ಪರಃ-ಬೇರೆಯಾದ, ಕಃ-ಯಾವ, ಜನಃ-ಜನವು, ಮೂಢ(ಸ್ಸನ್)-ಮೂಢನಾಗಿ, ಸ್ಯಾತ್-ಆಗುವನು.

ತಾತ್ಪರ್ಯ ॥ ಎಲೈ ಆತ್ಮನೇ! ಈ ಉತ್ಕೃಷ್ಟದೇಹನು ದೊರೆತ ಕಾಲದಲ್ಲಿ ಧರ್ಮಾರ್ಥವಾಗಿ ಉಪಯೋಗಪಡಿಸದೆ, ಅರ್ಥ ಕಾಮಪುರುಷಾರ್ಥಕ್ಕಾಗಿ ಉಪಯೋಗಪಡಿಸಿ ನಿಷ್ಫಲಪಡಿಸಿಕೊಂಡ ನಂತರ ಪುನಃ ಧರ್ಮಾಚರಣಕ್ಕೋಸುಗ ಇಂಥಾ ಭವ್ಯತ್ವಾದಿ ಉತ್ಕೃಷ್ಟ ಗುಣದೊಡಗೂಡಿದ ದೇಹಬೇಕೆಂದು ಬಯಸಿದರೆ ದೊರಕೀತೇ? ಇದಕ್ಕೆ ದೃಷ್ಟಾಂತವು.–ಬೂದಿಗೋಸುಗ ರತ್ನವಂ ದಹಿಸುವವನಿಗಿಂತಲೂ ಬೇರೆಯಾದ ಮತ್ತೆ ಯಾವ ಜನವು ಮೂಢನೆನಿಸುವನು?. ಹಾಗೆ ಅತ್ಯಲ್ಪವಾದ, ಹೇಯವಾದ ವಿಷಯಸುಖಕ್ಕೋಸುಗ ಸಕಲಪುರುಷಾರ್ಥ ಸಾಧಕವಾದ ಧರ್ಮವು ಸುಮಾಡಿಸುವದೇಹದಿಂದ ಅಧರ್ಮವು ಸಂಪಾದಿಸಿಕೊಳ್ಳುವವನು ಪರಮಮೂಢನೆಂದು ಮುಖ್ಯಭಾವವು. (ರತ್ನದಂತೆ ಉತ್ಕೃಷ್ಟವಾದ ಈ ಭವ್ಯತ್ವಾದಿ ಗುಣಗಳೊಡನೆ ಕೂಡಿದ ದೇಹದಿಂದ ಉತ್ಕೃಷ್ಟವಾದ ಮೋಕ್ಷಪುರುಷಾರ್ಥವನ್ನೇ ಪಡೆಯುವುದುಚಿತವೆಂದುಭಾವವು.) ॥೭೬

ಶ್ಲೋಕ॥ ದೇವತಾಭವಿತಾಶ್ವಾಪಿ
ದೇವಃ ಶ್ವಾ ಧರ್ಮಪಾಪತಃ ।
ತದ್ಧರ್ಮಂ ದುರ್ಲಭಂ ಕುರ್ಯಾತ್
ಧರ್ಮೋಹಿ ಭುವಿ ಕಾಮ್ಯಸೂಃ ॥೭೭॥

ಟೀ ॥ ಧರ್ಮಪಾಪತಃ-ಧರ್ಮ-ಪುಣ್ಯವೂ, ಪಾಪತಃ - ಪಾಪವೂ ಇವುಗಳದೆಸೆಯಿಂದ,ಶ್ವಾಪಿ-ನಾಯಿಯುಕೂಡ, ದೇವತಾ-ದೇವತೆಯಾಗಿ, ಭವಿತಾ-ಆಗುವುದು; ದೇವಃ- ದೇವನು, ಶ್ವಾ-ನಾಯಿಯಾಗಿಯೂ, ಭವಿತಾ-ಆಗುವುದು., ದುರ್ಲಭಂ-ಪಡೆಯುಲಶಕ್ಯವಾದ, ತದ್ಧರ್ಮಂ-ಆ ಧರ್ಮವನ್ನು, ಕುರ್ಯಾಃ-ಮಾಡು., ಧರ್ಮಃ- ಧರ್ಮವು, ಕಾಮ್ಯಸೂಃ–ಕಾಮ್ಯ-ಇಷ್ಟಾರ್ಥಗಳನ್ನು, ಸೂಃ-ಕೊಡುತ್ತದೆಯಲ್ಲವೆ?.

ತಾತ್ಪರ್ಯ ॥ ಎಲೈ ಆತ್ಮನೇ! ಧರ್ಮದ ಮಹಿಮೆಯದೆಸೆಯಿಂದ ನಾಯಿಯು ದೇವಜನ್ಮವಂ ಪಡೆಯುವುದು, ಪಾಪಕರ್ಮದಬಲದಿಂದ ದೇವನಾಗಿದ್ದರೂ ನಾಯಿಯುಜನ್ಮವಂ ಪಡೆಯುವನು. ಆದುದರಿಂದ ಅಂಥಾ ಧ

ರ್ಮವಂ ಮಾಡು. ಧರ್ಮವೇ ಭೂಮಿಯಲ್ಲಿ ಸರ್ವಫಲಪ್ರದವಾದ ಕಲ್ಪವೃಕ್ಷವು. ಧರ್ಮವು ರತ್ನದಂತೆ ಪರಮದುರ್ಲಭವಾದದ್ದು. ದೇವಾದ್ಯುತ್ಕೃಷ್ಟಜನ್ಮಗಳೂ, ಸ್ವರ್ಗಾದಿ ಸಮಸ್ತ ಸುಖಪ್ರಾಪ್ತಿಯೂ ಧರ್ಮದಫಲವೆಂದಭಿಪ್ರಾಯವು. ॥ ೭೭ ॥

ಶ್ಲೋಕ॥ ಭವ್ಯಸ್ಯಾಬಾಹ್ಯಚಿತ್ತಸ್ಯ
ಸರ್ವಸತ್ವಾನುಕಂಪಿನಃ ।
ಕರಣತ್ರಯಶುದ್ಧಸ್ಯ
ತವಾತ್ಮನ್ ಬೋಧಿರೇಧತಾಮ್ ॥೭೮॥

ಟೀ ॥ ಭವ್ಯಸ್ಯ-ಭವ್ಯಾತ್ಮನಾಗಿಯೂ, ಅಬಾಹ್ಯಚಿತ್ತಸ್ಯ-ಹೊರಗಿನ ಭೋಗೋಪಭೋಗಪದಾರ್ಥಗಳಲ್ಲಿ ಮನಸ್ಸಿಲ್ಲದೇ ಇರುವವನಾಗಿಯೂ, ಸರ್ವಸತ್ವಾನುಕಂಪಿನಃ-ಸಮಸ್ತ ಪ್ರಾಣಿಗಳಲ್ಲಿಯೂ ದಯಾಶಾಲಿಯಾಗಿಯೂ, ಕರಣತ್ರಯಶುದ್ಧಸ್ಯ-ಮನೋವಾಕ್ಕಾಯಗಳೆಂಬ ತ್ರಿಕರಣ ಶುದ್ಧನಾಗಿಯೂ ಇರುವ, ತವ-ನಿನಗೆ, ಹೇಆತ್ಮನ್-ಎಲೈಆತ್ಮನೇ!, ಬೋಧಿಃ-ಜ್ಞಾನವು, ಏಧತಾಂ-ವೃದ್ಧಿಹೊಂದಲಿ.

ತಾತ್ಪರ್ಯ ॥ ಎಲೈ ಆತ್ಮನೇ! ಭವ್ಯಾತ್ಮನಾಗಿಯೂ, ಹೊರಗಿನ ಪಂಚೇಂದ್ರಿಯವಿಷಯಗಳಾದ ಭೋಗೋಪಭೋಗ ಪದಾರ್ಥಗಳಲ್ಲಿ ವೈರಾಗ್ಯಶಾಲಿಯಾಗಿಯೂ, ಸಮಸ್ತ ಪ್ರಾಣಿಗಳಲ್ಲಿಯೂ ದಯಾಶಾಲಿಯಾಗಿಯೂ, ತ್ರಿಕರಣಶುದ್ಧನಾದ ನಿನಗೆ ಜ್ಞಾನವು ಅಭಿವೃದ್ಧಿಹೊಂದಲಿ. (ಈ ಗುಣಗಳುಳ್ಳವನಿಗೇನೆ ಮುಕ್ತಿಕಾರಣವಾದ ಜ್ಞಾನವು ಅಭಿವೃದ್ಧಿ ಹೊಂದುವುದೆಂದಭಿಪ್ರಾಯವು.)॥೭೮॥

—*(ಬೋಧಿದುರ್ಲಭಾನುಪ್ರೇಕ್ಷಾ.)*—

ಶ್ಲೋಕ॥ ಪಶ್ಯಾತ್ಮನ್ ಧರ್ಮಮಾಹಾತ್ಮ್ಯಂ
ಧರ್ಮಕೃತ್ಯೋ ನ ಶೋಚತಿ।
ವಿಶ್ವೈರ್ವಿಶ್ವಸ್ಯತೇ ಚಿತ್ರಂ
ನೇಹ ಲೋಕೇಽದ್ಯ ಯೋ ಮುನಿಃ ॥೭೯॥

ಟೀ ॥ ಹೇ ಆತ್ಮನ್-ಎಲೈ ಆತ್ಮನೇ!, ಧರ್ಮಮಾಹಾತ್ಮ್ಯಂ-ಧರ್ಮದ ಮಹಿಮೆಯನ್ನು, ಪಶ್ಯ-ನೋಡು, ಧರ್ಮಕೃತ್ಯಃ-ಧರ್ಮವೇ ಮಾಡತಕ್ಕ ಕಾರ್ಯವಾಗಿವುಳ್ಳವ

ನು, ನಶೋಚತಿ-ಶೋಕಿಸುವುದಿಲ್ಲವು., ವಿಶ್ವೈಃ-ಸಮಸ್ತರಿಂದಲೂ, ವಿಶ್ವಸ್ಯತೇ-ನಂಬಲ್ಪಡುತ್ತಾನೆ, ಚಿತ್ರಂ-ಆಶ್ಚರ್ಯವು !!, ಸಹಿ-ಆ ಧರ್ಮಾತ್ಮನಲ್ಲವೆ, ಲೋಕದ್ವಯೇ-ಎರಡುಲೋಕದಲ್ಲಿಯೂ, ಸುಖೀ-ಸುಖಿಯಾದವನು?.

ತಾತ್ಪರ್ಯ॥ ಎಲೈ ಆತ್ಮನೇ ! ಧರ್ಮದ ಮಹಿಮೆಯನ್ನು ಕೇಳು.- ಧರ್ಮದಕೆಲಸವುಳ್ಳವನು ಶೋಕಿಸುವುದಿಲ್ಲವು. ಸಮಸ್ತರಿಂದಲೂ ನಂಬಲ್ಪಡುತ್ತಾನೆ. ಧರ್ಮಾತ್ಮನು ಎರಡು ಲೋಕದಲ್ಲಿಯೂ ಸುಖಪಡುವನು. ಧರ್ಮಪ್ರಭಾವವು ಬಹಳ ಆಶ್ಚರ್ಯಕರವಾದದ್ದು ॥ ೭೯ ॥

ಶ್ಲೋಕ॥ ತವಾತ್ಮನ್ನಾತ್ಮನೀನೇಽಸ್ಮಿನ್
ಜೈನಧರ್ಮೇಽತಿ ನಿರ್ಮಲೇ ।
ಸ್ಥವೀಯಸೀ ರುಚಿಃ ಸ್ಥೇಯಾ-
ದಾಮುಕ್ತೇರ್ಮುಕ್ತಿದಾಯಿನೀ ॥೮೦॥

ಟೀ॥ ಹೇ ಆತ್ಮನ್-ಎಲೈ ಆತ್ಮನೇ !, ಆತ್ಮನೀನೇ-ಆತ್ಮನಿಗೆ ಹಿತಕರವಾದ,ಅತಿನಿರ್ಮಲೇ-ಅತ್ಯಂತ ನಿರ್ದೋಷವಾದ, ಅಸ್ಮಿನ್ ಜೈನಧರ್ಮೇ- ಈ ಅರ್ಹತ್ಪರಮೇಶ್ವರಪ್ರೋಕ್ತವಾದಧರ್ಮದಲ್ಲಿ, ತವ-ನಿನಗೆ, ಸ್ಥವೀಯಸೀ-ಸ್ಥಿರವಾದ, ಮುಕ್ತಿದಾಯಿನೀ-ಮುಕ್ತಿ-ಮೋಕ್ಷವನ್ನು, ದಾಯಿನೀ-ಕೊಡುತಲಿರುವ, ರುಚಿಃ- ಪ್ರೀತಿಯು, ಆಮುಕ್ತೇಃ ಮೋಕ್ಷಪರ್ಯಂತವೂ, ಸ್ಥೇಯಾತ್-ಉಂಟಾಗಲಿ.

ತಾತ್ಪರ್ಯ॥ ಎಲೈ ಆತ್ಮನೇ! ನಿನಗೆ ಹಿತಕರವಾದ ಅತ್ಯಂತ ನಿರ್ದೋಷವಾದ ಈ ಜೈನಧರ್ಮದಲ್ಲಿ ಮೋಕ್ಷವನ್ನು ಕೊಡುತ್ತಿರುವ ಸ್ಥಿರವಾದ ಪ್ರೀತಿಯು ಮೋಕ್ಷಪರ್ಯಂತವೂ ಇರಲಿ ॥೮೦॥

--*(ಧರ್ಮಾನು ಪ್ರೇಕ್ಷಾ.)*--

ಶ್ಲೋಕ॥ ಇತ್ಯನುಪ್ರೇಕ್ಷಯಾ ಚಾಸೀ-
ದಕ್ಷೋಭ್ಯಾಸ್ಯ ವಿರಕ್ತತಾ।
ವ್ಯವಸ್ಥಾ ಹಿ ಸತಾಂ ಶೈಲೀ
ಸಾಹಾಯ್ಯೇಽಪ್ಯತ್ರ ಕಿಂ ಪುನಃ ॥೮೧॥

ಟೀ॥ ಇತಿ-ಈ ಪ್ರಕಾರ, ಅನುಪ್ರೇಕ್ಷಯಾ- ಅನಿತ್ಯಾಶರಣೇತ್ಯಾದಿ ಪ್ರಕಾರದಿಂದ ಹೇಳಲ್ಪಟ್ಟ ಹನ್ನೆರಡುವಿಧವಾದ ಅನುಪ್ರೇಕ್ಷೆಯಿಂದ, ಅಸ್ಯ- ಈ ಜೀವಂಧ

ರಸ್ವಾಮಿಗೆ, ವಿರಕ್ತತಾ-ವೈರಾಗ್ಯವು, ಅಕ್ಷೋಭ್ಯಾ(ಸತೀ)-ಚಲಿಸಲಶಕ್ಯವಾಗಿ(ಸ್ಥಿರವಾಗಿ), ಆಸೀತ್-ಆಯಿತು. ಸತಾಂ-ಸತ್ಪುರುಷರ, ಶೈಲೀ-ಸ್ವಭಾವವು, ಸ್ವಾವಸ್ಥಾಹಿ-ಏಕರೀತಿಯಾದದ್ದಲ್ಲವೆ?, ಸಾಹಾಯ್ಯೇಪಿ- ಸಹಾಯಕೃತ್ಯವೂ ಉಂಟಾದಲ್ಲಿ, ಅತ್ರ-ಈ ವಿಷಯದೊಳು, ಕಿಂಪುನಃ-ಹೇಳತಕ್ಕದ್ದೇನು ?.

ತಾತ್ಪರ್ಯ ॥ ಈ ಪ್ರಕಾರ ದ್ವಾದಶಾನುಪ್ರೇಕ್ಷೆಯಿಂದಲೀಜೀವಂಧರಸ್ವಾಮಿಗೆ ವೈರಾಗ್ಯವು ಸ್ಥಿರವಾಯಿತು. ಸತ್ಪುರುಷರ ಸ್ವಭಾವವು ಮೊದಲೇ ಸ್ಥಿರವಾದದ್ದು. ಎಂದಿಗೂ ವ್ಯತ್ಯಾಸವಾಗುವುದಿಲ್ಲವಷ್ಟೆ? ಸಹಾಯವೂ ಸಂಭವಿಸುತ್ತಿರಲಾಗಿ ಹೇಳತಕ್ಕದ್ದೇನು?. (ಮಹಾಪುಣ್ಯಪುರುಷನಾದ ಜೀವಂಧರ ಸ್ವಾಮಿಯು ಸ್ವಭಾವದಿಂದಲೇ ವೈರಾಗ್ಯಶಾಲಿಯಾದುದರಿಂದ, ಸಹಾಯಕವಾದ ದ್ವಾದಶಾನುಪ್ರೇಕ್ಷೆಯೂ ಉಂಟಾಗುತ್ತಿರಲಾಗಿ ವೈರಾಗ್ಯವು ಫಲಪರ್ಯವಸಾಯಿಯಾಗಿ ಪರಿಣಮಿಸಿತೆಂಬ ವಿಷಯದಲ್ಲಿ ಹೇಳತಕ್ಕದ್ದೇನೆಂದು ಮುಖ್ಯಭಾವವು.) ॥೮೦॥

ಶ್ಲೋಕ॥ ವಿರಕ್ತೋ ರಾಜ್ಯಮನ್ಯಚ್ಚ
ನ ತೃಣಾಯಾಪ್ಯಮನ್ಯತ।
ಹಸ್ತಸ್ಥೇಽಪ್ಯಮೃತೇ ಕೋ ವಾ
ತಿಕ್ತಸೇವಾಪರಾಯಣಃ ॥೮೧॥

ಟೀ ॥ ವಿರಕ್ತಃ- ವೈರಾಗ್ಯವನ್ನು ಹೊಂದಿದ ಜೀವಂಧರ ಸ್ವಾಮಿಯು, ರಾಜ್ಯಂ-ರಾಜ್ಯವನ್ನು, ಅನ್ಯಚ್ಚ-ಇತರ ಸಮಸ್ತ ಭೋಗೋಪಭೋಗ ಪದಾರ್ಥವನ್ನು ಕೂಡ, ತೃಣಾಯಾಪಿ-ಹುಲ್ಲಿನಂತೆಯೂ ಕೂಡ, ನಾಮನ್ಯತ- ತಿಳಿಯಲ್ಪಡಲಿಲ್ಲವು., ಅಮೃತೇ-ಅಮೃತವು, ಹಸ್ತಸ್ಥೇಪಿ-ಕೈಯಲ್ಲಿದ್ದಾಗ್ಯೂ ಕೂಡ, ಕೋವಾ- ಯಾವನು ತಾನೇ, ತಿಕ್ತಸೇವಾಪರಾಯಣ(ಸ್ಸನ್)-ತಿಕ್ತ-ಕಹಿಯಾದವಸ್ತುವನ್ನು, ಸೇವಾ-ಭಕ್ಷಿಸೋಣದರಲ್ಲಿ, ಪರಾಯಣ(ಸ್ಸನ್)-ಆಸಕ್ತನಾಗಿ,ಭವತಿ-ಆಗುತ್ತಾನೆ?.

ತಾತ್ಪರ್ಯ ॥ ಈ ಪ್ರಕಾರ ಅವಿಚಾಲ್ಯವಾದ ವೈರಾಗ್ಯವು ಪಡೆದ ಜೀವಂಧರಸ್ವಾಮಿಯು ರಾಜ್ಯವಂ ತೃಣಕ್ಕಿಂತಲೂ ಅತ್ಯಂತ ಅಸಾರವನ್ನಾಗಿ ತಿಳಿದನು. ಇದು ಉಚಿತವು. ಹೇಗೆಂದರೆ —ಅಮೃತವು ಕೈಯಲ್ಲಿರುತ್ತಿರಲಾಗಿ ಯಾವನು ತಾನೆ ಕಹಿಯಾದವಸ್ತುವು ತಿನ್ನುವುದಕ್ಕೆ ಆಶಿಸುವನು. ಹಾಗೆ ಮೋಕ್ಷಾಭಿರುಚಿಯುಳ್ಳವನು ಅಸ್ಥಿರಸುಖವಾದ

ವಿಷಸದೃಶವಿಷಯಸುಖದಲ್ಲಿ ಅಭಿಲಾಷೆಯು ಬಿಡುವನೆಂದಭಿಪ್ರಾಯವು.

ಶ್ಲೋಕ॥ ತತಸ್ತಸ್ಮಾದ್ವಿನಿರ್ಗತ್ಯ
ಸಂಪೂಜ್ಯ ಪರಮೇಶ್ವರಮ್ ।
ಯೋಗೀನ್ದ್ರಾದಶೃಣೋದ್ಧರ್ಮ-
ಮಧೀತೀ ಜಿನಶಾಸನೇ॥ ೮೩ ॥

ಟೀ ॥ ತತಃ-ಅನಂತರದಲ್ಲಿ, ತಸ್ಮಾತ್-ಆ ಪ್ರದೇಶದ ದೆಸೆಯಿಂದ, ವಿನಿರ್ಗತ್ಯ-ಹೊರಟು ಬಂದು, ಪರಮೇಶ್ವರಂ-ಅರ್ಹತ್ಪರಮೇಶ್ವರನನ್ನು, ಸಂಪೂಜ್ಯ-ಪೂಜಿಸಿ, ಯೋಗೀಂದ್ರಾತ್-ಒರ್ವ ಯೋಗೀಶ್ವರದೆಸೆಯಿಂದ, ಜಿನಶಾಸನೇ-ಜಿನ-ಅರ್ಹತ್ಪರಮೇಶ್ವರನ, ಶಾಸನೆ-ಶಾಸ್ತ್ರದಲ್ಲಿ, ಅಧೀತೀ(ಸನ್)-ಅಧ್ಯಯನಮಾಡಿದವನಾಗಿ, ಧರ್ಮಂ-ಧರ್ಮವನ್ನು, ಅಶೃಣೋತ್-ಕೇಳಿದನು.

ತಾತ್ಪರ್ಯ ॥ ಅನಂತರದಲ್ಲಿ ಜೀನಶಾಸ್ತ್ರಾಧ್ಯಯನ ಮಾಡಿರುವ ಜೀವಂಧರ ಸ್ವಾಮಿಯು ಆ ಪ್ರದೇಶದ ದೆಸೆಯಿಂದ ಹೊರಟು ಜಿನಚೈತ್ಯಾಲಯವಂ ಪ್ರವೇಶಿಸಿ, ಅರ್ಹತ್ಪರಮೇಶ್ವರನನ್ನು ಪೂಜಿಸಿ ಒಬ್ಬರು ಯೋಗೀಂದ್ರರ ದೆಶೆಯಿಂದ ಧರ್ಮವನ್ನು ಕೇಳಿದನು. ॥೮೩॥

ಶ್ಲೋಕ॥ ಧರ್ಮಶ್ರುತೇರ್ಬಭೂವಾಯಂ
ಧರ್ಮವಿದ್ಯೋಽತಿನಿರ್ಮಲಃ ।
ಅತ್ಯುತ್ಕಟೋ ಹಿ ರತ್ನಾಂಶುಃ
ತದ್ವಿಜ್ಞ ವೇಕಟಕರ್ಮಣಾ ॥ ೮೪ ॥

ಟೀ ॥ ಧರ್ಮವಿತ್-ಧರ್ಮವನ್ನು ತಿಳಿದಿರುವ, ಯೋಯಂ-ಯಾವ ಈ ಜೀವಂಧರಸ್ವಾಮಿಯು, ಧರ್ಮಶ್ರುತೇಃ-ಧರ್ಮಶ್ರವಣದದೆಸೆಯಿಂದ, ಅತಿನಿರ್ಮಲ(ಸನ್)-ಅತ್ಯಂತನಿರ್ದೋಷಸ್ವಭಾವನಾಗಿ, ಬಭೂವ-ಆದನು., ರತ್ನಾಂಶುಃ-ರತ್ನ-ರತ್ನದ, ಅಂಶುಃ-ಕಿರಣವು, ತದ್ವಿಜ್ಞವೇಕಟಕರ್ಮಣಾ-ತದ್ವಿಜ್ಞ-ಆ ರತ್ನಸಂಸ್ಕಾರವಂ ತಿಳಿದವನಾದ ಪುರುಷನ, ವೇಕಟಕರ್ಮಣಾ-ಸಾಣೆಗೆ ಕೊಡೋಣದಿಂದ, ಅತ್ಯುತ್ಕಟೋ ಹಿ-ಅತ್ಯಂತ ಪ್ರಬಲವಾಗುವುದಲ್ಲವೆ?.

ತಾತ್ಪರ್ಯ ॥ ಧರ್ಮವನ್ನು ತಿಳಿದವನಾದ ಈ ಜೀವಂಧರ ಸ್ವಾಮಿಯು ಧರ್ಮ ಶ್ರವಣದ ದೆಸೆಯಿಂದ ಅತ್ಯಂತ ನಿರ್ಮಲಾಂತಃಕರಣನಾದನು.

ಅದು ಹೇಗೆಂದರೆ- ರತ್ನ ಸಂಸ್ಕಾರವಂ ತಿಳಿದವನು ರತ್ನವಂ ಸಾಣೆಗೆಕೊ
ಟ್ಟು ಸಂಸ್ಕರಿಸುತಿರಲಿಕ್ಕಾಗಿ ಆ ರತ್ನದ ಕಾಂತಿಯು ಹೆಚ್ಚಾಗುವದಲ್ಲ
ವೆ? ಹಾಗೆ ಸ್ವಭಾವದಿಂದಲೇ ಧರ್ಮಾತ್ಮನಾದವನು ಧರ್ಮಶ್ರವಣವಂಮಾಡು
ತ್ತಿರಲಿಕ್ಕಾಗಿ ಧರ್ಮಬುದ್ಧಿಯ ಪ್ರಾಚುರ್ಯವಂ ಪಡೆಯುವನಲ್ಲವೆ?. ॥೮೪॥

ಶ್ಲೋಕ॥ ಪುನಶ್ಚಾರಣಯೋಃ ಪೂರ್ವಃ
ಪೂರ್ವಜನ್ಮ ಬುಭುತ್ಸಯಾ ।
ಭೂಪೇನ ಪರಿಪೃಷ್ಟೋಽಯ-
ಮಾಚಷ್ಟಾಸ್ಯ ಪುರಾಭವಮ್ ॥ ೮೫ ॥

ಟೀ ॥ ಪುನಃ-ಮರಳಿ, ಚಾರಣಯೋಃ- ಚಾರಣಮುನಿಗಳಲ್ಲಿ, ಪೂರ್ವಃ-ಮೊ
ದಲನೆಯವನಾದ ಮುನಿಯು, ಪೂರ್ವಜನ್ಮ ಬುಭುತ್ಸಯಾ-ಪೂರ್ವಜನ್ಮದ ಚರಿತ್ರ
ವಂ ತಿಳಿಯಲಪೇಕ್ಷೆಯಿಂದ, ಭೂಪೇನ-ಜೀವಂಧರಮಹಾರಾಜನಿಂದ, ಪರಿಪೃಷ್ಟಃ-
ಚೆನ್ನಾಗಿ ಪ್ರಶ್ನೆಮಾಡಲ್ಪಟ್ಟರು., ಕಿಂಚ-ಮತ್ತೂ, ಅಯಂ- ಈ ಚಾರಣಮುನಿ
ಯು, ಅಸ್ಯ-ಈ ಜೀವಂಧರಮಹಾರಾಜನ, ಪುರಾಭವಂ-ಪೂರ್ವಜನ್ಮ ವೃತ್ತಾಂತವ
ನ್ನು, ಆಚಷ್ಟ-ಹೇಳಿದರು.

ತಾತ್ಪರ್ಯ ॥ ತಿರಿಗಿ ಚಾರಣ ಮುನಿಗಳಲ್ಲಿ ಮೊದಲನೆಯವರನ್ನು
ಜೀವಂಧರಸ್ವಾಮಿಯು ತನ್ನ ಪೂರ್ವಜನ್ಮ ವೃತ್ತಾಂತವಂ ತಿಳಿಯಲೋ
ಸುಗ ಇಚ್ಛೆಯಿಂದ ಪ್ರಶ್ನೆ ಮಾಡಿದನು. ಆ ಚಾರಣಮುನಿಯೂ ಕೂಡ
ಜೀವಂಧರ ಮಹಾರಾಜನ ಜನ್ಮಾಂತರವೆಂದರೆ ಪೂರ್ವಜನ್ಮ ವೃತ್ತಾಂತ
ವಂ ಈ ವಕ್ಷ್ಯಮಾಣ ಪ್ರಕಾರವಾಗಿ ಹೇಳಿದರು. ॥೮೫॥

ಶ್ಲೋಕ॥ ಭೂಪೇನ್ದ್ರ ಧಾತಕೀಷಣ್ಡೇ
ಭೂಮ್ಯಾದಿ ತಿಲಕೇ ಪುರೇ ।
ಸೂನುಃ ಪವನವೇಗಸ್ಯ
ರಾಜ್ಞೋಽಭೂಸ್ತ್ವಂ ಯಶೋಧರಃ ॥ ೮೬ ॥

ಟೀ ॥ ಹೇ ಭೂಪೇಂದ್ರ-ಎಲೈ ರಾಜಶ್ರೇಷ್ಠನೇ !, ಧಾತಕೀಷಂಡೇ-ಧಾತ
ಕೀಷಂಡದಲ್ಲಿ, ಭೂಮ್ಯಾದಿತಿಲಕೇ-ಭೂಮಿ-ಭೂಮಿಯೆಂಬ ಪದವೇ, ಆದಿ- ಮೊದಲ
ನೇ ಪದವಾಗಿವುಳ್ಳ, ತಿಲಕೇ-ತಿಲಕವೆಂಬ ಹೆಸರುಳ್ಳ, (ಅಂದರೆ-ಭೂಮಿತಿಲಕವೆಂ
ದು ಪ್ರಸಿದ್ಧವಾದ), ಪುರೇ- ಪಟ್ಟಣದಲ್ಲಿ, ಪವನವೇಗಸ್ಯ-ಪವನವೇಗನೆಂಬ, ರಾ

ಜ್ಞಾಃ-ದೊರೆಗೆ, ತ್ವಂ-ನೀನು, ಯಶೋಧರಃ-ಯಶೋಧರನೆಂಬ, ಸೂನುಃ-ಮಗನಾಗಿ, ಅಭೂಃ-ಆದವನಾದೆ.

ತಾತ್ಪರ್ಯ ॥ ಪ್ರಥಮ ಚಾರಣ ಮುನೀಂದ್ರರು ಜೀವಂಧರ ಮಹಾರಾಜನ ಪೂರ್ವಜನ್ಮ ವೃತ್ತಾಂತವಂ ಸಂಕ್ಷೇಪದಿಂದ ಹೇಳುತ್ತಾರೆ.— ಎಲೈ ರಾಜಶ್ರೇಷ್ಠನೇ! ಧಾತಕೀಷಂಡಕ್ಷೇತ್ರದಲ್ಲಿ ಭೂಮಿತಿಲಕವೆಂಬ ಪಟ್ಟಣದಲ್ಲಿ ಪವನವೇಗನೆಂಬ ರಾಜನಿಗೆ ನೀನು ಪೂರ್ವಭವದಲ್ಲಿ ಯಶೋಧರನೆಂಬ ಮಗನಾಗಿ ಜನಿಸಿದವನಾದೆ. ॥೮೬॥

ಶ್ಲೋಕ॥ ರಾಜಹಂಸ ಕದಾಚಿತ್ತ್ವಂ
ರಾಜಹಂಸಸ್ಯ ಶಾಬಕಮ್ |
ನೀಡಾತ್ಕ್ರೀಡಾರ್ಥಮಾನೀಯ
ನಿರವದ್ಯಮವೀವೃಧಃ ॥ ೮೭ ॥

ಟೀ ॥ ಹೇ ರಾಜಹಂಸ-ಎಲೈ ರಾಜಶ್ರೇಷ್ಠನೇ!, ಕದಾಚಿತ್-ಒಂದಾನೊಂದು ಕಾಲದಲ್ಲಿ, ತ್ವಂ-ನೀನು, ರಾಜಹಂಸಸ್ಯ-ರಾಜಹಂಸದ, ಶಾಬಕಂ-ಮರಿಯನ್ನು, ನೀಡಾತ್-ಗೂಡಿನದೆಸೆಯಿಂದ, ಕ್ರೀಡಾರ್ಥಂ-ಕ್ರೀಡೆಗೋಸುಗ (ಲೀಲಾರ್ಥವಾಗಿ), ಆನೀಯ-ತರೆಸಿ, ನಿರವದ್ಯಂ(ಯಥಾತಥಾ)-ನಿರ್ದೋಷಕವಾಗಿರೋಣ ಹೇಗೋಹಾಗೆ, ಅವೀವೃಧಃ-ವೃದ್ಧಿ ಹೊಂದಿಸಿದವನಾದೆ.

ತಾತ್ಪರ್ಯ ॥ ಎಲೈ ರಾಜಶ್ರೇಷ್ಠನೆ! ಒಂದಾನೊಂದು ಕಾಲದಲ್ಲಿ ನೀನು ಒಂದು ರಾಜಹಂಸದ ಮರಿಯನ್ನು ಅದರ ಗೂಡಿನ ದೆಸೆಯಿಂದ ಲೀಲಾರ್ಥವಾಗಿ ತರೆಸಿ ನಿರ್ದೋಷವಾಗಿರೋಣ ಹೇಗೋಹಾಗೆ ವೃದ್ಧಿ ಹೊಂದಿಸಿದಿ. (ಸಲಹಿದೆ ಎಂದಭಿಪ್ರಾಯವು) ॥೮೭॥

ಶ್ಲೋಕ॥ ತತ್ಕುತೋಽಪಿ ಸಮಾಕರ್ಣ್ಯ
ಧರ್ಮವಿದ್ಯಸ್ಸ ತೇ ಪಿತಾ ।
ತದಾ ಧರ್ಮಮುಪಾದಿಕ್ಷ-
ದ್ಯತೋ ಭೂರತಿಧಾರ್ಮಿಕಃ ॥ ೮೮ ॥

ಟೀ ॥ ತತ್-ಆ ವೃತ್ತಾಂತವನ್ನು, ಕುತೋಽಪಿ-ಒಬ್ಬ ಪುರುಷನ ದೆಸೆಯಿಂದ, ಸಮಾಕರ್ಣ್ಯ-ಕೇಳಿ, ಧರ್ಮವಿತ್-ಧರ್ಮಜ್ಞನಾದ, ಯಃ-ಯಾವ, ತೇ-ನಿನ್ನ, ಪಿತಾ-ತಂದೆಯಾದ ಪವನವೇಗ ಮಹಾರಾಜನುಂಟೋ, ಸಃ-ಅವನು, ತದಾ-ಆ ಕಾಲದಲ್ಲಿ, ಧ

ರ್ಮಂ-ಧರ್ಮವನ್ನು, ಉಪಾದಿಕ್ಷತ್-ಉಪದೇಶಿಸಿದನು., ಯತಃ-ಯಾವ ಉಪದೇಶದ
ದೆಸೆಯಿಂದ, ಅತಿಧಾರ್ಮಿಕ(ಸ್ಸನ್)-ಅತ್ಯಂತ ಧರ್ಮಿಷ್ಠನಾಗಿ, ಅಭೂಃ-ಆದೆಯೋ ;

ತಾತ್ಪರ್ಯ ॥ ನಿನ್ನ ತಂದೆಯು ಯಾವನೋ ಒಬ್ಬನ ದೆಸೆಯಿಂದ
ನೀನು ಮಾಡಿರುವ ಆ ರಾಜಹಂಸ ಪಕ್ಷಿಯ ಮರಿಯ ನಿರ್ಬಂಧವ
ಕೇಳಿ ಆತನು ಧರ್ಮಿಷ್ಠನಾದುದರಿಂದ ಆ ಕಾಲದಲ್ಲಿ ಧರ್ಮವನ್ನುಪದೇಶಿಸಿದ
ನು. ಯಾವ ಧರ್ಮೋಪದೇಶದಿಂದ ನೀನು ಅತಿ ಧರ್ಮಿಷ್ಠನಾದೆಯೋ ॥

ಶ್ಲೋಕ॥ ನಿವಾರಿತೋಽಪಿ ಪಿತ್ರಾ, ತ್ವ-
ಮತಿನಿರ್ವೇಗತಸ್ತತಃ ।
ಜಾತರೂಪಧರೋ ಜಾತ-
ಸ್ತ್ರೀಭಿರಷ್ಟಾಭಿರನ್ವಿತಃ ॥ ೮೯ ॥

ಟೀ ॥ ತ್ವಂ-ನೀನು, ಪಿತ್ರಾ-ತಂದೆಯಿಂದ, ನಿವಾರಿತೋಽಪಿ-ತಡೆಯಲ್ಪಟ್ಟವ
ನಾದಾಗ್ಯೂ, ಅತಿನಿರ್ವೇಗತಃ-ಅತ್ಯಂತ ವೈರಾಗ್ಯದದೆಸೆಯಿಂದ, ತತಃ ಅನಂತರದಲ್ಲಿ,
ಅಷ್ಟಾಭಿಃ-ಎಂಟುಮಂದಿಗಳಾದ, ಸ್ತ್ರೀಭಿಃ-ಪತ್ನಿಯರೊಡನೆ, ಅನ್ವಿತ(ಸ್ಸನ್)-ಕೂ
ಡಿದವನಾಗಿ, ಜಾತರೂಪಧರ(ಸ್ಸನ್)-ಜಾತರೂಪ- ಜಿನ ದೀಕ್ಷೆಯನ್ನು, ಧರ(ಸ್ಸನ್)-
ಧರಿಸಿದವನಾಗಿ, ಜಾತಃ-ಆದೆ.

ತಾತ್ಪರ್ಯ ॥ ನೀನು ತಂದೆಯಿಂದ ತಡೆಯಲ್ಪಟ್ಟವನಾದಾಗ್ಯೂ
ಕೂಡ ಅತ್ಯಂತ ವೈರಾಗ್ಯದದೆಸೆಯಿಂದ ಅನಂತರದಲ್ಲಿ ಪೂರ್ವಭವದೊಳು
ಯಶೋಧರನಾಗಿದ್ದ ನಿನ್ನ ಎಂಟು ಸ್ತ್ರೀಯರೊಡನೆ ಕೂಡ ಜಾತರೂ
ಪಧರನಾದ (ಅಂದರೆ-ಜಿನದೀಕ್ಷಾಂಗೀಕಾರ ಪೂರ್ವಕವಾಗಿ) ದಿಗಂಬರಮು
ನಿಯಾದೆ ಎಂದಭಿಪ್ರಾಯವು. ॥೮೯॥

ಶ್ಲೋಕ॥ ಘೋರೇಣ ತಪಸಾ ಲಬ್ಧ್ವಾ
ದೇವತ್ವಂ ಚ ತ್ರಿವಿಷ್ಟಪಾತ್ ।
ಅಷ್ಟಾಭಿಸ್ತ್ರೀಭಿರೇತಾಭಿ-
ರೆತಾಸ್ಸೋಽಭೂರ್ವ್ಯಪ್ರಜ್ಞವಃ ॥ ೯೦ ॥

ಟೀ ॥ ತ್ವಂ-ನೀನು, ಘೋರೇಣ-ಮಹತ್ತಾದ, ತಪಸಾ- ತಪಸ್ಸಿನಿಂದ, ದೇ
ವತ್ವಂ-ದೇವಭಾವವನ್ನು ಕೂಡ, ಲಬ್ಧ್ವಾ-ಪಡೆದು, ತ್ರಿವಿಷ್ಟಪಾತ್-ಸ್ವರ್ಗದಿಂ

ಯಿಂದ, ಅಷ್ಟಾಭಿಃ-ಎಂಟುಮಂದಿಗಳಾದ, ಏತಾಭಿಃ-ಈ ಪತ್ನಿಯರಾದ, ಸ್ತ್ರೀಭಿಃ-ಸ್ತ್ರೀಯರೊಡನೆ, ಅತ್ರ-ಈ ಭೂಲೋಕದಲ್ಲಿ, (ಅತ್ರ-ಈ ರಾಜಪುರೀ ಪಟ್ಟಣದಲ್ಲಿ), ಭವ್ಯಪುಂಗವ(ಸ್ಸ‌ನ್)-ಭವ್ಯಾತ್ಮರಲ್ಲಿ ಶ್ರೇಷ್ಠನಾಗಿ, ಅಭೂಃ- ಆದವನಾದೆ.

ತಾತ್ಪರ್ಯ ॥ ಎಲೈ ಜೀವಂಧರನೆ! ಆ ಯಶೋಧರಭವದಲ್ಲಿ ಘೋರವಾದ ತಪವಂಮಾಡಿ ದೇವತ್ವವಂ ಪಡೆದು ದೇವಭೋಗಗಳನ್ನನುಭವಿಸಿ ದೇವಾಯುಃಷ್ಯವು ತೀರಿದನಂತರ ಆ ಕಲ್ಪದಪೆಸೆಯಿಂದ ಆ ಪೂರ್ವಭವದ ಪತ್ನಿಯರಾದ ಎಂಟು ಸ್ತ್ರೀಯರೊಡಗೂಡಿ ಈ ರಾಜಪುರೀ ಪಟ್ಟಣದಲ್ಲಿ ಭವ್ಯಶ್ರೇಷ್ಠನಾಗಿ ಹುಟ್ಟಿದಿ ; ಎಂಬದಾಗಿ ಚಾರಣಮುನಿಯು ಜೀವಂಧರ ಸ್ವಾಮಿಗೆ ಪೂರ್ವಭವವೃತ್ತಾಂತವಂ ವರ್ಣಿಸಿದರು. ॥೯೦॥

ಶ್ಲೋಕ॥ ಸ್ವಪದಾಜ್ಜಾಲಪಾದಸ್ಯ
ಪಿತೃಭ್ಯಾಂ ಚ ಪುರಾ ಭವೇ ।
ವಿಯೋಜನಾದ್ವಿಯೋಗಸ್ತೇ
ಬಂಧೋಽಭೂದಿವ ಬನ್ಧನಾತ್ ॥ ೯೧ ॥

ಟೀ ॥ ಪುರಾಭವೇ-ಪೂರ್ವಜನ್ಮದಲ್ಲಿ, ಜಾಲಪಾದಸ್ಯ- ಹಂಸಪಕ್ಷಿಯ ಶಿಶುವಿಗೆ, ಸ್ವಪದಾತ್-ಸ್ವ-ತನ್ನ, ಪದಾತ್-ಸ್ಥಾನದಪೆಸೆಯಿಂದಲೂ, ಪಿತೃಭ್ಯಾಂಚ- ತಾಯಿತಂದೆಗಳ ದೆಸೆಯಿಂದಲೂ, ವಿಯೋಜನಾತ್-ಅಗಲಿಸೋಣದದೆಸೆಯಿಂದ, ( ತಪ್ಪಿಸೋಣದ ದೆಸೆಯಿಂದ), ತೇ-ನಿನಗೆ, ಪಿತೃಭ್ಯಾಂಚ- ತಾಯಿತಂದೆಗಳಿಂದಲೂ, ವಿಯೋಗಃ- ಜನ್ಮಪ್ರಭೃತಿ ಅಗಲಿಕೆಯೂ, ಅಭೂತ್- ಉಂಟಾಯಿತು., ಬಂಧನಾತ್-ಕಾರಾಗೃಹದ ಮೂಲಕದದೆಸೆಯಿಂದ, ಬಂಧಃ-ಕಟ್ಟೋಣವೂ ಕೂಡ, ಅಭೂದಿವ-ಉಂಟಾದುದೋ ಎಂಬಂತೆ ;

ತಾ ॥ ಎಲೈ ಜೀವಂಧರಸ್ವಾಮಿಯೇ! ನೀನು ಪೂರ್ವಜನ್ಮದಲ್ಲಿ ಆ ಹಂಸಪಕ್ಷಿಯ ಮರಿಗೆ ಅದರ ತಾಯಿತಂದೆಗಳಂ ಬಿಡಿಸಿ ಅದರ ಸ್ಥಾನವಂ ತಪ್ಪಿಸಿ ಪಂಜರದಲ್ಲಿ ಹದಿನಾರು ದಿವಸಗಳವರೆಗೂ ಬಂಧಿಸಿದ್ದರಿಂದ ನಿನಗೂ ಜನನ ಕಾಲದಲ್ಲಿ ಹದಿನಾರು ವರ್ಷದ ವರೆಗೂ ಮಾತಾಪಿತೃವಿಯೋಗವೂ, ಬಂಧನವೂ ಪ್ರಾಪ್ತವಾದಂತೆ ಆಯಿತು. ॥೯೧॥

ಶ್ಲೋಕ॥ ಇತಿ ಯೋಗೀನ್ದ್ರವಾಕ್ಯೇನ
ಭೋಗೀವ ವಿವಿದಾತ್ಮಕಃ।

ಭೀತೋ ರಾಜ್ಯಾದಯಂ ರಾಜಾ
ಪ್ರಣಮ್ಯ ಸ್ವಪುರೀಮಯಾತ್ ‖ ೯೨ ‖

ಟೀ ‖ ಇತಿ-ಈಪ್ರಕಾರ, ಯೋಗೀಂದ್ರವಾಕ್ಯೇನ-ಯೋಗೀಂದ್ರ-ಯೋಗಿಶ್ರೇಷ್ಠರ, ವಾಕ್ಯೇನ-ವಚನದಿಂದ, ಪವಿಪಾತತಃ-ಪವಿ-ಸಿಡಿಲಿನ, ಪಾತತಃ ಬೀಳೋಣದರದೆಸೆಯಿಂದ, ಭೋಗೀವ-ಸರ್ಪದೋಪಾದಿಯಲ್ಲಿ, ಅಯಂರಾಜಾ-ಈ ಜೀವಂಧರಮಹಾರಾಜನು, ರಾಜ್ಯಾತ್-ರಾಜ್ಯದದೆಸೆಯಿಂದ, ಭೀತ(ಸ್ಸನ್)-ಭಯಪಟ್ಟವನಾಗಿ, ಪ್ರಣಮ್ಯ-ನಮಸ್ಕರಿಸಿ, ಸ್ವಪುರೀಂ-ಸ್ವ-ತನ್ನ, ಪುರೀಂ-ಪಟ್ಟಣವನ್ನು ಕುರಿತು, ಅಯಾತ್-ಹೊರಟುಹೋದನು.

ತಾತ್ಪರ್ಯ! ಈಪ್ರಕಾರ ಯೋಗೀಂದ್ರರಾದ ಆ ಚಾರಣಮುನಿಗಳ ಮಾತಿನಿಂದ ಸಿಡಿಲು ಬೀಳೋಣದರ ದೆಸೆಯಿಂದ ಸರ್ಪವು ಹೆದರುವ ರೀತಿಯಲ್ಲಿ ರಾಜ್ಯದ ದೆಸೆಯಿಂದ ಹೆದರಿದವನಾಗಿ ಈ ಜೀವಂಧರ ಮಹಾರಾಜನು ಮುನೀಂದ್ರರನ್ನು ನಮಸ್ಕರಿಸಿ ತನ್ನ ಪಟ್ಟಣವಾದ ರಾಜಪುರಿಯನ್ನು ಹೊಂದಿದನು. ‖೯೨‖

ಶ್ಲೋಕ‖ ಸದ್ಧರ್ಮಾಮೃತಪಾನೇನ
ಸಾನುಜಾಸ್ತಸ್ಯ ವಲ್ಲಭಾಃ ।
ವಿಷಪ್ರಖ್ಯಮಮನ್ಯನ್ತ
ತತ್ಸೌಖ್ಯಂ ವಿಷಯೋದ್ಭವಮ್ ‖ ೯೩ ‖

ಟೀ ‖ ಸದ್ಧರ್ಮಾಮೃತಪಾನೇನ-ಸತ್-ಶ್ರೇಷ್ಠವಾದ, ಧರ್ಮ-ಧರ್ಮವೆಂಬ, ಅ[illegible]ಮೃತ-ಅಮೃತದ, ಪಾನೇನ-ಪಾನದಿಂದ, ಸಾನುಜಾಃ-ತಮ್ಮನೊಡನೆ ಕೂಡಿದ[illegible]ವ, ತಸ್ಯ-ಆ ಜೀವಂಧರಸ್ವಾಮಿಯ, ವಲ್ಲಭಾಃ-ಪ್ರಿಯಜನಗಳು, (ವಲ್ಲಭಾಃ-ಪತ್ನಿಯರು,) ವಿಷಯೋದ್ಭವಂ-ಭೋಗೋಪಭೋಗ ಪದಾರ್ಥಗಳಿಂದ, ಉದ್ಭವಂ-ಉಂಟಾದ, ತತ್ಸೌಖ್ಯಂ-ಆ ಪ್ರಸಿದ್ಧವಾದ ಸುಖವನ್ನು, ವಿಷಪ್ರಖ್ಯಂ(ಸತ್)-[illegible]ಷಕ್ಕೆ ಸಮಾನವನ್ನಾಗಿ, ಅಮನ್ಯಂತ-ತಿಳಿದರು.

ತಾತ್ಪರ್ಯ ‖ ಆ ಜೀವಂಧರ ಸ್ವಾಮಿಯ ತಮ್ಮನೂ, ಮಿತ್ರರೂ ಇವರೇ ಮೊದಲಾಗಿನ್ನುಳ್ಳ ಇಷ್ಟಜನಗಳು ಆ ಚಾರಣ ಮುನೀಂದ್ರರಿಂ[illegible] ಉಪದೇಶಿಸಲ್ಪಟ್ಟ ಶ್ರೇಷ್ಠವಾದ ಧರ್ಮವೆಂಬ ಅಮೃತವಂ ಪಾನಮಾ[illegible] ಈ ಅನುಭವಸಿದ್ಧವಾದ ವಿಷಯಸುಖವು ವಿಷಸಮಾನವೆಂದು ತಿಳಿದರು

ಅಮೃತಪಾನದಿಂದ ವಿಷಭೋಜನದಿಂದುಂಟಾದ ಮೂರ್ಛಾದಿ ದುಃಖವು ನಿವೃತ್ತಿಯಾಗುವಂತೆ ಶ್ರೇಷ್ಠವಾದ ಧರ್ಮಶ್ರವಣದಿಂದ ವಿಷಯಸುಖವು ಆಸನ್ನಭವ್ಯಾತ್ಮನಾದ ಚರಮಾಂಗಧರನಿಗೆ ವಿಷದಂತೆ ತೋರುವುದೆಂದು ಅಭಿಪ್ರಾಯವು ॥೯೩॥

ಶ್ಲೋ॥ ತತ್ರ ಗನ್ಧರ್ವದತ್ತಾಯಾಃ
ಪುತ್ರಂ ಸತ್ಯನ್ಧರಾಹ್ವಯಃ ।
ಅಭಿಷಿಚ್ಯ ತತಸ್ತಾಭಿಃ
ಪ್ರಾಸ್ಥಾದಾಸ್ಥಾನಿಕಾಂ ಕೃತೀ ॥೯೪॥

ಟೀ। ತತ್ರ—ಆ ಕಾಲದಲ್ಲಿ, ಗಂಧರ್ವದತ್ತಾಯಾಃ-ಗಂಧರ್ವದತ್ತಾದೇವಿಗೆ, ಪುತ್ರಂ-ಮಗನಾದ, ಸತ್ಯಂಧರಾಹ್ವಯಃ--ಸತ್ಯಂಧರನೆಂದು ನಾಮಧೇಯವುಳ್ಳವನನ್ನು, ಅಭಿಷಿಚ್ಯ--ರಾಜ್ಯದಲ್ಲಿ ಅಭಿಷೇಕಮಾಡಿ, ತತಃ--ಅನಂತರದಲ್ಲಿ, ಕೃತೀ--ಪುಣ್ಯಶಾಲಿಯಾದ ಜೀವಂಧರಸ್ವಾಮಿಯು, ತಾಭಿಃ-ಆಸ್ತ್ರೀಯರೊಡನೆ, ಆಸ್ಥಾನಿಕಾಂ--ವರ್ಧಮಾನಸ್ವಾಮಿಯ ಸಮವಸರಣವಂಕುರಿತು, ಪ್ರಾಸ್ಥಾತ್-ಪ್ರಯಾಣಮಾಡಿದನು.

ತಾತ್ಪರ್ಯ॥ ಆ ಕಾಲದಲ್ಲಿ ಜೀವಂಧರಮಹಾರಾಜನು ತನ್ನ ಮುಖ್ಯಪಟ್ಟಮಹಿಷಿಯಾದ, ಗಂಧರ್ವದತ್ತೆಗೆ ಪುತ್ರನಾದ ಸತ್ಯಂಧರನೆಂಬುವನನ್ನು ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ಅನಂತರದೊಳು ಆ ಅಷ್ಟಪಟ್ಟ ಮಹಿಷಿಯರೊಡಗೂಡಿ ಆ ಪುಣ್ಯಶಾಲಿಯಾದ ಜೀವಂಧರ ಸ್ವಾಮಿಯು ಶ್ರೀವರ್ಧಮಾನ ಸ್ವಾಮಿಯ ಸಮವಸರಣವಂಕುರಿತು ಪ್ರಯಾಣಮಾಡಿದನು ॥೯೪॥

ಶ್ಲೋ॥ ಶ್ರೀಸಭಾಯಾಂ ಸಮಭ್ಯೇತ್ಯ
ಶ್ರೀವೀರಂ ಜಿನನಾಯಕಮ್ ।
ಪ್ರಜಯಾಮಾಸ ಪೂಜ್ಯೋಽಯ-
ಮಸ್ತಾವೀಚ್ಚ ಪುನಃಪುನಃ ॥೯೫॥

ಟೀ। ಪೂಜ್ಯಃ--ಪೂಜಿಸುವುದಕ್ಕೋಸುಗಯೋಗ್ಯನಾದ, ಅಯಂ--ಈ ಜೀವಂಧರಸ್ವಾಮಿಯು, ಶ್ರೀಸಭಾಯಾಂ--ಶ್ರೇಷ್ಠವಾದ ಸಮವಸರಣದಲ್ಲಿ, ಸಮಭ್ಯೇತ್ಯ--ಬಂದು,

ಶ್ರೀವೀರಂ--ಶ್ರೀ-ಉಭಯ ಲಕ್ಷ್ಮೀಪತಿಯಾದ, ವೀರಂ--ವರ್ಧಮಾನಸ್ವಾಮಿಯೆಂಬ ಜಿನನಾಯಕಂ-ಅಷ್ಟಕರ್ಮಗಳಂ ಜಯಿಸಿದ ಸ್ವಾಮಿಯನ್ನು, ಪ್ರಾಂಜಯಾಮಾಸ-ಪೂಜಿಸಿದನು, ಪುನಃ ಪುನಃ-ಬಾರಿಬಾರಿಗೂ, ಅಸ್ತಾವೀಚ್ಚ-ಸ್ತೋತ್ರವನ್ನೂ ಮಾಡಿದನು.

ತಾತ್ಪರ್ಯ॥ ಪೂಜ್ಯನಾದ ಜೀವಂಧರಸ್ವಾಮಿಯು ವರ್ಧಮಾನಸ್ವಾಮಿಯ ಸಮವಸರಣವಂ ಪ್ರವೇಶಿಸಿ ಸಕಲ ಕರ್ಮಕ್ಷಯವಂ ಹೊಂದಿದುದರಿಂದ ಜಿನನಾಥರೆನಿಸಿದ ಉಭಯ ಲಕ್ಷ್ಮೀಪತಿಯಾದ ಶ್ರೀವೀರವರ್ಧಮಾನಸ್ವಾಮಿಯಂ ಪೂಜಿಸಿ ಬಾರಿಬಾರಿಗೂ ಸ್ತೋತ್ರವಂಮಾಡಿದನು॥ (ಆ ಸ್ತೋತ್ರಕ್ರಮವೆಂತೆಂದರೆ,—) ॥೯೫॥

ಶ್ಲೋ॥ ಭಗವನ್ ಭವರೋಗೇಣ
ಭೀತೋಽಹಂ ಪೀಡಿತಸ್ಸದಾ।
ತ್ವಯ್ಯಕಾರಣವೈದ್ಯೇಽಪಿ
ಸಹ್ಯಾ ಕಿಂ ತೇ ಪ್ರವೇದನಾ ॥೯೬॥

ಟೀ॥ ಹೇಭಗವನ್-ಎಲೈ ಮಹಾ ಮಹಿಮೆಯುಳ್ಳ ವರ್ಧಮಾನಸ್ವಾಮಿಯೇ, ಭವರೋಗೇಣ-ಭವ-ಸಂಸಾರವೆಂಬ, ರೋಗೇಣ-ರೋಗದಿಂದ, ಸದಾ--ಸರ್ವಕಾಲದಲ್ಲಿಯೂ, ಭೀತಃ-ಭಯಪಟ್ಟಿರುವ, ಅಹಂ-ನಾನು, ಅಕಾರಣವೈದ್ಯೇಪಿ-ಅಕಾರಣ--ನಿಷ್ಕಾರಣವಾಗಿ, ವೈದ್ಯೇಪಿ-ವೈದ್ಯನಾಗಿಯೂ ಇರುವ, ತ್ವಯಿಸತ್ಯಪಿ-ನೀನು ಇದ್ದಾಗ್ಯೂ, ಪೀಡಿತಃ--ಬಾಧಿಸಲ್ಪಟ್ಟೆನು, ಪ್ರವೇದನಾ-ಪ್ರಬಲವಾದ ಈ ನನ್ನ ವೇದನೆಯು, ತೇ-ನಿನಗೆ, ಸಹ್ಯಾ ಕಿಂ-ಸಹಿಸಲೋಸುಗ ಯೋಗ್ಯವೇ ಏನು,

ತಾತ್ಪರ್ಯ॥ ಎಲೈ ಪ್ರಾಣದಯೆಯೇ ಮೊದಲಾದ ಗುಣಗಳಿಂದ ಮಹಾ ಮಹಿಮೆಯುಳ್ಳ ಶ್ರೀವರ್ಧಮಾನ ಸ್ವಾಮಿಯೇ ! ಸರ್ವಕಾಲದಲ್ಲಿಯೂ ಚತುರ್ಗತಿ ಭ್ರಮಣರೂಪವಾದ ಸಂಸಾರದಿಂದ ಭಯಪಟ್ಟಿರುವ ನಾನು ನಿಷ್ಕಾರಣವೈದ್ಯನಾದ ನೀನು ಇದ್ದಾಗ್ಯೂ ಈ ಭವರೋಗದಿಂದ ಸರ್ವದಾ ಪೀಡಿಸಲ್ಪಟ್ಟೆನು. [illegible] ದಯಾಳುವಾದ ನಿನಗೆ ಈ ನನ್ನ ಮಹಾವೇದನೆಯು ಹೇಗೆ ಸಹಿಸುವದೋ ತಿಳಿಯದು. ಅಂದರೆ ನನ್ನ ಸಂಸಾರದುಃಖವಂ ಪರಿಹರಿಸದಿದ್ದಲ್ಲಿ ನೀನು ಹೇಗೆ ಭಗವಂತನೆನಿಸುವೆ? ಮತ್ತು ವೀತರಾಗನಾದ ನಿನಗೆ ನಮ್ಮಂಥಾವ

ರಿಂದ ಯಾವ ಪ್ರಯೋಜನಾಪೇಕ್ಷೆಯೂ ಇಲ್ಲದೆ ದುಃಖನಿವೃತ್ತಿಯಂ ಮಾಡುವುದೇ ಸ್ವಭಾವವಲ್ಲವೆ? (ಮತ್ತು ನಿನ್ನನ್ನು ಆಶ್ರಯಿಸಿ ದುಃಖಿಯಾಗಿರುವುದುಂಟೊ ? ಎಂದಭಿಪ್ರಾಯವು.) ||೯೬||

ಶ್ಲೋ || ತ್ವಂ ಸಾರ್ವಃ ಸರ್ವವಿದ್ದೇವ
ಸರ್ವಕರ್ಮಣಿ ಕರ್ಮಠಃ |
ಭವ್ಯಶ್ಚಾಹಂ ಕುತೋವಾ ಮೇ
ಭವರೋಗೋ ನಶಾಮ್ಯತಿ ||೯೭||

ಟೀ|| ಹೇದೇವ--ಎಲೈ ಸ್ವಾಮಿಯೇ, ತ್ವಂ--ನೀನು, ಸಾರ್ವಃ--ಸರ್ವಾತ್ಮಗಳಿಗೂ ಶ್ರೇಯಸ್ಕರನು, (ಸರ್ವಾತ್ಮಗಳಿಗೂ ಹಿತಕರನೆಂದಭಿಪ್ರಾಯವು,) ಸರ್ವವಿತ್--ಸರ್ವ-ಸಮಸ್ತವನ್ನೂ, ವಿತ್-ತಿಳಿದಂಥಾವನು, ಸರ್ವಕರ್ಮಣಿ--ಸಮಸ್ತಕಾರ್ಯದಲ್ಲಿಯೂ, ಕರ್ಮಠಃ-ಸಮರ್ಥನು., ಅಹಂ-ನಾನು, ಭವ್ಯಶ್ಚ--ಭವ್ಯಾತ್ಮನಾಗಿಯೂ ಇದ್ದೇನೆ, ಕುತೋವಾ--ಯಾವಕಾರಣದ ದೆಸೆಯಿಂದಲೋ, ಮೇ-ನನ್ನ, ಭವರೋಗಃ-ಸಂಸಾರವೆಂಬ ರೋಗವು, ನಶಾಮ್ಯತಿ--ಶಮನವನ್ನು ಹೊಂದುವುದಿಲ್ಲವು.

ತಾತ್ಪರ್ಯ || ಎಲೈ ಸ್ವಾಮಿಯೆ! ನೀನು ಸರ್ವಭವ್ಯಾತ್ಮಗಳಿಗೂ ಹಿತಕರನು, ಸಮಸ್ತವನ್ನೂ ತಿಳಿದವನು, ಭವರೋಗನಿವಾರಣದಲ್ಲಿ ಶಕ್ತನಾಗಿಯೂ ಇದ್ದೀಯೆ. ಈಪ್ರಕಾರ ಸಮಸ್ತವೂ ಅನುಕೂಲವಾಗಿಸಂಭವಿಸಿದ್ದರೂಕೂಡ ಏಕೆ ನಿನ್ನ ಸಂಸಾರವೆಂಬ ರೋಗವು ನಿವರ್ತಿಸಲಿಲ್ಲವೋ? ಲೋಕದಲ್ಲಿ ಸರ್ವೋಪಕರಣಗಳೂ ಸಿದ್ಧವಾಗಿದ್ದಲ್ಲಿ ಅವಶ್ಯವಾಗಿ ಕಾರ್ಯೋತ್ಪತ್ತಿಯಾಗುವುದಷ್ಟೆ? ಎಂದು ಮಹಾ ಜ್ಞಾನಿಯಾದ ಜೀವಂಧರ ಮಹಾರಾಜನು ಜಿನಸೇಕ್ಷೆಯಲ್ಲಿ ಅತ್ಯಂತ ತ್ವರೆಪಡುತ್ತಿರುವ ಚಿತ್ತವುಳ್ಳವನಾಗಿ ಮೋಕ್ಷಾರ್ಥಿಯಾಗಿ ಸಂಸಾರ ಘೋರತ್ವವಂ ಸ್ಮರಿಸಿ, ಅತ್ಯಂತಾನುತಾಪವಂ ಪಡೆದು ಸ್ವಾಮಿಯಂ ಪ್ರಾರ್ಥಿಸುತ್ತಾನೆ. ||೯೭||

ಶ್ಲೋ || ನಿರ್ಮೋಹ ಮೋಹದಾವೇನ
ದೇಹಜೀರ್ಣೋರ್ಣಾ ಕಾನನೇ |

ದಹ್ಯಮಾನ ತಯಾಶಶ್ವ-
ನ್ಮುಹ್ಯಂತಂ ರಕ್ಷರಕ್ಷಮಾಮ್॥೯೪॥

ಟೀ॥ ಹೇನಿರ್ಮೋಹ--ಎಲೈ ಮೋಹನೀಯ ಕರ್ಮರಹಿತನಾದ ಸ್ವಾಮಿಯೆ, ಮೋಹದಾ ಹೇನ--ಮೋಹನೀಯವೆಂಬ ಕಾಡ್ಗಿಚ್ಚಿನಿಂದ, ದೇಹಜೀರ್ಣೋರುಕಾನನೇ--ದೇಹ--ದೇಹ ವೆಂಬ, ಜೀರ್ಣ--ಹಳೇದಾದ, ಉರು--ದೊಡ್ಡದಾದ, ಕಾನನೇ--ಅರಣ್ಯದಲ್ಲಿ, ದಹ್ಯಮಾನ ತಯಾ--ದಹಿಸಲ್ಪಡೋಣದರಿಂದ, ಶಶ್ವತ್-ಬಾರಿಬಾರಿಗೂ, ಮುಹ್ಯಂತಂ-ಮೋಹಪಡು ತಲಿರುವ, ಮಾಂ-ನನ್ನನ್ನು, ರಕ್ಷರಕ್ಷ-ರಕ್ಷಿಸು ರಕ್ಷಿಸು,

ತಾತ್ಪರ್ಯ ॥ ಎಲೈ ಮೋಹನೀಯ ಕರ್ಮ ರಹಿತನಾದ ಸ್ವಾಮಿಯೇ! ಮೋಹನೀಯವೆಂಬುವ (ಅಜ್ಞಾನವೆಂಬ) ಕಾಡುಗಿಚ್ಚಿನಿಂದ ದೇಹವೆಂಬ ಹಳೇದಾದ ದೊಡ್ಡ ಅರಣ್ಯದಲ್ಲಿ, ದಹಿಸಲ್ಪಡುತ್ತಿರುವವನಾದ ಆದುದ ರಿಂದಲೇ ಬಾರಿಬಾರಿಗೂ ಮೋಹಪಡುತಲಿರುವ ನನ್ನನ್ನು ರಕ್ಷಿಸುರ ಕ್ಷಿಸು. ಎಂಬದಾಗಿ ಜೀವಂಧರಸ್ವಾಮಿಯು ಸಮವಸರಣ ವಿರಾಜಮಾ ನರಾದ ವರ್ಧಮಾನಸ್ವಾಮಿಯನ್ನು ಪ್ರಾರ್ಥಿಸುತ್ತಾರೆ॥೯೪॥

ಶ್ಲೋ॥ ಸಂಸಾರವಿಷವೃಕ್ಷಸ್ಯ
ಸರ್ವಾಪತ್ಫಲದಾಯಿನಃ।
ಅಙ್ಕುರಂ ರಾಗಮುನ್ಮೂಲಂ
ವೀತರಾಗ ವಿಧೇಹಿ ಮೇ॥೯೯॥

ಟೀ॥ ಹೇ ವೀತರಾಗ- ಎಲೈ ರಾಗರಹಿತನಾದ ಸ್ವಾಮಿಯೇ, ಸರ್ವಾಪತ್ಫಲದಾ ಯಿನಃ-ಸರ್ವ-ಸಮಸ್ತವಾದ, ಆಪತ್-ಆಪತ್ತುಗಳೆಂಬ, ಫಲ-ಹಣ್ಣುಗಳನ್ನು, ದಾಯಿನಃ- ಕೊಡುತಲಿರುವ, ಸಂಸಾರ ವಿಷ ವೃಕ್ಷಸ್ಯ-ಸಂಸಾರವೆಂಬ ವಿಷಮಯವಾದ ವೃಕ್ಷಕ್ಕೆ, ಅಂಕುರಂ--ಮೊಳಕೆಯಾದ, ರಾಗಂ--ರಾಗವನ್ನೂ, (ಭೋಗಾಭಿಲಾಷೆಯನ್ನು,) ಉ ನ್ಮೂಲಂ-(ಯಸ್ತಂ) --ನಿರ್ಮೂಲವಾಗಿ ನಾಶಮಾಡಲ್ಪಟ್ಟದ್ದನ್ನಾಗಿ, ಮೇ-- ನನಿಗೆ, ವಿಧೇಹಿ-ಮಾಡು.

ತಾತ್ಪರ್ಯ ॥ ಎಲೈ ವೀತರಾಗ ಪರಮೇಶ್ವರನೇ! ಸಮಸ್ತವಾದ ಆಪ ತ್ತುಗಳೆಂಬ ಹಣ್ಣುಗಳನ್ನು ಕೊಡುತ್ತಿರುವ ಸಂಸಾರವೆಂಬ ವಿಷವೃ ಕ್ಷಕ್ಕೆ ಮೊಳಕೆಯಾದ ರಾಗವನ್ನು ನನಿಗೆ ನಿರ್ಮೂಲವನ್ನಾಗಿ ಮಾಡು.

ಎಂದು ಜೀವಂಧರಸ್ವಾಮಿಯು ಪ್ರಾರ್ಥಿಸುತ್ತಾನೆ. (ಪುನರಪಿಸಂಸಾರಸಂಬಂಧ ವಿಲ್ಲದಂತೆ ಮೋಕ್ಷಾರ್ಹನನ್ನಾಗಿ ಮಾಡಬೇಕೆಂದು ಭಾವವು.) ನೀನು ವೀತರಾಗನಾದುದರಿಂದ ರಾಗನಿವೃತ್ತಿಯಲ್ಲಿ ನೀನೇ ಶಕ್ತನೇ ಹೊರತು ರಾಗಾಕ್ರಾಂತರಾದವರು ಶಕ್ತರಲ್ಲವೆಂದಭಿಪ್ರಾಯವು. (ಮತ್ತು ಮೋಕ್ಷೇಚ್ಛೆಯುಳ್ಳವರಿಗೆ ವೀತರಾಗನೇ ಆಶ್ರಯನೆಂದಭಿಪ್ರಾಯವು.)॥೯೯॥

ಶ್ಲೋ॥ ಕರ್ಣಧಾರ ಭವಾರ್ಣೋಧೇಃ
ಮಧ್ಯತೋ ಮಜ್ಜತಾ ಮಯಾ।
ಕೃಚ್ಛ್ರೇಣಬೋಧಿನೌರ್ಲಬ್ಧಾ
ಭೂಯಾನ್ನಿರ್ವಾಣ ಪಾರಗಾ ॥೧೦೦॥

ಟೀ॥ ಭವಾರ್ಣೋಧೇಃ-ಭವ-ಚತುರ್ಗತಿಭ್ರಮಣರೂಪವಾದ ಸಂಸಾರವೆಂಬ ಅರ್ಣೋಧೇಃ-ಸಮುದ್ರಕ್ಕೆ, ಕರ್ಣಧಾರ-ದಾಂಟಿಸತಕ್ಕವನೇ, ಮಧ್ಯತಃ - ಆ ಸಂಸಾರ ಸಮುದ್ರದ ಮಧ್ಯದಲ್ಲಿ, ಮಜ್ಜತಾಂ-ಮುಳುಗುತಲಿರುವ, ಮಯಾ-ನನ್ನಿಂದ, ಕೃಚ್ಛ್ರೇಣ-ಕಷ್ಟದಿಂದ, ಬೋಧಿನೌಃ-ಬೋಧಿ-ತತ್ತ್ವಜ್ಞಾನವೆಂಬ, ನೌಃ-ನಾವೆಯು, (ಹಡಗು,) ಲಬ್ಧಾ--ಪಡೆಯಲ್ಪಟ್ಟಿತು. ಸಾ--ಆ ಜ್ಞಾನವೆಂಬ ನಾವೆಯು, ನಿರ್ವಾಣಪಾರಗಾ (ಸತೀ) ನಿರ್ವಾಣ -- ಮೋಕ್ಷದ, ಪಾರ-- ತೀರವನ್ನು, ಗಾ -- ಹೊಂದುವಂಥಾದ್ದಾಗಿ, ಭೂಯಾತ್--ಆಗಲಿ.

ತಾತ್ಪರ್ಯ॥ ಎಲೈ ಸಂಸಾರಸಮುದ್ರವಂ ದಾಂಟಿಸತಕ್ಕವನೇ ಆ ಸಂಸಾರವೆಂಬ ಸಮುದ್ರದ ಮಧ್ಯದಲ್ಲಿ ಮುಳುಗುತಲಿರುವ ನನ್ನಿಂದ ಬಹಳ ಕಷ್ಟದಿಂ ತತ್ವಜ್ಞಾನವೆಂಬಹಡಗು ಹೊಂದಲ್ಪಟ್ಟಿತು. (ಈ ತತ್ವಜ್ಞಾನವೆಂಬ ಹಡಗು ಮೋಕ್ಷಪರ್ಯಂತವಾಗಿ ಪಾರದವರೆಗೂ ಅನುಸರಿಸಿಬರಬೇಕೆಂದು ಭಾವವು.) ॥೧೦೦॥

ಶ್ಲೋ॥ ಇತಿ ಸ್ತೋತ್ರಾವಸಾನೇ ಚ-
ಲಬ್ಧಾಯುಂ ತ್ರಿಜಗದ್ಗುರೋಃ।
ಅನುಜ್ಞಾಂ ಜಿನದೀಕ್ಷಾಯಾ-
ಮಾನಮದ್ಗಣನಾಯಕಮ್ ॥೧೦೧॥

ಟೀ॥ ಇತಿ--ಈ ಪ್ರಕಾರ, ಸ್ತೋತ್ರಾವಸಾನೇಚ--ಸ್ತೋತ್ರದ ಸಮಾಪ್ತಿಯ ಲ್ಲಿಯೂ, ಅಯಂ--ಈ ಜೀವಂಧರಸ್ವಾಮಿಯು, ತ್ರಿಜಗದ್ಗುರೋಃ--ತ್ರಿಜಗತ್--ಮೂರು ಲೋಕಕ್ಕೂ, ಗುರೋಃ-ಗುರುವಾದ ಶ್ರೀವರ್ಧಮಾನ ಸ್ವಾಮಿಯ ದೆಸೆಯಿಂದ, ಜಿನದೀಕ್ಷಾಯಾಂ-ಜಿನದೀಕ್ಷೆಯಲ್ಲಿ, ಅನುಜ್ಞಾಂ-ಅಪ್ಪಣೆಯನ್ನು, ಲಬ್ಧ್ವಾ--ಪಡೆದು, ಗಣನಾಯಕಂ--ಗೌತಮ ಗಣಧರರನ್ನು, ಆನಮತ್--ನಮಸ್ಕರಿಸಿದನು.

ತಾ ॥ ಈಪ್ರಕಾರ ಸ್ತೋತ್ರಮಾಡಿದನಂತರದಲ್ಲಿ ಈ ಜೀವಂಧರ ಮಹಾರಾಜನು ಮೂರುಲೋಕಗಳಿಗೂ ಗುರುವಾದ ವರ್ಧಮಾನಸ್ವಾಮಿಯ ದೆಸೆಯಿಂದ ಜಿನದೀಕ್ಷೆಯಂ ಪಡೆದು ಗಣಧರರನ್ನು ನಮಸ್ಕರಿಸಿದನು. ॥೧೦೧॥

ಶ್ಲೋ ॥ ಪ್ರಾಜ್ಞಃ ಪ್ರವ್ರಜ್ಯ ತತ್ಪಾರ್ಶ್ವೇ
ತಪಸ್ತೇಪೇಽತಿದುಶ್ಚರಮ್ ।
ಯೇನ ಕರ್ಮಾಷ್ಟಕಸ್ಯಾಪಿ
ನಷ್ಟತಾಸ್ಯಾದ್ಯಥಾಕ್ರಮಮ್ ॥೧೦೨॥

ಟೀ॥ ಪ್ರಾಜ್ಞಃ--ಮಹಾ ವಿವೇಕಿಯಾದ ಜೀವಂಧರಸ್ವಾಮಿಯು, ತತ್ಪಾರ್ಶ್ವೇ--ಆ ಗಣಧರರ ಸಮೀಪದಲ್ಲಿ, ಪ್ರವ್ರಜ್ಯ--ದೀಕ್ಷೆಯನ್ನಂಗೀಕರಿಸಿ, ಅತಿದುಶ್ಚರಂ--ಇತರರಿಂದ ಮಾಡಲಶಕ್ಯನಾದ, ತಪಃ-ತಪಸ್ಸನ್ನು, ತೇಪೇ-ಮಾಡಿದನು, ಯೇನ-ಯಾವತಪಸ್ಸಿನಿಂದ, ಕರ್ಮಾಷ್ಟಕಸ್ಯಾಪಿ--ಕರ್ಮ--ಘಾತ್ಯಘಾತಿಕರ್ಮಗಳ, ಅಷ್ಟಕಸ್ಯಾಪಿ--ಎಂಟಕ್ಕೂ ಕೂಡ, ಯಥಾಕ್ರಮಂ--ಕ್ರಮವಾಗಿ, ನಷ್ಟತಾ-ನಾಶವು (ಕ್ಷಯವು), ಸ್ಯಾತ್--ಉಂಟಾಗುವುದೋ.

ತಾ॥ ಪ್ರಾಜ್ಞನಾದ ಜೀವಂಧರಸ್ವಾಮಿಯು ಆ ಗಣಧರರ ಸಮೀಪದಲ್ಲಿ ದೀಕ್ಷೆಯನ್ನಂಗೀಕರಿಸಿ ಯಾವ ತಪಸ್ಸನ್ನು ಮಾಡಿದರೆ ಜ್ಞಾನಾವರಣ, ದರ್ಶನಾವರಣ, ವೇದನೀಯ, ಮೋಹನೀಯಾಯುರ್ನಾಮ ಗೋತ್ರಾಂತರಾಯಗಳೆಂಬ ಅಷ್ಟಕರ್ಮಕ್ಷಯವು ಕ್ರಮವಾಗಿಉಂಟಾದೀತೋ ಅಂಥಾ ತಪಸ್ಸನ್ನು ಮಾಡಿದನು॥೧೦೨॥

ಶ್ಲೋ ॥ ಶ್ರೀರತ್ನತ್ರಯ ಪೂರ್ಣಾತ್ಮಾ
ಜೀವಂಧರ ಮಹಾಮುನಿಃ।

ಅಷ್ಟಭಿಃ ಸ್ವಗುಣೈಃ ಪುಷ್ಟೋ
ಽನಂತಜ್ಞಾನಸುಖಾದಿಭಿಃ ॥೧೦೩॥

ಟೀ॥ ಅಥ-ಅನಂತರದಲ್ಲಿ, ಜೀವಂಧರ ಮಹಾಮುನಿಃ--ಜೀವಂಧರನೆಂಬ ಮಹಾಮುನಿಯು, ಶ್ರೀರತ್ನತ್ರಯುಸ್ಯಪೂರ್ತ್ಯಾ-ಶ್ರೇಷ್ಠವಾದ ಸಮ್ಯಗ್ದರ್ಶನ ಜ್ಞಾನಚಾರಿತ್ರಗಳೆಂಬ ರತ್ನತ್ರಯದ ಸಂಪೂರ್ತಿಯಿಂದ, ಅನಂತಜ್ಞಾನ ಸುಖಾದಿಭಿಃ-ಅನಂತಜ್ಞಾನ, ಅನಂತ ದರ್ಶನ, ಅನಂತವೀರ್ಯ, ಅನಂತಸುಖಗಳೇ ಮೊದಲಾಗಿವುಳ್ಳ, ಅಷ್ಟಭಿಃ-ಎಂಟಾದ, ಸ್ವಗುಣೈಃ-ಸ್ವ-ತನ್ನ, ಗುಣೈಃ-ಸಿದ್ಧಪರಮೇಷ್ಠಿ ಸ್ವರೂಪಾನುರೂಪವಾದ, ಗುಣಗಳಿಂದ, ಪುಷ್ಟಃ-ಕೂಡಿದನು (ವೃದ್ಧಿಯಂ ಪೊಂದಿದನು)

ತಾ॥ ಜೀವಂಧರಸ್ವಾಮಿಯು ಶ್ರೇಷ್ಠವಾದ ಸಮ್ಯಗ್ದರ್ಶನಜ್ಞಾನ ಚಾರಿತ್ರಗಳೆಂಬ ಮೋಕ್ಷಮಾರ್ಗವಾದ ರತ್ನತ್ರಯದ ಪೂರ್ತಿಯಿಂದ ಅನಂತರದಲ್ಲಿ ಅನಂತಜ್ಞಾನಾನಂತದರ್ಶನಾನಂತವೀರ್ಯಾನಂತಸುಖವೇ ಮೊದಲಾಗಿ ವುಳ್ಳ ಅಷ್ಟಸಿದ್ಧ ಪರಮೇಷ್ಠಿ ಗುಣಗಳಿಂದ ಪರಿಪೋಷವಂ ಪೊಂದಿದನು. (ರತ್ನತ್ರಯದ ಪೂರ್ತಿಯಿಂದ ಮಹಾತಪವಂಗೈದು ಸಕಲ ಕರ್ಮಕ್ಷಯುವಂ ಹೊಂದಿ ಸಿದ್ಧಾಷ್ಟ ಗುಣ ಭಾಗಿಯಾದನೆಂದು ಮುಖ್ಯಾರ್ಥವು.) ॥೧೦೩॥

ಶ್ಲೋ ॥ ಸಿದ್ಧೋ ಲೋಕೋತ್ತರಾಭಿಖ್ಯಾಂ
ಕೇವಲಾಖ್ಯಾಮಕೇವಲಾಮ್ ।

ಅನುಪಮಾಮನಾಂತಾಂ
ಅನುಬೋಭೂಯತೇ ಶ್ರಿಯಂ ॥೧೦೪॥

---

ಟೀ॥ ಸಿದ್ಧಃ-ಸಿದ್ಧನಾದ ಜೀವಂಧರಸ್ವಾಮಿಯು, ಲೋಕೋತ್ತರ ಭಿಖ್ಯಾಂ--ಲೋಕೋತ್ತರವೆಂದು ನಾಮಧೇಯವುಳ್ಳ (ಸರ್ವಲೋಕಾತಿಕ್ರಾಂತವೆಂದು ಪ್ರಸಿದ್ಧವಾದ), ಕೇವಲಾಖ್ಯಾಂ ಕೇವಲವೆಂದು ಪ್ರಸಿದ್ಧವಾದ, (ಮೋಕ್ಷವೆಂದು ಪ್ರಖ್ಯಾತವಾದ,) ಅಕೇವಲಾಂ-ಕೇವಲವಾದ ಸರ್ವಾರ್ಥಸಿದ್ಧಿಪರ್ಯಂತ ಸುಖಗಳಿಂ ಮಿಗಿಲಾದ ಅನುಪಮಾಂ ಅಸದೃಶವಾದ, ಅನಂತಾಂ-ಸಾದಿಯಾಗಿ ನಾಶರಹಿತವಾದ (ಇಷ್ಟುಕಾಲವೆಂದು ಪರಿಮಿತಿಯಿಲ್ಲದ,) ತಾಂಶ್ರಿಯಂ-ಆ ಮೋಕ್ಷಸಂಪತ್ತನ್ನು, ಅನುಬೋಭೂಯತೇ - ಅನುಭವಿಸುತ್ತಾನೆ.

ತಾ॥ ಅನಂತ ಜ್ಞಾನಾದ್ಯಷ್ಟಗುಣ ಪ್ರಾಪ್ತಿಯಿಂದ ಸಿದ್ಧ ಪರಮೇಷ್ಠಿ ಸಮೂಹ ಪ್ರವಿಷ್ಟನಾದ ಜೀವಂಧರಸ್ವಾಮಿಯು ಸರ್ವಲೋಕಾಗ್ರಸ್ಥಾನವೆಂದು ಪ್ರಸಿದ್ಧವಾಗಿಯೂ, ಆತ್ಮನಿಗೆ ಅನಾದಿಯಾದ ಸಂಸಾರ ದೆಸೆಯಲ್ಲಿ ಸಂಬಂಧಿಸಿ ಮೋಕ್ಷ ಪರ್ಯಂತವಾಗಿ ಅನುಸರಿಸಿ ಸೇರಿದ್ದ ಸಕಲ ಕರ್ಮಕ್ಷಯದಿಂದಹೇಯಸಂಬಂಧ ರಹಿತನಾಗಿ, ನಿರಾವರಣನಾಗಿ, ನಿರ್ಮಲನಾಗಿ ನಿತ್ಯ ನಿಜಸ್ವರೂಪದಿಂ ವಿರಾಜಮಾನನಾದುದರಿಂದ ಕೇವಲ ಶ್ರೀಯೆಂದು ಪ್ರಸಿದ್ಧವಾದ ಮತ್ತು ಸರ್ವಾರ್ಥಸಿದ್ಧಿ ಪರ್ಯಂತ ಸ್ಥಾನಗಳಲ್ಲಿ ಉಂಟಾಗುವ ಸಾವಧಿಯಾದುದರಿಂದ ಕೇವಲವೆನಿಸುವ ಸರ್ವ ಸುಖಗಳಂ ಮೀರಿದ ನಿತ್ಯ ನಿರತಿಶಯ ಸುಖಸ್ವರೂಪವಾದುದರಿಂದ ಅಕೇವಲವೆನಿಸುವ ಆದುದರಿಂದಲೇ ಅಸದೃಶವಾದ, ನಾಶರಹಿತವಾದ ಆ ಮುಕ್ತಿ ಸಂಪತ್ತನ್ನು ಅನುಭವಿಸುತ್ತಲಿರುವನು. ॥೧೦೪॥

ಶ್ಲೋಕ॥ಏವಂನಿರ್ಮಲಧರ್ಮನಿರ್ಮಿತಮಿದಂಶರ್ಮಸ್ವಕರ್ಮಕ್ಷ
ಯಪ್ರಾಪ್ತಂಪ್ರಾಪ್ತುಮತುಚ್ಛಮಪ್ಯತಿತರಾಂಯೋ
ಮಹೇಚ್ಛೋಜನಃ | ಸೋಽಯಂ ದುರ್ಮತ
ಕುಂಜರಪ್ರಹರಣೇ ಪಂಚಾನನಂ ಪಾವನಂ
ಜೈನಂಧರ್ಮಮುಪಾಶ್ರಯೇತ ಮತಿಮಾನ್
ನಿಶ್ಶ್ರೇಯಸಪ್ರಾಪ್ತಯೇ ೧೦೫

ಟೀ॥ ಏವಂ-ಈ ಪ್ರಕಾರ, ನಿರ್ಮಲ ಧರ್ಮನಿರ್ಮಿತಂ-ನಿರ್ಮಲ-ನಿರ್ದೋಷವಾದ, ಧರ್ಮ-ಅರ್ಹತ್ಪರಮೇಶ್ವರ ಪ್ರೋಕ್ತಪರಮಾಗಮ ಸಿದ್ಧಧರ್ಮದಿಂದ, ನಿರ್ಮಿತಂ--ಉಂಟುಮಾಡಲ್ಪಟ್ಟ, ಸ್ವಕರ್ಮಕ್ಷಯ ಪ್ರಾಪ್ತಂ-ಸ್ವ-ತನ್ನ, ಕರ್ಮ-ಸಂಸಾರ ಕಾರಣವಾದ ಅಷ್ಟಕರ್ಮಗಳ, ಕ್ಷಯ-ನಾಶದಿಂದ, ಪ್ರಾಪ್ತಂ-ಪಡೆಯಲ್ಪಟ್ಟ, ಅತುಚ್ಛಂ-ಮಹತ್ತಾದ (ಸರ್ವೋತ್ಕೃಷ್ಟವಾದ,) ಸ್ವರ್ಗಾದಿ ಸಮಸ್ತ ತುಚ್ಛ ಸುಖಗಳನ್ನತಿಕ್ರಮಿಸಿರುವ, ಇದಂಶರ್ಮ-ಈ ಮುಕ್ತಿಸುಖವನ್ನು, ಪ್ರಾಪ್ತುಂ-ಪಡೆಯಲೋಸುಗ, ಅತಿತರಾಂ- ಬಹಳವಾಗಿ, ಮಹೇಚ್ಛಃ-ಮಹಾಮನಸ್ವಿಯಾದ, ಯೋಜನಃ-ಯಾವಜನವುಂಟೋ, ಮತಿಮಾನ್--ಪ್ರಶಸ್ತಬುದ್ಧಿಯುಳ್ಳ, ಸೋಽಯಂ-ಆ ಈ ಜನವು, ದುರ್ಮತ ಕುಂಜರ ಪ್ರಹರಣೇ - ದುರ್ಮತ-

ದುರ್ವಾದಿಗಳೆಂಬ,(ದುಷ್ಟಮತಗಳೆಂಬ,)ಕುಂಜರ-ಆನೆಗಳ,ಪ್ರಕರಗೇ- ಸಮೂಹದಲ್ಲಿ.(ನಿರಾಕರಣದಲ್ಲಿ,) ಪಂಚಾನನಂ- ಸಿಂಹಗ್ರಾಯುವಾದ, ಪಾವನಂ-ಪರಿಶುದ್ಧವಾದ,ಜೈನಂ-ಸಕಲಕರ್ಮಗಳಂ ಜಯಿಸಿದ ವೀತರಾಗಜಿನೇಂದ್ರರಿಂ ಪ್ರಕಾಶಪಡಿಸಲ್ಪಟ್ಟ, ಧರ್ಮಂ—ಧರ್ಮವನ್ನು, ನಿಶ್ಶ್ರೇಯಸಪ್ರಾಪ್ತಯೇ--ನಿಶ್ಶ್ರೇಯಸ--ಮೋಕ್ಷದ, ಪ್ರಾಪ್ತಯೇ-- ಪ್ರಾಪ್ತಿಗೋಸುಗ, ಉಪಾಶ್ರಯೇತ-ಆಶ್ರಯಿಸಬೇಕು.

ತಾ॥ ಈ ಪೂರ್ವೋಕ್ತಪ್ರಕಾರವಾಗಿ ಅರ್ಹತ್ಪರಮೇಶ್ವರ ಪ್ರೋಕ್ತಪರಮಾಗಮ ಸಿದ್ಧ ನಿತ್ಯನಿರ್ಮಲವಾದ ಅಹಿಂಸಾದಿ ಪರಮ ಧರ್ಮದಿಂ ಸಾಧ್ಯವಾಗಿಯೂ ತನ್ನ ಸಕಲ ಕರ್ಮಕ್ಷಯದಿಂ ಪ್ರಾಪ್ತವಾದ ಅತ್ಯುತ್ಕೃಷ್ಟವಾದ ಮುಕ್ತಿ ಸುಖವಂ ಪಡೆಯಲು ಅತ್ಯಾಶೆಯುಳ್ಳ ಯಾವ ಜನವುಂಟೋ! ಆ ಜನವು ದುರ್ಮತಗಳೆಂಬ ಆನೆಗಳಂ ನಿಗ್ರಹಿಸುವ ಸಿಂಹನೆನಿಸಿದ ಪರಿಶುದ್ಧವಾದ ಆಪ್ತರಾದ ವೀತರಾಗ ಜಿನೇಂದ್ರರಿಂದ ಪ್ರಕಾಶಪಡಿಸಲ್ಪಟ್ಟ ಜಿನಧರ್ಮವನ್ನು ಮೋಕ್ಷಪ್ರಾಪ್ತಿಗೋಸುಗ ಸ್ಥಿರ ಚಿತ್ತನಾಗಿ ಆಶ್ರಯಿಸಬೇಕು. ಯಿಂಥಾ ಮುಮುಕ್ಷುವಾದ ಪುರುಷನೇ ಪ್ರಶಸ್ತ ಬುದ್ಧಿಯುಳ್ಳವನು. ಈ ಪ್ರಕಾರವಾಗಿ ಕವಿಶ್ರೇಷ್ಠರಾದ ವಾದೀಭಸಿಂಹ ಮುನಿಪುಂಗವರು ಸರ್ವಾತ್ಮರಿಗೂ ಹಿತಕರವಾದ ಮುಕ್ತಿಪ್ರಾಪ್ತಿ ಪ್ರಾರ್ಥನೆಯಂಮಾಡುತ್ತಾರೆ

ಇಂತು ಮಹಾ ಪುಣ್ಯಶಾಲಿಯಾದ ಜೀವಂಧರಮಹಾರಾಜನು ರಾಜಲಕ್ಷ್ಮಿಯೊಡನೆ ತನ್ನ ಸೋದರಮಾವನ ಮಗಳಾದ ಲಕ್ಷ್ಮಣಾದೇವಿಯನ್ನು ವಿವಾಹ ಮಾಡಿಕೊಂಡು ಗಂಧರ್ವದತ್ತಾದ್ಯಷ್ಟಮಹಿಷಿಯರೊಡನೆ ಸುಖದಿಂ ರಾಜ್ಯವನ್ನು ಪರಿಪಾಲನೆಯಂ ಮಾಡುತ ಸಮಸ್ತ ಗುಣಗಳಿಂದಲೂ ಪ್ರಕಾಶಮಾನನಾಗಿ, ಪ್ರಜಾ ನಿಮಿತ್ತಕವಾಗುಂಟಾಗುವ ಸುಖದುಃಖಗಳಂ ತನ್ನದೆಂದು ಪರಿಭಾವಿಸುತ ಪ್ರಜೆಗಳ ಸಂಪತ್ಸಮೃದ್ಧಿಯಿಂದ ಅತ್ಯಂತವಾಗಿ ಸಂತೃಪ್ತವಂಬಡುತ ರಾಜ್ಯ ಪರಿಪಾಲನಾ ವಿಷಯದೊಳತಿಜಾಗರೂಕನಾಗಿ ರಾಜ್ಯ ಪರಿಪಾಲನೆಯನ್ನು ತಪಸ್ಸಿಗೆ ಸಮವಾದುದನ್ನಾಗಿ ತಿಳಿದು ಅತ್ಯಂತ ವಿವೇಕಿಯಾಗಿ ಸಕಲ ಭೂಮಂಡಲವನ್ನು ಒಂದೇ ಪಟ್ಟಣದಂತೆ ತನ್ನ ಧರ್ಮಶೌರ್ಯಗಳಿಂದ ಧರಣಿಯಲ್ಲಿ ಧನಧಾನ್ಯ ಸಂಪತ್ಸಮೃದ್ಧವನ್ನಾಗಿ ಗೈದು ಸಂರಕ್ಷಿಸಿಕೊಂಡು ಸಮಸ್ತ ರಾಜರಿಗೂ ರಾಜನಾಗಿ ಪ್ರಕಾಶಿಸುತ್ತಿರಲು, ತಾಯಿಯಾದ ವಿಜಯಾ ಮಹಾದೇವಿಯು ಸಂಸಾರ

ದೂಸಿ ವಿರಾಗವಂ ಪಡೆದು ಪುಣ್ಯಪಾಪಗಳ ಫಲವಂ ಯೋಚಿಸಿ ತಿಳಿದು ವೈರಾಗ್ಯದಿಂ ತತ್ವ
ಸ್ಥಿತಿಯಂ ಭಾವಿಸುತ್ತಿರಲು ಸುನಂದೆಯುಂ ಕೂಡ ವಿರಕ್ತಿಯಂ ಹೊಂದಿದವಳಾಗಲು ಇವರೀ
ರ್ವರ ದೀಕ್ಷಾಪ್ರಯತ್ನವಂ ನೋಡಿ ದುಃಖಿಸುತ್ತಿರುವ ಜೀವಂಧರನಂ ಸಮಾಧಾನ ಪಡಿಸಿ
ಸಮ್ಮತಿಯಿಂದ ವಿಜಯಾ ಸುನಂದೆಯರು ಅಜ್ಜಿಕೆಯರೊಳು ಪ್ರಧಾನಳಾದ ಪದ್ಮೆಯೆಂಬ
ಅಜ್ಜಿಕೆಯಬಳಿಗೆ ಹೋಗಲಾಕೆಯು ಇವರಿಗೆ ದೀಕ್ಷೆಯನ್ನು ಕೊಟ್ಟು ಜೀವಂಧರನಿಗೂ
ದುಃಖಸಮಾಧಾನವಂಗೈದು ದೀಕ್ಷಾಪ್ರವರ್ತಕರನ್ನು ತಡೆಯಲಾಗದು ಮತ್ತು ಯವ್ವ
ನವಯಸ್ಸಿನಲ್ಲಿ ವೈರಾಗ್ಯ ಉಂಟಾಗುವುದು ಅತ್ಯಂತ ದುರ್ಲಭವಾದುದೆಂದು ಪದ್ಮೆಯು
ವಿಶೇಷವಾಗಿ ಬೋಧಿಸಲು ಜೀವಂಧರನು ಆ ಪದ್ಮೆಗೆ ನಮಸ್ಕರಿಸಿ ತಾಯಿಯರಿಂದ ಅಪ್ಪ
ಣೆಯಂ ಪಡೆದು ತನ್ನರಮನೆಯಂ ಪ್ರವೇಶಿಸಿ, ಮುವ್ವತ್ತು ವರುಷ ದೇವಭೋಗ ಸಮಾ
ನ ಸುಖದಿಂದ ರಾಜ್ಯಭಾರವಂಗೈದು ತದನಂತರ ವಸಂತಸಮಯದಿ ಎಂಟುಮಂದಿ ಪತ್ನಿ
ಯರೊಡಗೂಡಿ ಜಲಕ್ರೀಡಾ ವ್ಯಾಜದಿಂ ಹೊರಟು ಅಲ್ಲಿ ನಡೆದ ಕಪಿಗಳ ಸಮಸ್ತ ಕೃತ್ಯ
ವನ್ನು ನೋಡಿದವನಾಗಿ ಆಕ್ಷಣದೊಳುಂಟಾದ ವೈರಾಗ್ಯದಿಂದ ತನ್ನಲ್ಲಿ ತಾನು ತತ್ವ
ಜ್ಞಾನರೂಪವಾದ ದ್ವಾದಶಾನುಪ್ರೇಕ್ಷೆಗಳಂ ಭಾವಿಸಿ ಚಾರಣ ಮುನಿಗಳೊಳು ಮೊದಲ
ನೆಯವರನ್ನು ಕುರಿತು ತನ್ನ ಪೂರ್ವಜನ್ಮವೃತ್ತಾಂತವಂ ತಿಳಿದವನಾಗಿ ಅಸ್ಥಿರಸುಖ
ವಾದ ವಿಷಸದೃಶವಾದ ವಿಷಯ ಸುಖದೊಳು ಅಭಿಲಾಷೆಯಂ ತೊರೆದು ಮಹಾ ತತ್ವ
ಜ್ಞಾನ ಸಂಪನ್ನನಾಗಿ ಆ ಮುನೀಂದ್ರರಿಗೆ ನಮಸ್ಕರಿಸಿ ತನ್ನ ಪಟ್ಟಣವಾದ ರಾಜಪುರಿ
ಯನ್ನು ಹೊಂದಿ ತನ್ನ ಅನುಜ ಮಿತ್ರರೇ ಆದಿಯಾಗಿ ಉಳ್ಳ ಇಷ್ಟರಿಗೆ ಆ ಚಾರಣ ಮು
ನೀಂದ್ರರಿಂದುಪದೇಶಿಸಲ್ಪಟ್ಟ ಶ್ರೇಷ್ಠವಾದ ಧರ್ಮವನ್ನೊರೆಯಲವರಾ ಜ್ಞಾನಾಮೃತ
ವನ್ನು ಪಾನಮಾಡಿ ವಿಷಯ ಸುಖವನ್ನು ವಿಷಸಮಾನವೆಂದು ತಿಳಿದರು ಅನಂತರ
ಜೀವಂಧರ ಮಹಾ ರಾಜನು ತನ್ನ ಪಟ್ಟಮಹಿಷಿ ಗಂಧರ್ವದತ್ತೆಯ ಪುತ್ರನಾದ ಸತ್ಯಂ
ಧರನನ್ನು ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ಅಷ್ಟಪಟ್ಟ ಮಹಿಷಿಗಳೊಡನೆ ಕೂಡಿ ಶ್ರೀ
ವರ್ಧಮಾನ ಸ್ವಾಮಿಯ ಸಮವಸರಣವಂ ಕುರಿತು ಪ್ರಯಾಣಮಾಡಿ, ಜಿನನಾಥರೆನಿ
ಸಿದ ಶ್ರೀಮದುಭಯ ಲಕ್ಷ್ಮೀಪತಿಯಾದ ಶ್ರೀವೀರವರ್ಧಮಾನಸ್ವಾಮಿಯಂಪೂಜಿಸಿ ಸ್ತೋ
ತ್ರಗೈದು, ಪ್ರಾರ್ಥಿಸಿ ದೀಕ್ಷೆಯಲ್ಲಿ ಅಪ್ಪಣೆಯನ್ನು ಹೊಂದಿ ಗಣಧರರನ್ನು ನಮಸ್ಕರಿಸಿ
ತಪವಂ ಮಾಡಿ ಅಷ್ಟಸಿದ್ಧ ಪರಮೇಷ್ಠಿಗುಣಗಳಂ ಒಡಗೂಡಿ ಕೇವಲವೆಂದು ಪ್ರಸಿದ್ಧ

ದ ಸರ್ವಸುಖಾತೀತವಾದ, ನಿತ್ಯನಿರತಿಶಯ ಸುಖಸ್ವರೂಪವಾದ, ಅಸದೃಶವಾದ,ನಾಶ
ತವಾದ ಮೋಕ್ಷ ಸಂಪದವನ್ನು ಅನುಭವಿಸುತ್ತಲಿರುವ ನೆಂಟಿಲ್ಲಿಗೆ,

ಶ್ರೀಮದ್ವಾದೀಭಸಿಂಹಸೂರಿಯೆಂಬ ಮಹಾಕವಿಯಿಂದ ವಿರಚಿತ
ವಾದ ಕ್ಷತ್ರಚೂಡಾಮಣಿ ಯೆಂಬ ಮಹಾಕಾವ್ಯದೊಳು
ಮುಕ್ತಿಶ್ರೀಲಂಬವೆಂಬ ೧೧ನೆಯ ಲಂಬವು
ಸಮಾಪ್ತವಾದುದು.



ಶ್ಲೋ॥ ರಾಜತಾಂ ರಾಜರಾಜೋಽಯಂ
ರಾಜರಾಜೋ ಮಹೋದಯೈಃ।
ತೇಜಸಾ ವಯಸಾ ಶೂರಃ
ಕ್ಷತ್ರಚೂಡಾಮಣಿರ್ಗುಣೈಃ॥*॥

ಶ್ರೀಮದ್ವಾದೀಭ ಸಿಂಹಸೂರಿ ವಿರಚಿತೇ ಕ್ಷತ್ರಚೂಡಾಮಣೌ
ಮುಕ್ತಿ ಶ್ರೀಲಂಬೋ ನಾಮ ಏಕಾದಶೋ ಲಂಬಃ.



ಟೀ॥ ಮಹೋದಯೈಃ-ಮಹಾಶ್ರೀಯ ಸಂಪ್ರಾಪ್ತಿಗಳಿಂದ (ಮಹಾ ಸಂಪತ್ತುಗಳಿಂದ,)
ರಾಜಃ--ಕುಬೇರನಾದ, ತೇಜಸಾ-ಪರಾಕ್ರಮದಿಂದಲೂ, ವಯಸಾ--ವಯಸ್ಸಿನಿಂದಲೂ,
ಶೂರಃ--ಶೂರನಾದ, ಗುಣೈಃ-ಗುಣಗಳಿಂದ, ಕ್ಷತ್ರಚೂಡಾಮಣಿಃ-ಕ್ಷತ್ರ-ಕ್ಷತ್ರಿಯರಿಗೆ,
ಚೂಡಾಮಣಿಃ-ಶಿರೋರತ್ನವೆನಿಸಿದ, ರಾಜರಾಜಃ-ರಾಜ—ಸಮಸ್ತರಾಜರಿಗೂ, ರಾಜಃ-
ದೊರೆಯಾದ, ಅಯಂ-ಈ ಜೀವಂಧರ ಸ್ವಾಮಿಯು, ರಾಜತಾಂ-ಪ್ರಕಾಶಿಸಲಿ.

ತಾ॥ ಈ ಶ್ಲೋಕದಲ್ಲಿ ಕವಿಯು ಮಹಾ ಪುಣ್ಯಪುರುಷನಾಗಿ
ಣ್ಯಪ್ರಭಾವದಿಂದಲೇ ಮೋಕ್ಷಪರ್ಯಂತ ಸಮಸ್ತ ಪುರುಷಾರ್ಥ
ಪಡೆದ ಜೀವಂಧರಸ್ವಾಮಿಯಂ ಸ್ತುತಿಸುತ್ತಾರೆ.- ಹೇಗೆಂದರೆ- ಐ
ಭಾಗ್ಯಗಳಿಂದ ಕುಬೇರನಿಗೆ ಸಮಾನನಾಗಿಯೂ, ತೇಜಸ್ಸಿನಿಂದ
ವಯಸ್ಸಿನಿಂದಲೂ ಕೂರನಾಗಿಯೂ, ಶೌರ್ಯೌದಾರ್ಯ ಗಾಂಭೀರ
ಗುಣಗಳಿಂದ ಕ್ಷತ್ರಿಯರಿಗೆ ಶಿಖಾಮಣಿ ಯೆನಿಸಿದ (ಅಂದರೆ ಸಕ
ತ್ರಿಯರಿಂದಲೂ ಚೂಡಾಮಣಿಯಂತೆ ಶಿರಸಾ ಧರಿಸಲ್ಪಟ್ಟ
ವುಳ್ಳೋಣದರಿಂದ ಕ್ಷತ್ರ ಚೂಡಾಮಣಿಯೆಂದು ಪ್ರಸಿದ್ಧನಾ
ದುದರಿಂದಲೇ ಸಮಸ್ತ ರಾಜರಿಗೂ ರಾಜನಾದ) ಈ ಜೀವಂಧರ
ಮಿಯೂ, ಈ ಕ್ಷತ್ರ ಚೂಡಾಮಣಿಯೆಂಬ ಗ್ರಂಥವೂ ಕೂಡ ಲೋ
ದಲ್ಲಿ ಪ್ರಕಾಶಿಸಲಿ. (ಜೀವಂಧರಸ್ವಾಮಿಯಂತೆ ಈ ಗ್ರಂಥವೂ
ಕೋತ್ತರವಾಗಿ ಪ್ರಕಾಶಿಸಲೆಂದು ಭಾವವು.) ॥೧೦೬॥

ಈ ಪ್ರಕಾರವಾಗಿ ಗ್ರಂಥಾಂತದಲ್ಲಿಯೂ ಮಂಗಳವಂ
ಪ್ರಾರ್ಥಿಸುತ್ತಾರೆ.



ಶ್ರೀಮದ್ವಾದೀಭಸಿಂಹಸೂರಿ ವಿರಚಿತ ಕ್ಷತ್ರಚೂಡಾಮಣಿ ಯೆಂ
ಗ್ರಂಥವು ಸಮಾಪ್ತವಾದುದು.





